# ಪ್ರವಾದಿ ಮುಹಮ್ಮದ್(ಸ)

## ಜೀವನ ಮತ್ತು ಸಂದೇಶ

ಇಬ್ರಾಹೀಮ್ ಸಈದ್

ಪರಮ ದಯಾಮಯನೂ ಕೃಪಾಶೀಲನೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಪ್ರವಾದಿ ಮುಹಮ್ಮದ್‌ರ(ಸ) ಜೀವನವು ಮಾನವಕುಲಕ್ಕೆ ಮಾರ್ಗ ದರ್ಶಕವಾಗಿದೆ. ಅವರ ಸಂಪೂರ್ಣ ಜೀವನವು ಮಾದರಿಯೋಗ್ಯ ವಾಗಿದೆ. ಅದಕ್ಕಾಗಿ ಅಲ್ಲಾಹನೇ ಅವರ ಜೀವನದ ಮೇಲ್ನೋಟ ವನ್ನು ವಹಿಸಿದನು. ಪ್ರವಾದಿವರ್ಯರ(ಸ) ಜೀವನ ಹೇಗಿತ್ತು, ಅದರಿಂದ ಮಾನವನಿಗೆ ಸಿಗುವ ಸಂದೇಶವೇನು ಎಂಬುದನ್ನು ಸಮಗ್ರವಾಗಿ 'ಪ್ರವಾದಿ ಮುಹಮ್ಮದ್(ಸ) ಜೀವನ ಮತ್ತು ಸಂದೇಶ' ಎಂಬ ಈ ಕೃತಿಯಲ್ಲಿ ಸನ್ಮಾರ್ಗ ವಾರಪತ್ರಿಕೆಯ ಪ್ರಧಾನ ಸಂಪಾದಕರಾಗಿದ್ದ ದಿ। ಇಬ್ರಾಹೀಮ್ ಸಈದ್‌ರು ಮನ ಮುಟ್ಟುವ ಶೈಲಿಯಲ್ಲಿ ನಮ್ಮ ಮುಂದಿಟ್ಟಿದ್ದಾರೆ.

ಪ್ರವಾದಿ ಮುಹಮ್ಮದ್‌ರ(ಸ) ಬಗ್ಗೆ ಇಂದು ಜಗತ್ತಿನಾದ್ಯಂತ ನಡೆ ಯುತ್ತಿರುವ ಅಪಪ್ರಚಾರ, ನಿಂದನೆಗಳು ಅವರ ಬಗೆಗಿನ ಅಜ್ಞಾನ ದಿಂದಾಗಿರಬಹುದು ಅಥವಾ ಬೇಕುಬೇಕೆಂದೇ ಜನಸಾಮಾನ್ಯರನ್ನು ತಪ್ಪು ದಾರಿಗೆಳೆಯುವ ಅಂತರರಾಷ್ಟ್ರೀಯ ಸಂಚಿನ ಒಂದು ಭಾಗವಾಗಿರಲೂ ಬಹುದು. ಈ ಹಿನ್ನೆಲೆಯಲ್ಲಿ ಪ್ರವಾದಿ ವರ್ಯರ(ಸ) ಜೀವನದ ನೈಜ ಚಿತ್ರಣವನ್ನು ಜನ ಸಾಮಾನ್ಯರ ಮುಂದೆ ಇಡಬೇಕಾದುದು ಇಂದಿನ ಅಗತ್ಯವಾಗಿದೆ. ಈ ಗ್ರಂಥದ ಅಧ್ಯಯನದಿಂದ ಇಸ್ಲಾಮ್ ಮತ್ತು ಪ್ರವಾದಿವರ್ಯರ(ಸ) ಬಗೆಗಿನ ತಪ್ಪುಕಲ್ಪನೆಗಳು ದೂರವಾಗುವುದರಲ್ಲಿ ಸಂದೇಹವಿಲ್ಲ. ಅದಕ್ಕೆ ಈ ಗ್ರಂಥ ಪ್ರೇರಕವಾಗಲೆಂದು ಹಾರೈಸುತ್ತೇವೆ.

— ಶಾಂತಿ ಪ್ರಕಾಶನ

# ಪ್ರಸ್ತಾವನೆ

ಪ್ರವಾದಿ ಮುಹಮ್ಮದ್(ಸ) ಅವರ ಜೀವನ ಚರಿತ್ರೆಯ ಕುರಿತು ಕನ್ನಡ ಭಾಷೆಯಲ್ಲಿ ಈ ತನಕ ಯಾವುದೇ ಕೃತಿ ರಚನೆಯಾಗಿಲ್ಲ. ಕೆಲವು ಪ್ರಬಂಧಗಳು ರಚಿಸಲ್ಪಟ್ಟಿವೆ. ಉರ್ದು ಮೂಲದ ಕೆಲವು ಗ್ರಂಥಗಳ ಅನುವಾದ ಕೃತಿಗಳೂ ಹೊರ ಬಂದಿವೆ. ಆದರೆ ಪ್ರವಾದಿ ಮುಹಮ್ಮದ್‌ರ(ಸ) ಜೀವನದ ಎಲ್ಲ ಪ್ರಮುಖ ಘಟನೆ ಗಳನ್ನು ಸಂಕ್ಷಿಪ್ತವಾಗಿಯಾದರೂ ಒಳಗೊಂಡ ಒಂದು ಪುಸ್ತಕ ಕನ್ನಡದಲ್ಲಿ ರಚಿಸ ಬೇಕೆಂಬ ಬಯಕೆ ಹಲವು ಕಾಲದಿಂದ ಮನಸ್ಸಿನಲ್ಲಿತ್ತು. ಅದನ್ನು ಕಾರ್ಯರೂಪಕ್ಕೆ ತರುವ ಸುಯೋಗ ಈ ತನಕ ಕೂಡಿ ಬಂದಿರಲಿಲ್ಲ.

ಕಳೆದ ನಾಲ್ಕೈದು ವರ್ಷಗಳಿಂದ ಅಂತಹ ಒಂದು ಕೃತಿ ರಚನೆಯನ್ನು ಉದ್ದೇಶವಾಗಿಟ್ಟು ಉರ್ದು ಮತ್ತು ಇಂಗ್ಲಿಷ್ ಭಾಷೆಯಲ್ಲಿರುವ ಹಲವು ಪ್ರವಾದಿ ಚರಿತ್ರೆಯ ಗ್ರಂಥಗಳ ಗಹನವಾದ ಅಧ್ಯಯನ ನಡೆಸುತ್ತಾ ಬಂದಿದ್ದೇನೆ. ಆ ಅಧ್ಯಯನದ ವೇಳೆ ಒಂದು ವಿಷಯ ನನಗೆ ಚೆನ್ನಾಗಿ ಮನವರಿಕೆಯಾಯಿತು. ಪ್ರವಾದಿ ಮುಹಮ್ಮದ್‌ರ(ಸ) ಜೀವನವು ಒಂದು ತೆರೆದ ಗ್ರಂಥ. ಅದನ್ನು ಯಾವುದೇ ಟೀಕೆ, ಟಿಪ್ಪಣಿ, ವಿಮರ್ಶೆ, ವಿವರಣೆ ಮತ್ತು ವಿಶದೀಕರಣವಿಲ್ಲದೆ ಜನರ ಮುಂದೆ ಇಟ್ಟರೆ ಸಾಕು. ಅದರಿಂದ ಪಾಠ ಹೊಂದುವ ಕೆಲಸ ವಾಚಕರೇ ಮಾಡಬಲ್ಲರು. ಅದನ್ನು ವಿವರಿಸಲು ಯಾವ ಲೇಖಕನೂ ತನ್ನ ಲೇಖನಿಯನ್ನು ದುಡಿಸಿಕೊಳ್ಳುವ ಅಗತ್ಯವೇ ಇಲ್ಲದಷ್ಟು ಅದು ಆದರ್ಶಪ್ರಾಯವಾಗಿದೆ.

ಆದ್ದರಿಂದ 1994ರ ಏಪ್ರಿಲ್ 18ರಂದು ಪ್ರವಾದಿ ಮುಹಮ್ಮದ್‌ರ(ಸ) ಜೀವನ ವನ್ನು ಘಟನೆಯಾಧಾರಿತವಾಗಿ ಬರೆಯಲಾರಂಭಿಸಿ ಅಲ್ಲಾಹನ ಅನುಗ್ರಹದಿಂದ ಈ ದಿನ ಮುಗಿಸುತ್ತಿದ್ದೇನೆ. ಈ ಕೃತಿಯನ್ನು ರಚಿಸುತ್ತಿರುವಾಗಲೇ ಅನೇಕ ಸಲ ಆ ಮಹಾನ್ ಮಾನವನ ಜೀವನದ ಉದಾತ್ತ ಆದರ್ಶ ಮತ್ತು ನಮ್ಮ ಜೀವನಕ್ಕಿರುವ ಅಜಗಜಾಂತರವನ್ನು ನೆನಪಿಸಿ ಅತ್ತದ್ದಿದೆ. ಆ ಆದರ್ಶವೊಂದೇ ನನ್ನ ಜೀವನವನ್ನು ಬೆಳಗಿಸಬಲ್ಲ ಸಾಧನ ಎಂಬುದನ್ನು ಸ್ವತಃ ನಾನು ಕಂಡುಕೊಂಡುದೇ ಈ ಪುಸ್ತಕದ ಪುಟಗಳನ್ನು ಬರೆಯುತ್ತಿರುವಾಗ. ಇದು ನಾನು ಗಳಿಸಿದ ಮಹತ್ಸಾಧನೆ.

# ಮುನ್ನುಡಿ

ಸನ್ಮಾರ್ಗ ಪ್ರವರ್ತಕರೂ ಸಂಪಾದಕರೂ ಆದ ಇಬ್ರಾಹೀಮ್ ಸಈದ್‌ರ ಪರಿಚಯ ನನಗಾದದ್ದು ಇತ್ತೀಚೆಗೆ. ಸನ್ಮಾರ್ಗ ವಾರಪತ್ರಿಕೆ ಹಲವು ದೃಷ್ಟಿಗಳಿಂದ ವಿಶಿಷ್ಟವಾಗಿದೆ. ಅದೇ ಸರಣಿಯ ಬೇರೆ ಪತ್ರಿಕೆಗಳಲ್ಲಿ ಸಿಗದ ಹಲವು ಸಂಗತಿಗಳು ಇದರಲ್ಲಿ ದೊರೆಯುತ್ತವೆ. ಅವರ ಸಂಪಾದನಾ ಸಾಮರ್ಥ್ಯಕ್ಕೆ ಇದೊಂದು ಉತ್ತಮ ನಿದರ್ಶನವಾಗಿದೆ. 'ತಪ್ಪುಕಲ್ಪನೆಗಳು' ಎಂಬ ಅವರ ಗ್ರಂಥವನ್ನೋದಿದಾಗ ಇಸ್ಲಾಮ್ ಧರ್ಮದ ಬಗ್ಗೆ ನನ್ನ ಕಣ್ಣು ತೆರೆಯಿಸಿತು. ಅಲ್ಲಿ ವಿವರಣೆಗೊಂಡಿರುವ ಹಲವು ಧಾರ್ಮಿಕಾಚರಣೆಗಳು ತಿರಸ್ಕರಣೀಯವಲ್ಲವೆಂದೇ ತೋರುತ್ತದೆ. ನಿಜಕ್ಕೂ ಇದು ಎಲ್ಲ ಭಾರತೀಯರು ಓದಬೇಕಾದ ಗ್ರಂಥ.

ಸಾಹಿತಿಯಾಗಿ, ಸಂಪಾದಕರಾಗಿ, ಪತ್ರಕರ್ತರಾಗಿ, ವಾಗ್ಮಿಯಾಗಿ, ಅಲ್ಲಾಹನ ಭಕ್ತರಾಗಿ ಪ್ರವಾದಿಗಳ ಪವಿತ್ರ ಜೀವನ ಚರಿತ್ರೆಯನ್ನು ರಚಿಸಿರುವ ನನ್ನ ಪ್ರೀತಿಪಾತ್ರರಾದ ಸನ್ಮಾರ್ಗ ಸಂಪಾದಕ ಇಬ್ರಾಹೀಮ್ ಸಈದ್ ಅವರು ಆ ಗ್ರಂಥದ ಮುನ್ನುಡಿ ಬರೆಯುವ ಗೌರವವನ್ನು ನನಗೆ ತೋರಿಸಿರುವಾಗ ಆಗದೆಂದು ಹೇಳುವ ದಾರ್ಷ್ಟ್ಯ ನನಗಿಲ್ಲ. ಮುಹಮ್ಮದ್(ಸ)ರವರಿಗೆ ಸವಿನಯ ನಮನಗಳನ್ನು ಸಲ್ಲಿಸುವ ಸುವರ್ಣಾವಕಾಶ ದಿಂದ ಯಾರಾದರೂ ವಂಚಿತರಾಗುವುದುಂಟೆ? ಜೀವನ ಚರಿತ್ರೆ ನನ್ನ ಮೊದಲ ಒಲವಾದ್ದರಿಂದ, ಇಬ್ರಾಹೀಮ್ ಸಈದ್‌ರಂತಹ ಸಜ್ಜನರ ಸುಸ್ನಿಗ್ಧ ಸ್ನೇಹದಿಂದ ಈ ಮುನ್ನುಡಿ ಬರೆಯುವ ವ್ಯಾಮೋಹಕ್ಕೆ ಒಳಗಾಗಿದ್ದೇನೆ. ಮುನ್ನುಡಿಯ ನಿಮಿತ್ತದಿಂದಾಗಿ ಪ್ರವಾದಿಗಳ ಜೀವನ ಚರಿತ್ರೆಯನ್ನು ಆಳವಾಗಿ ಅಭ್ಯಾಸ ಮಾಡುವ ಅವಕಾಶ ದೊರೆತದ್ದು ನನ್ನ ಪುಣ್ಯವೆಂದೇ ಬಗೆದಿದ್ದೇನೆ.

ಮುಹಮ್ಮದ್(ಸ)ರಂತಹ ಮಹಾ ಪ್ರವಾದಿಗಳ ಜೀವನ ಯಾತ್ರೆಯ ಪಥ ಸಸಿನವೂ ಅಲ್ಲ, ಸರಾಗವೂ ಅಲ್ಲ, ನಿಷ್ಕಂಟಕವೂ ಅಲ್ಲ ಎಂಬುದು ಲೋಕವೇದ್ಯ. ಅವರು ಮುಳ್ಳಿನ ಕಿರೀಟ ಧರಿಸಿ, ಮುಳ್ಳಿನ ಹಾವುಗೆಯ ಮೇಲೆ, ಅಗ್ನಿಜ್ವಾಲೆಯ ನಡುವೆ, ಕೆಂಡದ ಕೊಂಡದಲ್ಲಿ ನಡೆಯಬೇಕಾಗುತ್ತದೆ. ಅಲ್ಲಾಹನ ಪ್ರೀತಿ ಅವರಿಗೆ ಬಲು ಸುಲಭದಲ್ಲಿ ದೊರೆಯಲಿಲ್ಲ. ಅವರನುಭವಿಸಿದ ಕಷ್ಟ–ಸಂಕಷ್ಟಗಳಿಗೆ, ಬೇನೆ–ಬವಣೆಗಳಿಗೆ ಲೆಕ್ಕವಿಲ್ಲ. ದಿನ ಬೆಳಗಾದರೆ ಅವರು ಅಪಾಯದ ಅಂಚಿನಲ್ಲಿರುತ್ತಿದ್ದರು.

ಆ ಅಂತಿಮ ಪ್ರವಾದಿಯ ಜೀವನದಿಂದ ಮಾರ್ಗದರ್ಶನ ಪಡೆದು ತಮ್ಮನ್ನು ಸುಧಾರಿಸಿಕೊಳ್ಳಲು ಈ ಕೃತಿ ಯಾರಿಗಾದರೂ ಸಹಕಾರಿಯಾದರೆ ನನ್ನ ಶ್ರಮ ಸಾರ್ಥಕವೆನಿಸೀತು.

ಈ ಗ್ರಂಥದ ರಚನೆಯಲ್ಲಿ ಮುಖ್ಯವಾಗಿ ನಾನು ಪ್ರಯೋಜನ ಪಡೆದಿರುವ ಕೆಲವು ಉರ್ದು ಗ್ರಂಥಗಳ ಹೆಸರು ಹೀಗಿವೆ:

1. ಆಗೋಶೆ ಆಮಿನಾ ಸೆ ಗಾರೆ ಹಿರಾ ತಕ್. 2. ಗಾರೆ ಹಿರಾ ಸೆ ಗಾರೆ ಸೌರ್ ತಕ್. 3. ಹಿಜ್ರತ್ ಸೆ ಅರ್‍ರಫೀಕುಲ್ ಆಲಾ ತಕ್ ಎಂಬ ಅಲೀ ಅಸ್‌ಗರ್ ಚೌಧರಿಯವರ ಕೃತಿಗಳು. 4. ಮುಹ್ಸಿನೆ ಇನ್‌ಸಾನಿಯತ್ – ಮೌ। ನಈಮ್ ಸಿದ್ದೀಕಿ. 5. ಸೀರತ್ ಸರ್‌ವರೆ ಆಲಮ್ – ಮೌ। ಸಯ್ಯದ್ ಅಬುಲ್ ಆಲಾ ಮೌದೂದಿ. 6. ರಸೂಲೆ ಅಕ್ರಮ್(ಸ) ಕಾ ಹಿಕ್ಮತೆ ಇಂಕಿಲಾಬ್ – ಡಾ। ಸಯ್ಯದ್ ಅಸ್‌ಅದ್ ಗೀಲಾನಿ. 7. ಸೀರತುನ್ನಬಿ – ಅಲ್ಲಾಮಶಿಬ್ಲಿ ನೂಮಾನಿ. 8. ರಹ್ಮತುಲ್ಲಿಲ್ ಆಲಮೀನ್ – ಕಾಝಿ ಸಲ್ಮಾನ್ ಮನ್ಸೂರ್‌ಪುರಿ. 9. ರಸೂಲೆ ರಹ್ಮತ್ – ಮೌ। ಅಬುಲ್ ಕಲಾಮ್ ಆಝಾದ್. 10. ದುರ್‍ರೆಯತೀಮ್ – ಮೌ। ಮಾಹಿರುಲ್ ಕಾದ್ರಿ.

ಈ ಕೃತಿಯ ರಚನೆಯಲ್ಲಿ ಸೂಕ್ತ ಮಾರ್ಗದರ್ಶನ ಮತ್ತು ಸಲಹೆಗಳನ್ನು ನೀಡಿ ಸಹಕರಿಸಿದ ಸನ್ಮಿತ್ರರಾದ ಮುಹಮ್ಮದ್ ಇಕ್ಬಾಲ್ ಮುಲ್ಲಾ ಅವರಿಗೂ 'ಸನ್ಮಾರ್ಗ'ದ ನನ್ನ ಸಂಗಾತಿಗಳಿಗೂ ನಾನು ಋಣಿಯಾಗಿರುವೆನು.

ಸರ್ವಸ್ತುತಿಯೂ ಅಲ್ಲಾಹನಿಗೆ ಮೀಸಲು. ಅವನ ಅಪಾರ ಕರುಣೆ ಮತ್ತು ಅನುಗ್ರಹದಿಂದ ಅವನ ಈ ದುರ್ಬಲ ದಾಸನಿಗೆ ಅವನ ಮಹಾನ್ ದಾಸರಾದ ಮುಹಮ್ಮದ್ ಮುಸ್ತಫಾ(ಸ) ಅವರ ಚರಿತ್ರೆ ಬರೆಯುವ ಸೌಭಾಗ್ಯ ಲಭಿಸಿತು. ಈ ಗ್ರಂಥದಲ್ಲಿ ಯಾವುದೇ ಅನಧಿಕೃತವಾದ ವಿಷಯ ಸೇರಿ ಹೋಗದಂತೆ ಹೆಚ್ಚಿನ ಜಾಗ್ರತೆ ವಹಿಸಿದ್ದೇನೆ. ಆದರೂ ಮಾನವ ಸಹಜ ದೌರ್ಬಲ್ಯಗಳಿಂದ ಬಂದಿರಬಹುದಾದ ಲೋಪದೋಷಗಳತ್ತ ಪ್ರಾಜ್ಞ ವಾಚಕರು ಗಮನ ಸೆಳೆಯುವರೆಂದು ನಂಬಿದ್ದೇನೆ.

ಈ ಗ್ರಂಥಕ್ಕೆ ಒಂದು ಒಳ್ಳೆಯ ಮುನ್ನುಡಿಯನ್ನು ಬರೆದು ಕೊಟ್ಟ ಕನ್ನಡದ ಹಿರಿಯ ಸಾಹಿತಿ ಪ್ರೊ। ದೇ. ಜವರೇಗೌಡ (ದೇಜಗೌ) ವಿಶ್ರಾಂತ ಉಪಕುಲಪತಿ ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ನಾನು ಋಣಿಯಾಗಿದ್ದೇನೆ.

ಸರ್ವಶಕ್ತನಾದ ಜಗದೊಡೆಯನು ಈ ವಿನಮ್ರ ಸೇವೆಯನ್ನು ಸ್ವೀಕರಿಸಿ ಇದನ್ನು ನಮ್ಮೆಲ್ಲರ ಪಾಲಿಗೆ ಉಪಯುಕ್ತಗೊಳಿಸಲಿ ಎಂದು ಪ್ರಾರ್ಥಿಸುತ್ತೇನೆ.

26–04–1415 (ಹಿ.ಶ.) **ಇಬ್ರಾಹೀಮ್ ಸಈದ್**

ಭಾವುಕರಿಗೆ ಅದೊಂದು ಕಣ್ಣೀರಿನ ಕತೆ. ವಿರೋಧಿಗಳು ಅವರ ಕಣ್ಣಿಗೆ ಮರಳು ಧೂಳುಗಳನ್ನು ತೂರಿದಾಗ, ಕಲ್ಲೆಸೆದು ಅವರ ಮೈಯಿಂದ ರಕ್ತ ಹರಿಯುತ್ತಿದ್ದಾಗ, ಅವರನ್ನು ಬಾಣಗಳಿಂದಿರಿದಾಗ, ತಮ್ಮಲ್ಲಿದ್ದುದನ್ನು ಪರರಿಗಿತ್ತು ತಾವು ಹಸಿದಾಗ, ತಮ್ಮ ಮಡದಿಯರನ್ನೂ ಅಳಿಯಂದಿರನ್ನೂ ಅವರ ಮೇಲೆತ್ತಿ ಕಟ್ಟಿದಾಗ ಯಾವ ಓದುಗನಾದರೂ ಕಣ್ಣೀರಿನಲ್ಲಿ ಮೀಯದಿರುತ್ತಾನೆಯೇ? ನಾನಂತೂ ಅತ್ತಿದ್ದೇನೆ. ಅವರು ನನ್ನೆದುರಿಗೇ ಅಷ್ಟೆಲ್ಲ ಯಾತನೆಯನ್ನನುಭವಿಸುತ್ತಿರುವಂತೆ ನನಗೆ ವೇದನೆ ಯಾಗುತ್ತದೆ.

ವಿದ್ಯಾರ್ಥಿದೆಸೆಯಲ್ಲಿ 'ಪೈಗಂಬರ್ ಮುಹಮ್ಮದ್' ಎಂಬೊಂದು ಕಿರು ಹೊತ್ತಗೆ ಯನ್ನು ಓದಿದ ನೆನಪುಂಟು. ಆದರೆ ಪೂರ್ಣ ಪ್ರಮಾಣದ ಸಮಗ್ರ ಸ್ವರೂಪದ ಪ್ರವಾದಿಗಳ ಜೀವನ ಚರಿತ್ರೆ ಈ ತನಕ ಕನ್ನಡದಲ್ಲಿ ರಚನೆಗೊಂಡಂತೆ ತೋರದು. ಅಂತಹ ಜೀವನ ಚರಿತ್ರೆಯ ರಚನೆ ಕೇವಲ ವಿದ್ವತ್ತಿಗೆ ಸಾಧ್ಯವೆಂದು ಹೇಳಲಾರೆ. ಆಳವಾದ ಅಭ್ಯಾಸದ ಜತೆಗೆ, ಶ್ರದ್ಧೆ, ನಿಷ್ಠೆ, ಸಾಧನೆ, ಭಾವುಕತೆ ಮತ್ತು ಆರಾಧನೆಗಳ ಮೂಲಕ ಮುಹಮ್ಮದ್(ಸ)ರ ಬದುಕನ್ನು ಅರ್ಥೈಸಿಕೊಳ್ಳುವಂಥ ಅನುಭೂತಿ ಇದ್ದರೆ ಮಾತ್ರ ಇಂತಹ ಜೀವನ ಚರಿತ್ರೆಯ ಸೃಷ್ಟಿ ಸಾಧ್ಯ. ಇಬ್ರಾಹೀಮ್ ಸಈದ್‌ರಿಗೆ ಈ ಎಲ್ಲ ಗುಣಗಳು ಪೂರ್ಣಪ್ರಮಾಣದಲ್ಲಿವೆಯೆಂದು ನಾನು ಮನ ಗಂಡಿದ್ದೇನೆ. ಅವರು ಇಸ್ಲಾಮೀ ಸಾಹಿತ್ಯವನ್ನು ಕರತಲಾಮಲಕ ಮಾಡಿಕೊಂಡಿದ್ದಾರೆ. ಕುರ್‌ಆನನ್ನು ಅತೀವ ಶ್ರದ್ಧೆಯಿಂದ ಅಭ್ಯಾಸ ಮಾಡಿದ್ದಾರೆ. ಈ ಕೃತಿಯ ರಚನೆಗೆ ಕುರ್‌ಆನೇ ಆಧಾರ. ಕುರ್‌ಆನಿನ ಗರ್ಭದಿಂದಲೇ 'ಪ್ರವಾದಿ ಮುಹಮ್ಮದ್(ಸ) ಜೀವನ ಮತ್ತು ಸಂದೇಶ' ಮೂಡಿದಂತಿದೆ. ಮಕ್ಕಾದಿಂದ ಮೂರು ಮೈಲಿ ದೂರದ ನೂರ್ ಪರ್ವತ ಶಿಖರದಲ್ಲಿದ್ದ ಹಿರಾ ಗುಹೆಯಲ್ಲಿ ಮಾಡಿದ ಸುದೀರ್ಘ ಧ್ಯಾನದ ಪರಿಣಾಮವಾಗಿ, ಮುಹಮ್ಮದ್(ಸ)ರಿಗೆ ಪ್ರವಾದಿತ್ವ ಪದವಿ ದೊರೆಯುತ್ತದೆ. ದೇವದೂತ ಜಿಬ್ರೀಲ್ ಅವರಿಗೆ ಅಲ್ಲಾಹನ ಸಂದೇಶವನ್ನು ನೀಡುತ್ತಾರೆ. "ಓದಿರಿ, ನಿಮ್ಮನ್ನು ಸೃಷ್ಟಿ ಸಿದ ನಿಮ್ಮ ಪ್ರಭುವಿನ ನಾಮ ದಿಂದ. ಹೆಪ್ಪುಗಟ್ಟಿದ ರಕ್ತದಿಂದ ಮನುಷ್ಯನನ್ನವನು ಸೃಷ್ಟಿಸಿದನು. ಓದಿರಿ, ನಿಮ್ಮ ಪ್ರಭು ಮಹಾ ಉದಾರಿಯಾಗಿರುವನು. ಅವನು ಲೇಖನಿಯ ಮೂಲಕ ಜ್ಞಾನ ದಯಪಾಲಿಸಿ ದನು. ಮನುಷ್ಯನಿಗೆ ಅವನು ತಿಳಿದಿರದ ವಿಷಯದ ಜ್ಞಾನವನ್ನು ನೀಡಿದನು." ಪ್ರಪ್ರಥಮವಾಗಿ ಅವತೀರ್ಣಗೊಂಡ ಪವಿತ್ರ ಕುರ್‌ಆನಿನ ಮೊದಲ ಸೂಕ್ತಗಳಲ್ಲಿ ಕೆಲವಿವು. ಜಿಬ್ರೀಲ್‌ರ ರೆಕ್ಕೆ ಬಡಿತದಿಂದ ಉತ್ಪತ್ತಿಯಾದ ನೀರಿನಲ್ಲಿ ಇಬ್ಬರೂ ಸ್ನಾನ ಮಾಡುತ್ತಾರೆ. ಇಬ್ಬರೂ ನಮಾಝ್ ಮಾಡುತ್ತಾರೆ. ಅಲ್ಲಾಹ್ ಸರ್ವ ಶ್ರೇಷ್ಠ ಸೃಷ್ಟಿ ಕರ್ತನೆಂದೂ ಅದ್ವಿತೀಯ ಆರಾಧ್ಯನೆಂದೂ ತಾನವನ ದಾಸನೆಂದೂ ಸಂದೇಶವಾಹಕ ನೆಂದೂ ಪ್ರವಾದಿಯೆಂದೂ ಜಿಬ್ರೀಲ್‌ರ ದೌತ್ಯದಿಂದ ಮುಹಮ್ಮದ್(ಸ)ರಿಗೆ ಸ್ಪಷ್ಟವಾಗುತ್ತದೆ.

ದ್ವೈತ ಮಾರ್ಗದ ದಾಸ್ಯಭಾವದ ಮೂಲಕ ಮುಹಮ್ಮದ್‌ರು(ಸ) ದೇವನನ್ನು ಒಲಿಸಿಕೊಳ್ಳುತ್ತಾರೆ. ಅವನ ಕೃಪೆಗೆ ಪಾತ್ರರಾಗುತ್ತಾರೆ. ಮಹಾಕವಿ ಕುವೆಂಪು ಅವರ ಅನೇಕ ಸೂಕ್ತಿಗಳು 'ಆವುದಾಗಲಿ ನೆಪಂ, ಫಲದಾಯಕಂ ತಪಂ', 'ಈಶ್ವರನ ದಯೆಯಿರಲು ಎಲ್ಲ ಮಂಗಳವಹುದು', 'ಪ್ರಾರ್ಥನೆಯು ಸಾಧಿಸದ ಕಾರ್ಯವೊಂದಿಲ್ಲ', ಸತ್ಯಯುಕ್ತವಾಗಿವೆ ಎಂಬುದಕ್ಕೆ ಪ್ರವಾದಿಗಳ ಜೀವನವೇ ಸಾಕ್ಷಿಯಾಗಿದೆ. ಅವರ ಜೀವನ ನಿಷ್ಕಂಟಕವಾದುದಲ್ಲ, ನಿರ್ವಿಘ್ನವಾದುದಲ್ಲ ನಿಜ; ಅದೊಂದು ಯಾತನಾಮಯ ದಿವ್ಯ ಯಾತ್ರೆ, ಆ ವಿಘ್ನ ಕಂಟಕಗಳೇ ದೇವೇಚ್ಛೆಯ ಪಾಕಕಾರ್ಯಕ್ಕೆ ಇಂಧನಗಳಾಗುತ್ತವೆ. ಅವರಲ್ಲಿ ಪ್ರವಾದಿ ಪ್ರಜ್ಞೆ ಮೂಡಿದ ನಂತರ ಜೀವನಾಂತ್ಯದ ತನಕ ಅವರು ಹೆಜ್ಜೆ ಹೆಜ್ಜೆಗೂ ಅಪಾಯ ಪರಂಪರೆಯನ್ನೆದುರಿಸಬೇಕಾಗುತ್ತದೆ. ಅಲ್ಲಾಹನ ಮೇಲಣ ಅನನ್ಯ ಭಕ್ತಿಯಿಂದಾಗಿ, ಶರಣಾಗತಿಯಿಂದಾಗಿ, ಪ್ರಾರ್ಥನೆ–ಧ್ಯಾನ– ತಪಸ್ಸುಗಳಿಂದಾಗಿ ವಿರೋಧಿ ಬಣಗಳೆಲ್ಲ ಹುಲ್ಲುಕಡ್ಡಿಗಳಾಗುತ್ತವೆ. ಹಿಜಿರಾ ಆಗಲಿ, ಯುದ್ಧವಾಗಲಿ, ಸಂಧಾನವಾಗಲಿ, ರಾಜ್ಯ ಸ್ಥಾಪನೆಯಾಗಲಿ, ಸೈನ್ಯ ಜಮಾವಣೆಯಾಗಲಿ ಪ್ರತಿಯೊಂದು ಸಂಗತಿಯೂ ಕುರ್‌ಆನಿನಲ್ಲಿ ಉಕ್ತಗೊಂಡಿರುವ ಅಲ್ಲಾಹನ ಸಂದೇಶದಂತೆ ನಡೆಯುತ್ತವೆ. 'ತೇನ ವಿನಾ ತೃಣಮಪಿನ ಚಲತಿ' ಎಂಬುದು ಅವರ ಆತ್ಮವಿಶ್ವಾಸ. ಯುದ್ಧದ ಮಧ್ಯದಲ್ಲಿಯೂ ಅವರು 'ಓ ಅಲ್ಲಾಹ್! ನೀನು ನನ್ನಲ್ಲಿ ಮಾಡಿರುವಂತಹ ವಾಗ್ದಾನವನ್ನು ಪೂರ್ಣಗೊಳಿಸು' ಎಂದು ಪ್ರಾರ್ಥಿಸುತ್ತಿದ್ದರು. ಬದ್ರ್ ರಣಾಂಗಣದ ಸನ್ನಿವೇಶ ವೊಂದನ್ನು ಜೀವನ ಚರಿತ್ರಕಾರರು ಕುರ್‌ಆನಿನ ಸೂಕ್ತಗಳಿಂದಲೇ ವಿವರಿಸುತ್ತಾರೆ. ಅವೆಲ್ಲವೂ ಅಲ್ಲಾಹ್‌ನಿಂದಲೇ ಅವತೀರ್ಣಗೊಂಡಂಥವು.

"ನೀವು ಅವರನ್ನು ವಧಿಸಲಿಲ್ಲ.
ನಿಜವಾಗಿ ಅಲ್ಲಾಹನು ಅವರನ್ನು ವಧಿಸಿದನು.
ಪ್ರವಾದಿವರ್ಯರೇ! ನೀವು ಎಸೆಯಲಿಲ್ಲ,
ನಿಜವಾಗಿ ಅಲ್ಲಾಹನು ಎಸೆದನು.
ಇದು ಅಲ್ಲಾಹನು ಸತ್ಯವಿಶ್ವಾಸಿಗಳನ್ನು ಒಂದು ಅತ್ಯುತ್ತಮ ಪರೀಕ್ಷೆಯಿಂದ ಜಯಪ್ರದವಾಗಿ ಪಾರುಗಾಣಿಸಲಿಕ್ಕಾಗಿತ್ತು.
ಖಂಡಿತವಾಗಿಯೂ ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ."

ಯುದ್ಧದಲ್ಲಿ ಜಯ ದೊರೆತಾಗ ತಾವು ಗೆದ್ದುದಾಗಿ ಮುಹಮ್ಮದ್‌ರು(ಸ) ಹೇಳಿಕೊಳ್ಳುವುದಿಲ್ಲ. "ಅವನು ತನ್ನ ವಾಗ್ದಾನವನ್ನು ಪೂರ್ಣಗೊಳಿಸಿದನು. ತನ್ನ ದಾಸನಿಗೆ ನೆರವಾದನು. ಎಲ್ಲ ತಂಡಗಳನ್ನೂ ಆ ಏಕೇಶನು ಸೋಲಿಸಿಬಿಟ್ಟನು" ಎಂದೇ ಅವರು ಹೇಳುತ್ತಾರೆ.

ಜಗತ್ತಿನ ಮಹಾಪುರುಷರ ಬಾಲ್ಯ ಜೀವನವೇ ಅತ್ಯಂತ ವಿಶಿಷ್ಟ ರೀತಿಯಲ್ಲಿ

ವಿಕಾಸಗೊಳ್ಳುತ್ತದೆ. ಸರ್ವಾಂತರ್ಯಾಮಿಯಾಗಿರುವ ಅಲ್ಲಾಹನೇ ತನ್ನ ಆಯ್ಕೆಯ ವ್ಯಕ್ತಿಯನ್ನು ತುಂಬ ಜೋಪಾನವಾಗಿ ಕೈ ಹಿಡಿದು ನಡೆಸುವಂತೆ, ಸದಾ ಅವನಿಗೆ ಮೈಗಾವಲಾಗಿರುವಂತೆ ತೋರುತ್ತದೆ. ಆಡು ಮೇಯಿಸುತ್ತಿದ್ದ ಬಾಲಕ ಮುಹಮ್ಮದ್(ಸ) ಪ್ರಕೃತಿಯ ಮೂಲಕ ಅಲ್ಲಾಹನೊಡನೆ ಮಾತಾಡುತ್ತಾರೆ. ಎಲ್ಲೆಲ್ಲೂ ಅಲ್ಲಾಹನನ್ನೇ ಕಾಣುತ್ತಾರೆ. ಅವರ ದೈವೋನ್ಮಾದ ಅದ್ವಿತೀಯವಾದದ್ದು; ಅದೇ ಅವರ ಬದುಕಿನ ನೆಲೆ–ಬೆಲೆ–ಸೆಲೆಯಾಗುತ್ತದೆ. ಅವರ ಬದುಕನ್ನೆಲ್ಲ ಆವರಿಸಿಕೊಳ್ಳುತ್ತದೆ. ಅಲ್ಲಾಹನ ಇಚ್ಛೆಯ ಅಭಿವ್ಯಕ್ತಿಗೆ ಅವರ ಬದುಕೊಂದು ಮಾಧ್ಯಮವಾಗುತ್ತದೆ. ಆದ್ದರಿಂದಲೇ ಅವರ ನಿತ್ಯ ಜೀವನದಲ್ಲಿ ಸತ್ಯನಿಷ್ಠೆ, ಪರಾನುಕಂಪ, ಸ್ತಿತಪ್ರಜ್ಞೆ, ಪ್ರಾಮಾಣಿಕತೆ, ಸರ್ವಾನುಭವ ಮೊದಲಾದ ದಿವ್ಯಗುಣಗಳು ರಾರಾಜಿಸುತ್ತವೆ. ಅಲ್ಲಾಹನ ಸಂದೇಶವೇ ಅವರ ಅಂತರ್ವಾಣಿಯಾಗಿದೆ ಎಂದರೂ ಸಲ್ಲುತ್ತದೆ. ಸಂಕಟವೋ ಸಮಸ್ಯೆಯೋ ಸಂಪ್ರಾಪ್ತವಾದಾಗ ಅವರು ಧ್ಯಾನಮಗ್ನರಾಗುತ್ತಾರೆ. ಆ ಸಮಯದಲ್ಲವರಿಗೆ ಅಲ್ಲಾಹನ ವಾಣಿ ಕೇಳಿಸುತ್ತದೆ. ತಮ್ಮ ಪ್ರತಿಯೊಂದು ಕ್ರಿಯೆಯೂ ಅಲ್ಲಾಹನ ಪ್ರೇರಣೆಯಿಂದಲೇ ನಡೆಯುತ್ತದೆಂದು ಅವರೇ ಸ್ಪಷ್ಟಪಡಿಸಿದ್ದಾರೆ. ಸೃಷ್ಟಿಕರ್ತನೂ ಸರ್ವವ್ಯಾಪಿಯೂ ನಿರಾಕಾರನೂ ಆದ ಅಲ್ಲಾಹನನ್ನು ಕಲ್ಲುಮಣ್ಣುಗಳ ವಿಗ್ರಹಗಳಲ್ಲಿ ಹಿಡಿದಿಡುವುದು ಸಾಧ್ಯವೇ? ಅದು ವಿವೇಕ ಸಮ್ಮತವೇ ಎಂದು ಆಗಿನ ಕಾಲಕ್ಕೆ ಪ್ರಶ್ನಿಸಿದ್ದು ಧಾರ್ಮಿಕ ಇತಿಹಾಸದ ಮಹಾದ್ಭುತವೆಂದೇ ಹೇಳಬಹುದು. ಆ ಕಾಲದ ಕಅಬಾ ಮಂದಿರದಲ್ಲಿಯೇ ಮುನ್ನೂರರವತ್ತು ವಿಗ್ರಹಗಳಿದ್ದುವಂತೆ. ಪ್ರವಾದಿಗಳೇರಿದ ಆಧ್ಯಾತ್ಮ ಶಿಖರವಾಗಲಿ ನಿರಾಕಾರ ತತ್ವದ ಸೂಕ್ಷ್ಮಾತಿಸೂಕ್ಷ್ಮ ವಿಚಾರವಾಗಲಿ ಜಡ ಸಂಪ್ರದಾಯದ ಬುದ್ಧಿ ಮಾಂದ್ಯರಿಗೆ ಎಟಕುತ್ತದೆಯೇ? ಆದ್ದರಿಂದ ಅವರು ಜೀವನದುದ್ದಕ್ಕೂ ಮಾನವನ ಐಕ್ಯಕ್ಕಾಗಿ ಜಗತ್ತಿನ ಲೇಸಿಗಾಗಿ ಸಕಲ ನಿಂದಾಪಮಾನಗಳನ್ನು ಸಹಿಸಬೇಕಾಗುತ್ತದೆ. ಸರ್ವ ಸುಖ–ಭೋಗ ವ್ಯಾಮೋಹಗಳನ್ನೂ ತ್ಯಜಿಸಬೇಕಾಗುತ್ತದೆ; ಆತ್ಮಸುಖಕ್ಕಾಗಿ ಮಾತ್ರವಲ್ಲ ಪರರ ಹಿತಕ್ಕಾಗಿ ಉಪವಾಸ ಮಾಡಬೇಕಾಗುತ್ತದೆ; ಯುದ್ಧದ ಬೇನೆಯನ್ನು ಅನುಭವಿಸಬೇಕಾಗುತ್ತದೆ. ಕೊನೆಗೆ ತಾವು ಜನಿಸಿದ ಮಕ್ಕಾ ನಗರವೇ ಹಗೆಯಾಗಲಾಗಿ ಮುಹಮ್ಮದ್(ಸ)ರವರು ಮದೀನಾವನ್ನು ಲೌಕಿಕ ಹಾಗೂ ಧಾರ್ಮಿಕ ಕೇಂದ್ರವನ್ನಾಗಿ ರೂಪಿಸಿಕೊಳ್ಳುತ್ತಾರೆ. ಅದು ಮಕ್ಕಾವನ್ನು ತನ್ನ ತೆಕ್ಕೆಯಲ್ಲಿ ಸೇರಿಸಿಕೊಳ್ಳುತ್ತದಲ್ಲದೆ ಜಗತ್ತಿನ ಕಣ್ಬೊಲವಾಗುತ್ತದೆ.

ಅರೇಬಿಯಾದಲ್ಲಿದ್ದ ಮುಹಮ್ಮದ್‌ರ(ಸ) ಜನನಪೂರ್ವ ಪರಿಸ್ಥಿತಿಯನ್ನು ಲಕ್ಷಿಸಿದಾಗ ಅವರ ಜನನ ದೈವೀ ಘಟನೆ ಮಾತ್ರವಲ್ಲ, ಚಾರಿತ್ರಿಕಾವಶ್ಯಕತೆಯ ಅದ್ಭುತ ಘಟನೆಯೂ ಹೌದೆಂಬುದು ಸ್ಪಷ್ಟವಾಗುತ್ತದೆ. ಜೀವನ ಚರಿತ್ರೆಕಾರರೇ ಆ ಪರಿಸ್ಥಿತಿಯ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ಕುಂಚಿಸಿದ್ದಾರೆ, "ಅಲ್ಲಿ ನಾಗರಿಕತೆಯ ಬೆಳಕು ಹರಿದೇ ಇರಲಿಲ್ಲ. ಮಾನವೀಯತೆಯು ನಿದ್ದೆಯಿಂದ ಎಚ್ಚರಗೊಂಡೇ

ಇರಲಿಲ್ಲ. ಎಲ್ಲೆಡೆಯೂ ಅರಾಜಕತೆ ವ್ಯಾಪಿಸಿತ್ತು. ಮನುಷ್ಯ ಮನುಷ್ಯರ ನಡುವೆ ಒಡಕುಂಟಾಗಿತ್ತು. ಜಗಳ, ಯುದ್ಧ, ಕೊಳ್ಳೆ, ದರೋಡೆಗಳು ವ್ಯಾಪಕವಾಗಿದ್ದುವು. ವ್ಯಭಿಚಾರ, ಶರಾಬು ಮತ್ತು ಜೂಜಿನಿಂದ ಮೈವೆತ್ತ ಅಜ್ಞಾನ ಕಾಲದ ಸಂಸ್ಕೃತಿ ಉತ್ತುಂಗತೆಯಲ್ಲಿತ್ತು. ಕುರೈಶರು ಕೂಡಾ ಬಹುದೇವ ವಿಶ್ವಾಸ ಮತ್ತು ಮೂರ್ತಿಪೂಜೆಯನ್ನು ಧರ್ಮವಾಗಿಸಿಕೊಂಡಿದ್ದರು. ಯಹೂದಿಗಳು ವೇದಾಂತ ಮತ್ತು ಕರ್ಮಶಾಸ್ತ್ರದ ಕೂದಲು ಸೀಳುವಿಕೆಯನ್ನು ತಮ್ಮ ವ್ಯಾಪಾರವಾಗಿ ಮಾಡಿಕೊಂಡಿದ್ದರು. ಮಕ್ಕಾ ಮತ್ತು ತಾಯಿಫ್‌ನ ಸಾಹುಕಾರರು ಬಡ್ಡಿ ವ್ಯವಹಾರದ ಒಂದು ವ್ಯವಸ್ಥಿತ ಜಾಲವನ್ನೇ ಹರಡಿದ್ದರು." ಸಮತೋಲನ ನಿಸರ್ಗದ ಮೂಲಭೂತ ಲಕ್ಷಣ. ಅದು ಸುರಕ್ಷಿತವಾಗಿದ್ದರೇನೇ ಜಗತ್ತಿನಲ್ಲಿ ಶಾಂತಿ, ಮಾನವಕುಲದಲ್ಲಿ ಸಾಮರಸ್ಯ ಸಾಧ್ಯ. ಅದಕ್ಕೆ ಧಕ್ಕೆಯೊದಗಿದಾಗ ಸರ್ವನಾಶ ಅನಿ ವಾರ್ಯ. ಪ್ರಳಯದ ಸಮಾಧಿಯ ಮೇಲೆ ನವ ಸೃಷ್ಟಿ ಉದಯಿಸುತ್ತದೆ. ಹೊಸ ಸಂಸ್ಕೃತಿ ಅರಳುತ್ತದೆ. ಇಂತಹ ಉದಯದ ಮತ್ತು ಅರಳಿಕೆಯ ಹರಿಕಾರರಾಗಿ ಬುದ್ಧ, ಯೇಸುಕ್ರಿಸ್ತ, ಮುಹಮ್ಮದ್(ಸ), ಬಸವೇಶ್ವರರಂಥವರು ಜನ್ಮಧಾರಣೆ ಮಾಡು ತ್ತಾರೆ. ಅವರ ಮತ್ತು ಅವರ ಸಮಕಾಲೀನ ಸಹಚರರ ಅಂದಿನ ಬಲಿದಾನದ ಪ್ರಭಾವಳಿ ಇಂದಿಗೂ ಜಗತ್ತಿನ ಮೇಲೆ ಅಚ್ಚಳಿಯದಿದೆ. ಮಾನವಕುಲ ಅದರ ಫಲವನ್ನನುಭವಿಸುತ್ತಿದೆ.

ಈ ಮಹಾಪುರುಷರು ಸ್ಥಾಪಿಸಿದ ಮತಗಳ ಬಾಹ್ಯಾಚರಣೆಗಳಲ್ಲಿ ವ್ಯತ್ಯಾಸಗಳು ಇರಬಹುದೇ ಹೊರತು, ಅವರ ಸಾಧನಾ ವಿಧಾನದಲ್ಲಿ, ಬೋಧಿಸಿದ ತತ್ವಗಳಲ್ಲಿ, ಅಧ್ಯಾತ್ಮ ಸಿದ್ಧಿಯಲ್ಲಿ ವೈಷಮ್ಯಗಳಿಗಿಂತ ಸಾಮ್ಯವೇ ಹೆಚ್ಚು. ಮುಹಮ್ಮದ್‌ರವರು(ಸ) ನೀಡಿದ ಪ್ರಥಮ ಜುಮಾ ಪ್ರವಚನದ ಕಡೆಗೆ ಗಮನ ಹರಿಸಿದರೆ ಈ ಮಾತಿನ ಸತ್ಯ ವೇದ್ಯವಾಗುತ್ತದೆ:

"ಸರ್ವ ಸ್ತುತಿ-ಸ್ತೋತ್ರಗಳು ಅಲ್ಲಾಹನಿಗೆ... ನಾನು ಅವನನ್ನು ನಿರಾಕರಿಸುವುದಿಲ್ಲ. ಅವನನ್ನು ಯಾರು ನಿರಾಕರಿಸುತ್ತಾರೋ ಅವನನ್ನು ನನ್ನ ಶತ್ರುವೆಂದು ಪರಿಗಣಿಸು ತ್ತೇನೆ. ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯ ವಹಿಸುತ್ತೇನೆ."

ಈ ಘೋಷಣೆಯನ್ನು ಎಚ್ಚರಿಕೆಯಿಂದ ವಿಶ್ಲೇಷಿಸಬೇಕಾಗಿದೆ. ಮೂರ್ತಿಪೂಜೆ ಮತ್ತು ಬಹುದೇವಾರಾಧನೆಗಳ ಹಿನ್ನೆಲೆಯಲ್ಲಿ ಅಲ್ಲಾಹನ ಏಕೈಕತ್ವವನ್ನು ಒಪ್ಪಿಕೊಳ್ಳಬೇಕಾ ಗುತ್ತದೆ. ಸತ್ಯಾಂಶಗಳನ್ನು ಸ್ವೀಕರಿಸಿ, ಮಾನವರೆಲ್ಲರೂ ಅನುಷ್ಠಾನಿಸಿದಾಗ ಜಗತ್ತಿನಲ್ಲಿ ಶಾಂತಿ ನೆಲಸುವಂತಾಗುತ್ತದೆ. ಮೇಲಿನ ಘೋಷಣೆಯಲ್ಲಿ ಬರುವ 'ಅನ್ಯ ಆರಾಧ್ಯರಿಲ್ಲ' ಎಂಬ ಮಾತು ಪ್ರತಿಯೊಂದು ಮತದ ಕ್ಷುದ್ರ ದೇವತೆಗಳಿಗನ್ವಯಿಸುತ್ತದೆಂದು ಅರ್ಥ ಮಾಡಿಕೊಳ್ಳಬೇಕಾಗುತ್ತದೆ.

ಮಾನವ ಕುಲದ ಮೇಲೆ ಅದ್ಭುತ, ಅದಮ್ಯ, ವ್ಯಾಪಕ ಪ್ರಭಾವವನ್ನು ಬೀರಿದ, ವಿನೂತನ, ವಿನಶ್ವರ ಸಾಂಸ್ಕೃತಿಕ ಪರಂಪರೆಯನ್ನು ನಿರ್ಮಿಸಿದ ಧಾರ್ಮಿಕ ನಾಯಕರು ಮೂವರು: ಬುದ್ಧ, ಏಸು, ಮುಹಮ್ಮದ್(ಸ). ಜಾಗತಿಕ ಇತಿಹಾಸದ ಗತಿಯನ್ನೇ ತಿದ್ದುವ, ಪ್ರೇರಿಸುವ ಮತ್ತು ತಿರುಗಿಸುವ ಜೀವಂತ ಪ್ರಜ್ವಲ ಶಕ್ತಿಗಳೆಂದರೆ ಕ್ರಿಶ್ಚಿಯಾನಿಟಿ ಮತ್ತು ಇಸ್ಲಾಮ್ ಧರ್ಮ. ಒಂದು ಸಾವಿರದ ನಾನೂರು ವರ್ಷಗಳ ನಂತರವೂ ಪ್ರವಾದಿವರ್ಯರ(ಸ) ಬೋಧನೆ ಹೊಚ್ಚ ಹೊಸದಾಗಿದೆ ಮಾತ್ರವಲ್ಲ, ಜಗತ್ತಿನ ಭವಿಷ್ಯವನ್ನು ರೂಪಿಸಬಲ್ಲ ಮೂಲಭೂತ ಜೀವದ್ರವ್ಯ, ಸಂಜೀವನ ಶಕ್ತಿ ಅದರಲ್ಲಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ನಿಜವಾದ ಧರ್ಮ ಯಾವುದೇ ಆಗಲಿ, ಅದು ಮತ್ತೊಂದನ್ನು ವಿರೋಧಿಸಲಾರದು; ಅಲ್ಲಾಹನಲ್ಲಿ ಅಥವಾ ಪರಬ್ರಹ್ಮನಲ್ಲಿ ನಿಷ್ಠೆ ಯುಳ್ಳ ಭಕ್ತ ಬೇರೊಬ್ಬ ಭಕ್ತನನ್ನು ದ್ವೇಷಿಸಲಾರನು. ಜಗತ್ತಿನ ಅಗ್ರಮಾನ್ಯ ದೈವಭಕ್ತರಲ್ಲಿ ಮುಹಮ್ಮದ್‌ರು(ಸ) ಶಿಖರ ಸ್ಥಾನದಲ್ಲಿದ್ದಾರೆಂಬುದೂ ನಿಜವೇ. ಇಸ್ಲಾಮ್ ಧರ್ಮ ಆಧ್ಯಾತ್ಮಿಕ ತತ್ವದ ನಿಧಿಯಷ್ಟೇ ಅಲ್ಲ, ಜೀವನ ಮೀಮಾಂಸೆಯೂ ಹೌದು. ಇಬ್ರಾಹೀಮ್ ಸಈದರ ಈ ಗ್ರಂಥವನ್ನೋದಿದ ಬಳಿಕ ಇಸ್ಲಾಮನ್ನು ನಾನು ಅರ್ಥಮಾಡಿಕೊಂಡಿರುವ ಬಗೆಯಿದು. ಪೂರ್ವಗ್ರಹ ಪಕ್ಷಪಾತ ದೂರನಾದ, ಸರ್ವಭೂತ ಹಿತರತನಾದ ಯಾವ ವ್ಯಕ್ತಿಗಾದರೂ ಈ ಸಂಗತಿಗಳು ಅಪಥ್ಯವಾಗ ಲಾರವೆಂದೇ ನನ್ನ ನಂಬಿಕೆ.

ಅರೇಬಿಯಾ ಮರುಭೂಮಿಯಲ್ಲಿ ಆಧ್ಯಾತ್ಮಿಕ ಪ್ರವಾಹವನ್ನು ಹರಿಸಿ, ಧಾರ್ಮಿಕ ಬೀಜವನ್ನು ಬಿತ್ತಿ, ಉಚ್ಚ ಸಂಸ್ಕೃತಿಯ ಬೆಳಕನ್ನು ಪಡೆದು, ಇಡೀ ಜಗತ್ತಿಗೆ ಹಂಚಿದ ಪುಣ್ಯಜೀವಿ ಮುಹಮ್ಮದ್(ಸ)ರು 'ಲಾ ಇಲಾಹ ಇಲ್ಲಲ್ಲಾಹ್' ಮಂತ್ರ ಜ್ಯೋತಿಯಿಂದ ಇಡೀ ವಿಶ್ವವನ್ನೇ ಬೆಳಗಿದ ಮಹಾತ್ಮರವರು. ಇತಿಹಾಸವನ್ನು ನಿರ್ಮಿಸಿದ ಈ ಭವ್ಯ ಮಾನವ ಈ ನೆಲದ ಮೇಲೆ ಹರಿದಾಡದಿದ್ದರೆ ಜಗತ್ತು ಅಜ್ಞಾನಾಂಧಕಾರದಲ್ಲಿ, ಮೌಢ್ಯ ಮಾಲಿನ್ಯದ ಕೆಸರುಸುಬಿನಲ್ಲಿ, ಅನಾಗರಿಕತೆಯ ಬಸಿರಲ್ಲಿ ತೊಳಲಾಡುತ್ತಿತ್ತೆಂಬುದರಲ್ಲಿ ಅನುಮಾನವಿಲ್ಲ. ಇಂತಹ ಮಹಾನುಭಾವರ ಪುಣ್ಯಕಥೆಯನ್ನು ರಚಿಸಬಲ್ಲ ಸಾಮರ್ಥ್ಯ, ಸಾಹಸ, ಮನೋಧರ್ಮ ಮತ್ತು ಯೋಗ್ಯತೆ ಅವರ ನಿಷ್ಠಾವಂತ ಅನುಯಾಯಿಗಳಿಗೆ ಮಾತ್ರ ಮೀಸಲು. ಈ ಪವಿತ್ರ ಕಾರ್ಯ ಸಾಧನೆಗೆ ಅತ್ಯಗತ್ಯವಾದ ಸಕಲ ಗುಣಗಳು ಇಬ್ರಾಹೀಮ್ ಸಈದರಲ್ಲಿ ಸುಸಮೃದ್ಧವಾಗಿವೆ. ಅವರು ದೈವಭಕ್ತರು, ಪ್ರವಾದಿ ನಿಷ್ಠರು. ಉರ್ದು, ಅರೇಬಿಕ್, ಕನ್ನಡ ಭಾಷೆಗಳಲ್ಲಿ ಪಾರಂಗತರು; ಲೇಖನ ಕಾಯಕದಲ್ಲಿ ಸಿದ್ಧ ಹಸ್ತರು. ಕನ್ನಡದ ಮೈಯಲ್ಲಿ ಉರ್ದು, ಅರೇಬಿಕ್ ಭಾಷೆಗಳ ಸತ್ವವನ್ನು ಮೇಳೈಸಿ, ಕನ್ನಡದ ಕೆಚ್ಚನ್ನು ಹೆಚ್ಚಿಸಿರುವ ಅಭಿಮಾನಿಯವರು. ಪ್ರವಾದಿಗಳ ಪವಿತ್ರ ಜೀವನ ಸಂದೇಶವನ್ನು

ಬಿತ್ತರಿಸುವ ಮೂಲಕ ಕನ್ನಡದ ಗೌರವವನ್ನು ಮುಗಿಲಿಗೇರಿಸಿದ್ದಾರೆ. ಮುಹಮ್ಮದ್‌ರ(ಸ) ಜೀವನವೆಂತು ಸರಳವೋ ಅವರು ಬಳಸುವ ಭಾಷೆಯೂ ಅಷ್ಟೇ ಸರಳ. ಮೃದು ಪದಬಂಧ, ಸಮಾಸ ರಹಿತ ನಿರಾಡಂಬರತೆ, ದೀರ್ಘವೂ ಅಲ್ಲದ, ಹ್ರಸ್ವವೂ ಅಲ್ಲದ ಪರಿಣತ ವಾಕ್ಯಗಳು, ಪದಪದಗಳ, ವಾಕ್ಯವಾಕ್ಯಗಳ ಸಂಶಿಷ್ಟತೆ ಅವರ ಶೈಲಿಯ ಹೆಗ್ಗುಣಗಳು. ದೂರದೂರಕ್ಕೆ ಬರುವ ಅರೇಬಿಕ್ ಪದಗಳು ಕನ್ನಡದ ಶ್ರೀಮಂತಿಕೆಯನ್ನು ಪುಷ್ಟಿಗೊಳಿಸುತ್ತವೆ. ಉದಾಹರಣೆಗಾಗಿ ಪ್ರವಾದಿಗಳ ನಿವಾಸದ ವರ್ಣನೆಯನ್ನು ಗಮನಿಸಬಹುದು:

ಮಸ್ಜಿದುನ್ನಬವಿಗೆ ತಾಗಿ ಪಶ್ಚಿಮದ ಕಡೆ ಎರಡು ಕೋಣೆಗಳನ್ನು ನಿರ್ಮಿಸಲಾಗಿದೆ. ಹಸಿ ಇಟ್ಟಿಗೆ ಮತ್ತು ಗಾರೆಗಳಿಂದ ಗೋಡೆಗಳನ್ನು ನಿರ್ಮಿಸಲಾಗಿದೆ. ಗೋಡೆಯು ಆಳೆತ್ತರಕ್ಕಿಂತಲೂ ಹೆಚ್ಚಾದಾಗ ಒಬ್ಬ ವ್ಯಕ್ತಿ ನಿಂತು ಅವನ ಕೈಯನ್ನು ಮೇಲೆ ಚಾಚಿದಾಗ ಕೈಗೆಟಕುವಂತೆ ಖರ್ಜೂರದ ಪಕ್ಕಾಸುಗಳನ್ನಿಟ್ಟು ಅವುಗಳನ್ನು ಎಲೆಗಳಿಂದ ಮುಚ್ಚಲಾಗಿದೆ. ಇದುವೇ ಆ ಕೋಣೆಗಳ ಛಾವಣಿಯಾಗಿದೆ. ಅದಕ್ಕೆ ಗಾರೆಯನ್ನು ಲೇಪಿಸಿ ಸೆಖೆ ಮತ್ತು ಮಳೆಯಿಂದ ರಕ್ಷಣೆ ಹೊಂದಲು ವ್ಯವಸ್ಥೆ ಮಾಡಲಾಗಿದೆ. ಈ ಕೋಣೆಗಳ ಜೊತೆಗೆ ಅಂಗಣವಾಗಲಿ, ಪಡಸಾಲೆಯಾಗಲಿ, ಇತರ ಕೋಣೆಗಳಾಗಲಿ ಇಲ್ಲ. ಮಣ್ಣಿನ ಇಟ್ಟಿಗೆಯಿಂದ ನಿಲ್ಲಿಸಿದ ಗೋಡೆಗಳಲ್ಲಿ ಹಲವೆಡೆ ಬಿರುಕು ಇದ್ದು ಬಿಸಿಲು ಒಳಗೆ ಬರುತ್ತದೆ. ಮಣ್ಣಿನ ಗೋಡೆಗಳನ್ನು ಮಳೆಯಿಂದ ರಕ್ಷಿಸಲು ಅವುಗಳಿಗೆ ಉಣ್ಣೆಯ ಕಂಬಳಿಗಳನ್ನು ಹೊದಿಸಲಾಗಿದೆ. ಬಾಗಿಲಿಗೆ ದಾರಂದವೆಂಬುದಿಲ್ಲ. ಕೇವಲ ಗೋಡೆಯ ಮಧ್ಯೆ ಸ್ಥಳ ಬಿಡಲಾಗಿದ್ದು ಅದಕ್ಕೆ ಕಂಬಳಿಯನ್ನು ಇಳಿಬಿಟ್ಟು ಪರ್ದಾ ಮಾಡಲಾಗಿದೆ.

ಈ ವರ್ಣನೆಯಲ್ಲಿ ರಂಗಾಗಲಿ ಬಿಂಕವಾಗಲಿ ಇಲ್ಲ.

ಪ್ರವಾದಿಗಳ ಪ್ರವಚನ ಪ್ರತಿಪಾದನೆಯ ಶೈಲಿಯಂತೂ ಅರ್ಥಯುಕ್ತ, ಭಾವದೀಪ್ತ, ಸುಲಭಗ್ರಾಹ್ಯ; ಎಲ್ಲಿಯೂ ಪೆಡಸಿಲ್ಲ, ಡಬ್ಬು ಡೊಳ್ಳುಗಳಿಲ್ಲ, ಡಾಂಬಿಕತೆಯಿಲ್ಲ. ಕೆಲವನ್ನು ಮಾತ್ರ ಇಲ್ಲಿ ಉದ್ಧರಿಸಲಾಗಿದೆ.

- ಎಲ್ಲ ಮಾತುಗಳಿಗಿಂತಲೂ ಮಿಗಿಲಾದ ಮಾತು ಅಲ್ಲಾಹನ ಸ್ಮರಣೆಯಾಗಿದೆ.
- ಅತ್ಯುತ್ತಮ ಕೆಲಸವೆಂದರೆ ಸಾಹಸದ ಕೆಲಸ.
- ಮನುಷ್ಯನಿಗೆ ಧಾರ್ಮಿಕ, ನೈತಿಕ ಮತ್ತು ಆಧ್ಯಾತ್ಮಿಕ ಲಾಭ ಸಿಗುವ ಕಾರ್ಯಗಳೇ ಅತ್ಯುತ್ತಮವಾದುವು.
- ಅತ್ಯಂತ ಕೆಟ್ಟ ಕುರುಡು, ಹೃದಯದ ಕುರುಡಾಗಿದೆ. ಹೃದಯದ ಶ್ರೀಮಂತಿಕೆಯೇ ನಿಜವಾದ ಶ್ರೀಮಂತಿಕೆ.

- ಕೊಡುವ ಕೈ ಪಡೆಯುವ ಕೈಗಿಂತ ಉತ್ತಮವಾಗಿದೆ.
- ಪಾಪ ಕಾರ್ಯಗಳ ಪೈಕಿ ಅತ್ಯಂತ ಘೋರವಾದುದು ಸುಳ್ಳು.
- ಮನುಷ್ಯನ ಅತ್ಯುತ್ತಮ ಬುತ್ತಿ ದೈವಭಕ್ತಿಯಾಗಿದೆ.
- ಮದ್ಯಪಾನವು ಕೆಡುಕುಗಳ ಜನನಿಯಾಗಿದೆ.

ಸಈದ್‌ರ ಬರಹ ಶೈಲಿ ಭರತ–ಇಳಿತಗಳಿಲ್ಲದೆ, ಮೈದಾನದ ತೊರೆಯಂತೆ ಹರಿಯುತ್ತದೆ. ಕಾಲಾನುಕ್ರಮದ ಗತಿಯಲ್ಲಿ ಸಾಗುವ ಈ ಕತೆಯ ತಂತ್ರವೂ ಸರಳ ವಾದದ್ದೇ. ಕಟ್ಟಡವೂ ಅಷ್ಟೇ. ಪುರಾಣದ ಛಾಯೆ ಮತ್ತು ಕಾದಂಬರಿಯ ಮೋಹಕತೆ ಎರಡೂ ಮೇಳೈಸಿರುವ ಈ ಕೃತಿಯ ಘಟನೆಗಳಾಗಲಿ ಸಂಗತಿಗಳಾಗಲಿ ಕಟ್ಟಿದುವಲ್ಲ, ಹುಟ್ಟಿದುವು. ಸನ್ನಿವೇಶಗಳಂತು ನೈಜವಾದುವು. ಇದನ್ನೋದುವಾಗ ಅರೇಬಿಯಾದ ಪವಿತ್ರ ಭೂಮಿಯ ಮೇಲೆ ಸಂಚರಿಸುತ್ತಿದ್ದಂತೆ, ಜಗತ್ತಿನ ಶ್ರೇಷ್ಠತಮ ಧಾರ್ಮಿಕ ರಾಜಧಾನಿಯಾದ ಮದೀನಾದ ಜೀವನವಾಹಿನಿಯಲ್ಲಿ ಸೇರಿಕೊಂಡಂತೆ, ಪ್ರವಾದಿ ವರ್ಯರ(ಸ) ಸುಖ ದುಃಖಗಳಲ್ಲಿ ಪಾಲ್ಗೊಳ್ಳುತ್ತಿರುವಂತೆ, ಕಅಬಾ ಮಂದಿರವನ್ನು ಪ್ರದಕ್ಷಿಣೆ ಮಾಡುತ್ತಿದ್ದಂತೆ, ವಿಶ್ವದ ಪ್ರಪ್ರಥಮ ಮಸೀದಿಯಲ್ಲಿ ನಮಾಝ್ ಮಾಡುತ್ತಿದ್ದಂತೆ, ಅಲ್ಲಿಯ ಖರ್ಜೂರವನ್ನು ಸವಿಯುತ್ತಿದ್ದಂತೆ, ಪ್ರವಾದಿಗಳ ಅಂತಿಮ ಯಾತ್ರೆಯಲ್ಲಿ ಹಾಜರಿದ್ದಂತೆ ಅನುಭವವಾಗುತ್ತದೆ; ಬುದ್ಧ, ಯೇಸುಕ್ರಿಸ್ತ, ಬಸವೇಶ್ವರರ ನೆನಪಾಗುತ್ತದೆ. ಮುಹಮ್ಮದ್‌ರ(ಸ) ಜೀವನ ಕಥಾಪೀಯೂಷವನ್ನು ಕನ್ನಡಿಗರಿಗೂಡಿದ, ಕನ್ನಡ ಸಾಹಿತ್ಯವನ್ನು ಸಂಪನ್ನಗೊಳಿಸಿದ ಇಬ್ರಾಹೀಮ್ ಸಈದ್‌ರು ಪುಣ್ಯವಂತರು, ಅಭಿನಂದನೀಯರು.

ಜಗತ್ತಿನಲ್ಲಿ ಶಾಶ್ವತವಾಗಿ ಶಾಂತಿ ನೆಲಸಬೇಕೆಂದು, ಮಾನವಕುಲವು ಸಾಮರಸ್ಯ ಸೋದರತ್ವದಿಂದ ಬಾಳಬೇಕೆಂದು ಬಯಸುವವರು ಸಹಬಾಳ್ವೆಯಿಂದಲ್ಲದೆ ನಿರ್ದುಷ್ಟ ಸುಖ ದೊರೆಯಲಾರದೆಂದು ಯೋಚಿಸುವ ವಿವೇಕಿಗಳು ಕೊನೆಯ ಪಕ್ಷ ಉಪ ನಿಷತ್ತು, ತ್ರಿಪಿಟಕ, ಬೈಬಲ್, ಕುರ್‌ಆನ್‌ಗಳನ್ನಾದರೂ ಅಧ್ಯಯನ ಮಾಡಬೇಕು. ಸ್ವಾಮಿ ವಿವೇಕಾನಂದರ ಉಪದೇಶವನ್ನು ಗ್ರಹಿಸಬೇಕು. ಬಹುಸಮಾಜ, ಬಹು ಸಂಸ್ಕೃತಿಗಳ ಶ್ರೀಮಂತಿಕೆಯುಳ್ಳ ಭರತ ಖಂಡದಂತಹ ದೇಶಗಳಲ್ಲಂತು ಯೇಸು, ಮುಹಮ್ಮದ್(ಸ)ರ ಗಾಢ ಪರಿಚಯ ಅನಿವಾರ್ಯ. ಏಕದೇವೋಪಾಸನೆ, ಉಪವಾಸಾದಿ ವ್ರತನಿಷ್ಠೆ, ಸರ್ವ ಸಮಾನತೆ, ಭ್ರಾತೃತ್ವ ಮತ್ತು ನೈತಿಕ ಶ್ರದ್ಧೆ ಯಾವ ಸಮಾಜದಲ್ಲಿ ಚಾಲ್ತಿಯಲ್ಲಿರುತ್ತವೋ ಆ ಸಮಾಜ ಜಾತೀಯ ಛಿದ್ರತೆಯಿಂದ ಮುಕ್ತವಾಗಿದ್ದು, ಏಕಶಿಲಾ ಸದೃಶವಾಗಿ ಸುಭದ್ರವಾಗಿರುತ್ತದೆ; ವೈರಿಗಳಿಗೆ ಅಭೇದ್ಯ ಕೋಟೆಯಾಗಿರುತ್ತದೆ ಎಂಬ ಅಪೂರ್ವ ಪಾಠವನ್ನು ಪ್ರವಾದಿವರ್ಯರ(ಸ) ಜೀವನ ಸಂದೇಶದಿಂದ ಕಲಿಯ ಬಹುದಾಗಿದೆ. ಅದನ್ನು ಕಲಿತದ್ದಾದರೆ ಭಾರತ ಬದುಕುತ್ತದೆ. ಇಲ್ಲ, ನಾಶ

ಹೊಂದುತ್ತದೆ. ಕ್ರಿ.ಶ. 1017ರಲ್ಲಿ ಭಾರತಕ್ಕೆ ಬಂದಿದ್ದ ಅಲ್ ಬರೂನಿ ಭಗವದ್ಗೀತೆ-ಉಪನಿಷತ್ತುಗಳನ್ನು ಅಧ್ಯಯನ ಮಾಡಿದ ನಂತರ ಇಸ್ಲಾಮ್ ಮತ್ತು ಹಿಂದೂ ಧರ್ಮಗಳ ನಡುವೆ ಮಹದಂತರವಿಲ್ಲವೆಂದು ಹೇಳುತ್ತಾನೆ. ಬುದ್ಧ, ಮೋಸೆಸ್, ಉಪನಿಷದೃಷಿಗಳು, ಮಹಾವೀರ, ಜೊರಾಸ್ಟರ, ಯೇಸು, ಮುಹಮ್ಮದ್, ನಾನಕ್, ಬಸವೇಶ್ವರ ಮೊದಲಾದವರ ಆಶೀರ್ವಾದಕ್ಕೆ ಪಾತ್ರವಾಗಿರುವ ಭರತಖಂಡದ ಪುಣ್ಯಕ್ಕೆ ಪಾರವಿಲ್ಲ, ಎಣೆಯಿಲ್ಲ. ಆದರೆ ಆ ನಿಜದ ನೆಲೆಯನ್ನರಿತು, ಅನುಭವಿಸುವ ಬದುಕುವ ಜನ ಬೇಕು.

ಇಸ್ಲಾಮ್ ಧರ್ಮ ಭರತಖಂಡಕ್ಕೆ ಕಾಲಿಟ್ಟು ಒಂದು ಸಾವಿರದ ಇನ್ನೂರು ವರ್ಷಗಳೇ ಸಂದಿವೆ. ಪ್ರಾರಂಭದಲ್ಲಿ ಹಿಂದೂ ಮುಸ್ಲಿಮರ ನಡುವಣ ಸಮರಕ್ಕೆ ನೆಲದ ದಾಹ, ಸಿರಿಯ ಕೊಳ್ಳೆ ಕಾರಣವೇ ಹೊರತು, ಮತಾಂಧತೆಯಲ್ಲ. ಅದು ಆಗಿನ ಜಾಗತಿಕ ವರ್ತನೆಯಾಗಿತ್ತು. ಯೂರೋಪಿಯನರು ಜಗತ್ತಿನಲ್ಲೆಲ್ಲ ಹರಡಿಕೊಂಡದ್ದಕ್ಕೆ ಅವರ ಭೂದಾಹ ಮತ್ತು ಸಾಹಸ ಮನೋಧರ್ಮಗಳೇ ಪ್ರಬಲ ಕಾರಣ. ಆಂಗ್ಲರು ಇಂಡಿಯಾ ದೇಶಕ್ಕೆ ಬಂದದ್ದು ವ್ಯಾಪಾರ ವಾಣಿಜ್ಯಗಳಿಗಾಗಿ ಎಂಬುದು ಐತಿಹಾಸಿಕ ಸತ್ಯ. ವಾಣಿಜ್ಯ ಸಾಹಸದ ಯಶಸ್ಸು ಅವರ ಅಧಿಕಾರ ದಾಹವನ್ನು ಕೆರಳಿಸುತ್ತದೆ. ಅವರು ಜಾತಿಗಳ ಮೇಲೆ ಜಾತಿಗಳನ್ನೆತ್ತಿ ಕಟ್ಟಿ, ಮತದ ಅಥವಾ ಅಲ್ಪಸಂಖ್ಯಾತರ ಹೆಸರಿನಲ್ಲಿ ಎರಡು ಪ್ರಬಲ ಕೋಮುಗಳನ್ನು ವಿಭಜಿಸಿ, ರಾಜರಾಜರ ನಡುವೆ ಕಲಹ ತಂದು ಹಾಕಿ, ಇಂಡಿಯಾ ದೇಶವನ್ನೆಲ್ಲ ವಶಪಡಿಸಿಕೊಂಡರೆಂಬುದು ಲೋಕವೇದ್ಯ. ಈ ನೂರಾರು ವರ್ಷಗಳ ಅವಧಿಯಲ್ಲಿ ಹಿಂದೂ ಮುಸ್ಲಿಮರ ನಡುವೆ ಸಾಮಾಜಿಕ, ಸಾಂಸ್ಕೃತಿಕ ವಿನಿಮಯ ಕಣ್ಣು ಕುಕ್ಕುವಷ್ಟರ ಮಟ್ಟಿಗೆ ಅನಿವಾರ್ಯವಾಗಿ ನಡೆದಿದೆ ಎಂಬುದು ಸರ್ವರಿಗೂ ಗೊತ್ತಿರುವಂಥದೇ. ಮೇಲಾಗಿ ಹಿಂದೂ-ಮುಸ್ಲಿಮರಲ್ಲಿ ಹರಿಯುವ ರಕ್ತ ಒಂದೆಯಲ್ಲವೇ? ಸೆಮಿಟಿಕ್ ಮತಗಳಲ್ಲಿ ಕಾಣಲಾಗದ ಬ್ರಹ್ಮಾತ್ಮ ಐಕ್ಯ ತತ್ವವು ಸೂಫಿ ಪಂಥದಲ್ಲಿ ಕಾಣಲು ಉಪನಿಷತ್ತಿನ ಆಧ್ಯಾತ್ಮ ಸಿದ್ಧಾಂತ ಕಾರಣವಲ್ಲವೇ? ಬಂಗಾಳಿ ಮುಸ್ಲಿಮರು ಅಲ್ಲಿಯ ಬೌದ್ಧ ವೈಷ್ಣವ ಶಾಕ್ತೇಯ ಸಾಧುಸಂತ ರೊಡನೆ ಬೆಂಬಲವಾಗಿ ಬಂಗಾಳೀ ಸಾಹಿತ್ಯದ ಸಂವರ್ಧನೆಗಾಗಿ ದುಡಿದಿಲ್ಲವೇ?

ಭರತ ಖಂಡ ವಿಶಾಲ ದೃಷ್ಟಿಯ ಸುಂದರ ಸಮನ್ವಯ ರಾಷ್ಟ್ರ. ತನ್ನಲ್ಲಿಗೆ ಬಂದ ಯಾವ ಸಂಸ್ಕೃತಿ-ಮತಗಳನ್ನಾಗಲೀ, ತನ್ನ ಗರ್ಭದಿಂದಲೇ ಹೊರಬಂದದ್ದು, ತನ್ನಿಂದ ಬೇರೆಯಾದ ಇತರ ಮತಗಳನ್ನಾಗಲೀ ಅದು ದ್ವೇಷಿಸದೆ, ನಿರಾಕರಿಸದೆ, ಹೊರಗಟ್ಟದೆ, ಅವುಗಳ ಒಳ್ಳೆಯ ಅಂಶಗಳನ್ನೆಲ್ಲ ಅರಗಿಸಿಕೊಂಡಿದೆ. ಇಂದಿನ ಭರತ ಖಂಡದ ಸಾಂಸ್ಕೃತಿಕ ವಿಕಾಸಕ್ಕೆ ಪ್ರೇರಕಶಕ್ತಿ ಇಲ್ಲಿಯ ಹಿಂದೂ ಮುಸ್ಲಿಮಾದಿ ಎಲ್ಲ

ಜನತೆಯ 'ಮಧುರ ಮೈತ್ರಿ ಸಹಕಾರಗಳೆಂಬುದರ ಅರಿವಿಲ್ಲದಿರುವುದೇ ನಮ್ಮ ಬೀಳಿಗೆ ಕಾರಣವಾಗಿದೆ. ಈ ಅಜ್ಞಾನ ಕಾರ್ಕೋಟಕ ತನ್ನ ಪ್ರತ್ಯೇಕತಾ ಭಾವದ ಹೆಡೆಯನ್ನೆತ್ತಿ ಇಂದು ರಾಜಕೀಯದಲ್ಲಿ ವಿರೂಪ ಕಾರಕವಾದ ಮಾರಕ ವಿಷವನ್ನು ಕಾರಿ, ಅಖಂಡ ರಾಷ್ಟ್ರ ಪುರುಷನನ್ನು ಇಬ್ಭಾಗ ಮಾಡಿದೆ'* ಎಂಬ ರಾಷ್ಟ್ರಕವಿ ಕುವೆಂಪು ಅವರ ಕಾಣ್ಕೆ ನುಡಿಯ ಅರ್ಥವನ್ನರಿತು ಜನತೆ ವಿವೇಕದಿಂದ ವರ್ತಿಸಬೇಕಾಗಿದೆ. ಹಿಂದೂ ಮುಸ್ಲಿಮರ ನಡುವೆ ಎಷ್ಟು ಘರ್ಷಣೆಗಳು ನಡೆಯುತ್ತವೆಯೋ, ಅದಕ್ಕಿಂತ ಅಧಿಕ ವಾಗಿ ಹಿಂದೂ-ಹಿಂದೂಗಳ ನಡುವೆ ದಿನದಿನವೂ ಕಲಹಗಳು ನಡೆಯುತ್ತಿವೆಯೆಂಬ ಸತ್ಯವನ್ನು ವಿವೇಕಿಗಳು ಅರಿಯಬೇಕಾಗಿದೆ. ಎರಡೂ ಧರ್ಮಗಳ ಆಧ್ಯಾತ್ಮಿಕ-ಸಾಂಸ್ಕೃತಿಕ ಮೌಲ್ಯಗಳನ್ನು ಎಲ್ಲರೂ ಅರಿಯಲು ಯತ್ನಿಸಿದರೆ, ಅವರ ನಡುವಣ ಅಜ್ಞಾನದ ಕಂದಕ ಕಿರಿದಾಗುತ್ತದೆ; ವಿರಸ ವೈಷಮ್ಯಗಳು ಅಳಿಯುತ್ತವೆಂಬುದಂತು ನಿಜ. ಪ್ರವಾದಿ ಮುಹಮ್ಮದ್(ಸ) ನೂರಿಪ್ಪತ್ತು ಕೋಟಿ ಮುಸ್ಲಿಮರಿಗೆ ಮಾತ್ರವಲ್ಲ, ಇಡೀ ಜಗತ್ತಿನ ಕಣ್ಣು ತೆರೆಸಿದ, ಅಧ್ಯಾತ್ಮದ ಜತೆಗೆ ಜೀವನ ವಿಧಾನವನ್ನು ಸಹ ಬೋಧಿಸಿದ ಮಹಾನ್ ಧೀಮಂತ ವ್ಯಕ್ತಿ. ಸರ್ವೇಶ್ವರನಿಗೆ ಬಹುಪ್ರಿಯರಾದ ಅವರನ್ನು ಗೌರವಿಸಬೇಕಾದುದು ಎಲ್ಲ ಸಜ್ಜನರ, ಸತ್ಯವಂತರ ಧರ್ಮ. 'ಏಕಂ ಸತ್ ಬಹುಧಾ ವಿಪ್ರಾ ವದಂತಿ.' ಅಂತಹ ಮಹಾತ್ಮರ ಜೀವನ ಚರಿತ್ರೆಯನ್ನೋದುವುದೇ ಪುಣ್ಯ. ಅವರ ಸಂದೇಶವನ್ನು ಅನುಷ್ಠಾನಗೈಯುವುದೇ ಶ್ರೇಷ್ಠತಮ ಪುಣ್ಯ! ಅಲ್ಲಾಹನ ಕೃಪೆಯಿಂದ, ಪ್ರವಾದಿಗಳ ಆಶೀರ್ವಾದದಿಂದ ಹಿಂದೂ ಮುಸ್ಲಿಮರು ಮಾನವರಾಗಿ ಬಾಳಲಿ, ಭಾರತೀಯರಾಗಿ ಕನ್ನಡಿಗರಾಗಿ ಅಭ್ಯುದಯದ ಸ್ನೇಹ ಸಹಕಾರಗಳ ಪತಾಕೆಯನ್ನು ಹಾರಿಸುವಂತೆ ಈ ದಿವ್ಯಕೃತಿ ಪ್ರೇರಣೆ, ಪ್ರಚೋದನೆಗಳನ್ನು ನೀಡಲಿ ಎಂದು ಆಶಿಸುತ್ತೇನೆ.

ಇಬ್ರಾಹೀಮ್ ಸಈದ್‌ರು ಹಿಂದೂ ಮುಸ್ಲಿಮ್ ಜನಾಂಗಗಳ ನಡುವಣ ಸ್ನೇಹ ಸೇತುವೆಯಂತಿದ್ದಾರೆ. ಮುಹಮ್ಮದರ ಜೀವನ ಸಂದೇಶದಿಂದ ಕನ್ನಡಿಗರ ಬದುಕು ಹಸನಾಗುವುದಾದರೆ, ಹಿಂದೂ ಮುಸ್ಲಿಮರ ಬಾಂಧವ್ಯ ಬೆಸುಗೆಗೊಳ್ಳುವುದಾದರೆ, ಗ್ರಂಥಕರ್ತರ ಶ್ರಮ ಸಾರ್ಥಕವಾಗುತ್ತದೆಂದೂ ಅವರಿಗೆ ತೃಪ್ತಿಯಾಗುತ್ತದೆಂದೂ ಅಂತಹ ಭಾಗ್ಯ ಕೂಡಿ ಬರಲೆಂದೂ ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಮೈಸೂರು
4-2-95

ದೇ. ಜವರೇಗೌಡ (ದೇಜಗೌ)
ವಿಶ್ರಾಂತ ಉಪಕುಲಪತಿ
ಮೈಸೂರು ವಿಶ್ವವಿದ್ಯಾಲಯ

* ಶ್ರೀ ಮುಹಮ್ಮದ್ ಅಬ್ಬಾಸ್ ಷಾಸ್ತ್ರಿಯವರ 'ಇಸ್ಲಾಮ್ ಸಂಸ್ಕೃತಿ'ಗೆ ಬರೆದ ಮುನ್ನುಡಿಯಿಂದ ಉದ್ಧೃತ.

## ಸಾರ್ವಕಾಲಿಕ ಪ್ರಭಾವಶಾಲಿ ರಾಜಕೀಯ ನೇತಾರ

"...ಈ ಪುಸ್ತಕ ಜಗತ್ತಿನ ಇತಿಹಾಸ ಮತ್ತು ಅದರ ಬೆಳವಣಿಗೆಯ ಮೇಲೆ ಅತ್ಯಂತ ಹೆಚ್ಚು ಪ್ರಭಾವ ಬೀರಿದ ನೂರು ವ್ಯಕ್ತಿಗಳ ಕುರಿತಾಗಿದೆ. ನಾನು ಈ ನೂರು ಜನರಿಗೆ ಅವರ ಪ್ರಾಮುಖ್ಯತೆಯ ಆಧಾರದಲ್ಲಿ ಶ್ರೇಣಿಯನ್ನು ನೀಡಿದ್ದೇನೆ. ಅಂದರೆ ಮಾನವ ಇತಿಹಾಸ ಮತ್ತು ಜನರ ದೈನಂದಿನ ಜೀವನದ ಮೇಲೆ ಅವರು ಬೀರಿರುವ ಪ್ರಭಾವವನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ... ಹಿಂದೆ ಗತಿಸಿರುವ ತಲೆಮಾರುಗಳ ಮೇಲಿನ ಪ್ರಭಾವವನ್ನು ಸಹ ಸಮಾನವಾಗಿ ಪರಿಗಣಿಸಲಾಗಿದೆ. ಮುಂದಿನ ತಲೆಮಾರುಗಳ ಮೇಲೆ ಮತ್ತು ಭವಿಷ್ಯದ ಆಗು ಹೋಗುಗಳ ಮೇಲೆ ಈ ವ್ಯಕ್ತಿಗಳ ಸಾಧನೆಯ ಪರಿಣಾಮವನ್ನು ಗಣನೆಗೆ ತೆಗೆದುಕೊಂಡಿದ್ದೇನೆ...

...ಧಾರ್ಮಿಕ ಮತ್ತು ಲೌಕಿಕ ಎರಡೂ ರಂಗಗಳಲ್ಲಿ ಇತಿಹಾಸದಲ್ಲಿ ಸರ್ವಶ್ರೇಷ್ಠ ಸಫಲತೆಯನ್ನು ಪಡೆದಿರುವವರು ಕೇವಲ ಮುಹಮ್ಮದ್ ಮಾತ್ರವಾಗಿದ್ದಾರೆ... ಅರಬ್ ಬುಡಕಟ್ಟುಗಳು ಪ್ರವಾದಿಯವರ ಬೋಧನೆಯಿಂದ ಪ್ರಭಾವಿತರಾಗಿ ಜಗತ್ತು ಈ ಹಿಂದೆ ಎಂದೂ ಕಂಡಿರದ ಅತ್ಯಂತ ವಿಶಾಲ ಸಾಮ್ರಾಜ್ಯವನ್ನು ಭಾರತದ ಸರಹದ್ದಿನಿಂದ ಹಿಡಿದು ಅಟ್ಲಾಂಟಿಕ್ ಸಾಗರದ ವರೆಗೆ ಸ್ಥಾಪಿಸುವಲ್ಲಿ ಯಶಸ್ವಿಯಾಯಿತು... (ಯೇಸುಕ್ರಿಸ್ತರಿಗೆ ತದ್ವಿರುದ್ಧವಾಗಿ) ಮುಹಮ್ಮದ್ ಧಾರ್ಮಿಕ ಮತ್ತು ಲೌಕಿಕ ನಾಯಕರಾಗಿದ್ದರು. ವಾಸ್ತವಿಕವಾಗಿ ಅರಬ್ ದಂಡಯಾತ್ರೆಗಳ ಹಿಂದಿರುವ ಅವರ ಪ್ರೇರಣೆಯನ್ನು ಪರಿಗಣಿಸಿದರೆ ಅವರನ್ನು ಸಾರ್ವಕಾಲಿಕ ಪ್ರಭಾವಶಾಲಿ ರಾಜಕೀಯ ನೇತಾರರೆಂದು ಹೇಳಬಹುದು."

– ಮೈಕಲ್ ಎಚ್. ಹಾರ್ಟ್ **(Michal H. Hart)**

**The 100 ranking of the most influential persons in History**

(ದಿ ಹಂಡ್ರೆಡ್ ರ್‍ಯಾಂಕಿಂಗ್ ಆಫ್ ದಿ ಮೋಸ್ಟ್ ಇನ್‌ಫ್ಲುಯೆನ್‌ಶಲ್ ಪರ್ಸನ್ಸ್ ಇನ್ ಹಿಸ್ಟರಿ) ಎಂಬ ಪುಸ್ತಕದಲ್ಲಿ.

# ಅನುಕ್ರಮಣಿಕೆ

## I ಜನನ ಪೂರ್ವ ಇತಿಹಾಸ



## II ಜನನ ಮತ್ತು ಬಾಲ್ಯ



## III ಯೌವನ

## IV ಕುಟುಂಬ ಜೀವನ



## V ಪ್ರವಾದಿತ್ವ ಪ್ರಾಪ್ತಿ



## VI ಧರ್ಮ ಪ್ರಚಾರ

## VII ಸತ್ವಪರೀಕ್ಷೆಗಳು

## VIII ಹಿಜ್ರತ್‌ನ ಘಟ್ಟ



## IX ಮದೀನಾ ಜೀವನ



## X ಹೊಸ ಸಮಾಜ ಮತ್ತು ರಾಷ್ಟ್ರ

## XI ಸತ್ಯ–ಮಿಥ್ಯಗಳ ಸಂಘರ್ಷ

## XII ಮತ್ತೆ ಮಕ್ಕಾದ ಕಡೆಗೆ

ಅಧ್ಯಾಯ - ೧

# ಜನನ ಪೂರ್ವ ಇತಿಹಾಸ

## ಕಅಬಾ ಭವನ

ಮುಹಮ್ಮದ್(ಸ)* ಅವರ ಜನನಕ್ಕಿಂತ ಎರಡೂವರೆ ಸಾವಿರ ವರ್ಷಗಳ ಹಿಂದೆ ಮಕ್ಕಾ ಒಂದು ನಿರ್ಜಲ ಮತ್ತು ನಿರ್ಜನ ಮರುಭೂಮಿಯಾಗಿತ್ತು. ಮರಳ ರಾಶಿಗಳು ಮತ್ತು ಬಂಡೆಕಲ್ಲಿನ ಪರ್ವತಗಳ ಹೊರತು ಅಲ್ಲಿ ಬೇರೇನೂ ಇರಲಿಲ್ಲ.

ಒಂದು ದಿನ ಓರ್ವ ವೃದ್ಧ ತನ್ನ ಮಧ್ಯ ವಯಸ್ಕಳಾದ ಪತ್ನಿ ಮತ್ತು ಹಸುಗೂಸೊಂದನ್ನು ತಂದು ಇಲ್ಲಿ ಬಿಟ್ಟು ಹೋದರು. ಆ ವ್ಯಕ್ತಿ ಮುಹಮ್ಮದ್‌ರ(ಸ) ಪಿತಾಮಹ ಇಬ್ರಾಹೀಮ್(ಅ)** ಆಗಿದ್ದರು. ಅವರು ತಮ್ಮ ಪತ್ನಿ ಹಾಜಿರಾ ಮತ್ತು ಏಕೈಕ ಪುತ್ರ ಇಸ್ಮಾಈಲ್‌ರನ್ನು(ಅ) ದೇವಾಜ್ಞೆಯ ಮೇರೆಗೆ ಅಲ್ಲಿ ಬಿಟ್ಟು ಹೋಗುತ್ತಿರುವಾಗ ವಿಧೇಯಳಾದ ಆ ಮಹಿಳೆ ಈ ರೀತಿ ಪ್ರಶ್ನಿಸಿದರು:

"ನನ್ನ ಯಜಮಾನರೇ, ತಾವು ನಮ್ಮನ್ನು ಈ ಮರುಭೂಮಿಯಲ್ಲಿ ಯಾರ ಆಶ್ರಯದಲ್ಲಿ ಬಿಟ್ಟು ಹೋಗುತ್ತಿರುವಿರಿ?"

ಇಬ್ರಾಹೀಮ್(ಅ) ಹೇಳಿದರು: "ಭೂಮಿ-ಆಕಾಶಗಳ ಸೃಷ್ಟಿಕರ್ತನಾದ ಅಲ್ಲಾಹನ ಆಶ್ರಯದಲ್ಲಿ. ಅವನ ಆಜ್ಞೆಯ ಮೇರೆಗೆ ನಾನು ನಿಮ್ಮನ್ನು ಇಲ್ಲಿ ಬಿಟ್ಟು ಹೋಗುತ್ತಿರುವೆನು."

---

*ಪ್ರವಾದಿ ಮುಹಮ್ಮದ್ ಅವರ ಹೆಸರು ಹೇಳುವವರು, ಬರೆಯುವವರು ಮತ್ತು ಕೇಳುವವರು ಅವರಿಗಾಗಿ 'ಸಲ್ಲಲ್ಲಾಹು ಅಲೈಹಿವಸಲ್ಲಮ್' ಎಂಬ ಸ್ವಸ್ತಿ ವಚನವನ್ನು ಹೇಳಬೇಕೆಂಬುದು ಇಸ್ಲಾಮಿನ ಒಂದು ಧಾರ್ಮಿಕ ನಿಯಮ. "ಅಲ್ಲಾಹನು ಅವರ ಮೇಲೆ ಶಾಂತಿ ಮತ್ತು ಅನುಗ್ರಹಗಳನ್ನಿಳಿಸಲಿ" ಎಂಬುದೇ ಈ ಸ್ವಸ್ತಿ ವಚನದ ಅರ್ಥ. ಪ್ರತಿಸಲ ಪ್ರವಾದಿ ಮುಹಮ್ಮದರ ಹೆಸರು ಬಂದಾಗ 'ಸಲ್ಲಲ್ಲಾಹು ಅಲೈಹಿ ವ ಸಲ್ಲಮ್' ಎಂದು ಬರೆಯುವ ಬದಲಾಗಿ '(ಸ)' ಎಂದು ಸಂಕೇತ ರೂಪದಲ್ಲಿ ಬರೆದು ನಾವು ಓದುಗರಿಗೆ ನೆನಪಿಸುತ್ತೇವೆ.

**ಪ್ರವಾದಿ ಮುಹಮ್ಮದ್(ಸ) ಅವರಂತೆ ಇತರ ಪ್ರವಾದಿಗಳ ಹೆಸರು ಬಂದಾಗಲೂ ಅವರಿಗೆ ನಾವು 'ಅಲೈಹಿಸ್ಸಲಾಮ್' (ಅವರ ಮೇಲೆ ಶಾಂತಿ ಇರಲಿ) ಎಂಬ ಸ್ವಸ್ತಿ ವಚನವನ್ನು ಹೇಳುತ್ತೇವೆ. '(ಅ)' ಎಂಬ ಸಂಕೇತವು ಅದನ್ನೇ ಸೂಚಿಸುತ್ತದೆ.

ಆ ಮಾನಿನಿಯು ಒಮ್ಮೆ ತಮ್ಮ ಗೌರವಾನ್ವಿತ ಪತಿಯತ್ತ ದೃಷ್ಟಿ ಹಾಯಿಸಿದರು. ಮಗುವನ್ನೊಮ್ಮೆ ಮುದ್ದಿಸಿದರು. ಖರ್ಜೂರದ ಪೊಟ್ಟಣ ಮತ್ತು ನೀರು ತುಂಬಿದ ಪಾತ್ರೆಯನ್ನೊಮ್ಮೆ ನೋಡಿ ಗಂಭೀರವಾಗಿ ಹೀಗೆಂದರು: "ಅಲ್ಲಾಹನು ಸರ್ವಶಕ್ತನು. ಅವನು ಖಂಡಿತ ನಮ್ಮನ್ನು ರಕ್ಷಿಸುವನು. ನಾವು ಅವನ ವಿಧಿಯ ಮುಂದೆ ಶಿರ ಬಾಗುತ್ತೇವೆ."

ಇಬ್ರಾಹೀಮ್(ಅ) ಬೀಳ್ಕೊಂಡರು. ಹಾಜಿರಾ ದೇವಧ್ಯಾನದಲ್ಲಿ ಮಗ್ನರಾದರು. ದಿನಗಳು ಉರುಳಿದುವು. ಖರ್ಜೂರದ ಪೊಟ್ಟಣ ಮತ್ತು ನೀರಿನ ಪಾತ್ರೆ ಬರಿದಾಯಿತು. ನೀರನ್ನು ಹುಡುಕುತ್ತಾ ಅವರು ಅನೇಕ ಸಲ 'ಸಫಾ' ಮತ್ತು 'ಮರ್ವಾ' ಬೆಟ್ಟಗಳ ಮಧ್ಯೆ ಸುತ್ತಾಡಿದರು. ನಿರಾಶರಾಗಿ ಮರಳಿದಾಗ ಅವರಿಗೆ ಆಶ್ಚರ್ಯ ಕಾದಿತ್ತು. ಮಗು ಇಸ್ಮಾಈಲರ ಕಾಲಿನ ಬಳಿ ತಣ್ಣೀರಿನ ಚಿಲುಮೆಯೊಂದು ಉಕ್ಕಿ ಹರಿಯುತ್ತಿತ್ತು. ಅವರ ಕಣ್ಣುಗಳು ಆನಂದ ಬಾಷ್ಪದಿಂದ ತುಂಬಿದುವು. 'ಝುಮ್-ಝುಮ್'(ನಿಲ್ಲು, ನಿಲ್ಲು) ಎನ್ನುತ್ತಾ ನೀರು ಹರಿದು ಬರುತ್ತಿರುವ ಚಿಲುಮೆಯ ಸುತ್ತ ಮರಳಿನ ದಿಣ್ಣೆಯನ್ನು ಕಟ್ಟತೊಡಗಿದರು.

ಈಗ 'ಝುಮ್-ಝುಮ್' ಅವರ ಅನ್ನಾಹಾರ. ಹಸಿವು-ದಾಹಗಳೆರಡೂ ಅದರಿಂದ ಶಮನವಾಗುತ್ತಿತ್ತು. ಈ ಚಿಲುಮೆಯ ನೀರಿನ ಆಕರ್ಷಣೆಯೇ ಜರ್ಹಮ್* ಗೋತ್ರವನ್ನು ಅಲ್ಲಿಗೆ ಕರೆ ತಂದಿತು. ಅವರಿಗೆ ಅಲೆಮಾರಿ ಜೀವನದಿಂದ ಮುಕ್ತಿ ದೊರೆಯಿತು. ಆ ಮಗುವೇ ಮುಂದೆ ಆ ಪ್ರದೇಶದ ಸರದಾರರಾದರು. ಅದನ್ನೇ ಇಂದು ಮಕ್ಕಾ ಎಂದು ಕರೆಯಲಾಗುತ್ತದೆ.

ಇಸ್ಮಾಈಲ್(ಅ) ಬೆಳೆದು ಯುವಕರಾದರು. ಒಂದು ದಿನ ತಂದೆ ಇಬ್ರಾಹೀಮ್(ಅ) ಮರಳಿ ಬಂದರು. ಅವರು ದೇವಾದೇಶದ ಮೇರೆಗೆ ತಮ್ಮ ಮುಪ್ಪಿನ ಆಸರೆಯಾಗಿದ್ದ ಮಗನನ್ನು ಬಲಿಕೊಡಲಿಕ್ಕಾಗಿ ಬಂದಿದ್ದರು. ಅನೇಕ ವರ್ಷಗಳ ವಿರಹದ ಬಳಿಕ ಭೇಟಿಯಾದ ತಂದೆ ಮಗನಿಗೆ ದೇವಾದೇಶವನ್ನು ತಿಳಿಸುತ್ತಾರೆ. ಮುದಿ ತಂದೆ ಮತ್ತು ಯುವ ಪುತ್ರ ಇಬ್ಬರೂ ದೇವಾಜ್ಞೆಯ ಪಾಲನೆಗೆ ಸಿದ್ಧರಾಗುತ್ತಾರೆ. "ಜಗದೊಡೆಯನ ಆಜ್ಞೆ ಏನಿದೆಯೋ ಅದನ್ನು ತಾವು ಪಾಲಿಸಿರಿ. ಅಲ್ಲಾಹನಿಚ್ಛಿಸಿದರೆ ಖಂಡಿತ ನಾನು ಸಹನಶೀಲರಲ್ಲಾಗುವೆನು" ಎನ್ನುತ್ತಾ ತಂದೆಯ ಕೈಯಲ್ಲಿದ್ದ ಹರಿತವಾದ ಕತ್ತಿಗೆ ಮಗನು ಕೊರಳೊಡ್ಡುತ್ತಾನೆ.

ತಂದೆ-ಮಗ ಇಬ್ಬರ ವಿಧೇಯತೆಯನ್ನು ಅಲ್ಲಾಹನು ಮೆಚ್ಚುತ್ತಾನೆ. ಮಗನ ಬದಲಿಗೆ ಬಲಿ ನೀಡಲು ಒಂದು ಟಗರು ಪ್ರತ್ಯಕ್ಷವಾಗುತ್ತದೆ. ತನ್ನ ಆಪ್ತ ದಾಸರ ಈ ಅನನ್ಯ ಭಕ್ತಿ ಮತ್ತು ಅಸದೃಶ ಅರ್ಪಣಾ ಭಾವದ ನೆನಪನ್ನು ಚಿರಸ್ಥಾಯಿಯಾಗಿಸಲು ಪ್ರಾಣಿ ಬಲಿದಾನವನ್ನು ಒಂದು ಶಾಶ್ವತ ಆರಾಧನಾ ವಿಧಿಯಾಗಿ ಅಲ್ಲಾಹನು ಸಾರುತ್ತಾನೆ. ಇಸ್ಮಾಈಲ್‌ರ(ಅ) ತಾಯಿ ಹಾಜಿರಾ ನೀರಿಗಾಗಿ ನಡೆಸಿದ ಓಡಾಟವನ್ನು ಸಫಾ ಮತ್ತು ಮರ್ವಾ ಬೆಟ್ಟಗಳ ನಡುವೆ 'ಸಈ'ಯ ರೂಪದಲ್ಲಿ ಹಜ್ಜ್‌ನ ಒಂದು ಕಡ್ಡಾಯ ವಿಧಿಯಾಗಿ ಘೋಷಿಸುತ್ತಾನೆ.

---

*ಇದು ಅರೇಬಿಯಾದ ಪ್ರಾಚೀನ ಆಡಳಿತ ವರ್ಗ. ಮಝಾಝ್ ಎಂಬವರು ಇದರ ಸರದಾರ. ಅವರೇ ತನ್ನ ಪ್ರದೇಶದ ಆಡಳಿತಗಾರ. ಮುಂದೆ ಇಸ್ಮಾಈಲ್(ಅ) ಅವರ ವಿವಾಹವು ಇವರ ಪುತ್ರಿಯೊಂದಿಗೇ ಆಯಿತು.

ಅಲ್ಲಾಹನ ಆದೇಶದಂತೆ ತಮ್ಮ ಪ್ರಾಣವನ್ನೇ ಬಲಿ ಕೊಡಲು ಸಿದ್ಧರಾದ ಇಸ್ಮಾಈಲ್ 'ದಬೀಹುಲ್ಲಾಹ್' ಅರ್ಥಾತ್ 'ಅಲ್ಲಾಹನ ಬಲಿ' ಎನಿಸಿಕೊಂಡರೆ ದೇವ ಸಂಪ್ರೀತಿಗಾಗಿ ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡಲುದ್ಯುಕ್ತರಾದ ಇಬ್ರಾಹೀಮ್(ಅ) 'ಖಲೀಲುಲ್ಲಾಹ್' ಅಲ್ಲಾಹನ ಆಪ್ತರೆಂದು ಇತಿಹಾಸ ಪ್ರಸಿದ್ಧರಾಗುತ್ತಾರೆ. ಮುಂದೆ ಅಲ್ಲಾಹನು ಮಕ್ಕಾ ಪಟ್ಟಣದಲ್ಲಿ ಏಕದೇವಾರಾಧನೆಯ ಕೇಂದ್ರ ಒಂದನ್ನು ನಿರ್ಮಿಸಲು ಆಜ್ಞಾಪಿಸಿ ಅದರ ಸ್ಥಳವನ್ನೂ ಗೊತ್ತುಪಡಿಸುತ್ತಾನೆ. ಇದನ್ನು ಪವಿತ್ರ ಕುರ್‌ಆನಿನಲ್ಲಿ ಹೀಗೆ ವಿವರಿಸಲಾಗಿದೆ:

"ನಾವು ಇಬ್‌ರಾಹೀಮರಿಗೆ ಈ ಭವನ (ಕಅಬಾ)ದ ಸ್ಥಳವನ್ನು ಗೊತ್ತುಪಡಿಸಿಕೊಟ್ಟ ಸಂದರ್ಭವನ್ನು ಸ್ಮರಿಸಿರಿ. (ಅವರಿಗೆ ಹೀಗೆ ಆದೇಶಿಸಲಾಗಿತ್ತು;) 'ನನ್ನ ಜೊತೆ ಯಾವುದೇ ವಸ್ತುವನ್ನೂ ಸಹಭಾಗಿಯಾಗಿ ಮಾಡದಿರಿ. ನನ್ನ ಭವನವನ್ನು ಪ್ರದಕ್ಷಿಣೆ ಮಾಡುವವರಿ ಗಾಗಿಯೂ (ನಮಾಝಿಗೆ) ನಿಲ್ಲುವವರಿಗಾಗಿಯೂ ಬಾಗುವವರಿಗಾಗಿಯೂ ಸಾಷ್ಟಾಂಗ ಮಾಡುವವರಿಗಾಗಿಯೂ ನಿರ್ಮಲವಾಗಿರಿಸಿರಿ ಮತ್ತು ಜನರಿಗೆ ಹಜ್ಜ್ ಯಾತ್ರೆಗಾಗಿ ಸಾರ್ವತ್ರಿಕ ಕರೆ ನೀಡಿರಿ. ಅವರು ದೂರದೂರದ ಪ್ರದೇಶಗಳಿಂದೆಲ್ಲ ಕಾಲ್ನಡಿಗೆಯಲ್ಲೂ ಒಂಟೆಗಳ ಮೇಲೆ ಸವಾರಿ ಮಾಡಿಕೊಂಡೂ ನಿಮ್ಮ ಬಳಿಗೆ ಬರುವಂತಾಗಲಿ.' (ಈ ರೀತಿ) ಅವರು ಇಲ್ಲಿ ಅವರಿಗಾಗಿ ಇರಿಸಲಾಗಿರುವ ಪ್ರಯೋಜನಗಳನ್ನು ಪ್ರತ್ಯಕ್ಷವಾಗಿ ನೋಡು ವಂತಾಗಲಿ ಮತ್ತು ಅವರು ಕೆಲವು ನಿಶ್ಚಿತ ದಿನಗಳಲ್ಲಿ ಅಲ್ಲಾಹನು ಅವರಿಗೆ ದಯಪಾಲಿಸಿರುವ ಜಾನುವಾರುಗಳ ಮೇಲೆ ಅವನ ನಾಮವನ್ನುಚ್ಚರಿಸಲಿ. ಸ್ವತಃ ತಿನ್ನಲಿ ಮತ್ತು ಬಡಬಗ್ಗರಿಗೂ ಕೊಡಲಿ. ಆ ಬಳಿಕ ತಮ್ಮ ಕೊಳೆ-ಕಶ್ಮಲಗಳನ್ನು ಹೋಗಲಾಡಿಸಲಿ. ತಮ್ಮ ಹರಕೆಗಳನ್ನು ಸಲ್ಲಿಸಲಿ ಮತ್ತು ಈ ಪುರಾತನ ಭವನಕ್ಕೆ ಪ್ರದಕ್ಷಿಣೆ ಮಾಡಲಿ." **(ಪವಿತ್ರ ಕುರ್‌ಆನ್: 22: 26)**

ತಂದೆ-ಮಗ ಇಬ್ಬರೂ ಕಅಬಾ ಭವನದ ನಿರ್ಮಾಣ ಕಾರ್ಯಕ್ಕೆ ತೊಡಗುತ್ತಾರೆ. ಮಗ ಗಾರೆ ತಂದರೆ ತಂದೆ ಗೋಡೆ ಕಟ್ಟುತ್ತಾರೆ. ಗೋಡೆಯು ಹೆಚ್ಚು ಎತ್ತರವಾದಾಗ ಒಂದು ಕಲ್ಲಿನ ಮೇಲೆ ನಿಂತು ಇನ್ನಷ್ಟು ಎತ್ತರಕ್ಕೆ ಕಟ್ಟುತ್ತಾರೆ. ಈ ಕಲ್ಲೇ ಇಂದು 'ಮಕಾಮು ಇಬ್ರಾಹೀಮ್'ನ ಹೆಸರಲ್ಲಿ ಕಅಬಾದ ಪಕ್ಕದಲ್ಲಿದೆ.

ಇಬ್ರಾಹೀಮ್‌ರು(ಅ) ಆ ಪ್ರದೇಶದ ಬರಡುತನವನ್ನು ಕಂಡು ಕಅಬಾ ನಿರ್ಮಿಸುತ್ತಿರು ವಾಗ ಅಲ್ಲಾಹನಲ್ಲಿ ಹೀಗೆ ಪ್ರಾರ್ಥಿಸುತ್ತಾರೆ:

"ಓ ನನ್ನ ಪ್ರಭೂ! ಈ ನಗರವನ್ನು ಶಾಂತಿಯ ನಗರವನ್ನಾಗಿ ಮಾಡು ಮತ್ತು ಇಲ್ಲಿಯ ನಿವಾಸಿಗಳ ಪೈಕಿ ಅಲ್ಲಾಹ್ ಮತ್ತು ಅಂತಿಮ ದಿನದಲ್ಲಿ ವಿಶ್ವಾಸವಿಡುವವರಿಗೆ ನಾನಾ ಫಲಗಳ ಆಹಾರವನ್ನು ನೀಡು." **(ಪವಿತ್ರ ಕುರ್‌ಆನ್: 2: 126)**

ಇದಕ್ಕುತ್ತರವಾಗಿ ಅವರ ಪ್ರಭು ಈ ರೀತಿ ಆದೇಶಿಸುತ್ತಾನೆ: "ನಾನು ಭೂಲೋಕದ ಅಲ್ಪಕಾಲದ ಜೀವನಾಧಾರವನ್ನು ಅವಿಶ್ವಾಸಿಗೂ ಕೊಡುವೆನು. ಆದರೆ ಆಮೇಲೆ ಅವನನ್ನು ನರಕಕ್ಕೆ ತಳ್ಳುವೆನು. ಅದು ಅತ್ಯಂತ ನಿಕೃಷ್ಟ ನೆಲೆಯಾಗಿರುತ್ತದೆ." **(ಪವಿತ್ರ ಕುರ್‌ಆನ್, 2: 126)**

ಕಅಬಾದ ಭಿತ್ತಿಗಳನ್ನು ಏರಿಸುತ್ತಾ ತಂದೆ-ಮಗ ಇಬ್ಬರೂ ಪ್ರಾರ್ಥಿಸುತ್ತಾರೆ:

"ಓ ನಮ್ಮ ಪ್ರಭೂ! ನಮ್ಮಿಂದ ಈ ಸೇವೆಯನ್ನು ಸ್ವೀಕರಿಸು; ನಿಶ್ಚಯವಾಗಿಯೂ ನೀನು ಎಲ್ಲವನ್ನೂ ಆಲಿಸುವವನೂ ಎಲ್ಲವನ್ನೂ ತಿಳಿದವನೂ ಆಗಿರುತ್ತೀ. ಓ ಪ್ರಭೂ, ನಮ್ಮಿರ್ವರನ್ನು ನಿನ್ನ ಆಜ್ಞಾನುಸಾರಿಗಳಾಗಿ ಮಾಡು. ನಮ್ಮ ಸಂತತಿಯಲ್ಲಿ ನಿನ್ನ ಆಜ್ಞಾನುಸಾರಿಯಾದ ಒಂದು ಸಮುದಾಯವನ್ನು ಎಬ್ಬಿಸು. ನಮಗೆ ನಿನ್ನ ದಾಸ್ಯ-ಆರಾಧನೆಯ ಕ್ರಮಗಳನ್ನು ತೋರಿಸಿಕೊಡು ಮತ್ತು ನಮ್ಮ ಅಪರಾಧಗಳನ್ನು ಕ್ಷಮಿಸು. ನೀನು ಮಹಾ ಕ್ಷಮಾದಾನಿಯೂ ಕರುಣಾನಿಧಿಯೂ ಆಗಿರುತ್ತೀಯೆ. ಓ ಪ್ರಭೂ, ಅವರಿಗೆ ನಿನ್ನ ವಚನಗಳನ್ನು ಪಠಿಸಿ ಹೇಳುವ ಮತ್ತು ಗ್ರಂಥವನ್ನೂ ಯುಕ್ತಿಯನ್ನೂ ಬೋಧಿಸುವ ಹಾಗೂ ಅವರ ಜೀವನವನ್ನು ಸಂಸ್ಕರಿಸುವ ಓರ್ವ ಸಂದೇಶವಾಹಕನನ್ನು ಅವರೊಳಗಿಂದಲೇ ನಿಯೋಜಿಸು. ನೀನು ಮಹಾಪ್ರತಾಪಿಯೂ ಯುಕ್ತಿಪೂರ್ಣನೂ ಆಗಿರುತ್ತೀ." **(ಪವಿತ್ರ ಕುರ್‌ಆನ್: 2: 127-129)**

ಪ್ರವಾದಿ ಮುಹಮ್ಮದ್‌ರ(ಸ) ಪಿತಾಮಹರಾದ ಇಬ್ರಾಹೀಮರು(ಅ) ನಿರ್ಮಿಸಿದ್ದ ಈ ಅಲ್ಲಾಹನ ಭವನದ ಬಗ್ಗೆ ಸೃಷ್ಟಿಕರ್ತನು ಈ ರೀತಿ ಹೇಳಿರುವನು:

"ನಿಶ್ಚಯವಾಗಿಯೂ ಮಾನವರಿಗಾಗಿ ನಿರ್ಮಿಸಲ್ಪಟ್ಟ ಪ್ರಥಮ ಆರಾಧನಾಲಯವು ಮಕ್ಕಾದಲ್ಲಿರುವುದೇ ಆಗಿರುತ್ತದೆ. ಅದಕ್ಕೆ ಶುಭ ಸಮೃದ್ಧಿಗಳನ್ನು ನೀಡಲಾಗಿತ್ತು ಮತ್ತು ಅದು ಸಮಗ್ರ ಲೋಕದವರಿಗೆ ಸನ್ಮಾರ್ಗದರ್ಶನದ ಕೇಂದ್ರವನ್ನಾಗಿ ಮಾಡಲ್ಪಟ್ಟಿತ್ತು. ಅದರಲ್ಲಿ ಸುವ್ಯಕ್ತ ಕುರುಹುಗಳಿವೆ. 'ಮಕಾಮು ಇಬ್‌ರಾಹೀಮ್' (ಇಬ್‌ರಾಹೀಮರು ದೇವಾರಾಧನೆ ಗಾಗಿ ನಿಂತ ಸ್ಥಾನ) ಇದೆ ಮತ್ತು ಅದರೊಳಗೆ ಪ್ರವೇಶಗೊಂಡವನು ಸಂರಕ್ಷಣೆ ಹೊಂದಿದನು. ಈ ಭವನದವರೆಗೆ ತಲಪಲು ಸಾಧನಾನುಕೂಲತೆಗಳಿರುವವನು ಅದರ 'ಹಜ್ಜ್' ಯಾತ್ರೆ ಕೈಗೊಳ್ಳಬೇಕೆಂಬುದು ಜನರ ಮೇಲೆ ಅಲ್ಲಾಹನ ಹಕ್ಕಾಗಿರುತ್ತದೆ. ಈ ಆಜ್ಞೆಯ ಅನುಸರಣೆಯನ್ನು ಯಾರಾದರೂ ನಿರಾಕರಿಸಿದರೆ, ಅಲ್ಲಾಹ್ ಸಕಲ ಜಗತ್ತಿನವರಿಂದ ನಿರಪೇಕ್ಷನಾಗಿರುತ್ತಾನೆಂಬುದನ್ನು ಅವನು ಅರಿತಿರಬೇಕು." **(ಪವಿತ್ರ ಕುರ್‌ಆನ್: 3: 96-97)**

ಇಸ್ಮಾಈಲ್(ಅ) ಅವರ ಸಂತಾನ ಪರಂಪರೆಯು ಬೆಳೆಯುತ್ತಾ 'ಕುರೈಶ್ ಗೋತ್ರ' ಎಂಬ ಹೆಸರಿಂದ ಪ್ರಸಿದ್ಧವಾಯಿತು. ಕಅಬಾ ಭವನದ ಮೇಲ್ನೋಟ ನಡೆಸುವ ಗೋತ್ರ ಎಂಬ ನೆಲೆಯಲ್ಲಿ ಅದು ಅರೇಬಿಯಾದಾದ್ಯಂತ ನಾಯಕತ್ವ ಸ್ಥಾನವನ್ನೂ ವಿಶಿಷ್ಟ ಮೇಲ್ಮೆಯನ್ನೂ ಹೊಂದಿತ್ತು. ಮಕ್ಕಾ ಪಟ್ಟಣವು ಶಾಂತಿಯ ನೆಲೆವೀಡಾಯಿತು. ಕಅಬಾದ ಧರ್ಮದರ್ಶಿಗಳೆಂಬ ಕಾರಣದಿಂದ ಕುರೈಶರ ಯಾತ್ರಾತಂಡಗಳ ಮೇಲೆ ಯಾರೂ ಕೈ ಮಾಡುತ್ತಿರಲಿಲ್ಲ. ಝಮ್‌ಝಮ್ ಬಾವಿಯು ಶತಮಾನಗಳ ತನಕ ಲಕ್ಷಗಟ್ಟಲೆ ಜನರಿಗೆ ತಣ್ಣೀರನ್ನು ಒದಗಿಸುತ್ತಿತ್ತು. ಅದರ ಮೊಕ್ತೇಸರರಾದ ಜರ್ಹಮ್ ಗೋತ್ರದವರು ಅಕ್ರಮ ಅನ್ಯಾಯಗಳಲ್ಲಿ ತೊಡಗಿದರು. ಅವರ ದೌರ್ಜನ್ಯಗಳು ಮಿತಿ ಮೀರಿದವು. ಅವರ ಕೊನೆಯ ಆಡಳಿತಗಾರನಾದ ಮಝ್ಝಾಝ್ ಜರ್ಹಮಿ ಕೂಡಾ ತನ್ನ ಗೋತ್ರದವರ ಬಗ್ಗೆ ಜಿಗುಪ್ಸೆಗೊಂಡು ನಿರಾಶನಾದಾಗ ಕುರೈಶರ ಒಂದು ಗೋತ್ರವಾದ 'ಖಝಾಅ'ದವರು ಅವರ ಮೇಲೆ ದಾಳಿ ಮಾಡಿದರು. ಈ ಯುದ್ಧದಲ್ಲಿ 'ಖಝಾಅ' ಗೋತ್ರವು ಜಯಶೀಲವಾಯಿತು.

ಜರ್ಹಮ್ ಗೋತ್ರವು ಮಕ್ಕಾದಿಂದ ಪಲಾಯನಗೈಯುವುದು ಅನಿವಾರ್ಯವಾಯಿತು. ಆದರೆ ಮಕ್ಕಾದಿಂದ ಹೊರಡುವಾಗ ಅವರು ಕಅಬಾಕ್ಕೆ ಬಂದು ಹರಕೆ ಕಾಣಿಕೆಗಳನ್ನು- ಚಿನ್ನದ ಎರಡು ಜಿಂಕೆ, ಅನೇಕ ಖಡ್ಗ ಮತ್ತು ಯುದ್ಧ ಕವಚಗಳನ್ನು 'ಝಮ್‌ಝಮ್' ಬಾವಿಗೆ ಎಸೆದು ಅದರ ಮೇಲೆ ಕಲ್ಲು ಮಣ್ಣುಗಳನ್ನು ಹಾಕಿ ಬಾವಿಯನ್ನು ಮುಚ್ಚಿ ಬಿಟ್ಟರು. ಮಕ್ಕಾ ವಾಸಿಗಳಿಗೆ ಮತ್ತು ಹಾಜಿಗಳಿಗೆ* ನೀರು ಸಿಗದಂತಾಗಬೇಕೆಂಬುದೇ ಅವರ ಉದ್ದೇಶವಾಗಿತ್ತು.

ಈ ರೀತಿ ಮುಚ್ಚಲ್ಪಟ್ಟ ಝಮ್‌ಝಮ್ ಬಾವಿಯು ಮುಹಮ್ಮದ್(ಸ) ಅವರ ತಾತ ಅಬ್ದುಲ್ ಮುತ್ತಲಿಬ್‌ರ ಕಾಲದಲ್ಲಿ ಪುನಃ ತೆರೆಯಲ್ಪಟ್ಟಿತು. ಅದರ ಹಿನ್ನೆಲೆಯಲ್ಲಿರುವ ಘಟನೆಯು ಹೀಗಿದೆ:

ಒಮ್ಮೆ ಅಬ್ದುಲ್ ಮುತ್ತಲಿಬ್ ಅವರಿಗೆ ಕನಸಿನಲ್ಲಿ ಝಮ್‌ಝಮ್ ಬಾವಿಯನ್ನು ಪುನಃ ಅಗೆಯಬೇಕೆಂಬ ಆಜ್ಞೆಯೊಂದು ಕೇಳಿಸಿತು. ಈ ಕನಸು ಮೂರು ರಾತ್ರಿಗಳು ನಿರಂತರವಾಗಿ ಬಿತ್ತು. ಮೂರನೆಯ ರಾತ್ರಿ ಬಾವಿಯಿರುವ ಸ್ಥಳವೂ ಕನಸಿನಲ್ಲಿ ಕಾಣಿಸಿತು. ಮಕ್ಕಾದ ಕುರೈಶರ ಸರದಾರರಾಗಿದ್ದ ಅಬ್ದುಲ್ ಮುತ್ತಲಿಬ್ ಕಅಬಾದಲ್ಲಿ ಅವರ ಸಭೆ ಸೇರಿಸಿ ವಿಷಯ ತಿಳಿಸಿದರು. ಆದರೆ ಕುರೈಶರು ಅದನ್ನು ಅಬ್ದುಲ್ ಮುತ್ತಲಿಬರ ಭ್ರಮೆಯೆಂದು ಸಾರಿ, ಬಾವಿ ಅಗೆಯುವಲ್ಲಿ ಅವರಿಗೆ ನೆರವಾಗಲು ನಿರಾಕರಿಸಿದರು. ಕೊನೆಗೆ ಅಬ್ದುಲ್ ಮುತ್ತಲಿಬ್ ತಮ್ಮ ಏಕೈಕ ಪುತ್ರ ಹಾರಿಸ್‌ರ ಜೊತೆಗೆ ಕನಸಿನಲ್ಲಿ ಕಂಡ ಜಾಗದಲ್ಲಿ ಅಗೆಯಲು ಆರಂಭಿಸಿದರು. ಮೂರು ದಿನಗಳ ಅಗೆತದ ಬಳಿಕ ಅವರಿಗೆ ಜರ್ಹಮ್ ಗೋತ್ರದವರು ಎಸೆದಿದ್ದ ಚಿನ್ನದ ಖಡ್ಗಗಳು ಮತ್ತು ಯುದ್ಧ ಕವಚಗಳು ಸಿಕ್ಕಿದುವು. ಇದನ್ನರಿತ ಕುರೈಶರು ಬಾವಿ ಅಗೆಯುವ ಕಾರ್ಯದಲ್ಲಿ ಅವರಿಗೆ ನೆರವಾಗಲು ಮುಂದೆ ಬಂದರು. ಆದರೆ ಅಬ್ದುಲ್ ಮುತ್ತಲಿಬ್, ಅವರ ನೆರವು ಪಡೆಯಲು ನಿರಾಕರಿಸಿ ತಂದೆ-ಮಗ ಇಬ್ಬರೇ ಕೆಲವು ದಿನಗಳ ಅಗೆತದ ಬಳಿಕ ಝಮ್‌ಝಮ್ ಬಾವಿಯನ್ನು ಪೂರ್ಣವಾಗಿ ತೆರೆದರು. ಚಿನ್ನದ ಖಡ್ಗ ಮತ್ತು ಯುದ್ಧ ಕವಚಗಳಿಂದ ಕಅಬಾ ಭವನದ ಬಾಗಿಲು ನಿರ್ಮಿಸಿದರು. ಎರಡು ಚಿನ್ನದ ಜಿಂಕೆಗಳನ್ನು ಕಅಬಾದೊಳಗೆ ಇರಿಸಿದರು. ಅಂತೆಯೇ ಅಲ್ಲಿ ಸಿಕ್ಕಿದ ಹರಕೆಯ ಎಲ್ಲ ವಸ್ತುಗಳನ್ನು ಕಅಬಾದೊಳಗೆ ಇರಿಸಿದರು.

ಈ ಘಟನೆಯಿಂದಾಗಿ ಕುರೈಶರ ಮನದಲ್ಲಿ ತಮ್ಮ ಸರದಾರರಾದ ಅಬ್ದುಲ್ ಮುತ್ತಲಿಬ್‌ರ ಬಗ್ಗೆ ಹೆಚ್ಚಿನ ಗೌರವಾದರಗಳು ಮೂಡಿದುವು. 'ಝಮ್‌ಝಮ್' ಬಾವಿ ಮುಕ್ತವಾಗಿ ಜನರ ಅದರಲ್ಲೂ ವಿಶೇಷವಾಗಿ ಹಾಜಿಗಳ ಬಾಯಾರಿಕೆಯನ್ನು ಇಂಗಿಸ ತೊಡಗಿತು. ಈ ದಿವ್ಯ ಪವಾಡದ ಅನುಗ್ರಹವು ಇಂದಿನ ತನಕವೂ ಅಬಾಧಿತವಾಗಿ ಮುಂದುವರಿಯುತ್ತಾ ಬಂದಿದೆ. ಝಮ್‌ಝಮ್ ಜಲವು ದಾಹ ಮಾತ್ರವಲ್ಲ ಹಸಿವೆಯನ್ನೂ ನೀಗಿಸುತ್ತದೆ. ಅದು ರೋಗ ನಿವಾರಕವೂ ಆಗಿದೆ.

---

*ಕಅಬಾ ಭವನದ ಯಾತ್ರಾರ್ಥಿಯನ್ನು ಪುರಾತನ ಕಾಲದಿಂದಲೇ 'ಹಾಜಿ' ಎಂದು ಕರೆಯಲಾಗುತ್ತಿತ್ತು.

## ಅಬ್ದುಲ್ ಮುತ್ತಲಿಬರ ಹರಕೆ

ಅಬ್ದುಲ್ ಮುತ್ತಲಿಬ್‌ರ ಕೀರ್ತಿ 'ಝಮ್‌ಝಮ್' ಬಾವಿಯ ಅಗೆತದ ಬಳಿಕ ಜನಜನಿತವಾಯಿತು. ಆದರೆ ಅವರಿಗೆ ಇದರಿಂದ ಸಂತೋಷವಾಗಿರಲಿಲ್ಲ. ಅವರು ಅಪೂರ್ವವಾದ ಬಲಹೀನತೆ, ಏಕಾಂತತೆಗಳನ್ನು ಅನುಭವಿಸುತ್ತಿದ್ದರು. 'ಝಮ್‌ಝಮ್' ನೀರಿನಿಂದಾಗಿ ಜನರಿಗಾಗುವ ಪ್ರಯೋಜನಗಳು, ಹಾಜಿಗಳ ಜಲಪಾನದ ಸಮಸ್ಯೆಯ ನಿವಾರಣೆ ಇದಾವುದರಿಂದಲೂ ಅವರಿಗೆ ಪೂರ್ಣ ತೃಪ್ತಿಯಿರಲಿಲ್ಲ. ಅವರು ಪವಿತ್ರ ಕಅಬಾ ಭವನಕ್ಕೆ ಒರಗಿ ಕುಳಿತು ಯೋಚನಾ ಮಗ್ನರಾಗಿದ್ದರು:

"ಕುರೈಶರಿಗೆ ಇನ್ನೂ ಸಾಮೂಹಿಕ ಹಿತಾಸಕ್ತಿಯ ಪರಿವೆಯಿಲ್ಲ. ಪ್ರತಿಯೊಬ್ಬನೂ ಸ್ವಾರ್ಥ ಹಿತಾಸಕ್ತಿಯಲ್ಲೇ ಮುಳುಗಿದ್ದಾನೆ. ನನ್ನ ತೋಳ್ಬಲವು ಕ್ಷಯಿಸಿ ಹೋದರೆ ನನಗೆ ಈಗ ಪ್ರಾಪ್ತವಾಗಿರುವ ಕೀರ್ತಿಯು ಉಳಿಯಲಾರದೆಂದು 'ಝಮ್‌ಝಮ್' ಬಾವಿಯ ಅಗೆತದಿಂದ ವ್ಯಕ್ತವಾಯಿತು. ಹಾರಿಸ್ ನನ್ನ ಏಕೈಕ ಪುತ್ರ. ಅವನೇನೋ ಬಹಳ ವಿಧೇಯನೂ ಶ್ರಮ ಜೀವಿಯೂ ಆಗಿರುವನು. ಆದರೆ ಒಬ್ಬಂಟಿಗನಲ್ಲವೆ. ತಮ್ಮಂದಿರು ಇರುತ್ತಿದ್ದರೆ ನಾವು ಈ ಕೆಲಸವನ್ನು ಸುಲಭವಾಗಿ ಮಾಡಬಹುದಾಗಿತ್ತು. ಕುರೈಶರಲ್ಲಿ ಗಂಡು ಮಕ್ಕಳು ಹೆಚ್ಚಿದ್ದವರು ಗರ್ವ ಪಡುತ್ತಾರೆ. ಇಡೀ ಅರಬ್ ದೇಶದಲ್ಲಿ ಶಕ್ತಿ ಮತ್ತು ಅಧಿಕಾರವು ಗಂಡು ಮಕ್ಕಳ ಆಧಿಕ್ಯವನ್ನೇ ಅವಲಂಬಿಸಿದೆ. ನನಗೂ ಅನೇಕ ಪುತ್ರರಿರುತ್ತಿದ್ದರೆ! ಎಲ್ಲ ಕೆಲಸಗಳನ್ನೂ ನಾನು ಇಷ್ಟ ಬಂದಾಗ, ಇಷ್ಟ ಬಂದಂತೆ ಮಾಡಬಹುದಿತ್ತು!"

ಅವರು ಸ್ವಲ್ಪ ಹೊತ್ತು ಹೀಗೆಯೇ ಯೋಚನಾ ಲಹರಿಯಲ್ಲಿ ಮುಳುಗಿ ದೂರದ ದಿಗಂತದತ್ತ ದೃಷ್ಟಿ ನೆಟ್ಟಿದ್ದರು. ತರುವಾಯ ಒಮ್ಮೆಲೆ ಎದ್ದು ನಿಂತು ನಿಧಾನವಾಗಿ ಕಅಬಾ ಭವನದೊಳಕ್ಕೆ ಪ್ರವೇಶಿಸುತ್ತಾರೆ. ಒಂದು ಗೋಡೆಗೆ ಒರಗಿ ಕೈಯೆತ್ತಿ ಈ ರೀತಿ ಪ್ರಾರ್ಥಿಸುತ್ತಾರೆ:

"ಓ ಅಲ್ಲಾಹ್! ನೀನು ಮಹಾನ್ ಸೃಷ್ಟಿಕರ್ತ. ನೀನಿಚ್ಛಿಸಿದವರಿಗೆ ನಿನಗಿಷ್ಟ ಬಂದುದನ್ನು ದಯಪಾಲಿಸುವವನು. ನಿನ್ನ ಭಂಡಾರದಲ್ಲಿ ಯಾವುದಕ್ಕೂ ಕೊರತೆಯಿಲ್ಲ. ನಾನು ನಿನ್ನಲ್ಲಿ ಮೊರೆಯಿಡುತ್ತಿದ್ದೇನೆ. ನನಗೆ ಹತ್ತು ಪುತ್ರರನ್ನು ದಯಪಾಲಿಸು. ಹಾಗಾದರೆ ನಾನು ನಿನ್ನ ಈ ಪವಿತ್ರ ಭವನದ ಸೇವೆಯನ್ನು ಇನ್ನಷ್ಟು ಉತ್ತಮವಾಗಿ ಮಾಡಬಲ್ಲೆ. ನನ್ನ ಹತ್ತು ಪುತ್ರರು ನನ್ನ ಜೀವನಾವಧಿಯಲ್ಲೇ ಬೆಳೆದು ದೊಡ್ಡವರಾದರೆ ಅವರ ಪೈಕಿ ಒಬ್ಬ ಪುತ್ರನನ್ನು ನಿನ್ನ ಹೆಸರಲ್ಲಿ ಬಲಿ ನೀಡುವೆನೆಂದು ವಚನ ನೀಡುತ್ತೇನೆ."

ಇದು ಬಹಳ ದೊಡ್ಡ ಮಾತಾಗಿತ್ತು. ಆದರೆ ಅಧಿಕ ಪುತ್ರರನ್ನು ಹೊಂದಬೇಕೆಂಬ ಬಯಕೆ ಅವರ ಮನದಾಳದಲ್ಲಿ ಬೇರೂರಿತ್ತು. ಆದ್ದರಿಂದ ಒಬ್ಬ ಮಗನನ್ನು ಬಲಿಕೊಡುವ ವಾಗ್ದಾನ ಮಾಡುವಾಗ ಅವರಿಗೆ ಒಂದಿನಿತೂ ಅಳುಕುಂಟಾಗಲಿಲ್ಲ. ಈ ಪ್ರಾರ್ಥನೆಯು ಅವರ ಹೃದಯಾಂತರಾಳದಿಂದ ಹೊರಟದ್ದಾಗಿತ್ತು. ಆದ್ದರಿಂದ ಅದು ಖಂಡಿತ ಸ್ವೀಕೃತ

ವಾಗುತ್ತದೆಂದು ಅವರಿಗೆ ಭರವಸೆಯಿತ್ತು. ಈಗ ಅವರ ಮುಖದ ಮೇಲೆ ನೆಮ್ಮದಿ ಮತ್ತು ಸಂತಸದ ಕಾಂತಿ ಮೂಡಿತ್ತು. ಇದೇ ಸಂತೋಷದಲ್ಲಿ ಹೊರಟು ಅವರು ಲಗುಬಗೆಯಲ್ಲಿ ಮನೆಯತ್ತ ನಡೆದರು.

ಅಬ್ದುಲ್ ಮುತ್ತಲಿಬರ ಪ್ರಾರ್ಥನೆ ಸ್ವೀಕೃತವಾಯಿತು. ಅಲ್ಲಾಹನು ಅವರಿಗೆ ಹತ್ತು ಪುತ್ರರನ್ನು ದಯಪಾಲಿಸಿದನು. ಅವರು ಅಬ್ದುಲ್ ಮುತ್ತಲಿಬರ ಜೀವಮಾನದಲ್ಲೇ ಬೆಳೆದು ಯೌವನಾವಸ್ಥೆಗೆ ತಲಪಿದರು. ಮಕ್ಕಳ ಆಧಿಕ್ಯದಿಂದ ಅವರು ದರ್ಪ ತಾಳಲಿಲ್ಲ. ಹರ್ಷ ಚಿತ್ತರಾಗಿದ್ದರು. ಆದರೆ ಅವರಿಗೆ ತಮ್ಮ ಹರಕೆ ಪೂರೈಸಲು ನೆನಪಾಗಲಿಲ್ಲ. ಒಂದು ದಿನ ಅವರು ಮಲಗಿದ್ದಾಗ ಯಾರೋ ಅವರನ್ನು ತಟ್ಟಿ "ಅಬ್ದುಲ್ ಮುತ್ತಲಿಬ್! ಏಳು ನಿನ್ನ ಹರಕೆಯನ್ನು ಪೂರೈಸು" ಎಂದು ಹೇಳಿದಂತಾಯಿತು. ಅವರು ಗಾಬರಿಗೊಂಡು ಎಚ್ಚರ ಗೊಂಡರು. ಸುತ್ತಲೂ ಕಣ್ಣೋಡಿಸಿದರು. ಯಾರೂ ಇರಲಿಲ್ಲ. ಗಾಢಾಂಧಕಾರ ಕವಿದಿತ್ತು. ಸ್ವಲ್ಪ ಹೊತ್ತು ಯೋಚನೆಯಲ್ಲಿ ಮುಳುಗಿ ಮತ್ತೆ ನಿದ್ರಾವಶವಾದರು. ಮತ್ತೊಮ್ಮೆ ಅದೇ ಮಾತು ಕೇಳಿ ಎಚ್ಚರವಾಯಿತು. ತರುವಾಯ ರಾತ್ರಿಯಿಡೀ ನಿದ್ರೆ ಹತ್ತಿರವೂ ಸುಳಿಯಲಿಲ್ಲ. ಮುಂಜಾನೆ ಎದ್ದು ತಮ್ಮ ಪುತ್ರರನ್ನು ಕರೆದು ಹೇಳಿದರು:

"ಮಕ್ಕಳೇ, ನನಗೆ ಹತ್ತು ಮಂದಿ ಪುತ್ರರಾದರೆ ಮತ್ತು ಅವರೆಲ್ಲರೂ ನನ್ನ ಕಣ್ಣ ಮುಂದೆಯೇ ಬೆಳೆದು ದೊಡ್ಡವರಾದರೆ ಒಬ್ಬನನ್ನು ಅಲ್ಲಾಹನಿಗಾಗಿ ಬಲಿ ಕೊಡುವುದಾಗಿ ನಾನು ಹರಕೆ ಹೊತ್ತಿದ್ದೆ. ಅವನ ದಯೆಯಿಂದ ನನಗೆ ಹತ್ತು ಪುತ್ರರಾದರು ಮತ್ತು ಅವರೆಲ್ಲರೂ ನನ್ನ ಕಣ್ಣ ಮುಂದೆಯೇ ಬೆಳೆದು ದೊಡ್ಡವರಾದರು. ಕಳೆದ ರಾತ್ರಿ ಕನಸಿನಲ್ಲಿ ಯಾರೋ ನನಗೆ ನನ್ನ ಹರಕೆಯನ್ನು ನೆನಪಿಸಿದ್ದಾರೆ. ಈಗ ಹೇಳಿ ನಿಮ್ಮ ಅಭಿಪ್ರಾಯವೇನು?"

ಪ್ರತಿಯೊಬ್ಬ ಪುತ್ರನೂ ಪ್ರತ್ಯಪ್ರತ್ಯೇಕವಾಗಿ ಹೀಗೆ ಹೇಳಿದನು:

"ಅಪ್ಪಾ! ನಾವು ನಿಮ್ಮ ಆಜ್ಞೆಯ ಮೇರೆಗೆ ತಲೆ ಕಡಿಸಲು ಸಿದ್ಧರಿದ್ದೇವೆ. ನಮಗೆ ಆ ಬಗ್ಗೆ ಯಾವ ಆಕ್ಷೇಪವೂ ಇಲ್ಲ. ನೀವು ನಮ್ಮ ಪೈಕಿ ಯಾರನ್ನು ಬೇಕಾದರೂ ಬಲಿಕೊಟ್ಟು ನಿಮ್ಮ ಹರಕೆಯನ್ನು ಪೂರ್ತಿಗೊಳಿಸಬಹುದು. ನಿಮ್ಮ ಆಜ್ಞೆಯ ಅನುಸರಣೆಯಲ್ಲಿ ಪ್ರಾಣಾರ್ಪಣೆಗೈಯುವುದನ್ನು ನಾವು ನಮ್ಮ ಸೌಭಾಗ್ಯವೆಂದು ಪರಿಗಣಿಸುತ್ತೇವೆ. ನಮ್ಮ ತಾತ ಇಸ್ಮಾಈಲ್(ಅ) ತಮ್ಮ ತಂದೆಯ ಆಜ್ಞೆಯ ಮುಂದೆ ಶಿರ ಬಾಗಿದ್ದರು. ನಾವೂ ಶಿರ ಬಾಗುತ್ತೇವೆ. ಎಲ್ಲ ಸ್ಥಿತಿಯಲ್ಲೂ ನೀವು ನಮ್ಮನ್ನು ವಿಧೇಯರಾಗಿ ಕಾಣುವಿರಿ."

ಮಕ್ಕಳ ವಿಧೇಯತೆಯು ತಂದೆಯನ್ನು ಪುಳಕಿತಗೊಳಿಸಿತು. ಇದು ಅವರ ಜೀವನದಲ್ಲಿ ಧನ್ಯತೆಯ ಭಾವ ಮೂಡಿಸುತ್ತದೆ. ವಿಜಯ ಮತ್ತು ಹರ್ಷದಲ್ಲಿ ಅವರು ಭಾವಪರವಶರಾಗುತ್ತಾರೆ.

"ನಿಮ್ಮ ಪೈಕಿ ಯಾರನ್ನು ಬಲಿಕೊಡಲಿ?" ಎಂದು ಪ್ರಶ್ನಿಸುತ್ತಾರೆ.

ಪುತ್ರರು ಒಕ್ಕೊರಳಿನಿಂದ "ನೀವು ಯಾರ ಹೆಸರೆತ್ತುವಿರೋ ಅವನು ಅದಕ್ಕೆ ಸಿದ್ಧ" ಎನ್ನುತ್ತಾರೆ.

"ನಾನು ಅದೃಷ್ಟ ಚೀಟಿ ಎತ್ತುತ್ತೇನೆ. ಯಾರ ಹೆಸರು ಬರುತ್ತದೋ ಅವನನ್ನೇ ಬಲಿ ಕೊಡಲಾಗುವುದು" ಎನ್ನುತ್ತಾ ಅಬ್ದುಲ್ ಮುತ್ತಲಿಬ್ ಅವರೆಲ್ಲರನ್ನೂ ಕಅಬಾ ಭವನಕ್ಕೆ ಕರೆ ತಂದರು. ಅದೃಷ್ಟ ಚೀಟಿ ಎತ್ತುವ ಪುರೋಹಿತನಲ್ಲಿ ತನ್ನ ಇಂಗಿತವನ್ನು ತಿಳಿಸಿದರು. ಅವನು ಹತ್ತು ಬಾಣಗಳನ್ನೆತ್ತಿ ಪ್ರತಿಯೊಂದರಲ್ಲೂ ಒಬ್ಬೊಬ್ಬ ಪುತ್ರನ ಹೆಸರು ಬರೆದನು. 'ಹುಬಲ್' ದೇವತೆಯ ವಿಗ್ರಹದ ಮುಂದೆ ಬಾಣಗಳನ್ನಿಟ್ಟು ಅದೃಷ್ಟ ಚೀಟಿ ಎತ್ತಿದನು. ಅಲ್ಲಾಹನ ಮಹಿಮೆ! ಅಬ್ದುಲ್ ಮುತ್ತಲಿಬರ ಅತ್ಯಧಿಕ ಪ್ರೀತಿಯ ಪುತ್ರ 'ಅಬ್ದುಲ್ಲಾ'ರ ಹೆಸರೇ ಬಂತು. ಅಬ್ದುಲ್ಲಾ ರೂಪದಲ್ಲೂ ಗುಣದಲ್ಲೂ ಬುದ್ಧಿಯಲ್ಲೂ ಇತರೆಲ್ಲರಿಗಿಂತಲೂ ಮಿಗಿಲಾಗಿದ್ದರು. ಇದು ಹ. ಮುಹಮ್ಮದ್‌ರ(ಸ) ತಂದೆಯವರಾದ ಅದೇ ಅಬ್ದುಲ್ಲಾ ಆಗಿದ್ದರು. ಅವರು ತಮ್ಮ ತಂದೆಯ ಆಜ್ಞೆಯ ಮುಂದೆ ಶಿರ ಬಾಗಿದ್ದರು.

ಅತ್ತ ಬಲಿಪೀಠದಲ್ಲಿ ಈ ಬಲಿದಾನದ ಸಿದ್ಧತೆಗಳು ನಡೆಯುತ್ತಿದ್ದವು. ನಗರದಾದ್ಯಂತ ಈ ಸುದ್ದಿ ವ್ಯಾಪಿಸಿತ್ತು. ಜನರ ಒಂದು ದೊಡ್ಡ ಗುಂಪು ಕಅಬಾದ ಸುತ್ತಲೂ ನೆರೆದಿತ್ತು. ಪ್ರತಿಯೊಬ್ಬನೂ ಕುರೈಶ್ ಸರದಾರರಾದ ಅಬ್ದುಲ್ ಮುತ್ತಲಿಬರನ್ನು ಈ ಬಲಿಯಿಂದ ತಡೆಯಲು ಪ್ರಯತ್ನಿಸುತ್ತಿದ್ದರು. ಆದರೆ ಅಬ್ದುಲ್ ಮುತ್ತಲಿಬ್ ಈ ರೀತಿ ಘಂಟಾ ಘೋಷವಾಗಿ ಹೇಳುತ್ತಾರೆ:

"ನನ್ನ ಹತ್ತು ಮಕ್ಕಳು ನನ್ನ ಕಣ್ಣ ಮುಂದೆಯೇ ಬೆಳೆದು ದೊಡ್ಡವರಾದರೆ ಅವರಲ್ಲಿ ಒಬ್ಬನನ್ನು ಅಲ್ಲಾಹನಿಗಾಗಿ ಬಲಿ ನೀಡುವುದಾಗಿ ನಾನು ಅವನಲ್ಲಿ ವಾಗ್ದಾನ ಮಾಡಿರುತ್ತೇನೆ. ಈಗ ಆ ವಾಗ್ದಾನವನ್ನು ಪಾಲಿಸುವ ಸಮಯ ಬಂದಿದೆ. ನಾನು ನನ್ನ ವಚನವನ್ನು ಪೂರ್ಣಗೊಳಿಸಿಯೇ ಸಿದ್ಧ. ಏನಾದರೂ ಸರಿಯೆ ನಾನು ಅಬ್ದುಲ್ಲಾನನ್ನು ಬಲಿ ಕೊಟ್ಟೇ ತೀರುವೆನು. ನನ್ನನ್ನು ಇದರಿಂದ ತಡೆಯಲು ಯಾರಿಗೂ ಸಾಧ್ಯವಿಲ್ಲ."

ಆದರೆ ಮುಗೈರ ಬಿನ್ ಅಬ್ದುಲ್ಲಾ ಬಿನ್ ಅಮ್ರ್ ಬಿನ್ ಮಖ್‌ಝೂಮ್ ಎಂಬ ವಯೋವೃದ್ಧರೊಬ್ಬರು ಮುಂದೆ ಬಂದು "ಸರದಾರರೇ! ತಾವು ಅಬ್ದುಲ್ಲಾನ ಪ್ರಾಣಕ್ಕೆ ಬದಲಾಗಿ ಪರಿಹಾರ ನೀಡಿರಿ. ಈ ರೀತಿ ನಿಮ್ಮ ಹರಕೆಯೂ ಪೂರ್ತಿಯಾಗುವುದು ಮತ್ತು ಅಬ್ದುಲ್ಲಾನ ಪ್ರಾಣವೂ ಉಳಿಯುವುದು."

ಅಬ್ದುಲ್ ಮುತ್ತಲಿಬ್ ಯೋಚನಾ ಮಗ್ನರಾಗುತ್ತಾರೆ. "ಇದೂ ಸರಿಯೆ. ನಾನು ಜ್ಯೋತಿಷಿನಿಯಲ್ಲೊಮ್ಮೆ ವಿಚಾರಿಸಿಕೊಳ್ಳುತ್ತೇನೆ" ಎನ್ನುತ್ತಾರೆ.

ಜ್ಯೋತಿಷಿನಿ ಅದೃಷ್ಟ ಚೀಟಿ ಎತ್ತುತ್ತಾಳೆ. ಅಬ್ದುಲ್ಲಾರಿಗೆ ಬದಲಾಗಿ ನೂರು ಒಂಟೆಗಳನ್ನು ಬಲಿ ನೀಡಬೇಕೆಂದು ಹೇಳುತ್ತಾಳೆ. ಆತ್ಮತೃಪ್ತಿಗಾಗಿ ಅಬ್ದುಲ್ ಮುತ್ತಲಿಬ್ ಜ್ಯೋತಿಷಿನಿಯಲ್ಲಿ ಮತ್ತೊಮ್ಮೆ ಅದೃಷ್ಟ ಚೀಟಿ ಎತ್ತುವಂತೆ ಬಿನ್ನವಿಸುತ್ತಾರೆ. ಈ ಸಲವೂ ಅಬ್ದುಲ್ಲಾರ ಬದಲಿಗೆ ನೂರು ಒಂಟೆಯ ಚೀಟಿಯೇ ಬರುತ್ತದೆ. ಅವರ ಮುಖ ಸಂತೋಷದಿಂದ ಅರಳುತ್ತದೆ.

ಬಲಿಪೀಠದಲ್ಲಿ ನೂರು ಒಂಟೆಗಳನ್ನು ಬಲಿ ನೀಡಲಾಗುತ್ತದೆ. ಅಬ್ದುಲ್ ಮುತ್ತಲಿಬರ

ಹರಕೆ ಪೂರ್ಣಗೊಳ್ಳುತ್ತದೆ. ಅಬ್ದುಲ್ಲಾರು ಜೀವನದ ಕೆಲವು ವಸಂತಗಳನ್ನು ಕಾಣಲು ಬದುಕಿ ಉಳಿಯುತ್ತಾರೆ.

ಅಬ್ದುಲ್ಲಾರ ಬದಲಿಗೆ ನೀಡಲ್ಪಟ್ಟ ಈ ಬಲಿದಾನವು ಮಾನವ ಪ್ರಾಣದ ಘನತೆಯ ಬಗ್ಗೆ ಅರಬ್ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವನ್ನು ಸೇರಿಸುತ್ತದೆ. ಅರೇಬಿಯಾದಲ್ಲಿ ಆಗುತ್ತಿದ್ದ ಕೊಲೆಗಳಲ್ಲಿ ಸಾಮಾನ್ಯವಾಗಿ ಪರಿಹಾರ ಧನದ ರೂಪದಲ್ಲಿ ಕೆಲವು ಒಂಟೆಗಳನ್ನು ನೀಡಲಾಗುತ್ತಿತ್ತು. ಈಗ ಅದರ ಸಂಖ್ಯೆಯು ನೂರಕ್ಕೆ ಏರುತ್ತದೆ. ತನ್ಮೂಲಕ ಮಾನವ ಹತ್ಯೆಯ ತಡೆಗೆ ಒಂದು ಹೊಸ ಬುನಾದಿ ದೊರೆತಂತಾಗುತ್ತದೆ.

## ಅಬ್ದುಲ್ಲಾರ ವಿವಾಹ

ಅಬ್ದುಲ್ಲಾ ಸ್ಫುರದ್ರೂಪಿಯಾಗಿದ್ದರು. ಗುಣನಡತೆಯಲ್ಲೂ ಆದರ್ಶಪ್ರಾಯ ರಾಗಿದ್ದರು. ಮೊದಲೇ ಅವರ ರೂಪ ಗುಣಗಳು ಮಕ್ಕಾದಲ್ಲಿ ಪ್ರಖ್ಯಾತವಾಗಿದ್ದುವು. ಹರಕೆಯ ಘಟನೆಯ ಬಳಿಕವಂತೂ ಅದು ಮಕ್ಕಾ ನಗರದಲ್ಲಿ ಮನೆ ಮಾತಾಯಿತು. ಅನೇಕ ಕನ್ಯೆಯರು ಅವರಿಗಾಗಿ ಹಾತೊರೆಯುತ್ತಿದ್ದರು. ಅನೇಕ ಕಡೆಯಿಂದ ಪ್ರೇಮ ಸಂಬಂಧದ ಸೂಚನೆಯೂ ಲಭಿಸಿತ್ತು. ಆದರೆ ಅಬ್ದುಲ್ಲಾ ಆ ಕಡೆ ಗಮನಕೊಟ್ಟಿರಲಿಲ್ಲ.

ಫಾತಿಮಾ ಬಿಂತು ಮರಾಖಶೀಮ ಎಂಬ ಶ್ರೀಮಂತ ಮಹಿಳೆಯೊಬ್ಬಳು ಒಂದು ದಿನ ಅವರಲ್ಲಿ ತಮ್ಮ ಪ್ರೇಮವನ್ನು ಪ್ರಕಟಿಸಿದಳು. ಆದರೆ ಅಬ್ದುಲ್ಲಾ ಅದಕ್ಕೆ ಬಲಿ ಬೀಳಲಿಲ್ಲ. ತನ್ನ ಬಯಕೆಯನ್ನು ಈಡೇರಿಸಿದರೆ ನೂರು ಒಂಟೆಗಳ ಕೊಡುಗೆ ನೀಡುವುದಾಗಿ ಆಕೆ ಭರವಸೆ ನೀಡಿದಳು. ಆದರೆ ಅಬ್ದುಲ್ಲಾ ಮಣಿಯಲಿಲ್ಲ.

"ವ್ಯಭಿಚಾರವೆಸಗುವುದಕ್ಕಿಂತ ಸತ್ತು ಹೋಗುವುದು ಲೇಸು. ಧರ್ಮಸಮ್ಮತ ಸಂಬಂಧವಾದರೆ ನನಗೂ ಇಷ್ಟವೆ. ಆದರೆ ಅದಕ್ಕೆ ಬಹಿರಂಗ ಘೋಷಣೆ ಅಗತ್ಯ. ನೀನು ನನ್ನನ್ನು ಪುಸಲಾಯಿಸುತ್ತಿರುವಿ. ಸಭ್ಯ ಮನುಷ್ಯನು ತನ್ನ ಮಾನ ಮತ್ತು ಧರ್ಮವನ್ನು ಕಾಪಾಡಲೇಬೇಕು" ಎನ್ನುತ್ತಾ ಆಕೆಯ ಬಯಕೆಯನ್ನು ಈಡೇರಿಸಲು ನಿರಾಕರಿಸುತ್ತಾರೆ.

ಫಾತಿಮಾ ನಿರಾಶಳಾಗಿ ಮರಳುತ್ತಾಳೆ. ಮುಂದೆಂದೂ ಆಕೆಗೆ ಅವರನ್ನು ಪುಸಲಾಯಿಸುವ ಧೈರ್ಯ ಬರುವುದಿಲ್ಲ. ಇದು ಅಬ್ದುಲ್ಲಾರ ಸ್ವಾಭಿಮಾನ ಮತ್ತು ಚಾರಿತ್ರ್ಯದ ಒಂದು ಉಜ್ವಲ ಘಟನೆ.

ಅಬ್ದುಲ್ ಮುತ್ತಲಿಬ್ ತಮ್ಮ ಪುತ್ರನಿಗೆ ಸೂಕ್ತ ವಧುವನ್ನು ಹುಡುಕುತ್ತಿದ್ದರು. ಕುಲ ಮಹಿಮೆಯಲ್ಲೂ ಮಾನ ಮರ್ಯಾದೆಯಲ್ಲೂ ತನಗೆ ಸಮಾನವಾದ ಸಂಬಂಧಕ್ಕಾಗಿ ಶೋಧಿಸುತ್ತಿದ್ದರು. ಅವರು ಝುಹ್ರಾ ಗೋತ್ರದ ಸರದಾರ ವಹಬ್ ಬಿನ್ ಅಬ್ದುಮನಾಫ್‌ರ ಮನೆಗೆ ಹೋಗಿ ಅವರ ಪುತ್ರಿ ಆಮಿನಾರನ್ನು ನೋಡುತ್ತಾರೆ. ಆಮಿನಾ ಕುರೈಶ್ ಕನ್ಯೆಯರ ಪೈಕಿ ಎಲ್ಲ ರೀತಿಯಲ್ಲೂ ಉತ್ತಮಳಾಗಿರುವರೆಂದು ಅವರು ಕೇಳಿದ್ದರು. ತನ್ನ ಮಗ ಅಬ್ದುಲ್ಲಾನಿಗೆ ನಿಮ್ಮ ಮಗಳನ್ನು ಕೊಡಬೇಕೆಂದು ಅಬ್ದುಲ್ ಮುತ್ತಲಿಬ್ ಕೇಳಿಕೊಂಡಾಗ

ವಹಬ್ ಬಿನ್ ಅಬ್ದುಮನಾಫ್ ಸಂತೋಷದಿಂದ ಒಪ್ಪಿಕೊಂಡರು. ಅವರು ಅಬ್ದುಲ್ಲಾರ ಪ್ರಸಿದ್ಧಿಯ ಬಗ್ಗೆ ಅರಿತಿದ್ದರು. ಈ ರೀತಿ ಅಬ್ದುಲ್ಲಾ ಮತ್ತು ಆಮಿನಾರ ವಿವಾಹ ನಡೆಯುತ್ತದೆ. ಆಗ ಅಬ್ದುಲ್ಲಾರ ಪ್ರಾಯ 25 ವರ್ಷವಾಗಿತ್ತು.

## ಸಿರಿಯಾ ಪ್ರಯಾಣ

ಕುರೈಶರ ಖ್ಯಾತಿ ಮತ್ತು ಮಹತ್ವದ ಗುಟ್ಟು ಕಲಬಾದ ಧರ್ಮದರ್ಶಿತ್ವ ಮತ್ತು ಅವರ ವ್ಯಾಪಾರವಾಗಿತ್ತು. ಅವರ ವ್ಯಾಪಾರವು ಯಮನ್‌ನಿಂದ ಸಿರಿಯಾದ ವರೆಗೆ ವ್ಯಾಪಿಸಿತ್ತು.

ಅವರ ವ್ಯಾಪಾರ ತಂಡಗಳು ವರ್ಷಕ್ಕೊಮ್ಮೆ ಸಿರಿಯಾಕ್ಕೆ ಹೋಗುತ್ತಿದ್ದುವು. ಅವರ ವ್ಯಾಪಾರ ತಂಡಗಳು ಅರೇಬಿಯಾದಾದ್ಯಂತ ನಿರ್ಭೀತಿಯಿಂದ ಪಯಣಿಸುತ್ತಿದ್ದುವು. ಯಾರಿಗೂ ಅವರ ಮೇಲೆ ಕೈ ಮಾಡುವ ಧೈರ್ಯವಿರಲಿಲ್ಲ. ಅರೇಬಿಯಾದಲ್ಲೆಲ್ಲಾ ಶಾಂತಿಯ ಗೇಹವೆಂದು ಪ್ರಸಿದ್ಧವಾದ ಕಲಬಾದ ಸಂರಕ್ಷಕರೆಂಬ ನೆಲೆಯಲ್ಲಿ ಅವರಿಗೆ ಈ ಮೇಲ್ಮೆ ಪ್ರಾಪ್ತವಾಗಿತ್ತು.

ಈ ಸಲವೂ ಸಿರಿಯಾಕ್ಕೆ ಹೋಗುವ ವ್ಯಾಪಾರ ತಂಡವು ಸಿದ್ಧವಾಗಿ ನಿಂತಿದೆ. ಅಬ್ದುಲ್ ಮುತ್ತಲಿಬ್ ತಮ್ಮ ಪುತ್ರ ಅಬ್ದುಲ್ಲಾರಿಗೆ ಅದರ ಜೊತೆ ಹೋಗುವಂತೆ ಆದೇಶಿಸುತ್ತಾರೆ. ಈ ಸುದ್ದಿ ಆಮಿನಾರಿಗೂ ತಲುಪುತ್ತದೆ. ಪತಿಯ ವಿರಹದ ಬಗ್ಗೆ ವೇದನೆ ಇದ್ದರೂ ಮಾವನವರ ಆದೇಶದ ಮುಂದೆ ಜೀವನೋಪಾಯಕ್ಕಾಗಿ ಸುಮ್ಮನಿರಬೇಕಾಗುತ್ತದೆ. ಆಮಿನಾರ ಮನೆಗೆ ಅಬ್ದುಲ್ಲಾ ಬೀಳ್ಕೊಡಲು ಬಂದಾಗ "ಯಾವಾಗ ಮರಳುತ್ತೀರಿ?" ಆಮಿನಾ ಕೂತೂಹಲದಿಂದ ಕೇಳುತ್ತಾರೆ.

"ಸಿರಿಯಾದ ಪ್ರಯಾಣಕ್ಕೆ ಒಂದು ತಿಂಗಳು ಬೇಕು. ಅಷ್ಟೇ ಸಮಯ ಅಲ್ಲೂ ಇರಬೇಕಾದೀತು. ಮೂರು ತಿಂಗಳಲ್ಲಿ ಮರಳಬಹುದೇನೋ" ಅಬ್ದುಲ್ಲಾ ಉತ್ತರಿಸುತ್ತಾರೆ.

ಆಮಿನಾ: "ಇಷ್ಟು ದೀರ್ಘ ಅವಧಿಯೇ?"

ಅಬ್ದುಲ್ಲಾ: "ಹೌದು, ಅಷ್ಟು ದೀರ್ಘ ಅವಧಿ."

ಆಮಿನಾ: "ನೀವಂತೂ ಪ್ರಯಾಣದಲ್ಲಿ ಹೇಗೂ ಸಂತೋಷದಿಂದ ಕಾಲ ಕಳೆಯುತ್ತೀರಿ. ಆದರೆ ನೀವಿಲ್ಲದೆ ನಾನೆಂತು ಈ ಏಕಾಂತತೆಯನ್ನು ಕಳೆಯಲಿ?"

ಅಬ್ದುಲ್ಲಾ: "ನಿನ್ನ ಭಾವನೆಗಳನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ನಮ್ಮ ಮದುವೆಯಾಗಿ ಎರಡು ತಿಂಗಳಾಗಿದೆಯಷ್ಟೇ. ನಾವು ಪರಸ್ಪರರನ್ನು ಮನ ತುಂಬ ನೋಡಿಯೂ ಇಲ್ಲ. ಆದ್ದರಿಂದ ವಿರಹದ ವೇದನೆ ಚಿಂತೆಗೀಡು ಮಾಡುವುದು ಸಹಜ."

ಆಮಿನಾ: "ನೀವು ಹೊರಟು ಬಿಡಿ, ಅಲ್ಲಾಹನು ನಿಮಗೆ ನೆರವಾಗಲಿ. ನಾನು ನಿಮ್ಮ ನೆನಪಿನಲ್ಲೇ ಕಾಲ ಕಳೆಯುವೆನು."

ಅಬ್ದುಲ್ಲಾ: "ಅಲ್ಲಾಹನು ನಿನಗೆ ಸಹನೆ-ಸ್ಥೈರ್ಯ ದಯಪಾಲಿಸಲಿ. ನನ್ನಲ್ಲಿ ಧೈರ್ಯ ತುಂಬಲಿ. ನಮ್ಮ ಅಗಲಿಕೆಯ ದಿನಗಳು ಹೇಗೂ ಕಳೆದು ಹೋಗಲಿ. ಸದ್ಯವೇ ನಾವು ಪುನಃ

ಸಂಧಿಸಿ ಆನಂದಿಸೋಣ. ನಮ್ಮ ಪ್ರೇಮದ ಮೌನಗೀತೆಯು ನಮ್ಮಿಬ್ಬರ ಏಕಾಂತತೆಯ ಸಂಗಾತಿಯಾಗಲಿ."

ಆಮಿನಾ: "ಅಲ್ಲಾಹನು ನಿಮ್ಮನ್ನು ಸಕ್ಷೇಮ ಮರಳಿಸಲಿ."

ಅಬ್ದುಲ್ಲಾ: "ಅಲ್ಲಾಹನು ನಿನ್ನನ್ನೂ ಕಾಪಾಡಲಿ."

ವ್ಯಾಪಾರ ತಂಡ ಹೊರಟಿತು. ಆಮಿನಾ ಮಾಳಿಗೆಯ ಕಿಟಕಿಯ ಮೂಲಕ ಒಂಟೆಗಳ ಸಾಲು ಹೋಗುತ್ತಿರುವುದನ್ನು ನೋಡುತ್ತಾ ನಿಂತಿದ್ದಾರೆ. ಕೊನೆಗೆ ಅದು ಒಂದು ಗೆರೆಯಾಗಿ ಮಾರ್ಪಡುತ್ತದೆ. ಕೆಲವೇ ಸಮಯದಲ್ಲಿ ಪರ್ವತಗಳ ಹಿಂದೆ ಮಾಯವಾಗುತ್ತದೆ. ಆಮಿನಾರ ಹೃದಯ ಮಿಡಿತ ಜೋರಾಗುತ್ತದೆ. ಇದು ಪತಿಯ ವಿಯೋಗದ ಪ್ರಥಮ ಅನುಭವ. ನಯನಗಳು ತೇವಗೊಳ್ಳುತ್ತವೆ. ಅವರು ಅಜ್ಞಾತ ಲೋಕದಲ್ಲಿ ಲೀನವಾಗುತ್ತಾರೆ.

## ಅಬ್ದುಲ್ಲಾರ ನಿಧನ

ಮೂರು ತಿಂಗಳು ಕಳೆದುವು. ಪತಿವ್ರತೆಯಾದ ಯುವತಿಯ ವಿರಹ ವೇದನೆ ಕೊನೆಗೊಳ್ಳುವ ಕ್ಷಣಗಳು ಹತ್ತಿರ ಬಂದುವು. ಆಮಿನಾ ವ್ಯಾಪಾರ ತಂಡದ ಮರಳುವಿಕೆಯ ನಿರೀಕ್ಷೆಯಲ್ಲಿ ಕ್ಷಣಗಣನೆ ಮಾಡಲಾರಂಭಿಸುತ್ತಾರೆ. ನಿತ್ಯ ಮಾಳಿಗೆಯೇರಿ ಕಿಟಕಿಯ ಮೂಲಕ ದಿಟ್ಟಿಸುತ್ತಿರುತ್ತಾರೆ. ಅನೇಕ ದಿನಗಳ ನಿರಾಶೆಯ ಬಳಿಕ ಕೊನೆಗೊಂದು ದಿನ ಕಾರವಾನದ ಸ್ವರ ಕೇಳಿಸುತ್ತದೆ. ಆಮಿನಾ ಆನಂದ ತುಂದಿಲರಾಗುತ್ತಾರೆ. ಪತಿಯ ದರ್ಶನಕ್ಕಾಗಿ ತವಕಿಸುತ್ತಾರೆ. ಮಾಳಿಗೆಯ ಕಿಟಕಿಯ ಮೂಲಕ ಮೈಮರೆತು ವೀಕ್ಷಿಸುತ್ತಾರೆ. ಕಾರವಾನ ಹತ್ತಿರ ಬಂದರೂ ಅಬ್ದುಲ್ಲಾರ ಮುಖ ದರ್ಶನವಾಗಲಿಲ್ಲ. ಅಷ್ಟರಲ್ಲಿ ಮಾವ ಅಬ್ದುಲ್ ಮುತ್ತಲಿಬ್ ಮನೆಯೊಳಗೆ ಪ್ರವೇಶಿಸುತ್ತಾರೆ.

ಅವರ ಮುಖ ಕಳೆಗುಂದಿದೆ. ಹಣೆಯ ಮೇಲೆ ಬಳಲಿಕೆಯ ಕುರುಹುಗಳಿವೆ. ಹೆಜ್ಜೆಗಳು ಕಂಪಿಸುತ್ತಿವೆ. ಅವರನ್ನು ಈ ಸ್ಥಿತಿಯಲ್ಲಿ ಕಂಡು ಆಮಿನಾ ಗಾಬರಿಗೊಳ್ಳುತ್ತಾರೆ. ಅಬ್ದುಲ್ ಮುತ್ತಲಿಬ್ ಅವರ ಹತ್ತಿರ ಬರುತ್ತಾರೆ. ಮೌನವು ಅವರನ್ನು ಆವರಿಸಿದೆ. ಅವರನ್ನು ಇಷ್ಟು ಮೌನವಾಗಿ ಆಮಿನಾ ಎಂದೂ ನೋಡಿರಲಿಲ್ಲ. ಸದಾ ಪ್ರಸನ್ನವದನರಾಗಿರುವವರು ಇಂದು ಶೋಕತಪ್ತರಾಗಿರುವಂತೆ ಕಾಣಿಸುತ್ತಿದೆ. ಆಮಿನಾರ ಕಳವಳ ಹೆಚ್ಚುತ್ತಲೇ ಇದೆ. ತನಗರಿವಿಲ್ಲದೆಯೇ ಕೇಳುತ್ತಾರೆ:

"ಕ್ಷೇಮ ತಾನೇ? ತಾವೇಕೆ ಇಷ್ಟು ಸುಸ್ತಾಗಿರುವಿರಿ?"

ಅಬ್ದುಲ್ ಮುತ್ತಲಿಬ್‌ರ ದೃಷ್ಟಿ ಆಮಿನಾರ ಕಡೆಗೆ ಏಳುತ್ತದೆ. ಅವರ ಕಣ್ಣುಗಳಲ್ಲಿ ನೀರು ಕಂಡು ಆಮಿನಾರ ಬಾಯಿಯಿಂದ ಸಣ್ಣ ಚೀರಾಟ ಒಂದು ಹೊರಡುತ್ತದೆ.

"ಅಪ್ಪಾ! ಯಜಮಾನರೆಲ್ಲಿ?" ಎನ್ನುತ್ತಾ ಅವರು ಸ್ಮೃತಿ ತಪ್ಪಿ ಬೀಳುತ್ತಾರೆ. ಅಬ್ದುಲ್ ಮುತ್ತಲಿಬ್ ಬಿಕ್ಕಳಿಸುತ್ತಾ ನಿಂತಿದ್ದಾರೆ. ಈ ಹೃದಯ ವಿದ್ರಾವಕ ದೃಶ್ಯ ಕಂಡು ಮನೆ ಮಂದಿಯೆಲ್ಲಾ ಅಲ್ಲಿಗೆ ಧಾವಿಸುತ್ತಾರೆ. ಆಮಿನಾರ ಮುಖಕ್ಕೆ ನೀರೆರಚುತ್ತಾರೆ. ಬೀಸಣಿಗೆ ಯಿಂದ ಗಾಳಿ ಬೀಸುತ್ತಾರೆ. ಸ್ವಲ್ಪ ಹೊತ್ತಿನಲ್ಲೇ ಅವರು ಕಣ್ಣು ತೆರೆಯುತ್ತಾರೆ. ಅಳುತ್ತಾ ಅಬ್ದುಲ್

ಮುತ್ತಲಿಬರಲ್ಲಿ ಪ್ರಶ್ನಿಸುತ್ತಾರೆ: "ಅಪ್ಪಾ! ನನ್ನ ಯಜಮಾನರಿಗೆ ಏನಾಯಿತು?"

"ಮಗಳೇ! ಅವನು ನಮ್ಮನ್ನು ಬಿಟ್ಟಗಲಿದ್ದಾನೆ. ಸಿರಿಯಾದಿಂದ ಮರಳುವಾಗ ಯಸ್ರಿಬ್‌ನಲ್ಲಿ ಅವನು ರೋಗಗ್ರಸ್ತನಾದನು. ನನಗದು ತಿಳಿದ ಬಳಿಕವೂ ನಾನು ಅದನ್ನು ಅಡಗಿಸಿದೆ. ನೀನು ಅಲ್ಲಿಗೆ ಹೋಗಲು ತವಕಪಡುತ್ತೀ ಎಂದು ನನಗೆ ತಿಳಿದಿತ್ತು. ನಾನು ಅಬ್ದುಲ್ಲಾನನ್ನು ಕರೆತರಲೆಂದು ಹಾರಿಸ್‌ನನ್ನು ಯಸ್ರಿಬ್‌ಗೆ ಕಳುಹಿಸಿದ್ದೆ. ಆದರೆ ಅಯ್ಯೋ! ಅವನು ಅಲ್ಲಿಗೆ ತಲುಪುವುದಕ್ಕಿಂತ ಮುಂಚೆಯೇ ಮರಣವು ಅವನನ್ನು ನಮ್ಮಿಂದ ಕಸಿದುಕೊಂಡಿತ್ತು. ಹಾರಿಸ್ ಅಲ್ಲಿಗೆ ತಲುಪುತ್ತಲೇ ಅವನನ್ನು ದಫನ ಮಾಡಲಾಯಿತು. ಹಾರಿಸ್ ಈ ಯಾತ್ರಾ ತಂಡದ ಜೊತೆ ಇಂದೇ ಮರಳಿದ್ದಾನೆ. ಅಯ್ಯೋ ಮಗಳೇ, ನಾನು ಈ ವಿಷಯ ನಿನಗೆ ತಿಳಿಸಲು ಬದುಕಿರದಿರುತ್ತಿದ್ದರೆ!"

ಆಮಿನಾ ದುಃಖದಿಂದ ಕಲ್ಲಿನ ಮೂರ್ತಿಯಂತಾಗಿದ್ದರು. ಅಬ್ದುಲ್ ಮುತ್ತಲಿಬ್ ಮುಂದೆ ಬಂದು ವಾತ್ಸಲ್ಯದಿಂದ ಅವರ ತಲೆ ನೇವರಿಸುತ್ತಾ "ತಾಳ್ಮೆವಹಿಸು ಮಗಳೇ, ಈಗ ತಾಳ್ಮೆ ವಹಿಸುವುದಲ್ಲದೆ ಇನ್ನೇನು ತಾನೆ ಮಾಡಲು ಸಾಧ್ಯ." ಆಮಿನಾ ಮಾವನವರ ನೇವರಿಕೆಯಿಂದ ಎಚ್ಚರಗೊಂಡವರಂತೆ ರೋದಿಸಲಾರಂಭಿಸುತ್ತಾರೆ. ಇದನ್ನು ಕಂಡು ವಯೋವೃದ್ಧ ಸರದಾರರ ಸಹನೆಯ ಕಟ್ಟೆಯೊಡೆದು ಕಣ್ಣೀರಿನ ಕೋಡಿ ಹರಿದು ಬರುತ್ತದೆ. ಅಬ್ದುಲ್ಲಾರ ಮುಗುಳ್ನಗುವ ಮುಖವು ಅವರ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಪಿತೃ ವಾತ್ಸಲ್ಯದ ಬಿರುಗಾಳಿಯೇಳುತ್ತದೆ. ಇನ್ನು ಅಲ್ಲಿ ನಿಲ್ಲುವ ಧೈರ್ಯ ಅವರಿಗಿರಲಿಲ್ಲ. ತಲೆ ತಗ್ಗಿಸಿ ಲಗುಬಗೆಯಿಂದ ಮನೆಯಿಂದ ಹೊರನಡೆಯುತ್ತಾರೆ.

ಈಗ ಆಮಿನಾ ಅತ್ಯಂತ ಉದಾಸೀನವಾಗಿ ಇರತೊಡಗಿದರು. ಕೆಲವೊಮ್ಮೆ ಮಾಳಿಗೆಯ ಕಿಟಿಕಿಯ ಮೂಲಕ ಸಿರಿಯಾಕ್ಕೆ ಹೋಗುವ ಮಾರ್ಗವನ್ನೇ ದಿಟ್ಟಿಸುತ್ತಾ ನಿಂತಿರುತ್ತಿದ್ದರು. ಅವರ ಕಣ್ಣೀರು ಬತ್ತಿ ಹೋಗಿತ್ತು. ಆದರೆ ಮನದಾಳದಲ್ಲಿ ಅಬ್ದುಲ್ಲಾರ ನೆನಪು ಮಾತ್ರ ಅಚ್ಚಳಿಯದೆ ಉಳಿದಿತ್ತು. ಹಚ್ಚ ಹಸುರಾಗಿತ್ತು. ವಿರಹ ವೇದನೆಯ ಜೊತೆಗೆ ಗತ ದಿನ ರಾತ್ರಿಗಳ ನೆನಪಿನಲ್ಲಿ ಅವರು ಲೀನವಾಗಿ ಬಿಡುತ್ತಿದ್ದರು. ಅಬ್ದುಲ್ಲಾರ ಸೇವಕಿ ಬರ್ಕ ಅವರ ಹೆಗಲನ್ನು ಮೆಲ್ಲನೆ ಅಲುಗಾಡಿಸುತ್ತಾ, "ಅಮ್ಮಾ! ತಾವು ಏಕಿಷ್ಟು ಮೌನ ತಾಳಿದ್ದೀರಿ? ಈ ರೀತಿ ತಮ್ಮ ಪ್ರಾಣವನ್ನು ಕರಗಿಸುತ್ತಿರುವುದಾದರೂ ಎಲ್ಲಿಯ ತನಕ? ಚಿಕ್ಕ ಸರದಾರರ ದುಃಖವಂತೂ ತಮಗೆ ಹುಚ್ಚು ಹಿಡಿಸಿದೆ."

ಈಗ ಆಮಿನಾರಿಗೆ ಜೀವನದಲ್ಲೇನಾದರೂ ಅಭಿರುಚಿ ಉಳಿದಿದ್ದರೆ ಅದು ಅವರ ಉದರದಲ್ಲಿ ಬೆಳೆಯುತ್ತಿದ್ದ ಅಬ್ದುಲ್ಲಾರ ಮಗುವಿನ ಕಾರಣದಿಂದ ಮಾತ್ರ. ದುಃಖಾತಿರೇಕದಲ್ಲೂ ಅವರಿಗೆ ಒಮ್ಮೊಮ್ಮೆ ಅಬ್ದುಲ್ಲಾರು ಪ್ರತ್ಯಕ್ಷರಾಗಿ ಈ ರೀತಿ ಹೇಳುತ್ತಿರುವುದಾಗಿ ಭಾಸವಾಗುತ್ತಿತ್ತು. "ಆಮಿನಾ, ಧೈರ್ಯಗುಂದಬೇಡ! ನಿನ್ನ ಗರ್ಭದಲ್ಲಿ ಯಾರು ಬೆಳೆಯುತ್ತಿರುವನೆಂಬುದನ್ನು ಅರಿಯಲು ಪ್ರಯತ್ನಿಸು." ಆಗ ಆಮಿನಾ ಬೆಚ್ಚಿ ಬೀಳುತ್ತಿದ್ದರು. ಅನೇಕ ಸಲ ಕನಸಿನಲ್ಲಿ ಓರ್ವ ಹಿರಿಯರು ಹೀಗೆ ಹೇಳುವುದಾಗಿ

ಕೇಳಿಸುತ್ತಿತ್ತು: "ಆಮಿನಾ ನಿನ್ನ ಮಗುವಿಗೆ ಅಹ್ಮದ್ ಎಂದು ಹೆಸರಿಡು."

## ಆನೆಗಳ ವರ್ಷ

ಕಅಬಾ ಅಲ್ಲಾಹನ ಭವನ. ಶಾಂತಿಯ ಗೃಹ. ಅರೇಬಿಯಾದ ಕೇಂದ್ರ ಬಿಂದು. ಖುರೈಶರ ನಾಯಕತ್ವ ಮತ್ತು ಮಹಿಮೆಯು ಕಅಬಾದ ಧರ್ಮದರ್ಶಿತ್ವದ ಕಾರಣದಿಂದಾಗಿತ್ತು.

ಕಅಬಾದ ಖ್ಯಾತಿಯನ್ನು ಕಂಡು ಯಮನ್‌ನ ಅರಸನಾದ ಅಬ್ರಹನಿಗೆ ಅಸಹ್ಯ ಅಸೂಯೆ. ಕ್ರೈಸ್ತನಾದ ಆತನು ತಾನು ನಿರ್ಮಿಸಿದ ಭವ್ಯ ಇಗರ಼್ಿಗೆ ಅರೇಬಿಯಾದಲ್ಲಿ ಕೇಂದ್ರೀಯ ಸ್ಥಾನ ಲಭಿಸಬೇಕೆಂದು ಬಯಸಿದ್ದನು. ತನ್ಮೂಲಕ ಕಅಬಾದ ಪ್ರತಿಷ್ಠೆಯು ಕೊನೆಗೊಳ್ಳಬೇಕೆಂಬುದೇ ಅವನ ಬಯಕೆಯಾಗಿತ್ತು. ಆದರೆ ಅವನ ಬಯಕೆಯು ಈಡೇರಲಿಲ್ಲ. ಆದ್ದರಿಂದ ಮತ್ಸರದ ಬೆಂಕಿಯಲ್ಲಿ ಬೇಯುತ್ತಿದ್ದನು. ಅದನ್ನು ನಾಶ ಮಾಡುವ ದೃಢ ನಿರ್ಧಾರದೊಂದಿಗೆ ಅರುವತ್ತು ಸಾವಿರ ಸೈನಿಕರ ದಂಡಿನೊಂದಿಗೆ ಮಕ್ಕಾದ ಕಡೆಗೆ ಹೊರಡುತ್ತಾನೆ. ಅವನೊಂದಿಗೆ ಆಫ್ರಿಕಾದ ಹಸ್ಮೀತ್ (Mammoth) ಎಂಬ ವಂಶದ ಒಂಬತ್ತು ಆನೆಗಳೂ ಇದ್ದುವು. ಅವುಗಳಲ್ಲಿ ಒಂದರ ಮೇಲೆ ಅವನೇ ಸವಾರನಾಗಿದ್ದನು. ಹಾದಿಯಲ್ಲಿ ಸಕೀಫ್ ಗೋತ್ರದವರು 'ಅಬೂ ರಹಾಲ್' ಎಂಬವನನ್ನು ದಾರಿತೋರಿಸುವುದಕ್ಕಾಗಿ ಅವರ ಜೊತೆ ಕಳುಹಿಸಿ ಕೊಡುತ್ತಾರೆ. ಆತ ಮಕ್ಕಾದಿಂದ ಮೂರು ಮೈಲಿ ದೂರದಲ್ಲೇ ಸಾಯುತ್ತಾನೆ. ಅಬ್ರಹ ಈಗ ಮಕ್ಕಾದ ಗಡಿಯೊಳಗೆ ಪ್ರವೇಶಿಸಿರುವನು. ಅವನ ಸೇನಾ ತುಕಡಿಯೊಂದು ತಮಾಮದವರು ಮತ್ತು ಖುರೈಶರಿಗೆ ಸೇರಿದ ಅನೇಕ ಜಾನುವಾರುಗಳನ್ನು ಲೂಟಿಗೈದು ಅಟ್ಟಿಕೊಂಡು ಹೋಯಿತು. ಆ ಪೈಕಿ ಮಕ್ಕಾದ ಸರದಾರ ಅಬ್ದುಲ್ ಮುತ್ತಲಿಬರಿಗೆ ಸೇರಿದ 200 ಒಂಟೆಗಳೂ ಇದ್ದುವು. ಮಕ್ಕಾದ ಮೇಲೆ ಆಕ್ರಮಣ ಮಾಡುವುದಕ್ಕೆ ಮೊದಲು ಅಬ್ರಹ ತನ್ನ ಒಬ್ಬ ಸೇನಾನಾಯಕ ಹನಾತ ಹುಮೈರಿಯನ್ನು ಕರೆದು ಹೀಗೆ ಹೇಳುತ್ತಾನೆ:

"ನೀವು ಮಕ್ಕಾಗೆ ಹೋಗಿ ಅದರ ಸರದಾರನಿಗೆ ನಾನು ಕಅಬಾವನ್ನು ಕೆಡವಲು ಬಂದಿರುತ್ತೇನೆಂದು ಹೇಳಿರಿ. ನೀವು ಪ್ರತಿಭಟಿಸಿದರೆ ನಾಶ ಹೊಂದುವಿರಿ. ನಿಮ್ಮ ಬಳಿ ನನ್ನನ್ನು ಎದುರಿಸುವ ಸಾಮರ್ಥ್ಯವಾಗಲೀ ಸೈನ್ಯವಾಗಲೀ ಇಲ್ಲ. ನಿಮ್ಮ ಜೀವಗಳನ್ನು ಅಪಾಯಕ್ಕೆ ಸಿಲುಕಿಸದಿರಿ. ನಮ್ಮ ಸೇನೆಯ ಸುದ್ದಿಗೂ ಬರಬೇಡಿ. ನಾವು ಈ ಭವನವನ್ನು ಕೆಡವಿ ಹೋಗಿ ಬಿಡುತ್ತೇವೆ. ನಮಗೆ ನಿಮ್ಮಲ್ಲಿ ಏನೂ ಶತ್ರುತ್ವವಿಲ್ಲ. ಕಅಬಾವನ್ನು ಕೆಡಹುವುದೇ ನಮ್ಮ ಉದ್ದೇಶ. ನೀವು ಪ್ರತಿಭಟಿಸದಿದ್ದರೆ ಮಕ್ಕಾವಾಸಿಗಳ ಪ್ರಾಣ ಮತ್ತು ಸೊತ್ತಿನ ಸುರಕ್ಷಿತತೆಯ ಭರವಸೆ ನೀಡಲಾಗುವುದು."

ಹನಾತ: "ಮಹಾ ಪ್ರಭುಗಳ ಆಜ್ಞೆಯಂತೆಯೇ ಆಗಲಿ" ಎನ್ನುತ್ತಾ ಮಕ್ಕಾ ಪಟ್ಟಣ ಪ್ರವೇಶಿಸುತ್ತಾನೆ. ಮಕ್ಕಾ ವಾಸಿಗಳಿಗೆ ಅಬ್ರಹನ ಸೇನೆಯ ಸುದ್ದಿ ತಲುಪಿದೆ. ಅವರು ಚಿಂತಾಕ್ರಾಂತರಾಗಿದ್ದಾರೆ. ಹನಾತ ಜನರಲ್ಲಿ ಮಕ್ಕಾ ಸರದಾರನ ವಿಳಾಸ ಕೇಳುತ್ತಾನೆ. ಅವರು

ಅಬ್ದುಲ್ ಮುತ್ತಲಿಬರ ಮನೆ ತೋರಿಸಿ ಕೊಡುತ್ತಾರೆ. ಆತ ಅವರನ್ನು ಕಂಡು "ನಾನು ಯಮನ್‌ನ ಮಹಾರಾಜರ ರಾಯಭಾರಿ" ಎಂದು ಪರಿಚಯಿಸುತ್ತಾನೆ. ಅಬ್ದುಲ್ ಮುತ್ತಲಿಬ್ ಅವನನ್ನು ಬರಮಾಡಿಕೊಳ್ಳುತ್ತಾರೆ.

ಹನಾತ: "ನಮ್ಮ ಮಹಾರಾಜರು ಕಅಬಾ ಭವನವನ್ನು ಕೆಡವಿ ಹಾಕಲಿಕ್ಕಾಗಿ 60 ಸಾವಿರ ಸೇನೆಯೊಂದಿಗೆ ಬಂದಿರುವರು. ನಿಮಗೆ ಅವರನ್ನು ಎದುರಿಸಲು ಸಾಧ್ಯವಾಗದು. ಮಕ್ಕಾ ವಾಸಿಗಳೊಂದಿಗೆ ಅವರಿಗೆ ಏನೂ ದ್ವೇಷವಿಲ್ಲ. ಕಅಬಾ ಭವನವನ್ನು ಕೆಡಹುವುದು ಮಾತ್ರ ಅವರ ಧ್ಯೇಯ. ನೀವು ಅವರನ್ನು ಪ್ರತಿಭಟಿಸುವುದಿಲ್ಲವೆಂಬ ಆಶ್ವಾಸನೆ ನೀಡಿದರೆ ನಾನು ಮಕ್ಕಾವಾಸಿಗಳ ಸಂರಕ್ಷಣೆಯ ಭರವಸೆ ನೀಡುತ್ತೇನೆ."

ಅಬ್ದುಲ್ ಮುತ್ತಲಿಬ್: "ನಿಮ್ಮ ರಾಜರೊಂದಿಗೆ ಹೋರಾಡುವ ಶಕ್ತಿ ನಮಗಿಲ್ಲ. ಕಅಬಾ ಅಲ್ಲಾಹನ ಭವನ. ಅವನು ಬೇಕಾದರೆ ಅದನ್ನು ರಕ್ಷಿಸುವನು."

ಹನಾತ: "ನೀವು ನನ್ನ ಜೊತೆಗೆ ಬಂದು ಮಹಾರಾಜರಲ್ಲಿ ನಿಮ್ಮ ಬಾಯಿಯಿಂದಲೇ ಈ ಮಾತು ಹೇಳಿ."

ಅಬ್ದುಲ್ ಮುತ್ತಲಿಬ್ ಆತನ ಜೊತೆ ಹೊರಡುತ್ತಾರೆ. ಅಬ್ರಹ ಅವರನ್ನು ದೂರದಿಂದಲೇ ನೋಡುತ್ತಾನೆ. ಅವರ ಮುಖ ಕಾಂತಿ ಮತ್ತು ಗಾಂಭೀರ್ಯವನ್ನು ಕಂಡು ಪ್ರಭಾವಿತನಾಗುತ್ತಾನೆ. ಇದುವೇ ಮಕ್ಕಾದ ಸರದಾರನಾಗಿರಬೇಕೆಂದು ಭಾವಿಸುತ್ತಾನೆ. ಎದ್ದು ನಿಂತು ಅವರನ್ನು ಆದರದಿಂದ ಬರಮಾಡಿಕೊಳ್ಳುತ್ತಾನೆ. ತನ್ನ ಬಳಿ ಕುಳ್ಳಿರಿಸಿ ಹೀಗೆನ್ನುತ್ತಾನೆ: "ಮಕ್ಕಾದ ಸರದಾರರೇ, ನಾನು ನಿಮ್ಮಿಂದ ಬಹಳ ಪ್ರಭಾವಿತನಾಗಿದ್ದೇನೆ. ನಿಮಗೆ ಹೇಳಲಿಕ್ಕಿರುವುದನ್ನು ಹೇಳಿ."

ಅಬ್ದುಲ್ ಮುತ್ತಲಿಬ್: "ತಮ್ಮ ಸೈನಿಕರು ಹಿಡಿದುಕೊಂಡಿರುವ ನನ್ನ ಒಂಟೆಗಳನ್ನು ಮರಳಿಸಿ ಬಿಡಿ."

ಈ ವಿಚಿತ್ರ ಮಾತು ಕೇಳಿ ಅಬ್ರಹನಿಗೆ ಆಶ್ಚರ್ಯವಾಯಿತು. ಥಟ್ಟನೆ ಹೇಳಿದ: "ನೀವು ಈ ಮಾತುಗಳನ್ನಾಡುವ ಮೂಲಕ ನನ್ನ ಮುಂದೆ ನಿಮ್ಮ ಘನತೆಯನ್ನು ಕುಗ್ಗಿಸಿರುವಿರಿ. ನಾನು ಕಅಬಾ ಭವನವನ್ನು ಕೆಡಹಲಿಕ್ಕಾಗಿ ಬಂದವನೆಂಬುದು ನಿಮಗೆ ತಿಳಿಯದೆ? ಅದು ನಿಮ್ಮ ತಂದೆ ತಾತಂದಿರ ಆರಾಧನಾಲಯ ಮತ್ತು ಧಾರ್ಮಿಕ ಕೇಂದ್ರವಲ್ಲವೇ? ಆ ಬಗ್ಗೆ ಏನನ್ನೂ ಹೇಳದೆ ನಿಮ್ಮ ಒಂಟೆಗಳನ್ನು ಕೇಳಲು ಆರಂಭಿಸಿದಿರಲ್ಲಾ."

ಅಬ್ದುಲ್ ಮುತ್ತಲಿಬ್: "ನಾನಂತೂ ಒಂಟೆಗಳ ಒಡೆಯ. ಅದರ ಬಗ್ಗೆಯೇ ತಮ್ಮಲ್ಲಿ ಬಿನ್ನವಿಸಿಕೊಳ್ಳುತ್ತಿರುವೆನು. ಇನ್ನು ಆ ಭವನದ ವಿಷಯ. ಅದರ ಒಡೆಯ ಅಲ್ಲಾಹನು. ಅವನೇ ಅದನ್ನು ರಕ್ಷಿಸುವನು."

ಅಬ್ರಹ: "ಅವನು ಅದನ್ನು ನನ್ನಿಂದ ರಕ್ಷಿಸಲಾರ."

ಅಬ್ದುಲ್ ಮುತ್ತಲಿಬ್: "ಅವನೂ ನೀವೂ ನೋಡಿಕೊಳ್ಳಿ."

ಅಬ್ರಹ ಅಬ್ದುಲ್ ಮುತ್ತಲಿಬರ ಒಂಟೆಗಳನ್ನು ಹಿಂದಿರುಗಿಸುತ್ತಾನೆ. ಅವರು ಮಕ್ಕಾಗೆ ತೆರಳುತ್ತಾರೆ.

ಮಕ್ಕಾವಾಸಿಗಳ ಮನದಲ್ಲಿ ಭಯ ಮತ್ತು ಕಳವಳ ಆವರಿಸಿದೆ. ಯಾರಿಗೂ ಏನೂ ತೋಚುವುದಿಲ್ಲ. ಈಗ ಏನಾಗಲಿದೆ ಎಂಬ ಬಗ್ಗೆಯೇ ಎಲ್ಲರೂ ಚಿಂತಿತರಾಗಿದ್ದಾರೆ. ಅಷ್ಟರಲ್ಲಿ ಅಬ್ದುಲ್ ಮುತ್ತಲಿಬ್ ಮರಳುತ್ತಾರೆ. "ಎಲ್ಲರೂ ತಮ್ಮ ತಮ್ಮ ಮನೆ ಮಂದಿಯ ಜೊತೆ ಹೋಗಿ ಬೆಟ್ಟಗಳಲ್ಲಿ ಅಡಗಿಕೊಳ್ಳಿರಿ. ರಕ್ತಪಾತವಾಗದಂತೆ ತಕ್ಷಣ ನಗರವನ್ನು ಖಾಲಿ ಮಾಡಿರಿ" ಎಂದು ಆಜ್ಞಾಪಿಸುತ್ತಾರೆ. ಜನರು ಭಯಭೀತರಾಗಿ ತಮ್ಮ ಮನೆಗಳನ್ನು ತೊರೆದು ಬೆಟ್ಟಗಳಲ್ಲಿ ಅಡಗಿಕೊಳ್ಳುತ್ತಾರೆ. ಅಬ್ದುಲ್ ಮುತ್ತಲಿಬ್ ಅವರು ಕೆಲವು ಮಂದಿ ಕುರೈಶ್ ನಾಯಕರೊಂದಿಗೆ ಕಅಬಾ ಭವನವನ್ನು ಪ್ರವೇಶಿಸುತ್ತಾರೆ.

ಕಅಬಾದೊಳಗೆ ಆಗ 360 ವಿಗ್ರಹಗಳಿದ್ದುವು. ಒಳಗೋಡೆಗಳಲ್ಲಿ ಹ. ಇಬ್ರಾಹೀಮ್ ಮತ್ತು ಇಸ್ಮಾಈಲ್‌ರವರ(ಅ) ಚಿತ್ರಗಳು ಬಿಡಿಸಲ್ಪಟ್ಟಿದ್ದುವು. ಅವರ ಕೈಗಳಲ್ಲಿ ಅದೃಷ್ಟದ ಬಾಣಗಳನ್ನು ಚಿತ್ರಿಸಲಾಗಿತ್ತು. ದೊಡ್ಡ ವಿಗ್ರಹ 'ಹುಬಲ್' ಆಗಿತ್ತು. ಅದನ್ನು ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸಲಾಗಿತ್ತು. ಇದು ಕೆಂಪು ಶಿಲೆಯ ಮಾನವಾಕೃತಿಯ ಮೂರ್ತಿಯಾಗಿತ್ತು. ಅದರ ಎಡಕೈ ತುಂಡಾಗಿತ್ತು. ಅದಕ್ಕೆ ಕುರೈಶರು ಬಂಗಾರದ ಕೈಯನ್ನು ಜೋಡಿಸಿದ್ದರು. ಅದರ ಮುಂದೆ ಏಳು ಬಾಣಗಳನ್ನು ಇಡಲಾಗುತ್ತಿತ್ತು. ಇದರಿಂದಲೇ ಅರ್ಚಕನು ಅದೃಷ್ಟದ ಬಾಣ ಎತ್ತುತ್ತಿದ್ದನು. 'ಝಮ್ ಝಮ್'ನ ಸ್ಥಾನದಲ್ಲಿ 'ಅಸಾಫ' ಮತ್ತು 'ನಾಯಿಲಾ' ಎಂಬ ವಿಗ್ರಹಗಳಿದ್ದುವು. ಅವುಗಳ ಆಸ್ಥಾನದಲ್ಲಿ ಕುರೈಶರು ಪ್ರಾಣಿಬಲಿ ನೀಡುತ್ತಿದ್ದರು. 'ಮನಾಫ್' ಎಂಬುದೂ ಕುರೈಶರ ಒಂದು ವಿಗ್ರಹವಾಗಿತ್ತು. ಇದಲ್ಲದೆ ಅವರ ಪ್ರತಿ ಮನೆಯಲ್ಲೂ ಸಣ್ಣ ಪುಟ್ಟ ಅನೇಕ ವಿಗ್ರಹಗಳಿರುತ್ತಿದ್ದುವು. ಮೂರ್ತಿ ಪೂಜೆಯಿಲ್ಲದ ಮನೆಯೇ ಇರಲಿಲ್ಲ. ಪ್ರಯಾಣ ಹೊರಡುವಾಗ ಮತ್ತು ಪ್ರಯಾಣದಿಂದ ಮರಳಿದಾಗ ಅವುಗಳನ್ನು ಮುಟ್ಟಿ ನಮಸ್ಕರಿಸುತ್ತಿದ್ದರು. 'ಲಾತ್', 'ಮನಾತ್', 'ಉಝ್ಝಾ' ಎಂಬ ಹೆಸರಿನ ವಿಗ್ರಹಗಳೂ ಇದ್ದುವು. ಇವುಗಳನ್ನು ಅವರು ದೇವಪುತ್ರಿಯರೆನ್ನುತ್ತಿದ್ದರು. ಅವು ದೇವಸನ್ನಿಧಿಯಲ್ಲಿ ತಮ್ಮ ಶಿಫಾರಸು ಮಾಡುವವೆಂದು ಅವರು ನಂಬಿದ್ದರು. ಜರ್ಹಮ್ ಗೋತ್ರಜರನ್ನು ಮಕ್ಕಾದಿಂದ ಹೊರಕ್ಕಟ್ಟಿ ಅಲ್ಲಿ ನೆಲೆಯೂರಿದ ಮತ್ತು ಕಅಬಾ ಭವನದ ಧರ್ಮದರ್ಶಿತ್ವವನ್ನು ವಹಿಸಿಕೊಂಡ 'ಖಝಾಅ' ಗೋತ್ರದ ಮೂಲ ಪುರುಷನಾದ ಅಮ್ರ್ ಬಿನ್ ಲಹ್ಯಿ ಮಕ್ಕಾದಲ್ಲಿ ಮೂರ್ತಿ ಪೂಜೆಯ ಜನಕನಾಗಿದ್ದ.

ಆಗ 'ಸಾಯಿಬ', 'ವಸೀಲ', 'ಬಹೀರ' ಮತ್ತು 'ಹಾಮಿಯ' ಎಂಬ ವಿಗ್ರಹಗಳ ನೇಮ ನಡೆಯುತ್ತಿತ್ತು. ಆದರೆ ಈ ಎಲ್ಲ ವಿಗ್ರಹಗಳು ಇದ್ದಾಗ್ಯೂ ಜನರಿಗೆ ಯಾರ ನೆನಪೂ ಬರಲಿಲ್ಲ. ಅಬ್ರಹನ ಸೇನೆಯನ್ನು ಕಂಡೊಡನೆ ಅವರು ಕಅಬಾ ಭವನದ ಪರದೆ ಮತ್ತು

ಅದರ ಬಳೆಗಳನ್ನು ಹಿಡಿದು ಪ್ರಾರ್ಥಿಸತೊಡಗಿದರು. ಅವರಿಗಾಗ 'ಎಲ್ಲ ದೇವರುಗಳ ದೇವನ' ಮಾತ್ರ ನೆನಪಾಯಿತು. ಅವರು ಕಅಬಾದ ಪ್ರಭುವಿಗೆ ಮೊರೆಯಿಟ್ಟರು. ಅಬ್ದುಲ್ ಮುತ್ತಲಿಬ್ ಹೀಗೆ ಪ್ರಾರ್ಥಿಸಿದರು:

"ಓ ಅಲ್ಲಾಹ್! ನಿನ್ನ ದಾಸರು ತಮ್ಮ ಮನೆಗಳನ್ನು ರಕ್ಷಿಸುತ್ತಾರೆ. ನೀನೂ ನಿನ್ನ ಮನೆಯನ್ನು ರಕ್ಷಿಸು. ನಾಳೆ ಅವರ ಶಿಲುಬೆಯಾಗಲಿ, ಉಪಾಯವಾಗಲಿ ನಿನ್ನನ್ನು ಸೋಲಿಸದಿರಲಿ. ನೀನು ಅವರನ್ನೂ ನಮ್ಮ ಗೋತ್ರವನ್ನೂ ನಮ್ಮಿಷ್ಟಕ್ಕೆ ಬಿಡುವುದಾದರೆ ನಿನ್ನಿಷ್ಟ. ಶಿಲುಬೆಯ ವಾಹಕರ ಮತ್ತು ಆರಾಧಕರ ವಿರುದ್ಧ ನಿನ್ನ ಆರಾಧಕರಿಗೆ ನೆರವಾಗು. ನನ್ನ ಪ್ರಭೂ! ನಿನ್ನ ಹೊರತು ಅವರ ವಿರುದ್ಧ ಬೇರಾರ ಸಹಾಯವನ್ನು ನಾನು ನಿರೀಕ್ಷಿಸುವುದಿಲ್ಲ. ನನ್ನ ಪ್ರಭೂ! ನಿನ್ನ ಪವಿತ್ರ ಭವನವನ್ನು ರಕ್ಷಿಸು. ಈ ಭವನದ ಶತ್ರು ನಿನ್ನ ಶತ್ರುವಾಗಿರುವನು. ನಿನ್ನ ನಗರವನ್ನು ನಾಶಮಾಡುವುದರಿಂದ ಅವರನ್ನು ತಡೆ."

ಈ ರೀತಿ ಪ್ರಾರ್ಥಿಸಿದ ಬಳಿಕ ಅಬ್ದುಲ್ ಮುತ್ತಲಿಬ್ ಮತ್ತವರ ಸಂಗಾತಿಗಳು ಬೆಟ್ಟಗಳಲ್ಲಿ ಅಡಗಿಕೊಳ್ಳುತ್ತಾರೆ.

ಮರುದಿನ ಅಬ್ರಹ ಮೇಮಥ್ ಆನೆಯ ಮೇಲೆ ಸವಾರನಾಗಿ ತನ್ನ 60 ಸಾವಿರ ಸೇನೆಯ ದಂಡಿನೊಂದಿಗೆ ಮಕ್ಕಾದ ಕಡೆಗೆ ಹೊರಟನು. ಕಅಬಾದ ರಕ್ಷಣೆ ಮಾಡಲು ಅಲ್ಲಿ ಯಾವ ನರಪಿಳ್ಳೆಯೂ ಇರಲಿಲ್ಲ. ನಗರವು ಪೂರ್ಣವಾಗಿ ನಿರ್ಜನವಾಗಿದೆ. ಅಬ್ರಹನ ಸೇನೆಯು ಬಹಳ ಠೀವಿಯಿಂದ ಮುಂದುವರಿಯುತ್ತಿದೆ.

ಅಬ್ರಹನ ಆನೆಯು ಒಂದೆಡೆ ತಲುಪಿದಾಗ ಒಮ್ಮೆಲೇ ಮುಗ್ಗರಿಸಿ ಬಿಟ್ಟಿತು. ಅಂಕುಶದಿಂದ ಅದಕ್ಕೆ ಹೊಡೆಯಲಾಯಿತು. ಬಾಣಗಳಿಂದ ಚುಚ್ಚಲಾಯಿತು. ಅದು ಗಾಯಗೊಂಡು ರಕ್ತ ಹರಿಯಲಾರಂಭಿಸುತ್ತದೆ. ಆದರೆ ಕಅಬಾ ಭವನದ ಕಡೆಗೆ ಅದು ಒಂದು ಹೆಜ್ಜೆಯನ್ನೂ ಮುಂದಿಡುವುದಿಲ್ಲ. ಅತ್ತಿತ್ತ ತಿರುಗಿಸಿದಾಗ ಓಡ ತೊಡಗುತ್ತದೆ. ಕಅಬಾದ ದಿಕ್ಕಿಗೆ ಮಾತ್ರ ಒಂದಂಗುಲ ಮುಂದೆ ಸಾಗುವುದಿಲ್ಲ. ಕಅಬಾದ ಘನತೆ ಗೌರವಗಳನ್ನು ಮಾನವನು ಅರಿಯದಿದ್ದರೂ ಆನೆ ಅರಿಯುತ್ತದೆ. ಮನುಷ್ಯನು ತನ್ನ ಸೃಷ್ಟಿಕರ್ತ ಪ್ರಭುವಿನ ವಿದ್ರೋಹಿಯಾಗಬಲ್ಲ, ಆದರೆ ಆನೆಗೆ ಆ ಧೈರ್ಯ ಇಲ್ಲ. ಅದು ಎಷ್ಟು ಪೆಟ್ಟು ತಿಂದರೂ ತನ್ನ ಸ್ಥಾನದಿಂದ ಕದಲುವುದಿಲ್ಲ. ಆ ಮೂಕ ಪ್ರಾಣಿಯು ತನ್ನ ಅಸಹಾಯಕತೆಯನ್ನು ಕೃತಿಯಲ್ಲಿ ತೋರಿಸಿ ಕೊಡುತ್ತಿದೆ. "ನಾನಿಷ್ಟು ಬಲಶಾಲಿಯಾಗಿಯೂ ಕಅಬಾ ಭವನದ ಧ್ವಂಸಕ್ಕಾಗಿ ಮುಂದುವರಿಯುವ ಶಕ್ತಿ ನನ್ನಲ್ಲಿಲ್ಲ. ಹೀಗಿರುತ್ತಾ ನಿಮ್ಮಿಂದ ಕಅಬಾ ಭವನದ ವಿನಾಶ ಸಾಧ್ಯವೇ? ಖಂಡಿತ ಇಲ್ಲ, ನನ್ನ ಅಸಹಾಯಕತೆಯನ್ನು ಕಂಡು ಪಾಠ ಕಲಿಯಿರಿ. ಮರಳಿ ಹೊರಟು ಹೋಗಿರಿ. ನಾನು ಕಾಣುತ್ತಿರುವುದನ್ನು ನೀವು ನೋಡುತ್ತಿಲ್ಲ. ನಾನು ಅದನ್ನು ನಿಮಗೆ ತೋರಿಸಿಕೊಡುವ ಸ್ಥಿತಿಯಲ್ಲೂ ಇಲ್ಲ." ಆದರೆ ಅಬ್ರಹ ಮತ್ತು ಅವನ ಸೇನೆ ಮಕ್ಕಾ ಪಟ್ಟಣವು ಸಂಪೂರ್ಣ ನಿರ್ಜನವಾಗಿರುವುದನ್ನು ಕಂಡು ಆನೆಗೆ ಮತ್ತೆ ಮತ್ತೆ ಹೊಡೆಯುತ್ತಾರೆ. ಅದು ಜೋರಾಗಿ ಘೀಳಿಡುತ್ತದೆಯೇ ಹೊರತು ಮುಂದೆ ಸಾಗುವುದಿಲ್ಲ.

ಅಷ್ಟರಲ್ಲಿ ಆಕಾಶದಲ್ಲಿ ಪಕ್ಷಿಗಳ ಹಿಂಡು ಹಿಂಡೇ ಪ್ರತ್ಯಕ್ಷವಾಗುತ್ತದೆ. ಪ್ರತಿಯೊಂದು ಪಕ್ಷಿಯ ಕೊಕ್ಕಿನಲ್ಲೂ ಕಾಲಿನಲ್ಲೂ ಒಂದೊಂದು ಹರಳು ಕಲ್ಲು. ರೆಪ್ಪೆ ಬಡಿಯುವುದ ರೊಳಗೆ ಅವು ಅಬ್ರಹನ ಸೇನೆಯ ಮೇಲೆ ಹರಳು ಕಲ್ಲಿನ ಮಳೆಗರೆಯುತ್ತವೆ. ಈ ಹರಳು ಕಲ್ಲುಗಳು ದೇವಶಾಪದ ಬಾಣದಂತಿದ್ದುವು. ಅದು ಯಾರ ಮೇಲೆ ಬಿತ್ತೋ ಅವನ ಶರೀರವು ಕರಗಲಾರಂಭಿಸುತ್ತದೆ. ಅವನು ವಿಲವಿಲನೆ ಒದ್ದಾಡಿ ಸಾಯುತ್ತಾನೆ. ಅಬ್ರಹನ ದೇಹವು ಚೂರು ಚೂರಾಗಿ ನೆಲಕ್ಕುರುಳುತ್ತದೆ. ಪ್ರತಿಯೊಂದು ಚೂರು ಬಿದ್ದಲ್ಲಿಯೂ ರಕ್ತ ಮತ್ತು ಕೀವು ಹರಿಯ ತೊಡಗುತ್ತದೆ. ಸೇನೆಯು ಕಕ್ಕಾಬಿಕ್ಕಿಯಾಗಿ ಯಮನ್‌ನ ಕಡೆಗೆ ಪಲಾಯನ ಆರಂಭಿಸುತ್ತದೆ. ಈ ನೂಕು ನುಗ್ಗಲಿನಲ್ಲಿ ಅಲ್ಲಲ್ಲಿ ಸೈನಿಕರು ಬಿದ್ದು ಚಡಪಡಿಸುತ್ತಾ ಸಾವನ್ನಪ್ಪುತ್ತಾರೆ. ಬೆಟ್ಟದ ಸಾಲುಗಳಲ್ಲಿ ಆಶ್ರಯ ಪಡೆದಿರುವ ಕುರೈಶರು ಅವರ ಈ ಅವಸ್ಥೆಯನ್ನು ಕಂಡು ಕಅಬಾದ ಒಡೆಯನ ಶಕ್ತಿ ಸಾಮರ್ಥ್ಯವನ್ನೂ ಮಹಾನತೆಯನ್ನೂ ಕೊಂಡಾಡುತ್ತಾರೆ. ಅಬೂ ಕೈಸ್ ಬಿನ್ ಅಸ್ಲತ್ ಕುರೈಶರನ್ನುದ್ದೇಶಿಸಿ ಹೀಗೆ ಹೇಳುತ್ತಾನೆ:

"ಏಳಿರಿ! ನಿಮ್ಮ ಪ್ರಭುವಿನ ಆರಾಧನೆ ಮಾಡಿರಿ. ಮಕ್ಕಾ ಮತ್ತು ಮಿನಾದ ಬೆಟ್ಟಗಳ ನಡುವೆ ಅಲ್ಲಾಹನ ಭವನದ ಮೂಲೆಗಳನ್ನು ಸ್ಪರ್ಶಿಸಿರಿ. ವಿಶ್ವಸಿಂಹಾಸನದ ಒಡೆಯನ ಸಹಾಯ ಬಂದೊದಗಿದಾಗ ಅವನು ಅರಸನ ಸೇನೆಯನ್ನು ಹಿಮ್ಮೆಟ್ಟಿಸಿದನು. ಕೆಲವರು ಮಣ್ಣು ಮುಕ್ಕಿದರು. ಇನ್ನು ಕೆಲವರು ಕಲ್ಲೇಟಿನಿಂದ ಕೊಲ್ಲಲ್ಪಟ್ಟರು."

ಈ ಘಟನೆ ನಡೆದ ವರ್ಷವು 'ಆನೆಗಳ ವರ್ಷ' ಎಂಬ ಹೆಸರಲ್ಲಿ ಇತಿಹಾಸ ಪ್ರಸಿದ್ಧವಾಗಿದೆ. ಇದರ ಪ್ರಸ್ತಾಪವು ಪವಿತ್ರ ಕುರ್‌ಆನಿನ 'ಅಲ್ ಫೀಲ್' ಎಂಬ ಅಧ್ಯಾಯದಲ್ಲಿದೆ. ಈ ಘಟನೆಯಿಂದಾಗಿ ಮುಂದಿನ ಅನೇಕ ವರ್ಷಗಳ ತನಕ ಅವರು ಸೃಷ್ಟಿಕರ್ತನಾದ ಅಲ್ಲಾಹನ ಆರಾಧನೆಯನ್ನು ಮಾತ್ರ ಮಾಡುತ್ತಿದ್ದರು. ಆದರೆ ಕ್ರಮೇಣ ಅರ್ಚಕರು, ಪುರೋಹಿತರು ಮತ್ತು ಯೋಗಿಗಳು ಅವರನ್ನು ಪುನಃ ದೇವಿ-ದೇವತೆಗಳ ಆಸ್ಥಾನಕ್ಕೆ ಕರೆತಂದರು. ನಿಷ್ಕಳಂಕವಾದ ಏಕದೇವಾರಾಧನೆಯನ್ನು ಬಿಟ್ಟು ಕುರೈಶರು ಪುನಃ ಮೂರ್ತಿ ಪೂಜೆಯನ್ನು ಆರಂಭಿಸಿದರು.

ಅಧ್ಯಾಯ - ೨

# ಜನನ ಮತ್ತು ಬಾಲ್ಯ

## ಮುಹಮ್ಮದ್‌ರ(ಸ) ಜನನ

ಇದು ಆನೆಗಳ ವರ್ಷ. ಅಬ್ರಹನ ನಾಶಕ್ಕೆ ಕೇವಲ 50 ದಿನಗಳು ಸಂದಿವೆ. ಈಗಲೂ ಜನರು ಆ ಮಹಾ ವಿನಾಶದ ಕುರಿತು ಚರ್ಚಿಸುತ್ತಲೇ ಇದ್ದಾರೆ. ವಸಂತ ಋತು ತುಂಬು ಯೌವನದಲ್ಲಿದೆ. ವನಸಿರಿಯು ಸಸ್ಯ ಶ್ಯಾಮಲವಾಗಿದೆ. ತರತರದ ಹೂಗಳು ಅರಳಿ ಕಂಪನ್ನು ಹರಡುತ್ತಿವೆ. ತಂಗಾಳಿ ಬೀಸುತ್ತಿದೆ. ಮಕ್ಕಾ ಕಣಿವೆಯು ವಸಂತದ ಸವಿ ಅನುಭವಿಸುತ್ತಿದೆ.

ಇಂದು ಸೋಮವಾರ. ರಬೀಉಲ್ ಅವ್ವಲ್ ತಿಂಗಳ ಒಂಬತ್ತನೆಯ ದಿನಾಂಕ.* ಪೂರ್ವಾಹ್ನದ ಸಮಯ. ಮಕ್ಕಾದ ಸರದಾರ ಅಬ್ದುಲ್ ಮುತ್ತಲಿಬ್ ಕಅಬಾದ ತವಾಫ್ (ಪ್ರದಕ್ಷಿಣೆ) ಮಾಡುತ್ತಿದ್ದಾರೆ. ಪ್ರದಕ್ಷಿಣೆಯಲ್ಲಿ ಭಾವಪರವಶರಾಗಿ ಮುಳುಗಿರುವಾಗ ಅಕಸ್ಮಾತ್ ಅವರ ದೃಷ್ಟಿ ಹರಮ್‌ನ ಬಾಗಿಲ ಮೇಲೆ ಬೀಳುತ್ತದೆ. ಅವರ ದಿವಂಗತ ಪುತ್ರ ಅಬ್ದುಲ್ಲಾರ ದಾಸಿ ಬರ್ಕ ಓಡೋಡಿ ಬರುತ್ತಿದ್ದಾಳೆ. ಆಕೆ ಹತ್ತಿರ ಬಂದಳು. ಏದುಸಿರು ಬಿಡುತ್ತಾ ಇದ್ದಾಳೆ. ಮುಖ ಅರಳಿದೆ. ಏನು ಸಮಾಚಾರವೆಂದು ಅಬ್ದುಲ್ ಮುತ್ತಲಿಬ್ ಆಕೆಯಲ್ಲಿ ವಿಚಾರಿಸುವುದಕ್ಕೆ ಆಸ್ಪದ ಕೊಡದೆಯೇ ಈ ರೀತಿ ಹೇಳುತ್ತಾಳೆ:

"ಸರದಾರರೇ, ಶುಭವಾಗಲಿ. ಅಮ್ಮಾ ಅವರಿಗೆ ಚಂದ್ರನಂತಹ ಮಗು ಹುಟ್ಟಿದೆ. ಅತ್ಯಂತ ಸುಂದರ ಪುತ್ರ."

ಒಂದೇ ಉಸಿರಲ್ಲಿ ಆಕೆ ಇದೆಲ್ಲವನ್ನೂ ಹೇಳಿ ಮುಗಿಸುತ್ತಾಳೆ. ಆನಂದಾತಿರೇಕದಿಂದ ಆಕೆಯ ಕಾಲುಗಳು ನೆಲದ ಮೇಲೆ ನಿಲ್ಲಲೊಲ್ಲದು. ಆಕೆ ಪ್ರತಿಕ್ರಿಯೆಗೆ ಕಾಯದೆ ಮುಂದುವರಿಸುತ್ತಾಳೆ:

"ಸರದಾರರೇ, ಅಮ್ಮ ತಮ್ಮನ್ನು ಕರೆಯುತ್ತಿದ್ದಾರೆ. ಬೇಗ ಬನ್ನಿ, ನಾನು ಹೊರಟೆ. ಓಹೋ! ಮಗು ಎಷ್ಟು ಸುಂದರ. ಚಂದ್ರನಂತಹ ಮುಖ, ಕಾಡಿಗೆಯಂತಹ ಕಣ್ಣುಗಳು, ಅತ್ಯಂತ ಪರಿಶುದ್ಧ ದೇಹ. ಸರದಾರರೇ, ದೇಹದಿಂದ ಸುಗಂಧ ಸೂಸುತ್ತಿದೆ. ಅಮ್ಮನವರ ಕೋಣೆಯಿಡೀ ಪರಿಮಳ ಭರಿತವಾಗಿದೆ."

ಇಷ್ಟು ಹೇಳಿ ಆಕೆ ಓಡಿ ಹೋಗುತ್ತಾಳೆ. ವೃದ್ಧ ಅಬ್ದುಲ್ ಮುತ್ತಲಿಬ್‌ರಿಗೆ ಸಂತೋಷದಿಂದ ಉಸಿರಾಡುವುದು ಕೂಡಾ ಕಷ್ಟವೆನಿಸುತ್ತದೆ. ಕಣ್ಣುಗಳಿಂದ ಆನಂದ

ಬಾಷ್ಪಗಳು ಹರಿಯಲಾರಂಭಿಸುತ್ತವೆ. ಅವರು ತಮಗರಿವಿಲ್ಲದೆಯೇ ಮುಂದುವರಿದು ಕಅಬಾದ ಪರದೆಯನ್ನು ಅಪ್ಪಿ ಹಿಡಿದು ಜೋರಾಗಿ ಪ್ರಾರ್ಥಿಸುತ್ತಾರೆ:

"ಓ ಅಲ್ಲಾಹ್! ನಿನಗೆ ಕೃತಜ್ಞತೆ ಸಲ್ಲಿಸಲು ನನಗೆ ಮಾತೇ ಹೊರಡುತ್ತಿಲ್ಲ. ನೀನು ಅಬ್ದುಲ್ಲಾನ ಮನೆಯ ಜ್ಯೋತಿ ಬೆಳಗಿಸಿದೆ. ಆಮಿನಾಳಿಗೆ ಪುತ್ರನನ್ನು ದಯಪಾಲಿಸಿದೆ. ನನಗೆ ವೃದ್ಧಾಪ್ಯದ ಆಸರೆಯನ್ನು ನೀಡಿದೆ. ಓ ಅಲ್ಲಾಹ್! ಅದನ್ನು ಸಂರಕ್ಷಿಸು."

ಸ್ವಲ್ಪ ಸಮಯ ಪ್ರಾರ್ಥನಾ ಮಗ್ನರಾಗಿದ್ದ ಬಳಿಕ ಬೇಗ ಬೇಗನೇ ಆಮಿನಾರ ಮನೆಯತ್ತ ಧಾವಿಸುತ್ತಾರೆ. ಮನೆಗೆ ಪ್ರವೇಶಿಸುತ್ತಲೇ ಅಪೂರ್ವ ಸುಗಂಧವು ಅವರನ್ನು ಸ್ವಾಗತಿಸುತ್ತದೆ. ಅಬ್ದುಲ್ ಮುತ್ತಲಿಬ್ ಆಮಿನಾರವರ ಮಲಗುವ ಕೋಣೆಯ ಹೊರಗೆ ನಿಂತು ಬಿಡುತ್ತಾರೆ. ಸುದ್ದಿ ತಿಳಿದೊಡನೆ ಬರ್ಕ ಬಂದು ಆಮಿನಾರ ಶುಭಾಶಯ ತಿಳಿಸುತ್ತಾಳೆ. ಜೊತೆಗೆ ಒಳಗೆ ಬರಲು ಕೋರುತ್ತಾಳೆ. ಕೋಣೆಗೆ ಪ್ರವೇಶಿಸುತ್ತಲೇ ಪ್ರಸನ್ನ ವದನೆಯೂ ಪೂರ್ಣ ಆರೋಗ್ಯವಂತಳೂ ಆದ ಆಮಿನಾಳ ದರ್ಶನವಾಗುತ್ತದೆ. ಅಬ್ದುಲ್ ಮುತ್ತಲಿಬ್ ಮಗುವನ್ನು ಎತ್ತಿಕೊಂಡು ನೋಡುತ್ತಾರೆ. ಅತ್ಯಂತ ಸುಂದರ ಮುಖ. ಕಾಡಿಗೆ ಬಣ್ಣದ ಕಣ್ಣುಗಳು. ಕಾಂತಿಯುತ ಹಣೆ ಹಾಗೂ ಸುಗಂಧಭರಿತ ದೇಹವನ್ನು ಕಂಡು ಆನಂದ ತುಂದಿಲರಾಗುತ್ತಾರೆ. ಪ್ರೀತಿಯಿಂದ ಮುದ್ದಿಸುತ್ತಾರೆ. ಮಗುವನ್ನು ಎದೆಗವಚಿ ಹಿಡಿದು ಕಅಬಾ ಭವನಕ್ಕೆ ತರುತ್ತಾರೆ. ಸ್ವಲ್ಪ ಹೊತ್ತು ಅಲ್ಲಿ ಪ್ರಾರ್ಥಿಸಿದ ಬಳಿಕ ಮರಳುತ್ತಾರೆ. ಹಾಶಿಮ್ ಮನೆತನದಲ್ಲಿ ಅಬ್ದುಲ್ಲಾರ ಅನಾಥ ಪುತ್ರನ ಜನನದ ಬಗ್ಗೆ ಸಂತೋಷದ ಹೊಳೆಯೇ ಹರಿಯುತ್ತದೆ.

ಅಬ್ದುಲ್ ಮುತ್ತಲಿಬರಿಗೆ ಎಲ್ಲ ಕಡೆಗಳಿಂದ ಹಲವು ಶುಭಾಶಯ ಸಂದೇಶಗಳು ಲಭಿಸುತ್ತವೆ. ಮಗು ಹುಟ್ಟಿದ ಏಳನೆಯ ದಿನ ಅವರು ಕುರ್ಬಾನಿ (ಬಲಿದಾನ) ನೀಡುತ್ತಾರೆ. ಕುರೈಶರಿಗೆ ಔತಣ ಕೂಟ ಏರ್ಪಡಿಸುತ್ತಾರೆ. ಪ್ರಚಲಿತ ಸಂಪ್ರದಾಯದಂತೆ ಜನನದ ಸಂತೋಷವನ್ನು ಅದ್ದೂರಿಯಿಂದ ಆಚರಿಸಲಾಗುತ್ತದೆ. ಔತಣ ಮುಗಿಸಿ ಒಬ್ಬ ಅತಿಥಿ ಪ್ರಶ್ನಿಸುತ್ತಾನೆ:

"ಸರದಾರರೇ! ತಾವು ತಮ್ಮ ಪೌತ್ರನಿಗೆ ಏನು ಹೆಸರಿಟ್ಟಿರಿ?"

ಅಬ್ದುಲ್ ಮುತ್ತಲಿಬ್ "ಮುಹಮ್ಮದ್" ಎನ್ನುತ್ತಾರೆ. ಜನರು ಈ ಹೆಸರು ಕೇಳಿ ಆಶ್ಚರ್ಯ ಪಡುತ್ತಾರೆ. ಒಬ್ಬನು ಹೀಗೆನ್ನುತ್ತಾನೆ:

"ಬಹಳ ವಿಚಿತ್ರ ಹಾಗೂ ಅಪೂರ್ವ ಹೆಸರು" ಇನ್ನೊಬ್ಬನೂ ಅವನೊಂದಿಗೆ ಧ್ವನಿಗೂಡಿಸುತ್ತಾನೆ. ಅಷ್ಟರಲ್ಲಿ ಒಬ್ಬನು,

"ಸರದಾರರೇ, ತಮ್ಮ ಮನೆತನದಲ್ಲಿ ರೂಢಿಯಲ್ಲಿರುವ ಹೆಸರುಗಳನ್ನು ಬಿಟ್ಟು ಈ ಹೆಸರನ್ನು ಏಕೆ ಆರಿಸಿದಿರಿ?"

ಅಬ್ದುಲ್ ಮುತ್ತಲಿಬ್: "ನನ್ನ ಮಗು ಜಗತ್ತಿನಲ್ಲಿ ಎಲ್ಲರ ಪ್ರಶಂಸೆಗೆ ಪಾತ್ರವಾಗ ಬೇಕೆಂಬುದೇ ನನ್ನ ಬಯಕೆ. ಆಕಾಶಗಳಲ್ಲೂ ಭೂಮಿಯಲ್ಲೂ ಅದರ ಗುಣಗಾನವಾಗಬೇಕು. ಸೃಷ್ಟಿಕರ್ತನಿಗೂ ಸೃಷ್ಟಿಗಳಿಗೂ ಅದು ಪ್ರಿಯವಾಗಬೇಕು."

## ಹಲೀಮಾ ಸಅದಿಯ್ಯ

ಸಅದ್ ಗೋತ್ರದ ಒಂದು ಯಾತ್ರಾ ತಂಡವು ಮಕ್ಕಾ ಪ್ರವೇಶಿಸುತ್ತದೆ. ತಂಡದಲ್ಲಿ ಪುರುಷರಿಗಿಂತ ಸ್ತ್ರೀಯರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಅವರು ಮಕ್ಕಾದ ಶ್ರೀಮಂತ ಕುಟುಂಬ ಗಳ ಹಸುಗೂಸುಗಳನ್ನು ಹಾಲುಣಿಸುವುದಕ್ಕಾಗಿ ಸ್ವೀಕರಿಸಿ ತಮ್ಮ ಊರಿಗೆ ಒಯ್ಯುತ್ತಿದ್ದರು. ಹಾಲುಣ್ಣುವ ಕಾಲ ಕಳೆದ ಬಳಿಕ ಅವುಗಳನ್ನು ತಂದೆ-ತಾಯಿಗಳಿಗೆ ತಂದೊಪ್ಪಿಸುತ್ತಿದ್ದರು. ಇದಕ್ಕೆ ಅವರಿಗೆ ಸಾಕಷ್ಟು ಸಂಭಾವನೆ ಸಿಗುತ್ತಿತ್ತು. ಇದುವೇ ಅವರ ಉಪಜೀವನ ಮಾರ್ಗವಾಗಿತ್ತು.

ಹಳ್ಳಿಯ ಪ್ರಾಕೃತಿಕ ವಾತಾವರಣದಲ್ಲಿ ಶುದ್ಧ ಗಾಳಿ-ನೀರು ಮತ್ತು ಆಹಾರ ಸೇವಿಸಿ ಆ ಹಸುಗೂಸುಗಳು ಚೆನ್ನಾಗಿ ಬೆಳೆಯುತ್ತಿದ್ದುವು. ಎಲ್ಲರಂತೆ ಆಮಿನಾ ಕೂಡಾ ತನ್ನ ಕರುಳ ಕುಡಿಯನ್ನು ಹಾಲುಣಿಸಲಿಕ್ಕಾಗಿ ಓರ್ವ ಮಹಿಳೆಗೆ ಒಪ್ಪಿಸು ತ್ತಾರೆ. ಆಮಿನಾ ಆರ್ಥಿಕವಾಗಿ ಹೆಚ್ಚು ಸ್ಥಿತಿವಂತರಾಗಿರಲಿಲ್ಲ. ಅಬ್ದುಲ್ಲಾ ಬಿಟ್ಟ ಗಲಿದ ಸೊತ್ತು ಕೇವಲ ಎರಡು ಒಂಟೆ ಮತ್ತು ಓರ್ವ ದಾಸಿಯಾಗಿತ್ತು. ವಿಧವೆ ತಾಯಿಯ ಅನಾಥ ಶಿಶುವನ್ನು ಕರೆದೊಯ್ಯಲು ಯಾವ ಸ್ತ್ರೀಯೂ ಸಿದ್ಧವಿರಲಿಲ್ಲ. ಅಂತಹ ಸಂದರ್ಭದಲ್ಲಿ ಬಿಳಿ ಕತ್ತೆಯ ಮೇಲೆ ಸವಾರಿಯಾಗಿ ಬಂದ ಸಅದ್ ಗೋತ್ರದ ಹಲೀಮಾ ಯಾತ್ರಾ ತಂಡಕ್ಕಿಂತ ಸ್ವಲ್ಪ ನಂತರ ಬಂದು ನಗರ ಪ್ರವೇಶಿಸುತ್ತಾರೆ. ಮುಹಮ್ಮದ್‌ರಿಗೆ(ಸ) ಸ್ತನಪಾನ ಮಾಡಿಸುವ ಸೌಭಾಗ್ಯ ಅವರ ಪಾಲಿಗೆ ಸಿಗುತ್ತದೆ.

ಸಅದ್ ಗೋತ್ರದ ಡೇರೆಗಳಲ್ಲಿ ಮುಹಮ್ಮದ್(ಸ) ಬೆಳೆಯುತ್ತಾರೆ. ಎರಡು ವರ್ಷ ಪೂರ್ತಿಯಾದಾಗ ಮೊಲೆಹಾಲು ತೊರೆಯುತ್ತಾರೆ. ಹಲೀಮಾರನ್ನು ಅಮ್ಮಾ ಎಂದೂ ಅವರ ಪತಿ ಹಾರಿಸ್‌ರನ್ನು ಅಪ್ಪಾ ಎಂದೂ ಕರೆಯುತ್ತಾರೆ. ಹಾರಿಸ್‌ರ ಹೆಗಲ ಮೇಲೇರಿ ಆಡಿ ನಲಿಯುತ್ತಾರೆ. ಸ್ತನಪಾನ ಸಂಬಂಧದ ಸೋದರಿ ಶೀಮಾ ಮತ್ತು ಸೋದರ ಅಬ್ದುಲ್ಲಾರ ಜೊತೆ ಆಟೋಟಗಳಲ್ಲಿ ದಿನ ಕಳೆಯುತ್ತದೆ. ಸಅದ್ ಗೋತ್ರದವರು ಅರಬಿ ಭಾಷೆಯನ್ನು ಅತ್ಯಂತ ಸುಂದರ ಶೈಲಿಯಲ್ಲಿ ಆಡುತ್ತಿದ್ದರು. ಮುಹಮ್ಮದ್(ಸ) ಅದೇ ಭಾಷೆಯನ್ನು ಆಡತೊಡಗುತ್ತಾರೆ. ಆರೋಗ್ಯ ಪೂರ್ಣವಾದ ಗ್ರಾಮೀಣ ಪರಿಸರದಲ್ಲಿ ಅವರು ದಷ್ಟ-ಪುಷ್ಟವಾಗಿ ಬೆಳೆಯುತ್ತಾರೆ.

ಸ್ತನಪಾನದ ಅವಧಿ ಕಳೆದ ಬಳಿಕ ಹಲೀಮಾ ಮಗುವನ್ನು ಮಕ್ಕಾಕ್ಕೆ ತರುತ್ತಾರೆ. ಆದರೆ ಅಲ್ಲಿ ಸಾಂಕ್ರಾಮಿಕ ರೋಗವಿದ್ದುದರಿಂದ ಆಮಿನಾರ ಅನುಮತಿ ಪಡೆದು ಮರಳಿ ತನ್ನ ಊರಿಗೇ ಕರೆದೊಯ್ಯುತ್ತಾರೆ. ತನ್ಮೂಲಕ ಮುಹಮ್ಮದ್‌ರಿಗೆ(ಸ) ಇನ್ನೂ ಕೆಲವು ತಿಂಗಳ ಕಾಲ ಹಳ್ಳಿಯ ಮರಳುಗಾಡಿನ ಶುದ್ಧ ವಾತಾವರಣದಲ್ಲಿ ಕಳೆಯುವ ಅವಕಾಶ ಲಭಿಸುತ್ತದೆ.

## ಆಮಿನಾರ ನಿಧನ

ಅಬ್ದುಲ್ಲಾರ ವಿರಹದ ನೋವು ಆಮಿನಾರನ್ನು ಇನ್ನೂ ಬಿಟ್ಟಗಲಿಲ್ಲ. ಸದಾ ಅವರ ನೆನೆಪಿನಲ್ಲೇ ದುಃಖಿತರಾಗಿರುತ್ತಾರೆ. ಮುಹಮ್ಮದ್‌ರ(ಸ) ಮುಗ್ಧ ತುಂಟಾಟಗಳನ್ನು ಕಂಡು

ಸ್ವಲ್ಪ ಸಮಯ ಸಂತೋಷವಾದರೂ ಅಬ್ದುಲ್ಲಾರ ಗಂಭೀರ ನಗುಮುಖ ಮತ್ತೆ ಅವರ ಕಣ್ಣಿಗೆ ಕಟ್ಟಿದಂತಾಗುತ್ತದೆ. ಅದೇ ಬೇಸರ ಮತ್ತು ನೀರವತೆಯಲ್ಲಿ ಮತ್ತೆ ಮುಳುಗಿ ಬಿಡುತ್ತಾರೆ. ದಾಸಿ ಬರ್ಕ ಅವರನ್ನು ಸಂತೋಷಪಡಿಸಲು ಎಷ್ಟೇ ಪ್ರಯತ್ನಿಸಿದರೂ ಸಫಲರಾಗುವುದಿಲ್ಲ.

ಒಮ್ಮೆ ಪತಿಯ ಸಮಾಧಿಯನ್ನಾದರೂ ಸಂದರ್ಶಿಸಬೇಕೆಂಬ ಬಯಕೆ ಅವರಲ್ಲಿ ಮೂಡುತ್ತದೆ. ದಾಸಿ ಬರ್ಕ ಮತ್ತು ಪುತ್ರ ಮುಹಮ್ಮದ್‌ರ(ಸ) ಜೊತೆ ಮದೀನಾದ ಕಡೆಗೆ ಪ್ರಯಾಣ ಬೆಳೆಸುತ್ತಾರೆ. ಅಲ್ಲಿ ಅಬ್ದುಲ್ ಮುತ್ತಲಿಬರ ತಾಯಿಯ ಮನೆಯಲ್ಲಿ ವಾಸಿಸುತ್ತಾರೆ. ಪತಿಯ ಗೋರಿ ದರ್ಶನವು ಅವರ ವಿರಹ ವೇದನೆಯನ್ನು ಇನ್ನಷ್ಟು ತೀವ್ರಗೊಳಿಸುತ್ತದೆ. ಅವರ ನಾಲಗೆ ಮೌನ ತಾಳುತ್ತದೆ. ಕಣ್ಣುಗಳು ಬತ್ತಿ ಹೋಗುತ್ತವೆ. ಮನಸ್ಸು ಮಾತ್ರ ಸದಾ ರೋದಿಸುತ್ತಿರುತ್ತದೆ.

ಒಂದು ತಿಂಗಳ ತನಕ ಅಲ್ಲೇ ಬೀಡು ಬಿಟ್ಟಿರುತ್ತಾರೆ. ಗಂಟೆಗಟ್ಟಲೆ ಅಬ್ದುಲ್ಲಾರ ಸಮಾಧಿಯನ್ನೇ ನೋಡುತ್ತಿರುತ್ತಾರೆ. ಅವರ ಈ ಸ್ಥಿತಿಯನ್ನು ಕಂಡು ಅಬ್ದುಲ್ ಮುತ್ತಲಿಬರ ಬಂಧುಗಳು ಚಿಂತಿತರಾಗುತ್ತಾರೆ. ಅವರಿಗೆ ಮಾಟಬಾಧೆಯಾಗಿದೆಯೆಂದು ಭಾವಿಸಿ ಚಿಕಿತ್ಸೆಗೆ ಸಜ್ಜಾಗುತ್ತಾರೆ. ಆದರೆ ಅವರು ಪತಿಯ ನಿಧನದ ಬಳಿಕ ಹೀಗಾಗಿರುವರೇ ಹೊರತು ಅವರಿಗೆ ಯಾವ ಕಾಯಿಲೆಯೂ ಇಲ್ಲ ಎಂದು ಬರ್ಕ ತಿಳಿಸುತ್ತಾರೆ.

ಆ ತನಕ ಹಾರಿಸರನ್ನೇ ತಂದೆಯೆಂದು ಭಾವಿಸಿದ್ದ ಮುಹಮ್ಮದ್‌ರಿಗೂ(ಸ) ತಂದೆಯ ಗೋರಿಯನ್ನು ಕಂಡು ದುಃಖವಾಗುತ್ತದೆ. ತಾಯಿಯ ದುಃಖವು ಅವರನ್ನು ಇನ್ನಷ್ಟು ಖಿನ್ನರಾಗಿಸುತ್ತದೆ. ಬರ್ಕ ಮುಹಮ್ಮದ್‌ರನ್ನು(ಸ) ಈ ನೀರಸ ವಾತಾವರಣ ದಿಂದ ದೂರ ಒಯ್ಯುತ್ತಾರೆ. ನಜ್ಜಾರ್ ಗೋತ್ರದ ಅನೀಸಾ ಎಂಬ ಬಾಲಕಿಯೊಂದಿಗೆ ಆಟವಾಡಲು ಬಿಡುತ್ತಾರೆ. ಸಮವಯಸ್ಕ ಬಾಲಕಿ ಅನೀಸಾರೊಂದಿಗೆ ಖರ್ಜೂರದ ತೋಟಗಳಲ್ಲಿ ಆಡುತ್ತಾ-ನಲಿಯುತ್ತಾ ಮುಹಮ್ಮದ್‌ರು(ಸ) ಕಾಲ ಕಳೆಯುತ್ತಾರೆ. ಒಂದು ತಿಂಗಳ ಬಳಿಕ ಆಮಿನಾ, ಮುಹಮ್ಮದ್(ಸ) ಮತ್ತು ಬರ್ಕ ಮಕ್ಕಾದ ಕಡೆಗೆ ಮರು ಪ್ರಯಾಣ ಹೊರಡುತ್ತಾರೆ. ಅಬ್ವಾ ತಲುಪಿದಾಗ ಆಮಿನಾ ರೋಗಗ್ರಸ್ತ ರಾಗುತ್ತಾರೆ. ಅಲ್ಲೇ ಮರಣ ಸಂಕಟ ಬಂದು ಕೊನೆಯುಸಿರೆಳೆಯುತ್ತಾರೆ. ಬರ್ಕ ಜೋರಾಗಿ ರೋದಿಸಲಾರಂಭಿಸುತ್ತಾರೆ. ಮುಹಮ್ಮದ್(ಸ) ತಾಯಿಯ ಮೃತದೇಹವನ್ನು ಅಪ್ಪಿ ಹಿಡಿದು ಬಿಕ್ಕಿ ಬಿಕ್ಕಿ ಅಳುತ್ತಾರೆ. ತಂದೆಯನ್ನು ನೋಡಿಯೂ ಇರಲಿಲ್ಲ. ತಾಯಿಯ ಆಸರೆಯೂ ಕೊನೆಗೊಳ್ಳುತ್ತದೆ. ಊರವರ ನೆರವಿನಿಂದ ಬರ್ಕ ಆಮಿನಾರ ಜಡದೇಹವನ್ನು ಅಲ್ಲೇ ದಫನ ಮಾಡಿ ಮಗುವಿನ ಜೊತೆ ಮಕ್ಕಾಕ್ಕೆ ಮರಳುತ್ತಾರೆ.

## ಅಬ್ದುಲ್ ಮುತ್ತಲಿಬ್‌ರ ನಿಧನ

ತಂದೆ-ತಾಯಿಗಳಿಬ್ಬರನ್ನೂ ಕಳಕೊಂಡ ಮುಹಮ್ಮದ್(ಸ) ಈಗ ತಾತ ಅಬ್ದುಲ್ ಮುತ್ತಲಿಬರ ಪೋಷಣೆಯಲ್ಲಿದ್ದಾರೆ. ತನ್ನ ಮೊಮ್ಮಗನ ಮೇಲೆ ಅವರಿಗೆ ಅತೀವ

ವಾತ್ಸಲ್ಯ. ಅವರು ಕಅಬಾ ಭವನದ ಬಳಿ ತನ್ನ ನಾಯಕತ್ವ ಪೀಠದಲ್ಲಿ ಕುಳಿತು ಕೊಳ್ಳುವಾಗ ಮುಹಮ್ಮದ್‌ರನ್ನೂ(ಸ) ಜೊತೆಗೆ ಕೂರಿಸಿಕೊಳ್ಳುತ್ತಿದ್ದರು. ಪ್ರೀತಿಯಿಂದ ಬೆನ್ನು ತಟ್ಟುತ್ತಿದ್ದರು. ತಾತನ ಈ ವಾತ್ಸಲ್ಯವು ನೋಡುಗರಿಗೆ ಅಸೂಯಾರ್ಹ ವಾಗಿರುತ್ತದೆ. ಆದರೆ ತಾತನ ಮನೆಯಲ್ಲಿ ಮುಹಮ್ಮದ್‌ರಿಗೆ(ಸ) ಅನಾಥ ಪ್ರಜ್ಞೆಯು ತೀವ್ರವಾಗಿ ಬಾಧಿಸುತ್ತಿರುತ್ತದೆ. ಮೊಮ್ಮಗನ ಸುಖ ಸಂತೋಷಕ್ಕಾಗಿ ಸಾಧ್ಯವಿದ್ದು ದೆಲ್ಲವನ್ನೂ ತಾತ ಮಾಡುತ್ತಾರೆ. ಆದರೆ ಅದು ಮಾತೃಪ್ರೇಮದ ಬದಲಿಯಾಗದಷ್ಟೇ!

ಅಬ್ದುಲ್ ಮುತ್ತಲಿಬರಿಗೆ ತನ್ನ ದೊಡ್ಡ ಸಂಸಾರದ ಪಾಲನೆ-ಪೋಷಣೆ, ಕುರೈಶರ ಜಗಳ-ತಂಟೆಗಳ ಇತ್ಯರ್ಥ ಇತ್ಯಾದಿಗಳಿಂದ ಮುಹಮ್ಮದ್‌ರಿಗೆ(ಸ) ಪಿತೃ ವಾತ್ಸಲ್ಯದ ಧಾರೆ ಎರೆಯಲು ಸಾಕಷ್ಟು ಸಮಯಾವಕಾಶವೂ ಲಭಿಸುವುದಿಲ್ಲ. ಆದರೂ ಬಾಲ್ಯದ ಈ ದಿನಗಳಲ್ಲಿ ತಾತನ ಉಪಸ್ಥಿತಿಯು ಅವರ ಮಟ್ಟಿಗೆ ಅತಿ ದೊಡ್ಡ ಆಸರೆಯಾಗಿದೆ. ಮುಹಮ್ಮದ್(ಸ)ರ ಪೋಷಣೆಯಲ್ಲಿ ಎರಡು ವರ್ಷಗಳನ್ನು ಕಳೆಯುತ್ತಾರೆ. ಅವರಿಗೆ 8ವರ್ಷ ಪ್ರಾಯವಾದಾಗ ಅಬ್ದುಲ್ ಮುತ್ತಲಿಬ್ ತಮ್ಮ 82ನೇ ವಯಸ್ಸಿನಲ್ಲಿ ನಿಧನ ರಾಗುತ್ತಾರೆ. ಮುಹಮ್ಮದ್‌ರ(ಸ) ಮೇಲೆ ದುಃಖದ ಪರ್ವತವೇ ಎರಗಿದಂತಾಗುತ್ತದೆ.

ಮುಹಮ್ಮದ್(ಸ) ಜೋರಾಗಿ ಅಳಲಾರಂಭಿಸುತ್ತಾರೆ. ತಾತನ ಪಾರ್ಥಿವ ಶರೀರವನ್ನು ಅಪ್ಪಿ ದೀನವಾಗಿ ರೋದಿಸುತ್ತಾರೆ. ಕಣ್ಣೀರ ಕೋಡಿಯೇ ಹರಿಯುತ್ತದೆ. ತಾಯಿಯ ಮರಣದ ದುಃಖವೇ ಇನ್ನೂ ಪೂರ್ಣವಾಗಿ ಮಾಸಿರಲಿಲ್ಲ. ಅದು ಮತ್ತೆ ಹಚ್ಚ ಹಸುರಾಗುತ್ತದೆ. ಜನರು ಸಾಂತ್ವನ ನೀಡಿದಷ್ಟೂ ದುಃಖ ಉಮ್ಮಳಿಸುತ್ತಿರುತ್ತದೆ. ಶೈಶವದಲ್ಲಿ ತಂದೆ ತಾಯಿಯರ ಅಗಲಿಕೆಯಿಂದ ಇಷ್ಟು ದುಃಖವಾಗಿರಲಿಲ್ಲ. ಬಾಲ್ಯದ ಈ ದುಃಖ ಅವೆರಡನ್ನೂ ಮೀರಿಸಿತ್ತು.

ಮುಂದೆ ಜಗತ್ತಿನ ಅನಾಥರನ್ನು ಸಂರಕ್ಷಿಸಬೇಕಾದವರು ಸ್ವಯಂ ಅನಾಥರಾದರು. ಜನರ ದುಃಖ ಸಂಕಷ್ಟಗಳನ್ನು ನಿವಾರಿಸಬೇಕಾದವರು ಸ್ವಯಂ ದುಃಖ ಸಂಕಷ್ಟಗಳಲ್ಲಿ ಸಿಲುಕಿದರು. ಎಲ್ಲ ಆಶ್ರಯಗಳಿಗಿಂತಲೂ ಹಿರಿಯ ಆಶ್ರಯವಾದ ಅಲ್ಲಾಹನ ಆಶ್ರಯ ದಲ್ಲೇ ಬೆಳೆಯಬೇಕೆಂದು ತಂದೆ-ತಾಯಿ ಮತ್ತು ತಾತನ ಆಶ್ರಯವು ತಪ್ಪಿ ಹೋಯಿತು.

ಅಬ್ದುಲ್ ಮುತ್ತಲಿಬ್ ಮರಣ ಶಯ್ಯೆಯಲ್ಲಿದ್ದಾಗ ಮುಹಮ್ಮದ್‌ರ(ಸ) ಪೋಷಣೆಯ ಹೊಣೆಯನ್ನು ಅಬೂತಾಲಿಬರಿಗೆ ವಹಿಸಿಕೊಟ್ಟಿದ್ದರು. ಅವರು ಅಬ್ದುಲ್ಲಾನ ನೇರ ಸೋದರ. ಇಬ್ಬರೂ ಒಂದೇ ತಾಯಿಯ ಮಕ್ಕಳು. ಆದ್ದರಿಂದ ತನ್ನ ಪುತ್ರರ ಪೈಕಿ ಅತ್ಯಂತ ವಾತ್ಸಲ್ಯದಿಂದ ಮುಹಮ್ಮದ್(ಸ) ಅವರನ್ನು ಪೋಷಿಸಬಲ್ಲವರು ಅಬೂತಾಲಿಬ್ ಆಗಿದ್ದಾರೆಂಬುದು ಅಬ್ದುಲ್ ಮುತ್ತಲಿಬರ ನಂಬಿಕೆಯಾಗಿತ್ತು. ಮುಹಮ್ಮದ್(ಸ) ಅಬೂತಾಲಿಬರ ವಾತ್ಸಲ್ಯಭರಿತ ಪೋಷಣೆಯಲ್ಲಿ ಬೆಳೆಯುತ್ತಾರೆ. ಅವರ ಪತ್ನಿ ಫಾತಿಮಾ ಅಸದಿಯ್ಯ ಅತ್ಯಂತ ದಯಾಳು ಮಹಿಳೆ. ತಾಲಿಬ್ ಅವರ ಏಕೈಕ ಪುತ್ರ. ಅಬೂತಾಲಿಬ್ ಮುಹಮ್ಮದ್‌ರನ್ನು(ಸ) ಕಣ್ಮಣಿಯಂತೆ ಸಾಕುತ್ತಾರೆ. ಫಾತಿಮಾರ ವಾತ್ಸಲ್ಯಭರಿತ

ಪೋಷಣೆಯಲ್ಲಿ ಮುಹಮ್ಮದ್(ಸ) ತಾಲಿಬ್‌ರ ಜೊತೆ ಆಟೋಟಗಳಲ್ಲಿ ಬೆಳೆಯುತ್ತಾರೆ.

ಯೌವನಕ್ಕೆ ಕಾಲಿರಿಸಿರುವ ಮುಹಮ್ಮದ್‌ರ(ಸ) ಆರೋಗ್ಯವಂತ ದೇಹ, ವಿಶಾಲ ಬುದ್ಧಿ, ಪ್ರಜ್ಞೆ ಮತ್ತು ವಿವೇಕ, ಅಸಾಮಾನ್ಯ ಸಾಮರ್ಥ್ಯಗಳು ಮತ್ತು ಸಜ್ಜನಿಕೆ ಜನರನ್ನು ಬಹಳ ಪ್ರಭಾವಿತಗೊಳಿಸುತ್ತವೆ. ಅಬೂತಾಲಿಬ್‌ರ ಮನೆಯಿಂದ ಹೊರಟ ಈ ಪ್ರಜ್ವಲ ಜ್ಯೋತಿಯು ಮೆಲ್ಲಮೆಲ್ಲನೆ ಎಲ್ಲರ ಗಮನ ಸೆಳೆಯುತ್ತದೆ.

## ಆಡು ಮೇಯಿಸುವ ಬಾಲಕ

ಮಕ್ಕಾ ನಗರ ನಿದ್ದೆಯಿಂದ ಎಚ್ಚರಗೊಳ್ಳುತ್ತಿದೆ. ಒಂಟೆ ಆಡುಗಳ ಕೂಗು ಮತ್ತು ಅವುಗಳನ್ನು ಮೇಯಿಸ ಹೊರಟವರ ಬೊಬ್ಬೆ ಎಲ್ಲೆಡೆ ಆವರಿಸಿದೆ. ಜಾನುವಾರುಗಳ ಕೊರಳ ಗೆಜ್ಜೆಯ ನಾದವು ವಾತಾವರಣವನ್ನು ಸಂಗೀತಮಯ ವಾಗಿಸಿದೆ. ಕೆಲವು ಜಾನುವಾರುಗಳು ನಸುಕಿನಲ್ಲೇ ಕಾಡಿನ ಕಡೆಗೆ ಸಾಗಿವೆ. ಅವುಗಳ ಪಾಲಕರು ಪ್ರಾಯದಲ್ಲಿ ಹಿರಿಯರು. ಇನ್ನು ಕೆಲವು ಸೂರ್ಯೋದಯದ ನಂತರ ಹೊರಟಿವೆ. ಏಕೆಂದರೆ ಅವುಗಳ ಪಾಲಕರು ಎಳೆಯ ಪ್ರಾಯದ ಹುಡುಗರು.

ಇಂತಹುದೇ ಒಂದು ಆಡುಗಳ ಹಿಂಡು ನಗರದ ಒಂದು ನಿರ್ಜನ ರಸ್ತೆಯನ್ನು ದಾಟುತ್ತಿದೆ. ಅವುಗಳ ಹಿಂದೆ ಮೂವರು ಹುಡುಗರಿದ್ದಾರೆ. ಇಬ್ಬರು ಬೆತ್ತ ಹಿಡಿದು ಅತ್ತಿತ್ತ ಸರಿಯುತ್ತಿರುವ ಆಡುಗಳನ್ನು ಮಂದೆಯೊಂದಿಗೆ ಸೇರಿಸಿ ಅಟ್ಟುತ್ತಿದ್ದರೆ ಮೂರನೆಯವನು ತಲೆಯ ಮೇಲೆ ಆಹಾರದ ಬುತ್ತಿಯನ್ನು ಹೊತ್ತುಕೊಂಡಿದ್ದಾನೆ.

ಮೂವರೂ ಕುಲೀನರಾದ ಸುಂದರ ಬಾಲಕರು. ಒಂದೇ ಮನೆತನಕ್ಕೆ ಸೇರಿ ದವರೆಂಬುದು ಅವರ ಮುಖಭಾವದಿಂದಲೇ ವ್ಯಕ್ತವಾಗುತ್ತದೆ. ಉದ್ದವಾದ ಬೆತ್ತ ವನ್ನು ಹಿಡಿದ ಬಾಲಕ ಇತರರಿಗಿಂತ ಹೆಚ್ಚು ಗಾಂಭೀರ್ಯ ಉಳ್ಳವನು. ಅತ್ಯಂತ ಆಕರ್ಷಕ ಮುಖ. ಅವನ ಸಂತುಲಿತ ಹೆಜ್ಜೆಗಳು ಅವನ ಗಾಂಭೀರ್ಯಕ್ಕೆ ಹಿಡಿದ ಕನ್ನಡಿಯಂತಿತ್ತು. ಶೋಧಿಸುವ ಕಣ್ಣುಗಳು ಮತ್ತು ಚಿಂತನೆಯ ಕುರುಹುಗಳಿರುವ ಹಣೆ. ಮೂವರೂ ಪರಸ್ಪರ ಮಾತಾಡುತ್ತಾ ಆಡುಗಳನ್ನು ಅಟ್ಟುತ್ತಿದ್ದಾರೆ.

ಇವರೆಲ್ಲರೂ ಹಾಶಿಮ್ ಮನೆತನದ ಹುಡುಗರು. ಉದ್ದಕೋಲಿನ ಬಾಲಕ ಅಬೂತಾಲಿಬರ ಸೋದರ ಪುತ್ರ ಮುಹಮ್ಮದ್(ಸ). ತಮ್ಮ ಚಿಕ್ಕಪ್ಪ, ದೊಡ್ಡಪ್ಪರುಗಳ ಆಡುಗಳನ್ನು ಅವರು ಮೇಯಿಸುತ್ತಿರುವರು.

ಮಕ್ಕಾದಿಂದ ಸ್ವಲ್ಪ ದೂರ ಹೋದ ಬಳಿಕ ಆಡುಗಳನ್ನು ಮೇಯಲು ಬಿಡ ಲಾಗುತ್ತದೆ. ಅವು ಅಕ್ಕಪಕ್ಕದಲ್ಲಿರುವ ಹುಲ್ಲುಗಾವಲು ಮತ್ತು ಪೊದೆಗಳಲ್ಲಿ ಚದುರು ತ್ತವೆ. ಮೂವರು ಬಾಲಕರು ಒಂದು ಸಣ್ಣ ಬೆಟ್ಟದ ಮೇಲೆ ಕುಳಿತು ಮಾತನಾಡುತ್ತಿದ್ದಾರೆ. ಸ್ವಲ್ಪ ಹೊತ್ತಿನಲ್ಲೇ ಮುಹಮ್ಮದ್(ಸ) ಅಲ್ಲಿಂದೆದ್ದು ದೂರ ಹೋಗ ಬಯಸುತ್ತಾರೆ. ಆಗ ಇನ್ನೊಬ್ಬನು: "ಮುಹಮ್ಮದ್, ಎಲ್ಲಿಗೆ ಹೊರಟೆ?" ಎಂದು ಕೇಳುತ್ತಾನೆ.

"ಆಡುಗಳು ದೂರ ಹೋಗುತ್ತಿವೆ. ಆ ಕಡೆ ಹೋಗಿ ಕುಳಿತು ಬಿಡುತ್ತೇನೆ" ಎನ್ನುತ್ತಾರೆ ಮುಹಮ್ಮದ್(ಸ).

"ನೀನು ಅವುಗಳ ಬಗ್ಗೆ ಚಿಂತೆ ಮಾಡಬೇಡ."

"ಏಕೆ?"

"ಅವು ನಮ್ಮ ಸ್ವರ ಕೇಳಿದೊಡನೆಯೇ ಬಂದು ಬಿಡುತ್ತವೆ. ಬಾ ನಾವು ಆಡೋಣ."

"ನೀವು ಆಡಿರಿ. ನಾನು ಅವುಗಳನ್ನು ನೋಡಿಕೊಳ್ಳಲು ಹೊರಟೆ" ಎನ್ನುತ್ತಾ ಮುಹಮ್ಮದ್(ಸ) ಆ ಕಡೆಗೆ ಹೊರಟು ಬಿಡುತ್ತಾರೆ.

"ನಮ್ಮ ತಮ್ಮ ಬಲು ವಿಚಿತ್ರ. ಅವನಿಗೆ ಆಟೋಟಗಳಲ್ಲಿ ಅಭಿರುಚಿಯೇ ಇಲ್ಲ" ಎನ್ನುತ್ತಾನೆ ಅವರಲ್ಲೊಬ್ಬ.

"ಅವನಿಗೆ ಏಕಾಂತತೆ ಬಹಳ ಇಷ್ಟ" ಎನ್ನುತ್ತಾನೆ ಇನ್ನೊಬ್ಬ.

"ಹೌದು, ಯಾವಾಗಲೂ ಏನೋ ಯೋಚಿಸುತ್ತಿರುತ್ತಾನೆ."

"ಅವನು ಯೋಚಿಸಲಿ ಬಿಡು, ನಾವು ಆಡೋಣ."

ಇಬ್ಬರೂ ಆಟೋಟಗಳಲ್ಲಿ ಮಗ್ನರಾಗುತ್ತಾರೆ. ಮುಹಮ್ಮದ್(ಸ) ಅವರಿಂದ ದೂರ ಒಂದು ಜಾಲಿಯ ಮರದಡಿ ಕುಳಿತಿರುವರು. ಅವರ ದೃಷ್ಟಿ ನೀಲ ಆಕಾಶ ಮತ್ತು ಎತ್ತರದ ಪರ್ವತಗಳ ಮೇಲೆ ನೆಟ್ಟಿದೆ. ಒಮ್ಮೊಮ್ಮೆ ಆಡುಗಳ ಕಡೆಗೂ ದೃಷ್ಟಿ ಹಾಯಿಸುತ್ತಾರೆ. ಆದರೆ ಅದರಿಂದ ಅವರ ತಲ್ಲೀನತೆಯಲ್ಲಿ ಏನೂ ವ್ಯತ್ಯಾಸವಾಗುವುದಿಲ್ಲ. ನಿಧಾನವಾಗಿ ಅವರು ತನ್ಮಯರಾಗುತ್ತಾರೆ. ಇದೇ ಅವಸ್ಥೆಯಲ್ಲಿ ಪರಿಸರದೊಂದಿಗೆ ಅವ್ಯಕ್ತ ಸಂಭಾಷಣೆಗೆ ತೊಡಗುತ್ತಾರೆ:

ಪರ್ವತಗಳು : "ಓ ಮುಹಮ್ಮದ್ ನಮ್ಮನ್ನು ಗಮನವಿಟ್ಟು ನೋಡು. ನಮ್ಮನ್ನು ಯಾರು ಸೃಷ್ಟಿಸಿರುವನೆಂದು ಯೋಚಿಸು" ಎನ್ನುತ್ತವೆ.

ನೀಲಗಗನವು: "ಮುಹಮ್ಮದ್, ನನ್ನನ್ನು ಆ ಮಹಾನ್ ಸೃಷ್ಟಿಕರ್ತನು ಆಸರೆ ಇಲ್ಲದೆ ಹೇಗೆ ನಿಲ್ಲಿಸಿರುವನೆಂಬುದನ್ನು ನೋಡು, ಈ ಸಮಸ್ತ ವಿಶ್ವದ ಸೃಷ್ಟಿಕರ್ತ ಬಹಳ ದೊಡ್ಡವನು ಮತ್ತು ಸರ್ವಸಮರ್ಥನು" ಎನ್ನುತ್ತದೆ.

ಮರುಭೂಮಿಯ ಮರಳ ರಾಶಿಯು: "ನಮ್ಮೆಲ್ಲರ ಸೃಷ್ಟಿಕರ್ತ ಖಂಡಿತ ಅತ್ಯುನ್ನತನಾಗಿರುವನು. ಅವನೇ ಈ ವಿಶಾಲ ಆಕಾಶವನ್ನು ನಿರ್ಮಿಸಿದನು. ಅವನೇ ಉನ್ನತ ಪರ್ವತಗಳನ್ನುಂಟು ಮಾಡಿದನು. ಅವನೇ ನಮ್ಮ ಕಣಕಣಗಳನ್ನು ಸೃಷ್ಟಿಸಿದನು. ಅವನೇ ನಿನ್ನನ್ನೂ ಸೃಷ್ಟಿಸಿರುವನು. ಅವನನ್ನು ಹುಡುಕು" ಎನ್ನುತ್ತಿರುವಂತೆ ಭಾಸವಾಗುತ್ತಿತ್ತು.

ಮುಹಮ್ಮದ್‌ರ(ಸ) ದೃಷ್ಟಿಗಳಲ್ಲಿ ಅಸಂಖ್ಯ ದೇವಿ-ದೇವತೆಗಳ ಚಿತ್ರ ಮೂಡಿ ಬರುತ್ತವೆ. ಗಾತ್ರ ಮತ್ತು ರೂಪದಲ್ಲಿ ಪರಸ್ಪರ ಭಿನ್ನ, ನಿರ್ಜೀವಿ, ನಿರ್ವಿಕಾರಿ ಕಲ್ಲಿನ ಮೂರ್ತಿಗಳು. ಅವರ ಆಸ್ಥಾನಗಳಲ್ಲಿ ದೊಡ್ಡ ದೊಡ್ಡ ಸರದಾರರು ಶಿರಬಾಗುತ್ತಾರೆ, ಕೆಲವರು ನರ್ತಿಸುತ್ತಾರೆ. ಕೆಲವರು ಮೊರೆಯಿಡುತ್ತಿದ್ದಾರೆ. ಕೆಲವರು ಬಲಿಗಳನ್ನು ನೀಡುತ್ತಿದ್ದಾರೆ. ಇನ್ನು ಕೆಲವರು ನಗ್ನರಾಗಿ ಪ್ರದಕ್ಷಿಣೆ ಮಾಡುತ್ತಿದ್ದಾರೆ. ಮತ್ತೆ ಕೆಲವರು ಕಣ್ಣು ಮುಚ್ಚಿ ಕೈ ಜೋಡಿಸಿ ಸ್ವಯಂ

ಮೂರ್ತಿಗಳಾಗಿ ಕುಳಿತಿದ್ದಾರೆ. ಒಂದೆಡೆ ವಾದ್ಯ ಮೊಳಗುತ್ತಿದೆ. ಒಂದೆಡೆ ಪರಿಮಳ ಸೂಸಲಾಗುತ್ತಿದೆ. ಒಂದೆಡೆ ಪತಾಕೆಗಳು ಹಾರುತ್ತಿವೆ. ಇನ್ನೊಂದೆಡೆ ನೋವು, ಸಂಕಟ, ದುಃಖ-ದುಮ್ಮಾನಗಳನ್ನು ಪ್ರಕಟಿಸಲಾಗುತ್ತಿದೆ. ಮತ್ತೊಂದೆಡೆ ನಿರಾಶೆ ಪ್ರಕಟವಾದರೆ ಮಗುದೊಂದೆಡೆ ಆಶಾಭಾವನೆ ವ್ಯಕ್ತವಾಗುತ್ತದೆ. ಆದರೆ ಎಲ್ಲವೂ ಮಾತು ಬಾರದ, ನಿರ್ವಿಕಾರ ಮತ್ತು ನಿರ್ಜೀವ ಮೂರ್ತಿಗಳು. ಹಲವು ಕಾಲದಿಂದ ಅವು ಹಾಗೆಯೇ ನಿಂತಿವೆ.

"ಇದೆಲ್ಲ ಏನು? ಏಕೆ?" ಎಂದು ಮುಹಮ್ಮದ್(ಸ) ತಮಗರಿವಿಲ್ಲದಂತೆ ಉದ್ಗರಿಸುತ್ತಾರೆ. "ಈ ಮೂಕ ಮೂರ್ತಿಗಳನ್ನಂತು ಮನುಷ್ಯನೇ ಕೆತ್ತಿ ನಿರ್ಮಿಸಿದ್ದಾನೆ. ಆದರೆ ಮನುಷ್ಯನನ್ನು ಸೃಷ್ಟಿಸಿದವನು ಯಾರು?" ಮುಹಮ್ಮದ್(ಸ) ಇವೇ ಯೋಚನೆಗಳಲ್ಲಿ ಮುಳುಗಿ ಹೋಗುತ್ತಾರೆ.

ಅಷ್ಟರಲ್ಲಿ ಕೆಲವು ಬಾಲಕರು ತಮ್ಮ ಕುರಿಮಂದೆಗಳ ಸಹಿತ ಅಲ್ಲಿ ಬರುತ್ತಾರೆ. ಅವರನ್ನು(ಸ) ಕಂಡು ಹತ್ತಿರ ಬಂದು

"ಮುಹಮ್ಮದ್(ಸ)! ಏನು ಯೋಚಿಸುತ್ತಿರುವಿ?" ಒಬ್ಬನು ವಿಚಾರಿಸಿದನು.

ಮುಹಮ್ಮದ್(ಸ) ಬೆಚ್ಚಿ ಬೀಳುತ್ತಾರೆ. ಯೋಚನಾ ಲಹರಿ ನಿಂತು ಹೋಗುತ್ತದೆ ಅವನತ್ತ ನೋಡಿ

"ಆಕಾಶವನ್ನು ಯಾರು ಹರಡಿದರು? ಪರ್ವತಗಳು ಹೇಗಾದವು ಮತ್ತು ಮರಳ ರಾಶಿಯ ಕಣಗಳು ಹೇಗೆ ಅಸ್ತಿತ್ವಕ್ಕೆ ಬಂದವು?" ಎಂದು ಯೋಚಿಸುತ್ತಿದ್ದೆ ಎಂದು ಉತ್ತರಿಸಿದರು.

ಇದನ್ನು ಕೇಳಿ ಆ ಹುಡುಗ ಗಾಬರಿಗೊಂಡು "ಇವೆಲ್ಲವೂ ನಮ್ಮ ದೇವತೆಗಳು. ಅವುಗಳ ಕುರಿತು ಹೀಗೆಲ್ಲಾ ಯೋಚಿಸಬಾರದು."

ಮುಹಮ್ಮದ್(ಸ) ಮುಗುಳ್ನಗುತ್ತಾ ಹುಡುಗನ ಕಣ್ಣುಗಳನ್ನು ದಿಟ್ಟಿಸಿ "ನನ್ನ ಮನಸ್ಸು ಇದನ್ನು ಒಪ್ಪುವುದಿಲ್ಲ."

ಹುಡುಗ ಚಕಿತನಾಗುತ್ತಾನೆ. ಅವನ ಮಟ್ಟಿಗೆ ಇದು ಅತ್ಯಂತ ಅಪಾಯಕಾರಿ ಮಾತು. ಅವನು ಕಳವಳಗೊಂಡು:

"ಮುಹಮ್ಮದ್! ಹಾಗೆನ್ನಬೇಡ. ನಮ್ಮ ದೇವತೆಗಳು ಕುಪಿತಗೊಂಡಾವು."

"ಮತ್ತೆ?" ಮುಹಮ್ಮದ್(ಸ) ಪ್ರಶ್ನಿಸುತ್ತಾರೆ.

"ಮತ್ತೆ ನಮಗೆ ನಷ್ಟವಾಗುವುದು. ಅವರು ನಮ್ಮನ್ನು ನಾಶಮಾಡಿ ಬಿಡುವರು" ಎನ್ನುತ್ತಾನೆ ಬಾಲಕ.

ಮುಹಮ್ಮದ್(ಸ) ಅತ್ಯಂತ ಭರವಸೆಯೊಂದಿಗೆ ಹೀಗೆನ್ನುತ್ತಾರೆ: "ಈ ನಿರ್ಜೀವ, ನಿರ್ವಿಕಾರ ವಸ್ತುಗಳು ನಮಗೆ ಹೇಗೆ ಲಾಭ-ನಷ್ಟ ಉಂಟು ಮಾಡಬಲ್ಲವು. ನೀವೇ ಯೋಚಿಸಿ ನೋಡಿ. ನನಗಂತೂ ಈ ಮಾತಿನ ಮೇಲೆ ವಿಶ್ವಾಸವೇ ಇಲ್ಲ."

ಆಗ ಇನ್ನೊಬ್ಬ ಹುಡುಗನೂ ಹತ್ತಿರ ಬಂದು:

"ಇಂದು ಕಿನಾನ ಗೋತ್ರದವರಲ್ಲಿ ನೃತ್ಯ-ಸಂಗೀತಗಳ ಕಾರ್ಯಕ್ರಮವಿದೆ. ನಡೆಯಿರಿ ಅಲ್ಲಿಗೆ ಹೋಗೋಣ."

ಮುಹಮ್ಮದ್(ಸ) ಮೌನ ತಾಳುತ್ತಾರೆ. ಆದರೆ ಮೊದಲನೆಯ ಹುಡುಗ ಹಠ ಹಿಡಿಯುತ್ತಾನೆ:

"ಹೌದೌದು, ಇಂದು ಅಲ್ಲಿಗೆ ಹೋಗಲೇ ಬೇಕು. ದಿನವಿಡೀ ಕಾಡಿನಲ್ಲಿ ಕುರಿ ಮೇಯಿಸಿದ ಬಳಿಕ ಇಂತಹ ಮನರಂಜನೆ ಬೇಕೇ ಬೇಕು."

"ನೀವು ಬೇಕಾದರೆ ಹೋಗಿ. ನನ್ನ ಮನದಲ್ಲಿ ಅಂತಹ ಬಯಕೆಯೇ ಇಲ್ಲ" ಎನ್ನುತ್ತಾರೆ ಮುಹಮ್ಮದ್(ಸ).

ಮೊದಲನೆಯ ಹುಡುಗ ಹೇಳಿದ:

"ಒಂದು ರಾತ್ರಿ ಅಲ್ಲಿಗೆ ಹೋದರೆ ಇಂತಹ ಸಾವಿರ ಬಯಕೆಗಳು ನಿನ್ನ ಮನದಲ್ಲಿ ತನ್ನಿಂತಾನೆ ಉಂಟಾಗುತ್ತವೆ."

ಎರಡನೆಯವನು ಅವನನ್ನು ಅನುಮೋದಿಸುತ್ತಾ:

"ನೀನು ದಿನವಿಡೀ ಕಾಡಿನಲ್ಲಿ ಕುರಿ ಮೇಯಿಸುತ್ತಿರುತ್ತಿ ಅಥವಾ ಬೇಡದ ವಿಷಯಗಳ ಬಗ್ಗೆ ಯೋಚಿಸುತ್ತಿರುತ್ತಿ. ಆದ್ದರಿಂದ ಇಂತಹ ಕೂಟಗಳ ಮೋಜು ನಿನಗೆ ತಿಳಿದಿಲ್ಲ. ಇಂದು ನಾವು ಖಂಡಿತ ನಿನ್ನನ್ನು ಜೊತೆಗೊಯ್ಯುವೆವು."

"ನೀವು ಒತ್ತಾಯ ಮಾಡುವುದಾದರೆ ನಾನು ಬರುತ್ತೇನೆ."

ಆಡುಗಳನ್ನು ತಾಲಿಬ್‌ರ ಜೊತೆ ಕಳುಹಿಸಿ ರಾತ್ರಿ ಕಿನಾನ ಗೋತ್ರದ ಚಾವಡಿಗೆ ಹೋಗುವುದೆಂದು ತೀರ್ಮಾನಿಸಿದರು.

## ನೃತ್ಯ ಸಂಗೀತ ಕೂಟ

ಕಿನಾನ ಗೋತ್ರದ ಒಂದು ಚಾವಡಿಯಲ್ಲಿ ಸಂಗೀತ ನೃತ್ಯದ ಕಾರ್ಯಕ್ರಮ ನಡೆಯುತ್ತಿದೆ. ಸುರಾಪಾನ ಜರಗುತ್ತಿದೆ. ದಾಸಿಯರು ನರ್ತಿಸುತ್ತಿದ್ದಾರೆ. ಹಿಮ್ಮೇಳದವರು ತಮ್ಮ ರಾಗದಲ್ಲಿ ತಲ್ಲೀನರಾಗಿದ್ದಾರೆ. ವಾತಾವರಣವೇ ಮಂತ್ರ ಮುಗ್ಧವಾಗಿದೆ. ಪ್ರೇಕ್ಷಕರು ಭಾವಪರವಶರಾಗಿದ್ದಾರೆ. ನಾಚಿಕೆ-ಲಜ್ಜೆ, ಶೀಲ-ಚಾರಿತ್ರ್ಯಗಳು ನುಚ್ಚುನೂರಾಗುತ್ತಿವೆ. ಇಂತಹ ಕೂಟಗಳೆಂದರೆ ಅರಬರಿಗೆ ಪಂಚಪ್ರಾಣ. ಎಲ್ಲ ಜಗಳಗಳೂ ಇಲ್ಲಿ ಜನ್ಮ ತಾಳುತ್ತವೆ. ಅಹಂಕಾರ ಮತ್ತು ದರ್ಪದ ಮಾತುಗಳು, ಪ್ರೇಮ-ಕಾಮಗಳ ಕತೆಗಳು ಹಲವೊಮ್ಮೆ ಕೊಲೆ-ಕೊಳ್ಳೆಗಳಲ್ಲಿ ಪರ್ಯವಸಾನ ಗೊಳ್ಳುತ್ತವೆ. ತರುವಾಯ ಅನೇಕ ಪೀಳಿಗೆಗಳ ವರೆಗೆ ಅದರ ಪರಂಪರೆ ಜಾರಿಯಲ್ಲಿರುತ್ತದೆ. ಜೊತೆಗೆ ಅರಬರ ಅತಿಥಿ ಸತ್ಕಾರ, ಔದಾರ್ಯ, ಶೌರ್ಯ ಮತ್ತು ಕಾವ್ಯಾಸ್ವಾದನದ ಗುಣಗಳೂ ಇಂತಹ ಕೂಟಗಳಲ್ಲೇ ತಾರಕಕ್ಕೇರುತ್ತವೆ.

ಇಂತಹ ಮನರಂಜನಾ ಕೂಟಗಳಲ್ಲೇ ಕಥೆಗಾರರು ತಮ್ಮ ಕಥೆಗಳನ್ನೂ ಹರಟೆಕೋರರು ತಮ್ಮ ಹರಟೆ-ವಿಡಂಬನೆಗಳನ್ನೂ ಪ್ರಸ್ತುತ ಪಡಿಸುತ್ತಾರೆ. ಈ ರೀತಿಯ ಕಥೆ, ಹರಟೆ ಮತ್ತು ವಿಡಂಬನೆಗಳಲ್ಲಿ ಇಡೀ ರಾತ್ರಿ ಕಳೆಯುತ್ತಾರೆ. ಮಧ್ಯೆ ಮಧ್ಯೆ ನೃತ್ಯ ಮತ್ತು ಸುರಾಪಾನ

ದೊಂದಿಗೆ ರಸಾಸ್ವಾದನವನ್ನು ಇಮ್ಮಡಿಗೊಳಿಸಲಾಗುತ್ತದೆ.

ಮುಹಮ್ಮದ್(ಸ) ಯೌವನದ ಹುಮ್ಮಸ್ಸು ಮತ್ತು ಸಂಗಾತಿಗಳ ಒತ್ತಾಯಕ್ಕೆ ಬಲಿಯಾಗಿ ಆ ಕೂಟಕ್ಕೆ ಹೊರಟಿದ್ದರು. ಸ್ವಲ್ಪ ದೂರವೇ ಸಾಗಿರಬಹುದು. ಒಂದು ಮನೆಯಿಂದ ಮಧುರ ಕಂಠದ ಸುಶ್ರಾವ್ಯ ಗಾಯನ ಒಂದು ಕೇಳಿ ಬಂತು. ಸ್ವಲ್ಪ ಹೊತ್ತು ನಿಂತು ಕೇಳಬೇಕೆನಿಸಿತು. ಅಲ್ಲೇ ಕುಳಿತು ಗಾನಸುಧೆಯನ್ನು ಸವಿಯುತ್ತಾ ನಿದ್ದೆ ಹೋದರು. ಕಿನಾನ ಗೋತ್ರದ ಚಾವಡಿಯಲ್ಲಿ ಸಂಗೀತ-ನೃತ್ಯ ಕೂಟವು ಏರ್ಪಟ್ಟಿದೆ. ಆದರೆ ಮುಹಮ್ಮದ್(ಸ) ಇವೆರಡರಿಂದಲೂ ನಿರಪೇಕ್ಷರಾಗಿ ಸುಖ ನಿದ್ರೆಯಲ್ಲಿ ಮೈಮರೆತಿದ್ದಾರೆ. ರಾತ್ರಿ ಅಲ್ಲೇ ಕಳೆದು ಹೋಗುತ್ತದೆ. ಸೂರ್ಯನ ಕಿರಣಗಳು ಮುಖಕ್ಕೆ ಬಡಿದು ಅದರ ಶಾಖದಿಂದ ಎಚ್ಚರಗೊಳ್ಳುತ್ತಾರೆ. ಎಚ್ಚರಗೊಂಡವರೇ ಮೈ ಕೊಡವಿ ಎದ್ದು ಸೀದಾ ಕುರಿಮಂದೆ ಇದ್ದಲ್ಲಿಗೆ ನಡೆದು ಬಿಡುತ್ತಾರೆ. ದಾರಿಯಲ್ಲಿ ಅವರನ್ನು ಈ ಕೂಟಕ್ಕೆ ಆಹ್ವಾನಿಸಿದ ಹುಡುಗ ಸಿಕ್ಕಿ ಕುತೂಹಲದಿಂದ ವಿಚಾರಿಸುತ್ತಾನೆ:

"ಮುಹಮ್ಮದ್! ನೀನೆಲ್ಲಿದ್ದೆ? ನಾನು ನಿನ್ನನ್ನು ಕೂಟದಲ್ಲಿ ಎಷ್ಟು ಹುಡುಕಿದರೂ ಗೋಚರಿಸಲಿಲ್ಲ. ಹೇಗಿತ್ತು ಮಜಾ!?"

"ನಾನು ಅಲ್ಲಿಗೆ ಹೋಗುತ್ತಿರುವಾಗ ರಸ್ತೆಯಲ್ಲಿ ಒಂದು ಮನೆಯಿಂದ ಮಧುರ ಗಾಯನ ಒಂದು ಕೇಳಿಸುತ್ತಿತ್ತು. ಸ್ವಲ್ಪ ಹೊತ್ತು ಅದನ್ನು ಕೇಳೋಣವೆಂದು ಕುಳಿತವನು ಅಲ್ಲೇ ನಿದ್ದೆ ಹೋದೆ. ಈಗ ಅಲ್ಲಿಂದಲೇ ಎದ್ದು ಬರುತ್ತಿರುವೆನು" ಎಂದರು ಮುಹಮ್ಮದ್(ಸ).

"ಆಗಲಿ. ಈ ರಾತ್ರಿ ಬರಬೇಕು. ಈ ಅವಕಾಶವನ್ನು ಖಂಡಿತ ಕಳಕೊಳ್ಳಬಾರದು. ಇಂದು ಕೊನೆಯ ರಾತ್ರಿ."

"ಇಲ್ಲ, ನಾನು ಖಂಡಿತ ಬರುವುದಿಲ್ಲ" ಮುಹಮ್ಮದ್(ಸ) ನಿರ್ಣಾಯಕ ಸ್ವರದಲ್ಲಿ ಹೇಳಿದಾಗ ಹುಡುಗನ ಆಶ್ಚರ್ಯಕ್ಕೆ ಪಾರವೇ ಇರಲಿಲ್ಲ.

"ಮುಹಮ್ಮದ್(ಸ) ತಮ್ಮ ಆಡುಗಳತ್ತ ನಡೆಯುತ್ತಾರೆ. ಅವರ ಆತ್ಮಸಾಕ್ಷಿ ಅವರನ್ನುದ್ದೇಶಿಸಿ ಈ ರೀತಿ ಹೇಳುತ್ತಿರುವಂತೆ ಭಾಸವಾಗುತ್ತದೆ:

"ಮುಹಮ್ಮದ್! ಈ ಜಗತ್ತು ಕೇವಲ ಆಟ ವಿನೋದವೆ? ನೃತ್ಯ ಸಂಗೀತದ ಹೊರತು ಜೀವನಕ್ಕೆ ಯಾವ ಉದ್ದೇಶವೂ ಇಲ್ಲವೆ? ಐಶಾರಾಮವೇ ಜೀವನದ ತಿರುಳು ಎಂದು ಜನರು ಹೇಳುತ್ತಾರೆ. ಆದರೆ ವಾಸ್ತವಿಕತೆ ಏನೆಂಬುದನ್ನು ಇವರ ಸೃಷ್ಟಿಕರ್ತ ಮತ್ತು ಒಡೆಯನಲ್ಲಿ ಕೇಳಿನೋಡು. ಆ ಸರ್ವಶಕ್ತನನ್ನು ಶೋಧಿಸು. ಅವನ ವಾಣಿಯನ್ನು ಆಲಿಸು. ಆಗ ಜೀವನದ ರಹಸ್ಯ ನಿನಗೆ ತಿಳಿದು ಬರುವುದು. ಈ ಬಗ್ಗೆ ಚಿಂತನೆ ನಡೆಸುತ್ತಲೇ ಇರು. ಆಟ-ವಿನೋದಗಳು ನಿನ್ನಂಥವರಿಗಲ್ಲ."

ದಿನವಿಡೀ ಆಡು ಮೇಯಿಸುತ್ತಾ ಕಾಡಿನ ಹಣ್ಣು-ಹಂಪಲುಗಳನ್ನು ತಿನ್ನುತ್ತಾ ಒಂಟೆಗಳ ಲಗಾಮು ಹಿಡಿದು ನಡೆಯುತ್ತಾ ಆಡಿನ ಮರಿಗಳನ್ನು ಮುದ್ದಿಸುತ್ತಾ ಪ್ರಕೃತಿಯ ಪಿಸುಮಾತು ಗಳನ್ನು ಆಲಿಸುತ್ತಿದ್ದರು. ರಾತ್ರಿ ಬಳಲಿ ಬೆಂಡಾಗಿ ಮನೆ ತಲುಪುತ್ತಿದ್ದರು. ಮಲಗಿ ನಿದ್ರೆ

ಹೋದ ಮೇಲೆ ಯಾರು ಬರುತ್ತಾರೆ, ಯಾರು ಹೋಗುತ್ತಾರೆ, ನಗರದಲ್ಲಿ-ಪರಿಸರದಲ್ಲಿ ಏನೆಲ್ಲ ನಡೆಯುತ್ತಿದೆ ಎಂಬುದೊಂದೂ ಅವರಿಗೆ ತಿಳಿದಿರುವುದಿಲ್ಲ.

## ಅದ್ಭುತ ಬಾಲಕ

ಇಂದು ಮಕ್ಕಾದ ಒಂದು ವ್ಯಾಪಾರಿ ತಂಡ ಸಿರಿಯಾಕ್ಕೆ ಹೊರಡಲು ಅಣಿಯಾಗಿ ನಿಂತಿದೆ. ಒಂಟೆಗಳ ಸಾಲು. ಸರಕುಗಳ ಮೂಟೆಗಳನ್ನು ಹೊತ್ತು ಕತ್ತೆಗಳು ಮತ್ತು ಗುಲಾಮರು ಅತ್ತಿತ್ತ ಸಾಗಿಸುತ್ತಿದ್ದಾರೆ. ಜನರು ತಮ್ಮ ಸರಕುಗಳನ್ನು ತಂದು ವ್ಯಾಪಾರಿ ತಂಡಕ್ಕೆ ಮಾರುತ್ತಿದ್ದಾರೆ. ಹಲವು ದಾಸಿಯರೂ ಸುರಾಪಾತ್ರೆಗಳೂ ವ್ಯಾಪಾರಿ ತಂಡದ ಜೊತೆಗಿವೆ. ನಗರದ ಎಲ್ಲ ದಿಕ್ಕುಗಳಿಂದಲೂ ಸಣ್ಣ ಸಣ್ಣ ತಂಡಗಳು ಬಂದು ಸೇರಿಕೊಳ್ಳುತ್ತಿವೆ. ಮುಂಜಾನೆಯಿಂದ ಮುಸ್ಸಂಜೆಯ ತನಕ ಎಲ್ಲ ತಂಡಗಳ ಸೇರುವಿಕೆ ಮತ್ತು ಸಿದ್ಧತೆಗಳು ನಡೆಯುತ್ತಿವೆ. ರಾತ್ರಿ ಹೊರಡಬೇಕೆಂದು ನಿರ್ಧರಿಸಲಾಗಿದೆ. ಪ್ರತಿವರ್ಷ ಕುರೈಶರ ಇಂತಹ ವ್ಯಾಪಾರ ತಂಡಗಳು ಸಿರಿಯಾದತ್ತ ಪ್ರಯಾಣ ಬೆಳೆಸುತ್ತಿವೆ. ತಮ್ಮ ಸರಕು ಸರಂಜಾಮುಗಳೊಂದಿಗೆ ಅಲ್ಲಿಗೆ ಹೋಗಿ ಅವುಗಳನ್ನು ಅಲ್ಲಿ ಮಾರಾಟ ಮಾಡಿ ತಮಗೆ ಬೇಕಾದ ಧಾನ್ಯ, ಪಾತ್ರೆ-ಪರಡೆ ಮತ್ತು ಬಟ್ಟೆಗಳನ್ನು ಅಲ್ಲಿಂದ ಖರೀದಿಸಿ ತರುತ್ತಾರೆ. ಇದು ಅವರ ಕಸುಬು. ಇದರಿಂದಲೇ ಅವರ ಉಪಜೀವನ ದೊರಕುತ್ತಿತ್ತು. ಈ ವ್ಯಾಪಾರ ಪ್ರಯಾಣದಿಂದಲೇ ಅವರಿಗೆ ಖ್ಯಾತಿ - ಗೌರವಗಳು ಲಭಿಸಿದ್ದುವು. ಇದರಿಂದ ಅವರಿಗೆ ಲೋಕಾನುಭವವೂ ಸಾಕಷ್ಟು ಆಗುತ್ತಿತ್ತು. ಇದುವೇ ಅವರ ನಾಯಕತ್ವದ ಗುಟ್ಟಾಗಿತ್ತು.

ಈ ಯಾತ್ರಾ ತಂಡದಲ್ಲಿ ಅಬೂತಾಲಿಬ್‌ರ ಒಂಟೆಗಳ ಸಾಲೂ ಸೇರಿಕೊಂಡಿದೆ. ಅವರ ಸೋದರ ಪುತ್ರ ಮುಹಮ್ಮದ್(ಸ) ಅವರ ಆಡುಗಳನ್ನು ಮೇಯಿಸುತ್ತಿದ್ದಾರೆ. ಅಷ್ಟರಲ್ಲಿ ದೊಡ್ಡಪ್ಪನು ಸಿರಿಯಾಕ್ಕೆ ಹೊರಟು ನಿಂತಿರುವ ವಿಷಯ ಅವರ ಕಿವಿಗೆ ಬೀಳುತ್ತದೆ. ದೊಡ್ಡಪ್ಪ, ಹೋದ ಬಳಿಕ ನನ್ನವರೆಂದು ಈ ಊರಲ್ಲಿ ಯಾರಿದ್ದಾರೆ? ಅವರು ನನ್ನನ್ನು ಬಿಟ್ಟು ಹೋಗುವರೇ? ಎಂಬ ಯೋಚನೆ ಬಂದ ತಕ್ಷಣ ಅವರು ಉದಾಸೀನರಾಗಿ ಬಿಡುತ್ತಾರೆ. ಇಲ್ಲ, ನಾನು ಅವರಿಲ್ಲದೆ ಇಲ್ಲಿ ಇರಲಾರೆ. ನನ್ನ ತಾಯಿಯ ಪ್ರೀತಿಯಾಗಲೀ, ತಂದೆಯ ವಾತ್ಸಲ್ಯವಾಗಲೀ, ತಾತನ ಪ್ರೇಮವಾಗಲೀ ಉಳಿದಿಲ್ಲ. ಈಗ ಉಳಿದಿರುವುದು ದೊಡ್ಡಪ್ಪನ ಆಸರೆಯೊಂದೇ. ಅವರು ಹೋದ ಬಳಿಕ ನನ್ನ ಕ್ಷೇಮ-ಸಂತೋಷದ ಬಗ್ಗೆ ವಿಚಾರಿಸುವವರು ಯಾರಿದ್ದಾರೆ? ಇಲ್ಲ, ನಾನು ಇಲ್ಲಿರಲಾರೆ. ನಾನೂ ಅವರ ಜೊತೆ ಹೊರಟು ಬಿಡುತ್ತೇನೆ" ಎಂದು ನಿರ್ಧರಿಸಿದವರೇ ಆಡುಗಳನ್ನು ಮನೆಯತ್ತ ಅಟ್ಟುತ್ತಾರೆ. ಅವುಗಳನ್ನು ದೊಡ್ಡಿಯಲ್ಲಿ ಸೇರಿಸಿ ಮನೆಯಲ್ಲಿ ಯಾರಿಗೂ ಹೇಳದೆಯೇ ಯಾತ್ರಾತಂಡ ಇರುವಲ್ಲಿಗೆ ಧಾವಿಸುತ್ತಾರೆ.

ದೂರದಿಂದ ಮುಹಮ್ಮದ್(ಸ) ಬರುವುದನ್ನು ಕಂಡು ಅಬೂತಾಲಿಬ್ ಹತ್ತಿರ ಹೋಗಿ ವಿಚಾರಿಸುತ್ತಾರೆ:

"ಏನಾಗಿದೆ ಮುಹಮ್ಮದ್! ಏಕೆ ಇಷ್ಟು ಸುಸ್ತಾಗಿರುವೆ?"

"ಹೌದು, ತಾವು ಹೊರಟಿದ್ದೀರಿ. ನಾನು ಒಬ್ಬನೇ ಇಲ್ಲಿ ಉಳಿಯಬೇಕು. ನಾನು ತಮ್ಮನ್ನು ಬಿಟ್ಟು ಇಲ್ಲಿ ಇರಲಾರೆ. ನಾನೂ ತಮ್ಮ ಜೊತೆ ಹೊರಡುವೆ" ಎಂದವರೇ ಕಣ್ಣೀರಿಳಿಸಿ ಅಳಲಾರಂಭಿಸುತ್ತಾರೆ.

"ದೂರದ ಪ್ರಯಾಣ ಬಹಳ ತ್ರಾಸದಾಯಕ. ದುರ್ಗಮ ರಸ್ತೆಗಳು. ಈ ಪ್ರಯಾಣದ ಸಂಕಷ್ಟಗಳನ್ನು ಸಹಿಸಲು ನಿನ್ನಿಂದ ಸಾಧ್ಯವಾಗದು. ನೀನಿನ್ನೂ ಬಾಲಕನಾಗಿರುವೆ" ಎನ್ನುತ್ತಾ ಅಬೂತಾಲಿಬ್ ಮುಹಮ್ಮದ್‌ರನ್ನು(ಸ) ಸಮಾಧಾನ ಪಡಿಸಲು ಯತ್ನಿಸುತ್ತಾರೆ.

"ಇಲ್ಲ, ನಾನೂ ತಮ್ಮ ಜೊತೆಗೆ ಬರುವೆ" ಎಂದು ಮುಹಮ್ಮದ್(ಸ) ಹೇಳುತ್ತಿರುವಂತೆ ಅವರ ಕಣ್ಣುಗಳು ಕೆಂಪಾಗುತ್ತವೆ. ಕಣ್ಣೀರ ಕೋಡಿ ಹರಿಯುತ್ತದೆ.

"ನೀನು ಮನೆಯಲ್ಲೇ ಆರಾಮವಾಗಿರು. ನಾನು ಸಿರಿಯಾದಿಂದ ನಿನಗೆ ಸಾಕಷ್ಟು ಉಡುಗೊರೆಗಳನ್ನು ತರುತ್ತೇನೆ" ಎಂಬ ಸಮಾಧಾನದ ಮಾತುಗಳು ಅವರ ಮೇಲೆ ಸ್ವಲ್ಪವೂ ಪರಿಣಾಮ ಬೀರುವುದಿಲ್ಲ.

"ನನಗೆ ಯಾವ ಉಡುಗೊರೆಯೂ ಬೇಕಾಗಿಲ್ಲ. ನಾನು ತಮ್ಮನ್ನು ಬಿಟ್ಟು ಮಾತ್ರ ಇರಲಾರೆ. ನಾನು ತಮ್ಮ ಜೊತೆಗೇ ಬರುತ್ತೇನೆ. ನನ್ನನ್ನು ಬಿಟ್ಟು ಹೋಗಬೇಡಿ" ಎಂದು ಮುಹಮ್ಮದ್(ಸ) ದುಂಬಾಲು ಬೀಳುತ್ತಾರೆ.

ಕೊನೆಗೂ ಅಬೂತಾಲಿಬ್‌ರ ಮನಕರಗಿ ಮಗುವನ್ನು ಅಪ್ಪಿಕೊಳ್ಳುತ್ತಾರೆ. ಅವರ ಹಣೆಗೆ ಮುದ್ದಿಡುತ್ತಾರೆ. "ನನಗೆ ಎಷ್ಟೇ ಕಷ್ಟವಾದರೂ ಸರಿಯೆ. ನಾನು ನಿನ್ನನ್ನು ಜೊತೆಗೇ ಒಯ್ಯುವೆನು. ನೀನು ಚಿಂತಿಸಬೇಡ, ಅಳಬೇಡ" ಎನ್ನುತ್ತಾ ಮುಹಮ್ಮದ್ ರನ್ನು(ಸ) ಜೊತೆಗೆ ಒಯ್ಯುವ ಸಿದ್ಧತೆ ನಡೆಸುತ್ತಾರೆ.

ರಾತ್ರಿಯ ಪ್ರಥಮ ಜಾವದಲ್ಲೇ ಯಾತ್ರಾತಂಡ ಹೊರಟು ಬಿಡುತ್ತದೆ. ಒಂಟೆಯೊಂದರ ಜೀನಿನಲ್ಲಿ ಮುಹಮ್ಮದ್(ಸ) ಮಲಗುತ್ತಾರೆ. ಪ್ರಭಾತ ಉದಯ ದೊಂದಿಗೇ ಕಣ್ಣು ತೆರೆಯುತ್ತದೆ. ಸುತ್ತಲೂ ವೀಕ್ಷಿಸುತ್ತಾರೆ. ದಿನದ ಬೆಳಕು ಹರಿ ದಂತೆ ನೋಡುವ ಕುತೂಹಲವೂ ಹೆಚ್ಚುತ್ತದೆ. ಒಂದು ಹುಲ್ಲುಕಡ್ಡಿಯೂ ಮೊಳೆ ಯದ ದೊಡ್ಡ ದೊಡ್ಡ ಪರ್ವತಗಳು ಕಣ್ಣು ಹಾಯಿಸಿದಲ್ಲೆಲ್ಲಾ ವ್ಯಾಪಿಸಿವೆ. ಅಂತ್ಯ ವಿಲ್ಲದ ಮರಳ ರಾಶಿಗಳು ಅವುಗಳ ಮೇಲೆ ಒಂಟೆಗಳ ಸಾಲು ಮುಂದುವರಿಯು ತ್ತಲೇ ಇದೆ. ಸೂರ್ಯ ಮೇಲೇರಿದಂತೆಲ್ಲಾ ಖರ್ಜೂರದ ತೋಟಗಳು, ಜಾನು ವಾರುಗಳ ಮಂದೆ ಮತ್ತು ಸಣ್ಣ ಸಣ್ಣ ಗುಡಿಸಲುಗಳು ಗೋಚರಿಸತೊಡಗುತ್ತವೆ. ಸೂರ್ಯನ ಬೆಳಕು ಪ್ರಖರವಾದಂತೆ ಒಂಟೆಗಳನ್ನು ವೇಗವಾಗಿ ಓಡಿಸಲಾಗುತ್ತಿದೆ. ಮಧ್ಯಾಹ್ನಕ್ಕೆ ಮುಂಚೆ ತಂಗುದಾಣ ಹಿಡಿಯಬೇಕೆಂಬುದೇ ಅವರ ಉದ್ದೇಶ.

ಅತ್ಯಂತ ಕೊನೆಯ ಸಾಲಿನಲ್ಲಿರುವ ಒಂಟೆ ಸವಾರನೊಬ್ಬ ಎವೆಯಿಕ್ಕದೆ ಮುಂದಿನ ಸಾಲಿನಲ್ಲಿರುವ ಒಂದು ಒಂಟೆಯತ್ತ ನೋಡುತ್ತಿದ್ದಾನೆ. ಆಶ್ಚರ್ಯದಿಂದ ಅವನ ಬಾಯಿ

ತೆರೆದೇ ಇದೆ. ಇನ್ನೊಬ್ಬ ಅವನನ್ನು ಕಂಡು ಚಕಿತನಾದ.

"ಏಕಿಷ್ಟು ಗಾಬರಿಗೊಂಡಿರುವೆ?" ಎಂದು ಪ್ರಶ್ನಿಸುತ್ತಾನೆ.

"ಅಲ್ಲಿ ನೋಡು, ಅಬೂತಾಲಿಬನ ಒಂಟೆಗಳ ಸಾಲಿನಲ್ಲಿ ಕೆಂಪು ಜೋಳಿಗೆಯ ಒಂಟೆಯ ಮೇಲೆ ಒಂದು ನೆರಳು. ಅದು ಆ ಒಂಟೆ ಸವಾರನನ್ನು ಮಾತ್ರ ಆವರಿಸಿದೆ. ಅಲ್ಲಿ ಆಕಾಶದ ಮೇಲೆ ಮೋಡವಾಗಲಿ, ಚಪ್ಪರವಾಗಲಿ ಇಲ್ಲ" ಎನ್ನುತ್ತಾನೆ ಮೊದಲನೆಯವ.

"ಹೌದು, ನೀನು ಹೇಳುತ್ತಿರುವುದು ನಿಜ. ಅದರಲ್ಲಿ ಯಾರು ಸವಾರರಾಗಿದ್ದಾರೆ?" ಆಶ್ಚರ್ಯ ಚಕಿತನಾಗಿ ಕೇಳುತ್ತಾನೆ ಇನ್ನೊಬ್ಬ.

"ಅಬೂತಾಲಿಬರ ಸೋದರ ಪುತ್ರ ಮುಹಮ್ಮದ್(ಸ)."

ಆಗ ಇನ್ನೊಬ್ಬನು ಸ್ವಲ್ಪ ಹೊತ್ತು ಯೋಚಿಸಿ ಹೀಗೆನ್ನುತ್ತಾನೆ "ನಮ್ಮ ದೇವತೆಗಳು ಅವನ ಮೇಲೆ ಪ್ರಸನ್ನರಾಗಿರಬೇಕು. ಆದ್ದರಿಂದಲೇ ಈ ಅದ್ಭುತ ನೆರಳು ಅವನನ್ನು ಆವರಿಸಿದೆ."

ಮೊದಲನೆಯವನು: "ನಮ್ಮ ದೇವಿ-ದೇವತೆಗಳು ಅನೇಕರ ಮೇಲೆ ಅನುಗ್ರಹ ಮಾಡಿವೆ. ಅನೇಕರಿಗೆ ಸಂತಾನವಾಗಿದೆ. ಬೆಳೆಗಳು ಹೆಚ್ಚಿವೆ. ಜಾನುವಾರುಗಳು ಹೆಚ್ಚಿವೆ. ಯುದ್ಧಗಳಲ್ಲಿ ಜಯ ಸಿಕ್ಕಿವೆ. ರೋಗಿಗಳಿಗೆ ಆರೋಗ್ಯ ಕರುಣಿಸಲ್ಪಟ್ಟಿದೆ. ದಾಸ-ದಾಸಿ ಯರು ಹೆಚ್ಚಾಗಿದ್ದಾರೆ. ಸಿರಿ-ಸಂಪತ್ತು ವೃದ್ಧಿಯಾಗಿದೆ. ಆದರೆ ಈ ತನಕ ನಾವು ಇಂತಹ ನೆರಳಿನ ಆಶ್ರಯ ಯಾರಿಗೂ ಸಿಕ್ಕಿದ್ದು ಕಂಡಿಲ್ಲ. ಇದು ಅತ್ಯಂತ ಅಪೂರ್ವ ವಿಷಯ. ಅಂದ ಹಾಗೆ ನಮ್ಮ ಬರಗಾಲದಲ್ಲಿ ಇದೇ ಹುಡುಗನ ಪ್ರಾರ್ಥನೆಯಿಂದ ಮಳೆಯಾ ಗಿತ್ತು. ವಾಸ್ತವದಲ್ಲಿ ಇಡೀ ಜನಾಂಗವೇ ದೇವಿ ದೇವತೆಗಳ ಆಸ್ಥಾನದಲ್ಲಿ ಸಾಷ್ಟಾಂಗ ಎರಗಿತ್ತು. ಬಲಿ ನೀಡಿದುದಕ್ಕೂ ಲೆಕ್ಕ ಮಿತಿ ಇರಲಿಲ್ಲ. ಆದರೆ ಅದಾವುದೂ ಫಲ ನೀಡಿರಲಿಲ್ಲ. ಇವನೊಬ್ಬ ಅದ್ಭುತ ಬಾಲಕ. ಅಬೂತಾಲಿಬನ ಭಾಗ್ಯ ಖುಲಾಯಿಸಿದೆ."

ಇನ್ನೊಬ್ಬ ಒಂಟೆ ಸವಾರ ಕೆಲವು ಕಾಲ ಮುಹಮ್ಮದ್‌ರ(ಸ) ಒಂಟೆಯತ್ತ ಎವೆ ಯಿಕ್ಕದೆ ನೋಡಿದ ಬಳಿಕ: "ಹೌದು, ನೀನು ಹೇಳುತ್ತಿರುವುದು ಸತ್ಯ. ಅಬೂತಾಲಿಬರ ಜೊತೆ ನಾವು ಅನೇಕ ಸಲ ವ್ಯಾಪಾರ ತಂಡಗಳಲ್ಲಿ ಹೋಗಿ ಬಂದಿದ್ದೇವೆ. ಆದರೆ ಅವರ ಒಂಟೆಗಳು ಇಷ್ಟು ವೇಗವಾಗಿ ಸಾಗುತ್ತಿರುವುದನ್ನು ನಾವೆಂದೂ ಕಂಡಿರಲಿಲ್ಲ. ಸಣಕಲಾದ ಅವರ ಒಂಟೆಗಳು ಮಿಂಚಿನ ವೇಗದಲ್ಲಿ ಚಲಿಸುತ್ತಿವೆ. ಅಷ್ಟಾಗಿ ಅವುಗಳ ಮೇಲೆ ಸರಕು ಕೂಡಾ ಅತ್ಯಧಿಕ ಇವೆ. ಇದೆಲ್ಲಾ ಅದೇ ಬಾಲಕನ ಸೌಭಾಗ್ಯದಿಂದಿರ ಬೇಕು" ಎನ್ನುತ್ತಾನೆ.

"ಹೌದು, ಈ ಹುಡುಗ ಮೊದಲಿಂದಲೇ ವಿಚಿತ್ರವಾದ ಸೌಭಾಗ್ಯ ಹೊಂದಿದ್ದಾನೆ. ಹಲೀಮಾ ಸಅದಿಯ್ಯಾರ ಆಡುಗಳೇ ಅದಕ್ಕೆ ಸಾಕ್ಷಿ. ಈ ಹುಡುಗನಿಂದಾಗಿ ಅವುಗಳಲ್ಲಿ ಹಾಲು ಹೊಳೆಯಾಗಿ ಹರಿಯುತ್ತಿತ್ತು. ಇಡೀ ಗೋತ್ರದಲ್ಲಿ ಇದು ಚರ್ಚಾ ವಿಷಯವಾಗಿತ್ತು. ಖಂಡಿತ ಈ ಸಲ ಅಬೂತಾಲಿಬರ ಲಾಭವು ಎಲ್ಲರಿಗಿಂತ ಹೆಚ್ಚಾಗ ಲಿದೆ" ಎನ್ನುತ್ತಾನೆ ಮೊದಲನೆಯ ಒಂಟೆ ಸವಾರ.

ಮುಹಮ್ಮದ್(ಸ) ತಮ್ಮ ಪರಿಸರದ ಪ್ರತಿಯೊಂದು ವಸ್ತುವಿನ ವೀಕ್ಷಣೆಯಲ್ಲಿ

ತಲ್ಲೀನರಾಗಿ ಪರಿಸರದೊಂದಿಗೆ ಗುಪ್ತ ಸಂಭಾಷಣೆ ನಡೆಸುತ್ತಾ ಸಿರಿಯಾದ ಕಡೆಗೆ ಧಾವಿಸುತ್ತಿದ್ದಾರೆ.

## ಕ್ರೈಸ್ತ ಸನ್ಯಾಸಿಯ ಭವಿಷ್ಯವಾಣಿ

ಬಸ್ರಾದಿಂದ ಮೂರ್ನಾಲ್ಕು ಮೈಲಿ ಈಚೆಗೆ ಬೆಟ್ಟಗಳಿಂದಾವೃತವಾದ ಒಂದು ಮನೋಹರ ತಾಣವಿದೆ. ಅಲ್ಲೇ ಬಹೀರಾ ಎಂಬ ಕ್ರೈಸ್ತ ಸನ್ಯಾಸಿಯ ಆಶ್ರಮವಿದೆ. ಅಲ್ಲಿ ಅನೇಕ ಸನ್ಯಾಸಿಗಳಿದ್ದಾರೆ. ಅವರು ಧ್ಯಾನ, ತಪಸ್ಸು ಮತ್ತು ಆರಾಧನೆಗಳಲ್ಲಿ ನಿರತವಾಗಿರುತ್ತಾರೆ. ಯಾತ್ರಿಕರ ಸೇವೆಯೂ ಅವರ ದಿನಚರಿಯ ಒಂದು ಭಾಗವಾಗಿದೆ. ಬಹೀರಾ ವಯೋವೃದ್ಧ ಮಹಾತ್ಮ. ದೇಹೇಚ್ಛೆಗಳನ್ನು ದಮನಿಸಿ ಪರಿಶುದ್ಧ ಆತ್ಮವನ್ನು ಪಡೆದವರಾಗಿದ್ದಾರೆ. ಆತ್ಮ ಸಂಸ್ಕರಣೆಯ ಮೂಲಕ ಆತ್ಮೀಯ ಶಕ್ತಿಯನ್ನು ಗಳಿಸಿದ್ದಾರೆ. ಪ್ರವಾಸಿಗಳಿಗಾಗಿ ಅವರು ತಮ್ಮ ಆಶ್ರಮದಲ್ಲಿ ಸೂಕ್ತ ಏರ್ಪಾಡುಗಳನ್ನು ಮಾಡಿರುತ್ತಾರೆ. ಬಸ್ರಾ ಪಟ್ಟಣ ಪ್ರವೇಶಿಸುವುದಕ್ಕಿಂತ ಮುಂಚೆ ಹೆಚ್ಚಿನೆಲ್ಲಾ ಯಾತ್ರಿಕರು ಇಲ್ಲಿ ಇಳಿದು ಹೋಗುವುದು ರೂಢಿ. ಸ್ವಲ್ಪ ಕಾಲ ಅಲ್ಲಿ ಕಳೆದು ದಣಿವಾರಿಸಿಕೊಂಡು ತಮ್ಮ ಸಾಮಾನು ಸರಂಜಾಮುಗಳನ್ನು ಪರಿಶೀಲಿಸಿ ಆದ ಮೇಲೆ ಪಟ್ಟಣ ಪ್ರವೇಶಿಸುತ್ತಾರೆ.

ಇಂದು ಕೂಡಾ ಬಹೀರಾ ತನ್ನ ಆಶ್ರಮದ ಮಾಳಿಗೆಯಲ್ಲಿ ಕುಳಿತು ಮುಂಜಾನೆಯ ತಂಗಾಳಿಯ ಸವಿಯುಣ್ಣುತ್ತಿದ್ದಾರೆ. ಪಶ್ಚಿಮದಿಂದ ಬರುವ ದಾರಿಯು ದೂರದವರೆಗೆ ಗೋಚರಿಸುತ್ತಿದೆ. ಅಷ್ಟರಲ್ಲಿ ಒಂದು ಯಾತ್ರಾ ತಂಡವು ಪರ್ವತಗಳನ್ನು ದಾಟಿ ಮುಂದೆ ಬರುತ್ತಿರುವುದು ಕಾಣಿಸುತ್ತದೆ. ಅವರು ಅದನ್ನೇ ದಿಟ್ಟಿಸಿ ನೋಡುತ್ತಾರೆ. ಕೆಂಪು ಜೋಳಿಗೆ ಯಿರುವ ಒಂಟೆಯನ್ನು ಕಂಡಾಗ ಬೆರಗಾಗುತ್ತಾರೆ. ಅದರ ಮೇಲಿರುವ ನೆರಳು ಅವರ ಗಮನ ಸೆಳೆಯುತ್ತದೆ. ಆ ಒಂಟೆ ದಾಟುತ್ತಿರುವಾಗ ಪರಿಸರದ ಗಿಡ-ಮರಗಳು, ಕಲ್ಲು-ಬಂಡೆಗಳು ಬಾಗುತ್ತಿವೆ. ಯಾತ್ರಾ ತಂಡದಲ್ಲಿ ಯಾರೂ ಅದನ್ನು ಗಮನಿಸುತ್ತಿರ ಲಿಲ್ಲವೆಂಬುದೂ ಅವರಿಗೆ ತಿಳಿಯುತ್ತದೆ. ಮಹಾತ್ಮರ ಪವಾಡ ಮಹಿಮೆಗಳ ಬಗ್ಗೆ ಅವರಿಗೇನು ಗೊತ್ತು? ಇದು ಆತ್ಮಕ್ಕೆ ಅನುಭವವಾಗುವ ವಿಷಯವಾದುದರಿಂದ ನೆರಳು, ಮರ ಮತ್ತು ಬಂಡೆಗಳ ಬಾಗುವಿಕೆ ಬಹೀರಾರಿಗೆ ಮಾತ್ರ ಗೋಚರಿಸುತ್ತದೆ.

ಯಾತ್ರಾ ತಂಡವು ಆಶ್ರಮದ ಬಳಿ ತಂಗುತ್ತದೆ. ಜನರು ತಮ್ಮ ಸರಕುಗಳನ್ನು ಇಳಿಸುವುದರಲ್ಲಿ ತಲ್ಲೀನರಾಗಿದ್ದಾರೆ. ಅಷ್ಟರಲ್ಲಿ ಸನ್ಯಾಸಿಯೊಬ್ಬನು ಬಂದು ಇಂದು ಯಾತ್ರಾ ತಂಡದ ಆತಿಥ್ಯ ಬಹೀರಾ ಮಹಾತ್ಮರು ಮಾಡುತ್ತಾರೆ ಎಂದು ತಿಳಿಸಿದನು. ಇದು ಒಂದು ಅಪೂರ್ವ ವಿಷಯ. ಈ ತನಕ ಬಹೀರಾರು ಯಾರ ಆತಿಥ್ಯವನ್ನು ತಾನೇ ವಹಿಸಿರಲಿಲ್ಲ. ಆದರೆ ಯಾತ್ರಾ ತಂಡಕ್ಕೆ ಅಷ್ಟು ಯೋಚಿಸುವ ಸಮಯವಾಗಲೀ ಅಗತ್ಯವಾಗಲೀ ಇರಲಿಲ್ಲ. ಊಟ ಮಾಡುವಾಗ ಬಹೀರಾ, ಮುಹಮ್ಮದ್‌ರನ್ನು(ಸ) ಮನತುಂಬ ನೋಡುತ್ತಾರೆ. ಅವರಲ್ಲಿ ಕೆಲವು ವಿಷಯಗಳನ್ನು ಕೇಳುತ್ತಾರೆ. ಜನರು ಊಟ ಮುಗಿಸಿದಾಗ ಈ ಹುಡುಗನ ರಕ್ಷಕ ಯಾರು ಎಂದು ವಿಚಾರಿಸುತ್ತಾರೆ. ಅಬೂತಾಲಿಬ್ ಎಂದು ತಿಳಿದ ಬಳಿಕ ಅವರನ್ನು ಏಕಾಂತಕ್ಕೆ

ಕರೆದೊಯ್ದು ಹೇಳುತ್ತಾರೆ,

"ನಾನು ಅಂತಿಮ ಪ್ರವಾದಿಯ ಕುರಿತು 'ಝುಬೂರ್', 'ತೌರಾತ್' ಮತ್ತು 'ಇಂಜೀಲ್' ಗಳಲ್ಲಿ ಓದಿದ ಎಲ್ಲ ಕುರುಹುಗಳೂ ನಿಮ್ಮ ಈ ಸೋದರ ಪುತ್ರರಲ್ಲಿ ಮೇಳೈಸಿವೆ. ಖಂಡಿತವಾಗಿಯೂ ಇವರೇ ಅಂತಿಮ ಪ್ರವಾದಿ ಆಗಿರುವರು. ಇವರನ್ನು ರಕ್ಷಿಸಿ. ಯಹೂದಿಗಳು ಇವರ ಶತ್ರುಗಳಾಗಿದ್ದಾರೆ. ಅವರು ಇವರಿಗೆ ಏನಾದರೂ ಕೇಡು ಮಾಡದಿರಲಿ. ಇವರನ್ನು ಚೆನ್ನಾಗಿ ರಕ್ಷಿಸಿ."

ಇದನ್ನು ಕೇಳಿ ಅಬೂತಾಲಿಬ್ ಆಶ್ಚರ್ಯ ಚಕಿತರಾಗುತ್ತಾರೆ.

ಅಧ್ಯಾಯ - ೩

# ಯೌವನ

## ಯಶಸ್ವಿ ವರ್ತಕ

ಇಂದು ಬಸ್ರಾದ ಮಾರುಕಟ್ಟೆಯಲ್ಲಿ ಎಂದಿಲ್ಲದ ಸಂಭ್ರಮ. ಪೇಟೆಯ ಮೂಲೆ ಮೂಲೆಗಳಲ್ಲೂ ಕುರೈಶ್ ವರ್ತಕರು ವ್ಯಾಪಿಸಿದ್ದಾರೆ. ಮಕ್ಕಾ ಕಣಿವೆಯ ಖರ್ಜೂರ, ಚರ್ಮ ಹಾಗೂ ಮನಮೋಹಕ ಕರಕುಶಲ ವಸ್ತುಗಳು ಗ್ರಾಹಕರನ್ನು ಆಕರ್ಷಿಸುತ್ತಿವೆ. ಸಿರಿಯಾದ ವರ್ತಕರು ಕೂಡಾ ತಮ್ಮ ಧಾನ್ಯ, ಶಸ್ತ್ರ, ಬಟ್ಟೆ-ಬರೆಗಳು ಮತ್ತಿತರ ಉತ್ಪನ್ನಗಳ ರಾಶಿಹಾಕಿ ಕುಳಿತಿರುವರು. ಕೆಲವೆಡೆ ವಸ್ತುಗಳ ಬದಲಿಗೆ ವಸ್ತುಗಳು ವಿನಿಮಯವಾಗುತ್ತಿವೆ. ಇನ್ನು ಕೆಲವೆಡೆ ದಿರ್ಹಮ್ ಮತ್ತು ದೀನಾರ್‌ಗಾಗಿ ವ್ಯಾಪಾರ ನಡೆಯುತ್ತಿದೆ. ಎರಡೂ ಕಡೆ ವ್ಯಾಪಾರವು ಬಿರುಸಿನಿಂದ ನಡೆಯುತ್ತಿದೆ. ಕುರೈಶರು ತಮ್ಮ ವಾಕ್ಚಾತುರ್ಯದ ಬಗ್ಗೆ ಹೆಮ್ಮೆಪಟ್ಟರೆ, ಸಿರಿಯಾದವರು ತಮ್ಮ ವ್ಯವಹಾರ ಚತುರತೆಯ ಬಗ್ಗೆ ಗರ್ವ ತಾಳಿದ್ದಾರೆ.

ಒಂದೆಡೆ ಮಾರಾಟದ ಸರಕುಗಳನ್ನು ರಾಶಿಹಾಕಿ ಅಬೂತಾಲಿಬ್ ಮತ್ತು ಮುಹಮ್ಮದ್(ಸ) ನಿಂತಿರುವರು. ಅವರು ತಮ್ಮ ಸಾಮಾನುಗಳನ್ನು ಅತ್ಯಾಕರ್ಷಕವಾಗಿ ಸಜ್ಜುಗೊಳಿಸುತ್ತಿದ್ದಾರೆ. ಜನರು ಇತರೆಲ್ಲ ಕಡೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಅವರ ಬಳಿ ಬರುತ್ತಿದ್ದಾರೆ. ಅಬೂತಾಲಿಬ್ ಗ್ರಾಹಕರ ಆಕ್ಷೇಪಗಳಿಗೆ ಸೂಕ್ತ ಉತ್ತರಗಳನ್ನು ನೀಡುತ್ತಿದ್ದಾರೆ. ಮುಹಮ್ಮದ್(ಸ) ಎಲ್ಲವನ್ನೂ ಸೂಕ್ಷ್ಮವಾಗಿ ವೀಕ್ಷಿಸುತ್ತಿದ್ದಾರೆ, ಆಲಿಸು ತ್ತಿದ್ದಾರೆ. ಇಂದು ಅಬೂತಾಲಿಬರ ಸರಕಿಗೆ ಗ್ರಾಹಕರ ಅಪೂರ್ವ ನೂಕು ನುಗ್ಗಲು. ಅವರ ಜೊತೆ ಬಂದ ವರ್ತಕರ ಸರಕುಗಳು ಗುಣಮಟ್ಟದಲ್ಲಿ ಅವರದಕ್ಕಿಂತ ಕಡಿಮೆ ಇಲ್ಲದಿದ್ದರೂ ಅಲ್ಲಿ ಗ್ರಾಹಕರ ಇಷ್ಟು ನೂಕು ನುಗ್ಗಲು ಇಲ್ಲ. ಇದನ್ನು ಕಂಡು ಸಹಜ ವಾಗಿಯೇ ಇತರ ವರ್ತಕರು ಅಬೂತಾಲಿಬರ ಭಾಗ್ಯದ ಬಗ್ಗೆ ಅಸೂಯೆ ಪಟ್ಟು ಕೊಳ್ಳುತ್ತಾರೆ.

ಮುಹಮ್ಮದ್(ಸ) ದೊಡ್ಡಪ್ಪನ ಜೊತೆ ಸರಕುಗಳನ್ನು ಗ್ರಾಹಕರಿಗೆ ತೋರಿಸುವಲ್ಲಿ ನೆರವಾಗುತ್ತಾರೆ. ಗ್ರಾಹಕರ ಮಾತುಗಳನ್ನು ಗಮನವಿಟ್ಟು ಆಲಿಸುತ್ತಾರೆ. ಬೆಲೆಯ ಬಗ್ಗೆ ಆಗುವ ಚೌಕಾಶಿಯನ್ನು ಕುತೂಹಲದಿಂದ ಗಮನಿಸುತ್ತಾರೆ. ಅವರ ಕಣ್ಣುಗಳು ಗ್ರಾಹಕರ ಮುಖಭಾವವನ್ನು ಚೆನ್ನಾಗಿ ನೋಡುತ್ತಿವೆ.

ಅಬೂತಾಲಿಬರ ಎಲ್ಲ ಸರಕೂ ಮಾರಾಟವಾಯಿತು. ಈಗ ಅವರು ಮಕ್ಕಾಕ್ಕೆ ಮರಳುವಾಗ ಕೊಂಡು ಹೋಗಬೇಕಾದ ಸರಕುಗಳ ಖರೀದಿಯಲ್ಲಿ ನಿರತರಾಗಿದ್ದಾರೆ. ಈ ಸಲ ಅವರಿಗೆ ಅತ್ಯಧಿಕ ಲಾಭವಾಗಿದೆ. ಮುಹಮ್ಮದ್‌ರಿಗೆ(ಸ) ತಮ್ಮ ಸರಕುಗಳನ್ನು ಮಾರುವ ಅನೇಕ ಸೂಕ್ಷ್ಮತೆಗಳ ಅರಿವಾಗಿದೆ. ಗ್ರಾಹಕರೊಂದಿಗೆ ವ್ಯವಹರಿಸುವುದು ಈಗ ಅವರಿಗೆ ಸುಲಭವಾಗಿ ಕಾಣುತ್ತಿದೆ. ಸಹನೆ ಮತ್ತು ಸೌಮ್ಯತೆಯ ಮಹತ್ವವು ಅವರಿಗೆ ಚೆನ್ನಾಗಿ ತಿಳಿದಿದೆ. ಅವರು ಮನದಲ್ಲೇ ಅಂದುಕೊಳ್ಳುತ್ತಾರೆ: "ವ್ಯಾಪಾರವು ಆಡು ಮೇಯಿಸುವುದಕ್ಕಿಂತ ಆಕರ್ಷಕ ಕಸುಬು. ಇನ್ನು ಮುಂದೆ ನಾನು ದೊಡ್ಡಪ್ಪನಿಗೆ ವ್ಯಾಪಾರದಲ್ಲಿ ನೆರವಾಗುವೆನು" ಹೀಗೆ ಯೋಚಿಸುತ್ತಲೇ ಅವರ ಮುಖ ಸಂತೋಷದಿಂದ ಅರಳುತ್ತದೆ.

ಅಬೂತಾಲಿಬ್ ಸರಕುಗಳನ್ನು ಖರೀದಿಸಿಯಾಗಿದೆ. ಮುಹಮ್ಮದ್(ಸ) ಎಲ್ಲ ಕಡೆ ಅವರ ಜೊತೆಗಿದ್ದರು. ಖರೀದಿಯ ಗುಟ್ಟನ್ನೂ ಅವರು ತಕ್ಕಮಟ್ಟಿಗೆ ಮನವರಿಕೆ ಮಾಡಿ ಕೊಂಡಿದ್ದಾರೆ. ಅವರೀಗ ಸಾಮಾನುಗಳನ್ನು ಕಟ್ಟುತ್ತಿದ್ದಾರೆ. ಅವರ ಅಚ್ಚುಕಟ್ಟು, ಶ್ರಮ ಮತ್ತು ಚುರುಕುತನ ಕಂಡು ಒಬ್ಬ ವೃದ್ಧ ಅವರ ಬಳಿ ಬರುತ್ತಾರೆ. "ಇವನು ನಿಮ್ಮ ಮಗನೇ?" ಎಂದು ವಿಚಾರಿಸುತ್ತಾರೆ. ಅಬೂತಾಲಿಬ್ ಹೌದೆಂದು ಉತ್ತರಿಸಿದಾಗ ಹೀಗೆ ಹೇಳುತ್ತಾರೆ: "ನೀವು ಸೌಭಾಗ್ಯವಂತರು. ಈ ಹುಡುಗನ ಹಣೆಯಲ್ಲಿ ಚಿಂತನೆ ಮತ್ತು ವ್ಯವಹಾರ ಜ್ಞಾನದ ಕುರುಹುಗಳಿವೆ. ಅವನ ಮುಖದಲ್ಲಿ ಅಪೂರ್ವ ಆಕರ್ಷಣೆ ಮತ್ತು ಕಣ್ಣುಗಳಲ್ಲಿ ಅನನ್ಯ ಕಾಂತಿ ಇದೆ. ಈ ಎಳೆಯ ಪ್ರಾಯದಲ್ಲೇ ಹುಡುಗನಲ್ಲಿ ವಿಚಿತ್ರ ಕಾಂತಶಕ್ತಿಯಿದೆ. ಇವನ ಗಾಂಭೀರ್ಯ ಮತ್ತು ಸವಿಮಾತುಗಳು ಇವನ ಅಸಾಮಾನ್ಯ ಸಾಮರ್ಥ್ಯಗಳ ಸಂಕೇತವಾಗಿವೆ. ಒಂದು ದಿನ ಖಂಡಿತ ಇವನು ನಕ್ಷತ್ರವಾಗಿ ಹೊಳೆಯ ಲಿದ್ದಾನೆ. ನೀವು ಅವನನ್ನು ಚೆನ್ನಾಗಿ ಸಂರಕ್ಷಣೆ ಮಾಡಿ. ನಾನು ಸತ್ಯ ಹೇಳುತ್ತಿರುವೆನು. ನನ್ನ ಈ ಕೂದಲು ಬಿಸಿಲಲ್ಲಿ ನೆರೆದುದಲ್ಲ. ನಾನು ಕೈಸರ್ ಮತ್ತು ಕಿಸ್ರಾಗಳ ಆಸ್ಥಾನ ದಲ್ಲಿ ಅವರ ರಾಜಕುಮಾರರನ್ನು ಕಂಡಿದ್ದೇನೆ. ಆದರೆ ನಿಮ್ಮ ಈ ಕುವರನು ನಿರಕ್ಷರಿ ಯಾಗಿಯೂ ಅವರೆಲ್ಲರಿಗಿಂತಲೂ ಮಿಗಿಲಾದ ಬುದ್ಧಿಶಾಲಿಯಾಗಿದ್ದಾನೆ" ಎಂದು ವೃದ್ಧನು ಹೇಳಿದಾಗ ಅಬೂತಾಲಿಬರು ಪುಳಕಿತಗೊಳ್ಳುತ್ತಾರೆ. ಮುಹಮ್ಮದ್‌ರ(ಸ) ದೃಷ್ಟಿ ಕೆಳಗಾಗುತ್ತದೆ. ವಯೋವೃದ್ಧನು ಅವರ ಕೈಗಳನ್ನು ಚುಂಬಿಸುತ್ತಾ "ಚಿರಾಯುವಾಗು ಮಗನೇ!" ಎನ್ನುತ್ತಾರೆ.

ಕುರೈಶರ ಯಾತ್ರಾ ತಂಡವು ಸಿರಿಯಾದ ವಿಭಿನ್ನ ನಗರಗಳಲ್ಲಿ ವ್ಯಾಪಾರ ವಹಿವಾಟು ನಡೆಸಿ ಮಕ್ಕಾದ ಕಡೆಗೆ ಮರಳುತ್ತಿದೆ. ನಿರೀಕ್ಷೆಗಿಂತ ಹೆಚ್ಚು ಲಾಭವಾದುದ ರಿಂದ ಅಬೂತಾಲಿಬ್ ಅತ್ಯಂತ ಸಂತೋಷದಿಂದ ಮರಳುತ್ತಿದ್ದಾರೆ. ಮುಹಮ್ಮದ್(ಸ) ಅನುಭವಸಿರಿಯೊಂದಿಗೆ ಮರಳುತ್ತಿದ್ದಾರೆ. ಮಕ್ಕಾಕ್ಕೆ ಹಿಂತೆರಳುವ ಮಾರ್ಗದ ಎಲ್ಲ ದೃಶ್ಯಗಳೂ ಅವರ ಪಾಲಿಗೆ ಹೆಚ್ಚು ಆಕರ್ಷಕವೂ ಅರ್ಥಪೂರ್ಣವೂ ಆಗಿವೆ.

ಮಕ್ಕಾದಲ್ಲಿ ಯಾತ್ರಾತಂಡದ ಮರಳುವಿಕೆಯ ವಿಷಯ ತಿಳಿಯುತ್ತಲೇ ಸಂಭ್ರಮೋಲ್ಲಾಸದ ಅಲೆ ಏಳುತ್ತದೆ. ಎಲ್ಲರೂ ತಂತಮ್ಮ ಬಂಧು ಮಿತ್ರರನ್ನು ಬರಮಾಡಿಕೊಳ್ಳಲು ಬಂದು ಸೇರುತ್ತಾರೆ. ಬನೂ ಹಾಶಿಮ್ ಗೋತ್ರದಿಂದ ಅಬ್ಬಾಸ್ ಮತ್ತು

ಹಮ್‌ಝಾ ಬರುತ್ತಾರೆ. ಅಬ್ದುಲ್ಲಾರ ದಾಸಿ ಉಮ್ಮು ಐಮನ್ ಕೂಡಾ ಜೊತೆಗಿದ್ದಾರೆ. ಅವರನ್ನು ಮುಹಮ್ಮದ್(ಸ) ತಮ್ಮ ತಾಯಿಯ ನಿಧನದ ಬಳಿಕ 'ಅಮ್ಮಾ' ಎಂದೇ ಕರೆಯುತ್ತಿದ್ದರು. ಯಾತ್ರಾ ತಂಡ ಬಂದಿಳಿದೊಡನೆ ಎಲ್ಲರೂ ತಂತಮ್ಮ ಸರಕುಗಳನ್ನು ಒಂಟೆಯಿಂದ ಇಳಿಸುತ್ತಿದ್ದಾರೆ. ಅಬೂತಾಲಿಬರ ಪುತ್ರ ತಾಲಿಬ್ ಕೂಡಾ ಅದೇ ಕೆಲಸದಲ್ಲಿ ನಿರತರಾಗಿರುವರು.

ಸಂಜೆಯಾಗುತ್ತಲೇ ಈ ಗದ್ದಲ ಮುಗಿಯುತ್ತದೆ. ಮರುದಿನ ಸೂರ್ಯೋದಯದ ಜೊತೆಗೆ ವ್ಯಾಪಾರ ವಹಿವಾಟು ಆರಂಭವಾಗುತ್ತದೆ. ಯಾತ್ರಾ ತಂಡವು ಜೊತೆಗೆ ತಂದಿರುವ ಸರಕುಗಳ ಮಾರಾಟ ಮಾರನೆ ದಿನವೂ ಮುಂದುವರಿಯುತ್ತದೆ. ಮುಹಮ್ಮದ್(ಸ) ಓರ್ವ ಯಶಸ್ವಿ ವರ್ತಕನಾಗಿ ಮೂಡಿ ಬಂದಿದ್ದಾರೆ. ಅಬೂತಾಲಿಬರಿಗೆ ಇದರಿಂದ ಎಲ್ಲಿಲ್ಲದ ಸಂತೋಷ. ಈಗ ಜೀವನೋಪಾಯದ ಗಳಿಕೆಯಲ್ಲಿ ಅನುಭವಸ್ಥ ಯುವಕನೊಬ್ಬನ ನೆರವು ದೊರೆತಂತಾಯಿತು. ಈ ನಿರಕ್ಷರಿ ಮತ್ತು ಎಳೆ ವಯಸ್ಸಿನ ವರ್ತಕನನ್ನು ಜನರೂ ಗುರುತಿಸುತ್ತಾರೆ. ಅನೇಕ ದಿನಗಳ ತನಕ ಅವರ ವಿಷಯವು ಮಕ್ಕಾದಲ್ಲಿ ಮನೆ ಮಾತಾಗುತ್ತದೆ. ಇದನ್ನು ಕೇಳಿ ಅವರಿಗಿಂತ ಪ್ರಾಯದಲ್ಲಿ ಎರಡು ವರ್ಷ ಚಿಕ್ಕವನಾದ ಇನ್ನೋರ್ವ ಬಾಲಕ ಅವರಿಗೆ ನಿಕಟವಾಗುತ್ತಾನೆ. ಅವರೊಂದಿಗೆ ಸ್ನೇಹ ಬೆಳೆಸುತ್ತಾನೆ. ಆ ಬಾಲಕನೇ ತಮೀಮ್ ಗೋತ್ರದ ಅಬೂ ಕಹಾಫರ ಪುತ್ರ ಅಬೂಬಕರ್(ರ).*

## ಫುಜ್ಜಾರ್* ಯುದ್ಧ

ಹೈರ ಅಂದಿನ ಇರಾಕ್ ದೇಶದ ರಾಜಧಾನಿ. ಆ ನಗರದ ವೈಭವವು ಅರೇಬಿಯಾದ ಮೂಲೆಮೂಲೆಗಳಲ್ಲೂ ಜನಜನಿತವಾಗಿದೆ. ಅಲ್ಲಿಯ ಅರಮನೆಗಳು ಅತ್ಯಂತ ಸುಂದರವೂ ಸುಭದ್ರವೂ ಆಗಿದ್ದುವು. ಇರಾಕ್‌ನ ರಾಜ 'ನೂಮಾನ್ ಅಕ್ಬರ್' ಈ ಅರಮನೆಯ ಶಿಲ್ಪಿಯನ್ನು ಕೋಟೆಯ ಗೋಡೆಯಿಂದ ಕೆಳಗೆ ಬೀಳಿಸಿ ಕೊಂದಿದ್ದನು. ಅಂತಹ ಅರಮನೆಯನ್ನು ಅವನು ಇನ್ನಾರಿಗೂ ನಿರ್ಮಿಸಬಾರದೆಂಬುದೇ ಅವನ ಉದ್ದೇಶವಾಗಿತ್ತು.

ನೂಮಾನ್ ಬಿನ್ ಮುನ್‌ದಿರ್ ಹೈರದ ರಾಜನಾಗಿದ್ದ ಕಾಲ. ಮದ್ಯಪಾನ ಮತ್ತು ಸುಖಲೋಲುಪತೆಗೆ ಅವನು ಪ್ರಖ್ಯಾತನಾಗಿದ್ದ. ಅವನ ಪುತ್ರಿಯೊಬ್ಬಳು ಸುರ ಸುಂದರಿಯಾಗಿದ್ದಳು. ಅವಳ ಸೌಂದರ್ಯದ ಬಗ್ಗೆ ತಿಳಿದ ಇರಾನ್‌ನ ರಾಜ ಕಿಸ್ರಾ ಆಕೆಯನ್ನು ತನ್ನ ಅಂತಃಪುರದಲ್ಲಿ ಸೇರಿಸುವ ಬಯಕೆಯನ್ನು ವ್ಯಕ್ತಪಡಿಸಿದ್ದ. ನೂಮಾನ್, 'ಅರಬರು ತಮ್ಮ ಪುತ್ರಿಯರನ್ನು ಅರಬೇತರರಿಗೆ ವಿವಾಹ ಮಾಡಿಕೊಡುವುದಿಲ್ಲ' ಎಂದು ಕಡ್ಡಿ ಮುರಿದಂತೆ ಹೇಳಿದಾಗ, ಅದಕ್ಕೆ ಪ್ರತೀಕಾರವೆಂಬಂತೆ ನೂಮಾನ್‌ನನ್ನು ಕಿಸ್ರಾನ ಆಸ್ಥಾನದಲ್ಲಿ ಆನೆಯಿಂದ ತುಳಿಸಿ ಕೊಲ್ಲಲಾಗಿತ್ತು. ಇದು ಒಂದು ಘೋರ ಯುದ್ಧಕ್ಕೆ ನಾಂದಿಯಾಯಿತು. ಕೊನೆಗೆ ಕಿಸ್ರಾ ಸೇನೆಯು 'ದೀಕಾರ್'ನ ರಣಾಂಗಣದಲ್ಲಿ ಸೋಲನು ಭವಿಸಿತು. ಅರಬರು ತಮಗಾದ ಅವಹೇಳನ ಮತ್ತು ಕೊಲೆಯ ಪ್ರತೀಕಾರ ಪಡೆಯಲು ಸಮರ್ಥರು ಎಂಬುದನ್ನು ಈ ವಿಜಯವು ತೋರಿಸಿಕೊಟ್ಟಿತ್ತು.

ಇಂದು ನೂಮಾನ್ ಬಿನ್ ಮುನ್‌ದಿರ್‌ನ ಆಸ್ಥಾನದಲ್ಲಿ ಕಿನಾನ ಮತ್ತು ಹವಾಝಿನ್ ಗೋತ್ರಗಳ ಪ್ರತಿನಿಧಿಗಳು ಹಾಜರಾಗಿದ್ದಾರೆ. ಮಕ್ಕಾದ ಸುಪ್ರಸಿದ್ಧ ಸಂತೆ ಉಕಾಝ್‌ನ ಕುರಿತು ಮಾತುಕತೆ ನಡೆಯುತ್ತಿತ್ತು. ಉಕಾಝ್ ಮಕ್ಕಾದ ಪರಿಸರದಲ್ಲಿ ನಡೆಯುವ ವಾರ್ಷಿಕ ಸಂತೆ. ಅದರಲ್ಲಿ ಇಡೀ ಅರೇಬಿಯಾದ ವ್ಯಾಪಾರ ತಂಡಗಳು ಭಾಗವಹಿಸುತ್ತಿದ್ದುವು. ಹ. ಇಬ್ರಾಹೀಮ್‌ರ(ಅ) ಕಾಲದಿಂದಲೇ ಯುದ್ಧನಿಷಿದ್ಧ ತಿಂಗಳು ಗಳಾದ ದುಲ್‌ಕಅದ್, ದುಲ್‌ಹಜ್ಜ್, ಮುಹರ್ರಮ್ ಮತ್ತು ರಜಬ್‌ಗಳಲ್ಲಿ ಈ ಸಂತೆ ನಡೆಯುತ್ತಿತ್ತು.

ನೂಮಾನ್ ಬಿನ್ ಮುನ್‌ದಿರ್‌ನ ವ್ಯಾಪಾರ ತಂಡವು ಉಕಾಝ್ ಸಂತೆಗೆ ಹೋಗಲು ಅಣಿಯಾಗಿ ನಿಂತಿದೆ. ಅವರಿಗೆ ಹೋಗುವ ಅನುಮತಿ ನೀಡುವುದಕ್ಕಿಂತ ಮೊದಲು ಕಿನಾನ ಗೋತ್ರದ ಬರ್ರಾಝ್ ಹಾಗೂ ಹವಾಝಿನ್ ಗೋತ್ರದ ಉರ್ವಾರನ್ನುದ್ದೇಶಿಸಿ "ನೀವಿಬ್ಬರೂ ಅರಬ್ ಸರದಾರರು. ನಾನು ನನ್ನ ವ್ಯಾಪಾರಿ ತಂಡಕ್ಕೆ ನಿಮ್ಮಿಂದ ಅಭಯ ಯಾಚಿಸುತ್ತೇನೆ. ನಿಮ್ಮ ಪೈಕಿ ಯಾರು ಅದಕ್ಕೆ ಅಭಯ ನೀಡಬಲ್ಲರು?" ಎಂದು ಪ್ರಶ್ನಿಸುತ್ತಾನೆ.

"ಮಹಾ ಪ್ರಭುಗಳೇ! ನಾನು ತಮ್ಮ ಯಾತ್ರಾ ತಂಡಕ್ಕೆ ಕಿನಾನ ಗೋತ್ರದಿಂದ ಅಭಯ ನೀಡುತ್ತೇನೆ" ಎನ್ನುತ್ತಾನೆ ಬರ್ರಾಝ್.

"ಆದರೆ ನನಗೆ ನಜ್ದ್ ಮತ್ತು ತಹಾಮದ ಎಲ್ಲ ನಿವಾಸಿಗಳಿಂದ ಅಭಯ ನೀಡುವವರು ಬೇಕಾಗಿದ್ದಾರೆ" ಎನ್ನುತ್ತಾನೆ ರಾಜ ನೂಮಾನ್ ಬಿನ್ ಮುನ್‌ದಿರ್.

ಆಗ ಉರ್ವಾ ಗರ್ವದಿಂದ ಹೀಗೆನ್ನುತ್ತಾನೆ: "ಮಹಾ ಪ್ರಭುಗಳೇ, ಇವನು ಜನಾಂಗದಿಂದ ಬಹಿಷ್ಕೃತನಾದ ನಾಯಿ. ತಮ್ಮ ವ್ಯಾಪಾರ ತಂಡಕ್ಕೆ ಇವನೆಂತಹ ಅಭಯ ನೀಡಿಯಾನು. ಅಭಯ ನೀಡುವುದಂತೂ ನಮ್ಮಂತಹ ಸರದಾರರ ಕೆಲಸ. ತಾವು ನನ್ನ ಮೇಲೆ ಭರವಸೆ ಇಡಬಹುದು. ನಾನು ತಮ್ಮ ಯಾತ್ರಾ ತಂಡಕ್ಕೆ ನಜ್ದ್ ಮತ್ತು ತಹಾಮದ ಎಲ್ಲ ನಿವಾಸಿಗಳಿಂದ ಅಭಯ ನೀಡುತ್ತೇನೆ."

ಇದನ್ನು ಕೇಳಿ ಕೆರಳಿದ ಬರ್ರಾಝ್, "ನೀನು ಕಿನಾನ ಗೋತ್ರದಿಂದ ಅವರಿಗೆ ಅಭಯ ನೀಡಬಲ್ಲೆಯಾ?" ಎಂದು ಪ್ರಶ್ನಿಸುತ್ತಾನೆ.

"ಕಿನಾನ ಗೋತ್ರದಿಂದ ಮಾತ್ರವಲ್ಲ, ಎಲ್ಲ ಜನರಿಂದಲೂ ನಾನು ಅವರಿಗೆ ಅಭಯ ನೀಡುತ್ತೇನೆ" ಎಂದು ಉರ್ವಾ ಉತ್ತರಿಸುತ್ತಾನೆ.

ಬರ್ರಾಝ್ ಉರ್ವಾನಷ್ಟು ಉನ್ನತ ಪದವಿಯುವನಾಗಿರಲಿಲ್ಲ. ಆದ್ದರಿಂದ ಈ ವಿಷಕಾರುವಿಕೆಯನ್ನು ಮೌನವಾಗಿ ಸಹಿಸುತ್ತಾನೆ. ಆದರೆ ಅವನ ಹೃದಯದಲ್ಲಿ ಪ್ರತೀಕಾರದ ಅಗ್ನಿ ಉರಿಯುತ್ತಿರುತ್ತದೆ. ಉರ್ವಾನ ಅಭಯದಲ್ಲಿ ಹೊರಟ ಯಾತ್ರಾ ತಂಡದಲ್ಲಿ ಬರ್ರಾಝ್ ಕೂಡಾ ಸೇರಿಕೊಂಡಿದ್ದ. ಸಂದರ್ಭ ಹುಡುಕಿ ಅವನು ಉರ್ವಾನ ಕಥೆ ಮುಗಿಸಿಬಿಟ್ಟ.

ಪ್ರತೀಕಾರವು ಅರಬರ ಹುಟ್ಟು ಗುಣ. ಪ್ರತೀಕಾರ ಮಾಡದವರು ಮನುಷ್ಯರೇ ಅಲ್ಲ ಎಂದು ಅವರು ತಿಳಿದಿದ್ದರು. ಹವಾಝಿನ್ ಗೋತ್ರವು ತನ್ನ ಸರದಾರನ ಕೊಲೆಯ ಪ್ರತೀಕಾರಕ್ಕೆ ಇಳಿಯಿತು. ಕಿನಾನ ಗೋತ್ರದ ಸರದಾರರನ್ನು ವಿಚಾರಿಸಿದಾಗ ಅವರು ಕೊಲೆಗಾರನನ್ನೇ ಪ್ರತೀಕಾರ ರೂಪದಲ್ಲಿ ಕೊಂದು ಬಿಡಿ ಎನ್ನುತ್ತಾರೆ. ಆದರೆ ಹವಾಝಿನ್ ಗೋತ್ರದವರಿಗೆ

ಇದು ಹಿಡಿಸುವುದಿಲ್ಲ. ಅವರ ಸರದಾರ ಆರ್ಭಟಿಸುತ್ತಾನೆ:

"ಬರ್ರಾಝ್ ಒಂದು ನಾಯಿ. ಉರ್ವಾನ ಬದಲಿಗೆ ನಾವು ಅವನನ್ನು ಕೊಲ್ಲಲಾರೆವು. ಅವನೆಂದೂ ನಮ್ಮ ಸರದಾರನಿಗೆ ಸಮಾನವಾಗಲಾರ. ನಾವು ಕುರೈಶರ ಸರದಾರರನ್ನು ವಧಿಸುವೆವು. ನಾಯಿಯ ರಕ್ತದಿಂದ ನಮ್ಮ ಖಡ್ಗವನ್ನು ರಂಜಿಸುವುದು ನಮ್ಮ ಮಟ್ಟಿಗೆ ಅವಮಾನದ ಕೃತ್ಯ."

ಹವಾಝಿನ್ ಗೋತ್ರದವರು ಪಟ್ಟು ಬಿಡದಾಗ ಯುದ್ಧವೇ ಈ ಸಮಸ್ಯೆಗೆ ಪರಿಹಾರವೆಂದು ತೀರ್ಮಾನಿಸಿ ಉಭಯ ಗೋತ್ರಗಳೂ ಯುದ್ಧದ ಸಿದ್ಧತೆಯಲ್ಲಿ ತೊಡಗಿದವು. ಇದು ಯುದ್ಧ ನಿಷಿದ್ಧ ತಿಂಗಳೆಂಬುದರ ಪರಿವೆಯೂ ಅವರಿಗೆ ಇರಲಿಲ್ಲ. ಆದ್ದರಿಂದ ಈ ಯುದ್ಧವನ್ನು 'ಫುಜ್ಜಾರ್ ಯುದ್ಧ'ವೆನ್ನಲಾಗುತ್ತದೆ.

ಮಕ್ಕಾದ ಪರಿಸರದಲ್ಲಿ ಹವಾಝಿನ್ ಮತ್ತು ಕುರೈಶ್ ಗೋತ್ರಗಳ ಸೇನೆಯ ಮಧ್ಯೆ ಯುದ್ಧ ಆರಂಭವಾಗಿತ್ತು. ಅನೇಕ ಸಲ ಹವಾಝಿನ್ ಗೋತ್ರದವರು ಕುರೈಶರನ್ನು ಕಅಬಾ ಭವನದ ವರೆಗೆ ಅಟ್ಟಿಕೊಂಡು ಬಂದಿದ್ದರು.

ಮುಹಮ್ಮದ್(ಸ) ಅವರು ಕೂಡಾ ತಮ್ಮ ಪಿತೃ ಸಹೋದರರಾದ ಅಬೂ ತಾಲಿಬ್, ಹಮ್‌ಝಾ ಮತ್ತು ಅಬ್ಬಾಸ್‌ರಿಗೆ ನೆರವಾಗಲು ರಣರಂಗದಲ್ಲಿದ್ದಾರೆ. ಹವಾಝಿನ್ ಸೈನಿಕರ ಕಡೆಯಿಂದ ಬಂದು ಬೀಳುವ ಬಾಣಗಳನ್ನು ಹೆಕ್ಕಿ ಸಂಗ್ರಹಿಸು ತ್ತಾರೆ. ತಮ್ಮ ಪಿತೃಸೋದರರ ಬತ್ತಳಿಕೆಯಿಂದ ಬಾಣಗಳನ್ನು ಎತ್ತಿ ಅವರಿಗೆ ನೀಡಿ ನೆರವಾಗುತ್ತಾರೆ. 'ನನಗೂ ಯುದ್ಧವಿದ್ಯೆಯನ್ನು ಕಲಿಯಬೇಕು' ಎಂಬ ಬಯಕೆ ಅವರ ಮನದಲ್ಲಿ ಬಲಗೊಳ್ಳುತ್ತದೆ. ಅಬೂತಾಲಿಬ್ ಅವರ ಮನದಿಂಗಿತವನ್ನು ಅರಿತವರಂತೆ, "ಮಗನೇ, ಈ ಯುದ್ಧ ಮುಗಿದ ಮೇಲೆ ನಿನಗೆ ನಾನು ಸೈನಿಕ ವಿದ್ಯೆ ಕಲಿಸುವೆನು. ನೀನೀಗ ಯುವಕನಾಗಿರುವೆ. ಯುವಕರಿಗೆ ಯುದ್ಧವಿದ್ಯೆ ತಿಳಿದಿರಲೇ ಬೇಕು" ಎನ್ನುತ್ತಾರೆ. "ಹೌದು, ಯುದ್ಧವಿದ್ಯೆ ಗೊತ್ತಿಲ್ಲದಿದ್ದರೆ ಅನ್ಯಾಯಕ್ಕೊಳಗಾದವರಿಗೆ ರಕ್ಷಣೆ ನೀಡುವುದು ಅಸಾಧ್ಯ. ಇಂದು ಕುರೈಶರಿಗೆ ಯುದ್ಧವಿದ್ಯೆ ಇಲ್ಲದಿರುತ್ತಿದ್ದರೆ ನಾವೆಲ್ಲರೂ ಮಹಿಳೆಯರು ಮಕ್ಕಳ ಸಮೇತ ಹವಾಝಿನ್‌ಗಳ ಗುಲಾಮರಾಗಿ ಬಿಡುತ್ತಿದ್ದೆವು" ಎಂದು ಮುಹಮ್ಮದ್(ಸ) ಮನದಲ್ಲೇ ಅಂದುಕೊಳ್ಳುತ್ತಾರೆ.

## ಫುಝೂಲ್ ಒಡಂಬಡಿಕೆ

ಮಕ್ಕಾದ ಪರಿಸರದಲ್ಲಿ ಫುಜ್ಜಾರ್ ಯುದ್ಧವು ಅನೇಕ ತಿಂಗಳಲ್ಲ, ವರ್ಷಗಳ ವರೆಗೆ ಮುಂದುವರಿಯುತ್ತದೆ. ಅನೇಕ ಯೋಧರು ಸಾವಿಗೀಡಾಗುತ್ತಾರೆ. ಹವಾಝಿನ್, ಕಿನಾನ ಮತ್ತು ಕುರೈಶ್ ಗೋತ್ರದ ಅನೇಕ ಕುಟುಂಬಗಳು ಸಾವು - ನೋವುಗಳಿಂದ ತತ್ತರಿಸಿವೆ. ಅನೇಕ ಗೃಹಿಣಿಯರು ವಿಧವೆಯರಾಗಿದ್ದಾರೆ. ಅನಾಥ ಬಾಲಕ ಬಾಲಕಿಯರ ದೀನ ರೋದನ ಹೃದಯ ವಿದ್ರಾವಕವಾಗಿದೆ. ಎಲ್ಲರೂ ಈ ಯುದ್ಧದಿಂದ ಕಂಗಾಲಾ ಗಿದ್ದಾರೆ. ಯುದ್ಧವನ್ನು ಮುಂದುವರಿಸುವುದು ಯಾರಿಗೂ ಬೇಕಾಗಿಲ್ಲ. ಶಾಂತಿ ಮಾತುಕತೆಗಳು ಆರಂಭಗೊಳ್ಳುತ್ತವೆ. ಯುದ್ಧ ನಿಲುಗಡೆಯಾಗುತ್ತದೆ. ಪ್ರತೀಕಾರದ

ಯಾವುದೇ ಕ್ರಮವನ್ನು ಇನ್ನು ಮುಂದೆ ಕೈಗೊಳ್ಳುವುದಿಲ್ಲವೆಂಬ ಒಪ್ಪಂದ ಏರ್ಪಡುತ್ತದೆ. ಮಕ್ಕಾ ನಗರಕ್ಕೆ ಶಾಂತಿ ಮತ್ತೆ ಮರಳಿದೆ. ಪೇಟೆಗೆ ಈಗ ಮತ್ತೊಮ್ಮೆ ಜೀವಕಳೆ ಬಂದಿದೆ. ಫುಜ್ಜಾರ್ ಯುದ್ಧದ ನೆನಪು ಮಾಸುತ್ತಾ ಬಂದಿದೆಯಾದರೂ ಚಿರಶಾಂತಿ ಇನ್ನೂ ಮರೀಚಿಕೆಯೇ ಆಗಿದೆ ಎನ್ನುವುದು ಅವರ ಭಾವನೆ.

ಝುಬೀದ್ ನಗರದ ಓರ್ವ ವರ್ತಕ. ತನ್ನ ವ್ಯಾಪಾರ ಸರಕಿನೊಂದಿಗೆ ಮಕ್ಕಾ ಪ್ರವೇಶಿಸುತ್ತಾನೆ. ಪೇಟೆಯಲ್ಲಿ ಆಸ್ ಬಿನ್ ವಾಯಿಲ್‌ನೊಂದಿಗೆ ವ್ಯವ ಹಾರ ಕುದುರುತ್ತದೆ. ಮೂರು ದಿನಗಳ ನಂತರ ಹಣ ಪಾವತಿ ಮಾಡುವ ವಚನ ದೊಂದಿಗೆ ಅವನು ಸರಕು ಖರೀದಿಸುತ್ತಾನೆ. ಆದರೆ ಮೂರು ದಿನಗಳ ಬಳಿಕ ಅವನು ಬಂದಾಗ ಮುಂದಿನ ಅವಧಿ ಹೇಳಿ ಮರಳಿಸುತ್ತಾನೆ. ಹೀಗೆ ಹಲವು ಸಲ ಅವನ ಮನೆಬಾಗಿಲಿಗೆ ಅಲೆದ ಬಳಿಕವೂ ಅವನ ಹಣ ಸಿಗುವುದಿಲ್ಲ. ಕೊನೆಗೆ, "ನನಗೆ ನಿನ್ನ ಪರಿಚಯವೇ ಇಲ್ಲ. ನಾನು ನಿನಗೆ ಯಾವುದೇ ಹಣ ಕೊಡಬೇಕಾ ಗಿಲ್ಲ" ಎಂದು ಬಿಡುತ್ತಾನೆ ಆಸ್ ಬಿನ್ ವಾಯಿಲ್. ವರ್ತಕ ದಿಗ್ಭ್ರಾಂತನಾಗು ತ್ತಾನೆ. ಮಕ್ಕಾದ ಎಲ್ಲ ಸರದಾರರ ಮನೆಬಾಗಿಲಿಗೂ ಹೋಗಿ ದೂರಿಕೊಳ್ಳುತ್ತಾನೆ. ಯಾರೂ ಅವನ ನೆರವಿಗೆ ಬರಲು ಸಿದ್ಧರಾಗುವುದಿಲ್ಲ. ನಿರಾಶನಾದ ವರ್ತಕ ಕೊನೆಯ ಉಪಾಯವೆಂಬಂತೆ ಅರಬರ ವಾಡಿಕೆಯಂತೆ ಅಬೂಕುಬೈಸ್ ಬೆಟ್ಟವನ್ನೇರಿ, ತನ್ನ ಬಟ್ಟೆಗಳನ್ನು ಕಳಚಿ ಪೂರ್ಣ ನಗ್ನನಾಗುತ್ತಾನೆ. ತಲೆಯ ಮೇಲೆ ಮಣ್ಣು ಹಾಕಿ ಕೊಳ್ಳುತ್ತಾನೆ. ಜೋರಾಗಿ ಆರ್ಭಟಿಸಿ ಘೋಷಿಸುತ್ತಾನೆ:

"ಕುರೈಶ್ ಜನರೇ, ಹಾಶಿಮ್ ಗೋತ್ರದವರೇ, ಅಬ್ದುಲ್ ಮುತ್ತಲಿಬರ ಮನೆತನದವರೇ, ನೀವು ಕಅಬಾದ ಧರ್ಮದರ್ಶಿಗಳು. ಇಬ್ರಾಹೀಮ್‌ರ(ಅ) ಸಂತತಿಗಳು. ನಿಮ್ಮ ನಗರದಲ್ಲಿ ನನ್ನ ಮೇಲೆ ಅನ್ಯಾಯವಾಗಿದೆ. ನಾನು ನಾಶ ವಾದೆ. ಅಯ್ಯೋ! ಆಸ್ ನನ್ನನ್ನು ಲೂಟಿಗೈದಿರುವನು."

ಈ ಸ್ವರ ಕೇಳಿಸುತ್ತಲೇ ಜನರು ಸೇರಿದರಾದರೂ ಆಸ್‌ನ ಹೆಸರು ಕೇಳಿ ಯಾರಿಗೂ ಮುಂದೆ ಬರುವ ಧೈರ್ಯ ಬರಲಿಲ್ಲ. ವರ್ತಕನು ಇನ್ನಷ್ಟು ಜೋರಾಗಿ ಕಿರುಚ ತೊಡಗಿದ:

"ಕುರೈಶರೇ ನಿಮ್ಮ ಸ್ವಾಭಿಮಾನಕ್ಕೆ ಏನಾಗಿದೆ? ಹಾಶಿಮ್ ಗೋತ್ರದವರೇ, ನಿಮ್ಮ ಸ್ವಂತಿಕೆಗೆ ಏನಾಗಿದೆ? ನೀವೂ ಆಸ್‌ನಂತೆಯೇ ವಂಚಕರಾಗಿರುವಿರಾ?"

ಕೆಲವು ಮಂದಿ ಕುರೈಶ್ ಸರದಾರರು ಕಅಬಾ ಭವನದ ಬಳಿ ಕುಳಿತು ಸಮಾಲೋಚನೆ ನಡೆಸುತ್ತಿದ್ದಾರೆ. ಅಬ್ದುಲ್ ಮುತ್ತಲಿಬ್‌ರ ಪುತ್ರ ಝುಬೈರ್‌ರ ರಕ್ತ ಕುದಿಯುತ್ತದೆ. ಸಂಗಾತಿಗಳನ್ನು ಉದ್ದೇಶಿಸಿ "ನಾವು ಸ್ವಾಭಿಮಾನ ಇಲ್ಲದವರಲ್ಲ. ನಡೆಯಿರಿ ಅವನ ಮೊರೆ ಆಲಿಸುವ" ಎನ್ನುತ್ತಾ ವರ್ತಕನ ಬಳಿ ಹೋಗಿ ಅವನ ಅಹವಾಲನ್ನು ಆಲಿಸುತ್ತಾರೆ. ಅವನಿಗೆ ಸಾಂತ್ವನ ನೀಡುತ್ತಾರೆ.

"ನಿಮಗಾದ ದುಃಖಕ್ಕೆ ನಾವು ವಿಷಾದಿಸುತ್ತೇವೆ. ನೀವು ಮೊರೆಯಿಟ್ಟದ್ದು ಸಹಜ. ನಿಮಗೆ ನಷ್ಟ ಉಂಟಾಗಿದೆ. ನೀವು ನಮ್ಮ ಸ್ವಂತಿಕೆ-ಸ್ವಾಭಿಮಾನಕ್ಕೆ ಪಂಥಾಹ್ವಾನ ನೀಡಿರುವಿರಿ.

ನಿಮ್ಮನ್ನು ನಾವು ನಿರಾಶೆಗೊಳಿಸಲಾರೆವು. ಇದು ಹಾಶಿಮ್ ಗೋತ್ರದವರ ಮಾತು. ಇದು ಝುಬೈರ್ ಬಿನ್ ಅಬ್ದುಲ್ ಮುತ್ತಲಿಬ್‌ರ ವಚನ. ಇದನ್ನು ಖಂಡಿತ ಪಾಲಿಸಲಾಗುವುದು. ನಡೆಯಿರಿ ನಮ್ಮ ಜೊತೆಗೆ. ನಿಮಗೆ ನಿಮ್ಮ ಹಣ ಸಿಗುವ ತನಕ ನೀವು ನಮ್ಮ ಅತಿಥಿಯಾಗಿರುವಿರಿ." ಝುಬೈರ್‌ರ ಈ ಮಾತುಗಳನ್ನು ಕೇಳಿ ವರ್ತಕನು ಅವರ ಜೊತೆ ನಡೆದು ಬಿಡುತ್ತಾನೆ. ಹಾಶಿಮ್, ಝುಹ್ರ, ಅಸದ್ ಗೋತ್ರಗಳ ಸರದಾರರನ್ನು ವಯೋವೃದ್ಧರಾದ ಅಬ್ದುಲ್ಲಾ ಬಿನ್ ಜುದ್‌ಆನ್‌ರ ಮನೆಯಲ್ಲಿ ಝುಬೈರ್ ಸಭೆ ಸೇರಿಸುತ್ತಾರೆ. ದೀರ್ಘ ವಿಚಾರ ವಿನಿಮಯದ ಬಳಿಕ ಇಂತಹ ಸಮಸ್ಯೆಗಳಿಗೆ ಒಂದು ಶಾಶ್ವತ ಪರಿಹಾರ ಹುಡುಕುವ ಮಾತು ಮುಂದೆ ಬರುತ್ತದೆ. ವಚನ ಭಂಗ, ವಂಚನೆ, ವಿಶ್ವಾಸ ದ್ರೋಹದ ಇಂತಹ ಘಟನೆಗಳು ಇನ್ನು ಮುಂದೆ ಸಂಭವಿಸ ದಂತೆ ಮಾಡಲು ಹಾಗೂ ಹಾಗೆ ಯಾರಾದರೂ ಮಾಡಿದರೆ ಅವರೊಂದಿಗೆ ಕಠಿಣವಾಗಿ ವ್ಯವಹರಿಸಲು ಒಂದು ಸಂಘ ಕಟ್ಟಿ ಕೊಳ್ಳುವ ಮಾತು ಕೂಡಾ ಮುಂದೆ ಬಂತು. ಜರ್ಹಮ್ ಗೋತ್ರದವರು ಇದೇ ನಗರದಲ್ಲಿ ಹಿಂದೊಮ್ಮೆ ಮಾಡಿಕೊಂಡಿದ್ದ ಫುಝೂಲ್ ಒಡಂಬಡಿಕೆಯನ್ನು ಎಲ್ಲರೂ ಸ್ಮರಿಸಿಕೊಂಡರು. ಅಂತಹುದೇ ಒಂದು ಒಡಂಬಡಿಕೆಯನ್ನು ಈಗ ಸಿದ್ಧಗೊಳಿಸುವುದೆಂದೂ ಅದನ್ನು ಲಿಖಿತಗೊಳಿಸಿ ತಕ್ಷಣ ಜಾರಿಗೆ ತರುವುದೆಂದೂ ತೀರ್ಮಾನಿಸಲಾಯಿತು.

ತರುವಾಯ ಝುಬೈರ್‌ರ ಸಲಹೆಯಂತೆ ಒಪ್ಪಂದವನ್ನು ಲಿಖಿತಗೊಳಿಸಲಾಯಿತು. ಅದಕ್ಕೆ 'ಹಲ್ಫುಲ್ ಫುಝೂಲ್' ಅರ್ಥಾತ್ ಫುಝೂಲ್ ಒಡಂಬಡಿಕೆಯೆಂದು ಹೆಸರಿಡಲಾಯಿತು.

ಆ ಒಪ್ಪಂದದಲ್ಲಿ ಸೇರಿಕೊಂಡವನು ಈ ರೀತಿ ಪ್ರತಿಜ್ಞೆಗೈಯುತ್ತಾನೆ:

"ಅಲ್ಲಾಹನ ಆಣೆ! ನಾವೆಲ್ಲರೂ ಒಂದಾಗಿ ಒಂದೇ ಕೈಯಾಗಿ ಬಿಡುವೆವು. ಆ ಕೈಯು ಮರ್ದಿತನ ಪರವಾಗಿ ಮತ್ತು ಮರ್ದಕನ ವಿರುದ್ಧವಾಗಿ ಸದಾ ಏಳುತ್ತಿರುವುದು. ಸಮುದ್ರಗಳಲ್ಲಿ ನೀರಿರುವ ತನಕ ಮತ್ತು ಪರ್ವತಗಳು ತಮ್ಮ ಸ್ಥಾನಗಳಲ್ಲಿ ಅಚಲವಾಗಿರುವ ತನಕ ನಮ್ಮ ಸಮಾಜದಲ್ಲಿ ಸಮಾನತೆ ಇರುವುದು."

ಆ ಬಳಿಕ ಈ ಕೆಳಗಿನ ಅಂಶಗಳನ್ನು ಒಪ್ಪಂದದ ತಿರುಳೆಂದು ಘೋಷಿಸ ಲಾಯಿತು:

1. ನಾವು ಪರಸ್ಪರರ ಹಕ್ಕುಗಳನ್ನು ಕಸಿಯಲಾರೆವು.

2. ನಾವು ಶಕ್ತಿಶಾಲಿಯಿಂದ ಬಲಹೀನನಿಗೆ ಅವನ ಹಕ್ಕನ್ನೂ ಊರವನಿಂದ ಯಾತ್ರಿಕನಿಗೆ ಅವನ ಹಕ್ಕನ್ನೂ ಕೊಡಿಸುವೆವು.

3. ಶೋಷಕನ ವಿರುದ್ಧ ಶೋಷಿತನಿಗೆ ನೆರವಾಗುವೆವು.

ಒಪ್ಪಂದವು ಲಿಖಿತಗೊಂಡು ಎಲ್ಲರೂ ತಂತಮ್ಮ ಹಸ್ತಾಕ್ಷರಗಳನ್ನು ಹಾಕಿದ ಬಳಿಕ ಝುಬೈರ್ ಈ ರೀತಿ ಹೇಳುತ್ತಾರೆ:

"ನಿಮಗೆ ಶುಭವಾಗಲಿ. ನೀವು ನಿಮ್ಮ ಪಿತಾಮಹ ಇಬ್ರಾಹೀಮ್‌ರ(ಅ) ಧರ್ಮವನ್ನು ಮತ್ತೆ ಜೀವಂತಗೊಳಿಸಿದಿರಿ. ಈ ಕೆಲಸ ಮುಗಿಯಿತು. ಈಗ ನಡೆಯಿರಿ ಆಸ್‌ನ ಬಳಿಗೆ

ಹೋಗೋಣ."

ಅಬ್ದುಲ್ಲಾ ಬಿನ್ ಜುದ್‌ಆನ್ ಎಂಬ ವಯೋವೃದ್ಧ ಕುರೈಶ್ ನಾಯಕ: "ತಡೆಯಿರಿ. ಇನ್ನೂ ಈ ಕೆಲಸ ಪೂರ್ಣಗೊಂಡಿಲ್ಲ" ಎಂದಾಗ ಝುಬೈರ್ ಆಶ್ಚರ್ಯ ಚಕಿತರಾಗಿ "ಏಕೆ?" ಎಂದು ಕೇಳುತ್ತಾರೆ.

"ಇದಕ್ಕೆ ಒಬ್ಬ ವ್ಯಕ್ತಿಯ ಸಹಿಯಾಗಲು ಬಾಕಿ ಇದೆ. ಆತ ಮಕ್ಕಾದ ಅತ್ಯಧಿಕ ಶಾಂತಿ ಪ್ರಿಯ, ಸೌಹಾರ್ದ ಪ್ರಿಯ ಮತ್ತು ವಚನಪಾಲಕ ವ್ಯಕ್ತಿಯಾಗಿದ್ದಾನೆ. ಅವನ ಹಸ್ತಾಕ್ಷರವಾಗದೆ ಈ ಒಪ್ಪಂದಕ್ಕೆ ಬೆಲೆ ಇಲ್ಲ" ಎನ್ನುತ್ತಾರೆ.

ಇದನ್ನು ಕೇಳಿ ಇನ್ನಷ್ಟು ಆಶ್ಚರ್ಯಗೊಂಡು "ಹಾಶಿಮ್ ಗೋತ್ರದ ಎಲ್ಲ ವಯೋವೃದ್ಧ ಮತ್ತು ಗೌರವಾನ್ವಿತ ವ್ಯಕ್ತಿಗಳು ಇಲ್ಲಿ ಸೇರಿದ್ದಾರೆ. ಯಾರು ಬಾಕಿ ಉಳಿದಿದ್ದಾರೆ?" ಎಂದು ಪ್ರಶ್ನಿಸುತ್ತಾರೆ.

ಆಗ ಅಬ್ದುಲ್ಲಾ ಹೀಗೆನ್ನುತ್ತಾರೆ: "ನಿಮ್ಮ ಸೋದರ ಪುತ್ರ ಮುಹಮ್ಮದ್(ಸ). ಅವರು ವಯಸ್ಸಿನಲ್ಲಿ ಕಿರಿಯರಾದರೂ ಬುದ್ಧಿಯಲ್ಲಿ ಹಿರಿಯರು. ಪ್ರಾಯ 16 ವರ್ಷವಾಗಿದ್ದರೂ ಜ್ಞಾನ ಮತ್ತು ವಿವೇಕದ ದೃಷ್ಟಿಯಿಂದ ನಮ್ಮಂತಹ ವಯೋವೃದ್ಧರಿ ಗಿಂತಲೂ ಹಿರಿಯರು. ನಾವಂತೂ ಮಾಸುತ್ತಿರುವ ನೆರಳಿನಂತೆ ಇಂದು ಇದ್ದರೆ ನಾಳೆ ಇರಲಾರೆವು. ಆದರೆ ಮುಹಮ್ಮದ್(ಸ) ಯುವಕರು. ಅವರ ಸೇರ್ಪಡೆಯಿಂದ ಫುಝೂಲ್ ಒಪ್ಪಂದವು ಚಿರಂತನವಾಗುವುದು. ಅವರನ್ನು ಕರೆಯಿರಿ."

ಅಬ್ದುಲ್ಲಾ ಬಿನ್ ಜುದ್‌ಆನ್‌ರ ಕರೆಯ ಮೇರೆಗೆ ಮುಹಮ್ಮದ್(ಸ) ಕೆಲವೇ ಹೊತ್ತಿನಲ್ಲಿ ಅವರ ಚಾವಡಿಗೆ ಬರುತ್ತಾರೆ. ಮುಗುಳ್ನಗುತ್ತಾ ಒಳ ಪ್ರವೇಶಿಸಿದ ಅವರು ಎಲ್ಲರನ್ನೂ ಅಭಿವಂದಿಸಿ ಕೈ ಕುಲುಕಿ ಕುಳಿತುಕೊಳ್ಳುತ್ತಾರೆ. ಅವರನ್ನುದ್ದೇಶಿಸಿ ಅಬ್ದುಲ್ಲಾ ಹೀಗೆನ್ನುತ್ತಾರೆ: "ನಾವು ಈ ನಗರದಲ್ಲಿ ಶಾಂತಿ ಸ್ಥಾಪಿಸಲಿಕ್ಕಾಗಿ ಫುಝೂಲ್ ಒಪ್ಪಂದ ಏರ್ಪಡಿಸಿದ್ದೇವೆ. ಅದಕ್ಕೆ ನಿಮ್ಮ ಸಹಿ ಬೇಕಾಗಿದೆ."

ಹರ್ಷದಿಂದ ಮುಹಮ್ಮದ್‌ರ(ಸ) ಮುಖ ಅರಳುತ್ತದೆ ಮತ್ತು ಅವರು ಹೀಗೆನ್ನುತ್ತಾರೆ: "ನನ್ನನ್ನು ಶಾಂತಿ ಸೌಹಾರ್ದದ ಪ್ರಯತ್ನದಲ್ಲಿ ಸ್ಮರಿಸುವುದಕ್ಕಿಂತ ದೊಡ್ಡ ಸೌಭಾಗ್ಯ ನನ್ನ ಪಾಲಿಗೆ ಇನ್ನೇನಿರಬಹುದು. ಶಾಂತಿ ಸ್ಥಾಪನೆಯ ಪ್ರಯತ್ನಕ್ಕೆ ನಾನು ಸದಾ ಸಿದ್ಧನಾಗಿರುವೆನು."

ಪ್ರೇಮ ಭರಿತವಾದ ಧ್ವನಿಯಲ್ಲಿ ಝುಬೈರ್ ಹೀಗೆನ್ನುತ್ತಾರೆ: "ನನ್ನ ಸೋದರ ಪುತ್ರ ಶಾಂತಿಯ ದೂತ ಮತ್ತು ಸೌಹಾರ್ದದ ಪ್ರತೀಕವಾಗಿದ್ದಾನೆ. ಹಾಶಿಮ್ ಗೋತ್ರಕ್ಕೆ ಅವರ ಬಗ್ಗೆ ಹೆಮ್ಮೆ ಇದೆ. ಮುಹಮ್ಮದ್‌ರಲ್ಲಿ(ಸ) ಬಹಳ ಒಳಿತುಗಳಿವೆ."

ಮುಹಮ್ಮದ್(ಸ) ಫುಝೂಲ್ ಒಪ್ಪಂದಕ್ಕೆ ಸಹಿ ಮಾಡಿದ ಕೂಡಲೇ ಎಲ್ಲರೂ ಆಸ್ ಬಿನ್ ವಾಯಿಲ್‌ರ ಮನೆಗೆ ತೆರಳುತ್ತಾರೆ. ಕದ ತಟ್ಟಿದ ಕೂಡಲೇ ಆಸ್ ಹೊರಬರುತ್ತಾನೆ. ಝುಬೈರ್ ಹೇಳುತ್ತಾರೆ:

"ಆ ವರ್ತಕನ ಹಣ ಈ ಕೂಡಲೇ ಕೊಟ್ಟು ಬಿಡು. ಇಲ್ಲದಿದ್ದರೆ ನಾವೆಲ್ಲರೂ ನಿಮ್ಮ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳುವೆವು. ಹೋರಾಟದ ಅಗತ್ಯ ಬಂದರೂ ನಾವು ಅದಕ್ಕೆ ಸಿದ್ಧ."

ಆಸ್ ಬಂದು ಜನರ ಕೂಟವನ್ನು ಒಮ್ಮೆ ಪರಿಶೀಲಿಸಿದನು. ಇವರನ್ನು ವಂಚಿಸುವುದು ವಿನಾಶಕಾರಿಯೆಂದು ಬಗೆದು ಮೌನವಾಗಿ ಮನೆಯೊಳಗೆ ಹೋಗಿ ಕೆಲವೇ ಕ್ಷಣಗಳಲ್ಲಿ ಪೂರ್ತಿ ಹಣ ತಂದು ಅಬ್ದುಲ್ಲಾರಿಗೆ ನೀಡುತ್ತಾನೆ. ಅಬ್ದುಲ್ಲಾ ಅದನ್ನು ಝುಬೈರ್‌ಗೆ ನೀಡಿ ವರ್ತಕನಿಗೆ ತಲುಪಿಸಲು ಆದೇಶಿಸುತ್ತಾರೆ.

## ಪರಿಶುದ್ಧ ಯುವಕ

ಮಕ್ಕಾದ ಮದ್ಯದಂಗಡಿಯಲ್ಲಿ ಮದ್ಯಪಾನಿಗಳ ಗುಂಪು ಸೇರಿದೆ. ಮದ್ಯದ ರಸ ಹೀರಿ ಅದು ಮತಿಗೇರುವವರೆಗೆ ನಡೆಯುವ ಗುಲ್ಲು ಗದ್ದಲ ವ್ಯಾಪಿಸಿದೆ. ಹಗಲಿಗಿಂತ ಹೆಚ್ಚು ರಾತ್ರಿ ಜನ ಸೇರುತ್ತಾರೆ. ಹಲವು ಪವಿತ್ರ ಚಹರೆಯವರೂ ರಾತ್ರಿ ಹೊತ್ತು ಅಲ್ಲಿ ಪ್ರತ್ಯಕ್ಷರಾಗುತ್ತಾರೆ. ಬಡವ-ಬಲ್ಲಿದನೆಂಬ ಭೇದವಿಲ್ಲದೆ, ಹಿರಿಯ-ಕಿರಿಯ ಎಂಬ ವ್ಯತ್ಯಾಸ ವಿಲ್ಲದೆ ಮದ್ಯದಂಗಡಿಯ ಬಾಗಿಲು ತೆರೆಯುವುದನ್ನು ಕಾದಿರುತ್ತಾರೆ. ಆದರೆ ಮಕ್ಕಾದ ಓರ್ವ ಯುವಕನು ಎಂದೂ ಅಲ್ಲಿ ಕಾಲಿರಿಸಿರಲಿಲ್ಲ. ಕುಡುಕರ ಲೋಕದಲ್ಲಿ ವಾಸಿಸುವ ಮುಹಮ್ಮದ್(ಸ) ಅದರಿಂದ ಸದಾ ಗಾವುದ ದೂರವಿರುತ್ತಾರೆ. ಪ್ರತಿ ಮನೆಯಲ್ಲೂ ಮದ್ಯದ ಭಟ್ಟಿ ಇಳಿಸಿದರೂ ಅವರು ಅದರಿಂದ ಪೂರ್ಣ ಮುಕ್ತವಾಗಿದ್ದಾರೆ.

ವೇಶ್ಯಾವಾಟಿಕೆಗಳು ಮಕ್ಕಾ ನಗರದಲ್ಲಿ ಸರ್ವಾಲಂಕೃತವಾಗಿ ಮೆರೆಯುತ್ತಿವೆ. ದಾಸಿಯರು ಮತ್ತು ವಿಧವೆಯರು ಸರ್ವ ಸೌಂದರ್ಯ ಸಾಧನ ಭೂಷಿತರಾಗಿ ಜನರನ್ನು ಆಕರ್ಷಿಸುತ್ತಿದ್ದಾರೆ. ಜನರು ಈ ಪಾಪಕೂಪಕ್ಕೆ ಬಿದ್ದು ಹೊರಬರುವಾಗ ಅವರಿಗೆ ಅದರ ಬಗ್ಗೆ ಲಜ್ಜೆಯಾಗಲೀ, ಪಶ್ಚಾತ್ತಾಪವಾಗಲೀ ಉಂಟಾಗುವುದಿಲ್ಲ. ಬಡವ-ಬಲ್ಲಿದನೆಂಬ ಭೇದವಿಲ್ಲದೆ ಮಾನ ಕಳಕೊಂಡವರೆಲ್ಲಾ ಅಲ್ಲಿ ಬಂದು ಹೆಮ್ಮೆಯಿಂದ ಬೀಗುತ್ತಾರೆ. ಇದೊಂದು ವ್ಯಾಪಾರ. ಮನುಷ್ಯ ದೇಹವು ಇಲ್ಲಿ ಮಾರಾಟದ ಸರಕು. ಕೆಲವರು ಮಾರುತ್ತಾರೆ. ಕೆಲವರು ಖರೀದಿಸುತ್ತಾರೆ. ಇದರಲ್ಲಿ ಯಾರಿಗೂ ಪಾಪಪ್ರಜ್ಞೆ ಮೂಡುವುದಿಲ್ಲ. ಇಲ್ಲಿ ಮಧ್ಯ ವಯಸ್ಕರು ಶಿರಬಾಗುತ್ತಾರೆ. ಯುವಕರು ಕಾಲು ಜಾರುತ್ತಾರೆ. ದಲ್ಲಾಳಿಗಳ ವ್ಯಾಪಾರವೂ ಚೆನ್ನಾಗಿ ಕುದುರುತ್ತದೆ. ನಗರದ ಮೂಲೆ ಮೂಲೆಗಳಲ್ಲೂ ಅವರು ತಮ್ಮ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಅವರು ನಗರದ ಎಲ್ಲ ಯುವಕರನ್ನೂ ಅವರ ಹೆಸರು ಸಹಿತ ಬಲ್ಲರು. ಆದರೆ ಒಬ್ಬ ಯುವಕನಿದ್ದಾನೆ. ಅವನೆಂದೂ ಆ ಕಡೆ ತಿರುಗಿ ನೋಡಿದವನಲ್ಲ. ಆ ದಾರಿಯಲ್ಲಿ ಹೆಜ್ಜೆ ಇಟ್ಟವನಲ್ಲ. ಪಾಪದ ಈ ಪೇಟೆಯಲ್ಲಿಯೂ ತಮ್ಮ ಮಾನದ ಪಾವಿತ್ರ್ಯವನ್ನು ಪೂರ್ಣವಾಗಿ ಕಾಪಾಡಿಕೊಂಡಿರುವ ಈ ಯುವಕ ಮುಹಮ್ಮದ್(ಸ) ಆಗಿದ್ದಾರೆ.

ಜೂಜಿನ ಕಟ್ಟೆಯೂ ಮಕ್ಕಾದಲ್ಲಿ ಸದಾ ಗಿಜಿ ಗುಟ್ಟುತ್ತಿರುತ್ತದೆ. ಜೂಜಾಟಗಾರರ ತಂಡಕ್ಕೆ ತಂಡವೇ ಅಲ್ಲಿಗೆ ಹರಿದು ಬರುತ್ತಿದೆ. ಹಗಲುರಾತ್ರಿಯೆನ್ನದೆ ಆಡುತ್ತಲೇ ಕಳೆಯುವವರಿದ್ದಾರೆ. ಪಂಥ ಕಟ್ಟಿಕೊಳ್ಳುತ್ತಾರೆ. ಹ್ಯೊಕ್ಕೆ ಆಗುತ್ತದೆ. ಗಲಭೆ ಗದ್ದಲ

ಸದಾ ಜಾರಿಯಲ್ಲಿರುತ್ತದೆ. ಇಲ್ಲಿಯೂ ಪ್ರಾಯದ ಮಿತಿಯಿಲ್ಲ. ಕುಡಿಮೀಸೆ ಮೊಳೆತವರೂ ಉತ್ಸಾಹದಿಂದ ಬರುತ್ತಾರೆ. ಮುದುಕರನ್ನೂ ಈ ಚಪಲ ಇಲ್ಲಿಗೆ ಎಳೆದು ತರುತ್ತದೆ. ಜೂಜಾಟವು ಅರಬರಿಗೆ ಪಂಚಪ್ರಾಣವಾಗಿದೆ. ಅಲ್ಲಲ್ಲಿ ಅದರ ಕೇಂದ್ರಗಳು ಸ್ಥಾಪಿಸಲ್ಪಟ್ಟಿವೆ. ಆದರೆ ಮುಹಮ್ಮದ್‌ರಿಗೆ(ಸ) ಅದರ ಗಂಧಗಾಳಿಯೂ ಸೋಂಕಿರಲಿಲ್ಲ.

ಪೇಟೆಯಲ್ಲಿ ತರತರದ ಹಗರಣಗಳು ಜನ್ಮ ತಾಳುತ್ತವೆ. ಆದರೆ ಮುಹಮ್ಮದ್‌ರಿಗೆ(ಸ) ಅದರ ಗೊಡವೆಯೇ ಇಲ್ಲ. ಬೀದಿಕೇರಿಗಳಲ್ಲಿ ಪ್ರೀತಿ-ಪ್ರೇಮದ ಅನೇಕ ಪ್ರಕರಣಗಳು ನಡೆಯುತ್ತಿರುತ್ತವೆ. ಸುಂದರ ಯುವತಿಯರು ಮನಮೋಹಕ ಉಡುಪುಗಳಲ್ಲಿ ಯುವಕರನ್ನು ಆಕರ್ಷಿಸುತ್ತಾರೆ. ಹಲವರು ಈ ರೀತಿಯ ವೀಕ್ಷಣೆಯಲ್ಲೇ ದಿನ ಕಳೆಯುವುದಿದೆ. ಶೈತಾನನು ತನ್ನ ಜಾಲವನ್ನು ಹರಡಿದ್ದಾನೆ. ಹೆಜ್ಜೆಹೆಜ್ಜೆಗೂ ಅಪೂರ್ವ ಆಕರ್ಷಣೆ. ಯುವಕ- ಯುವತಿಯರು ಕಾಲು ಜಾರಿದರೆ ಅದರಲ್ಲಿ ಅವರಿಗೆ ಸಂತೋಷವೇ. ಪ್ರತಿಯೊಬ್ಬ ಸುಂದರಿಯನ್ನೂ ಮಾವನ ಮಗಳೆಂದೇ ಕರೆಯಲಾಗುತ್ತದೆ. ಆದರೆ ಪ್ರೇಮ-ಕಾಮಗಳ ಈ ಜಂಜಾಟದಲ್ಲಿ ಮುಹಮ್ಮದ್(ಸ) ಎಂದೂ ಬೀಳಲಿಲ್ಲ. ಅವರ ಕಣ್ಣು ಎಂದೂ ಪರಸ್ತ್ರೀಯ ಕಡೆಗೆ ವಾಲಲಿಲ್ಲ. ಅವರ ಕಿವಿ ಎಂದೂ ಪ್ರೇಮ ಕಥೆ, ಪ್ರೇಮ ಗೀತೆಗಳನ್ನಾಲಿಸಲಿಲ್ಲ. ಅವರ ಬಾಯಿಯಿಂದ ಅಶ್ಲೀಲ ಮಾತು ಎಂದೂ ಹೊರಟದ್ದಿಲ್ಲ. ಇಪ್ಪತ್ತರ ಹರೆಯದಲ್ಲಿದ್ದೂ ಅವರು ಈ ಎಲ್ಲ ಕೆಡುಕುಗಳಿಂದ ತಮ್ಮನ್ನು ಪೂರ್ಣವಾಗಿ ರಕ್ಷಿಸಿಕೊಂಡಿರುವುದು ಮಾತ್ರವಲ್ಲ, ಅವುಗಳ ಯೋಚನೆಯಿಂದಲೂ ಅವರ ಮನಸ್ಸು ಮುಕ್ತವಾಗಿತ್ತು.

## ಸತ್ಯಶೋಧ

ಮುಹಮ್ಮದ್(ಸ) ಕುಬೈಸ್ ಬೆಟ್ಟದ ಮೇಲೆ ಕುಳಿತಿರುವರು. ಜನರು ಕಅಬಾ ಭವನದ ಪ್ರದಕ್ಷಿಣೆ ಮಾಡುತ್ತಿದ್ದಾರೆ. ಕೆಲವರು ಅರೆನಗ್ನರಾಗಿದ್ದಾರೆ. ಇನ್ನು ಕೆಲವರು ಹುಟ್ಟುಡುಗೆಯಲ್ಲೇ ಇದ್ದಾರೆ. ಮಹಿಳೆಯರೂ ವಸ್ತ್ರಗಳಿಂದ ಮುಕ್ತರಾಗಿದ್ದಾರೆ. ಕೆಲವರು 'ಅಸಾಫ್' ಮತ್ತು 'ನಾಇಲಾ'ಗಳ ಮುಂದೆ ಸಾಷ್ಟಾಂಗವೆರಗಿದ್ದಾರೆ. ಕೆಲವರು ಕಅಬಾದ ಪರದೆಯನ್ನು ಬಿಗಿ ಹಿಡಿದಿದ್ದಾರೆ. ಕೆಲವರು 'ಝಮ್ ಝಮ್' ಬಾವಿಯ ಎದುರಿದ್ದಾರೆ. ಕೆಲವರು 'ಹತೀಮ್' ಮತ್ತು 'ಮಕಾಮು ಇಬ್ರಾಹೀಮ್'ನಲ್ಲಿದ್ದಾರೆ. ಒಂದೆಡೆ ಬಲಿದಾನ ನೀಡಲಾಗುತ್ತಿದೆ. ಕೆಲವರು ಅರ್ಚಕರಿಗೆ, ಪುರೋಹಿತರಿಗೆ, ಮಹಂತರಿಗೆ ಕಾಣಿಕೆಗಳನ್ನು ನೀಡುತ್ತಿದ್ದಾರೆ. ಕೆಲವರು ಬಾಣ ಎಸೆಯುತ್ತಿದ್ದಾರೆ. ಕೆಲವರು ಅದೃಷ್ಟದ ಬಗ್ಗೆ ಕೇಳಿ ತಿಳಿಯುತ್ತಿದ್ದಾರೆ. ಮಂತ್ರವಾದಿಗಳು, ಜ್ಯೋತಿಷಿಗಳು, ಮಹಂತರು ಜನರ ಅದೃಷ್ಟ ಹೇಳಿಕೊಟ್ಟು ಜೇಬು ತುಂಬಿಸಿಕೊಳ್ಳುತ್ತಿದ್ದಾರೆ. ಕಅಬಾದ ಪ್ರಭುವನ್ನು ಯಾರೂ ಪೂಜಿಸುತ್ತಿಲ್ಲ. ಅಲ್ಲಾಹನು ಯಾರಿಗೂ ಬೇಡದವನಾಗಿದ್ದಾನೆ. ಇಬ್ರಾಹೀಮ್‌ರ(ಅ) ಧರ್ಮದ ಯಾವ ಅವಶೇಷವೂ ಉಳಿದಿಲ್ಲ. ಶುದ್ಧ ಏಕದೇವಾರಾಧನೆಯು ಬಹುದೇವ ವಿಶ್ವಾಸದ ಪರದೆಯಡಿ ಮರೆಯಾಗಿದೆ. ಆದರೆ ಕುರ್ಬಾನಿ(ಬಲಿದಾನ)ಯ ಪ್ರಾಣಿಗಳು ಮಾತ್ರ ಜನರ ಆಕ್ರಮಣದಿಂದ ಮುಕ್ತವಾಗಿವೆ. ಕಅಬಾದ ಪ್ರದಕ್ಷಿಣೆ ಮತ್ತು 'ಸಫಾ-ಮರ್ವಾ'ಗಳ ಮಧ್ಯೆ ನಡಿಗೆಯ ಪದ್ಧತಿ ಉಳಿದುಕೊಂಡಿದೆ. ಆದರೆ

ಅದರಲ್ಲೂ ಪಾವಿತ್ರ್ಯದ ಸ್ಥಾನದಲ್ಲಿ ಮಾಲಿನ್ಯವಿದೆ. ಅದು ವಿರೂಪಗೊಂಡಿದೆ.

ಮುಹಮ್ಮದ್(ಸ) ಒಳಗೊಳಗೇ ನೊಂದುಕೊಳ್ಳುತ್ತಿದ್ದಾರೆ. ಅವರಿಗೆ ಈ ಅಜ್ಞಾನ ಮತ್ತು ಮಾಲಿನ್ಯವನ್ನು ಕಂಡು ಮರುಕ ಉಂಟಾಗುತ್ತದೆ. ಈ ನಿರ್ಜೀವಿ ಮತ್ತು ನಿಶ್ಚಲ ಕಲ್ಲುಗಳನ್ನು ಜನರು ಏಕೆ ಪೂಜಿಸುತ್ತಿರುವರೆಂದು ಅವರಿಗೆ ಅಚ್ಚರಿಯಾಗುತ್ತದೆ. ಅವುಗಳ ಬಗ್ಗೆ ಜನರಿಗೇಕೆ ಹೆದರಿಕೆ? ಮಾತಾಡುವ, ನೋಡುವ, ಗ್ರಹಿಸುವ ಮತ್ತು ಆಲಿಸುವ ಶಕ್ತಿ ಇಲ್ಲದ ಈ ವಿಗ್ರಹಗಳು ಜನರಿಗೆ ಲಾಭ-ನಷ್ಟಗಳನ್ನು ಉಂಟು ಮಾಡುವುದಾದರೂ ಹೇಗೆ? ಇವರ ಬುದ್ಧಿಗೇಕೆ ಮಂಕು ಕವಿದಿದೆ? ಇವರು ಅಲ್ಲಾಹನ ಹೆಸರೆತ್ತುತ್ತಾರೆ. ಆದರೆ ಅವನಿಂದ ಇವರಿಗೆ ನಿರಾಶೆ. ಆಶೆಯಿರುವುದೆಲ್ಲವೂ ವಿಗ್ರಹಗಳಿಂದ! ಇವರು ಈ ಮೂರ್ತಿಗಳನ್ನೇ ತಮ್ಮ ಅಭಯಸ್ಥಾನವೆಂದು ಬಗೆದಿದ್ದಾರೆ. ಜನರು ಅನೇಕ ಸಲ ಮುಹಮ್ಮದ್‌ರಿಗೆ(ಸ) ಹಜ್ಜ್, ತವಾಫ್, ಸಈ ಮತ್ತು ಮಿನಾದ ತಂಗುವಿಕೆಯಲ್ಲಿ ಭಾಗವಹಿಸಲು ಆಹ್ವಾನವಿತ್ತಿದ್ದರು. ಆದರೆ ಈ ಮೂಢನಂಬಿಕೆ ಮತ್ತು ಕಂದಾಚಾರ ಗಳೊಂದಿಗೆ ಅವುಗಳಲ್ಲಿ ಭಾಗವಹಿಸಲು ಅವರು ಸಿದ್ಧರಾಗಲಿಲ್ಲ. ನಗ್ನತೆಯನ್ನು ಅವರು ದ್ವೇಷಿ ಸುತ್ತಿದ್ದರು. ಮೂರ್ತಿಗಳ ಮುಂದೆ ಶಿರಬಾಗಲು ಅವರು ಸಿದ್ಧರಿರಲಿಲ್ಲ. ಹರಕೆ ಕಾಣಿಕೆಗಳು ಮತ್ತು ಆಸ್ಥಾನಗಳ ಬಲಿಪೀಠದಲ್ಲಿ ನೀಡಿದ ಬಲಿಯ ಮಾಂಸವೆಂದರೆ ಅವರಿಗೆ ಎಲ್ಲಿಲ್ಲದ ದ್ವೇಷ. ಅವರಿಗೆ ಇರುವುದು ಕಅಬಾದ ಪ್ರಭುವನ್ನು ಅರಿ ಯುವ ಮತ್ತು ಅವನ ಸಾಮೀಪ್ಯ ಗಳಿಸುವ ಹೆಬ್ಬಯಕೆ. ಈ ಬಯಕೆಯಲ್ಲಿ ಅವರು ಒಬ್ಬಂಟಿಗರಾಗಿ ಕಅಬಾ ಭವನದ ತವಾಫ್ ಮಾಡುತ್ತಾರೆ. ಸಫಾ-ಮರ್ವಾ ಗಳ ಮಧ್ಯೆ ಸಈ ಮಾಡುತ್ತಾರೆ ಮತ್ತು ಮಿನಾದಲ್ಲಿ ಹೋಗಿ ತಂಗುತ್ತಾರೆ. ಆದರೆ ಮಕ್ಕಾದ ಬಹುದೇವ ವಿಶ್ವಾಸಿಗಳ ಜೊತೆ ಅವರ ಆಚಾರ ಸಂಪ್ರದಾಯ ಗಳನ್ನು ಪಾಲಿಸುವುದು ಅವರ ಪ್ರಕೃತಿಗೆ ವಿರುದ್ಧವಾಗಿದೆ.

ಮುಹಮ್ಮದ್(ಸ) 'ತವಾಫ್' ಮಾಡುತ್ತಿದ್ದಾರೆ. ಓರ್ವ ವೃದ್ಧನು ಕಅಬಾದ ಗೋಡೆಗೆ ಒರಗಿ ನಿಂತು ಹೇಳುತ್ತಾನೆ: "ಕುರೈಶ್ ಜನರೇ, ಇಂದು ನನ್ನ ಹೊರತು ನಿಮ್ಮಲ್ಲಿ ಯಾರೂ ಇಬ್ರಾಹೀಮ್‌ರ(ಅ) ಧರ್ಮದಲ್ಲಿಲ್ಲ."

ಈ ಶಬ್ದ ಕಿವಿಗೆ ಬಿದ್ದೊಡನೆ ಮುಹಮ್ಮದ್(ಸ) ಬೆಚ್ಚಿ ಬೀಳುತ್ತಾರೆ. "ಇಬ್ರಾಹೀಮ್‌ರ(ಅ) ಧರ್ಮ. ಅಂದರೆ ಕಅಬಾದ ನಿರ್ಮಾತೃವಿನ ಧರ್ಮ. ಖಂಡಿತ ಅದು ಸತ್ಯಧರ್ಮವಾಗಿರಬೇಕು. ಅದರ ಹೊರತು ಕಅಬಾದ ಪ್ರಭುವಿನ ಸಾಮೀಪ್ಯ ಗಳಿಸಲಾಗದು" ಎಂದು ಮನದಲ್ಲೇ ಅಂದುಕೊಳ್ಳುತ್ತಾರೆ.

ಆ ವೃದ್ಧನ ಬಳಿ ಹೋಗಿ ವಿಚಾರಿಸುತ್ತಾರೆ, "ಚಿಕ್ಕಪ್ಪಾ, ನಿಮಗೆ ಇಬ್ರಾಹೀಮ್‌ರ(ಅ) ಧರ್ಮದ ಕುರಿತು ತಿಳಿದಿದೆಯೇ?"

"ಹೌದು, ಇಬ್ರಾಹೀಮ್‌ರ(ಅ) ಧರ್ಮ ಈ ದೇವಿ-ದೇವತೆಗಳ ಪೂಜೆಯ ಧರ್ಮವಲ್ಲ. ಅದು ಕಅಬಾದ ಪ್ರಭುವಿನ ಉಪಾಸನೆಯನ್ನು ಕಲಿಸುತ್ತದೆ. ಆದರೆ ಅಯ್ಯೋ! ನನಗೆ ಅವನ ಆರಾಧನೆಯ ಕ್ರಮ ತಿಳಿದಿಲ್ಲ" ಎನ್ನುತ್ತಾ ಆ ವೃದ್ಧ ನೆಲದ ಮೇಲೆ ಕೈಯಿಟ್ಟು

ಸಾಷ್ಟಾಂಗವೆರಗುತ್ತಾನೆ ಮತ್ತು ಈ ರೀತಿ ದೀನವಾಗಿ ಮೊರೆಯಿಡುತ್ತಾನೆ, "ಓ ನನ್ನ ಪ್ರಭೂ, ಓ ಕಅಬಾದ ಒಡೆಯನೇ, ನಿನ್ನ ಆರಾಧನೆ ಮಾಡುವುದು ಹೇಗೆಂದು ನನಗೆ ತಿಳಿದಿರುತ್ತಿದ್ದರೆ! ನಾನೇನು ಮಾಡಲಿ. ಯಾರಲ್ಲಿ ಕೇಳಲಿ. ಅವನನ್ನು ಬಲ್ಲವರು ಯಾರೂ ಇಲ್ಲ. ಜನರಂತೂ ಮೂರ್ತಿಗಳನ್ನೇ ತಮ್ಮ ಆರಾಧ್ಯರಾಗಿ ಮಾಡಿಕೊಂಡಿರುವರು."

ಆತ ಸಾಷ್ಟಾಂಗದಿಂದ ತಲೆಯೆತ್ತಿ ಮುಹಮ್ಮದ್(ಸ)ರನ್ನುದ್ದೇಶಿಸಿ ಹೀಗೆ ಹೇಳುತ್ತಾನೆ: "ಜನರು ಕಅಬಾದ ಪ್ರಭುವನ್ನು ಮಕ್ಕಳು-ಮರಿಗಳುಳ್ಳವನಾಗಿ ಮಾಡಿಕೊಂಡಿದ್ದಾರೆ. ಅವನಿಗೆ ಪುತ್ರರನ್ನೂ ಪುತ್ರಿಯರನ್ನೂ ಕಲ್ಪಿಸಿಕೊಂಡಿದ್ದಾರೆ. ಆದರೆ ನಾನು ಕಅಬಾದ ಪ್ರಭುವಿನ ಆಣೆ ಹಾಕಿ ಹೇಳುತ್ತೇನೆ, ಅವನು ಇವುಗಳಿಂದೆಲ್ಲಾ ನಿರಪೇಕ್ಷನಾಗಿರುವನು. ಅಯ್ಯೋ! ನನಗೆ ಅವನ ಆರಾಧನೆಯ ವಿಧಾನ ಗೊತ್ತಿರುತ್ತಿದ್ದರೆ ನಾನವನನ್ನು ಸಂತುಷ್ಟಗೊಳಿಸುತ್ತಿದ್ದೆ."

ಮುಹಮ್ಮದ್(ಸ) ಇದನ್ನು ಕೇಳಿ ಸಂತೋಷ ಪಡುತ್ತಾರೆ. ಈ ಮನುಷ್ಯ ಹೇಳುತ್ತಿರುವುದು ಸತ್ಯ. ಅವರಿಗೆ ಅವನ ಮಾತಿನಿಂದ ನೆಮ್ಮದಿ ದೊರೆಯುತ್ತದೆ.

ಈ ವೃದ್ಧ ಝೈದ್ ಬಿನ್ ಅಮ್ರ್ ಬಿನ್ ನುಫೈಲ್ ಆಗಿರುವನು. ಆತ ಮೂರ್ತಿ ಪೂಜೆಯನ್ನು ಹಳಿಯುತ್ತಾನೆ. ಜನರಲ್ಲಿ ಈ ಬಗ್ಗೆ ಜಾಗೃತಿ ಮೂಡಿಸಲು ಯತ್ನಿಸುತ್ತಾನೆ. ಆದರೆ ಶತಮಾನಗಳಿಂದ ಮೂರ್ತಿ ಪೂಜೆಯಲ್ಲಿ ಸಿಲುಕಿರುವ ಜನಾಂಗವು ಅವನ ಮಾತು ಕೇಳಿ ಕೆರಳುತ್ತದೆ. ಅವನ ಚಿಕ್ಕಪ್ಪ ಖತ್ತಾಬ್ ಬಿನ್ ನುಫೈಲ್ ಅವನನ್ನು ಚೆನ್ನಾಗಿ ಥಳಿಸುತ್ತಿರುತ್ತಾರೆ. ಅವನು ಏಟು ತಿನ್ನುತ್ತಾ ರೋದಿಸುತ್ತಾ ಹೀಗೆನ್ನುತ್ತಾನೆ:

"ಪ್ರಭು ಒಬ್ಬನಾಗಬೇಕೇ ಹೊರತು ನೂರಾರು ಅಲ್ಲ. ನಾನು ಇಂತಹ ಧರ್ಮವನ್ನು ಅನುಸರಿಸಲಾರೆ. ನಾನು 'ಲಾತ್' ಮತ್ತು 'ಉಝ್ಝಾ'ಗಳನ್ನು ತೊರೆದಿರುವೆನು. ಇದಕ್ಕೆ ದೃಢ ಸಂಕಲ್ಪ ಮತ್ತು ಸಹನೆ ಬೇಕು. ಆದ್ದರಿಂದ ನೀವು ಅಲ್ಲಾಹನ ಭಯಭಕ್ತಿಯನ್ನು ಸಂರಕ್ಷಿಸಿರಿ. ಈ ಗುಣ ನಿಮ್ಮಲ್ಲಿರುವ ತನಕ ನೀವು ನಷ್ಟಕ್ಕೊಳಗಾಗಲಾರಿರಿ. ಹೌದು ನಾನು 'ರಹ್ಮಾನ'ನ ಆರಾಧಕನಾ ಗಿರುವೆನು. ಅವನು ನನ್ನ ಪಾಪಗಳನ್ನು ಮನ್ನಿಸಲೆಂದು ನಾನು ಅವನಲ್ಲಿ ಮೊರೆ ಯಿಡುತ್ತಿರುವೆನು."

ಝೈದ್ ಬಿನ್ ಅಮ್ರ್ ಅಲ್ಲದೆ ವರಕ ಬಿನ್ ನೌಫಲ್, ಉಸ್ಮಾನ್ ಬಿನ್ ಹಾರಿಸ್ ಮತ್ತು ಉಬೈದ್ ಬಿನ್ ಜಹಶ್ ಕೂಡಾ ಇಬ್ರಾಹೀಮ್‌ರ(ಅ) ಧರ್ಮವನ್ನು ಅರಸುತ್ತಿದ್ದಾರೆ. ಬಹುದೇವಾರಾಧನೆಯ ಅಂಧಕಾರದಲ್ಲಿ ಈ ನಾಲ್ಕು ಮಿಂಚು ಹುಳಗಳು ತಮ್ಮ ದೀಪಗಳೊಂದಿಗೆ ಗುರಿಯನ್ನರಸಿ ನಡೆಯುತ್ತಿವೆ. ಅವರು ಪರಸ್ಪರ ಭೇಟಿಯಾಗುತ್ತಲೂ ಇರುತ್ತಾರೆ.

## ದೀನಬಂಧು

ಮಕ್ಕಾದ ಉಕಾಝ್ ಸಂತೆಯಲ್ಲಿ ಲಕ್ಷಗಟ್ಟಲೆಯ ವ್ಯಾಪಾರ ನಡೆಯುತ್ತಿದೆ. ಮಕ್ಕಾದ ಚರ್ಮಗಳು, ಖರ್ಜೂರಗಳು ಇತ್ಯಾದಿ ಮಳಿಗೆಗಳಲ್ಲಿ ತುಂಬಿವೆ. ಸಿರಿಯಾ ಮತ್ತು ಯಮನ್‌ನ ಪಾತ್ರೆಗಳು, ಬಟ್ಟೆ-ಬರೆಗಳು, ಬೆಳ್ಳಿ-ಬಂಗಾರ, ಶಸ್ತ್ರಾಸ್ತ್ರಗಳು ಮತ್ತು ಧಾನ್ಯಗಳು ರಾಶಿ ರಾಶಿ

ಬಿದ್ದಿವೆ. ವ್ಯಾಪಾರ ವಹಿವಾಟು ಬಿರುಸಾಗಿ ನಡೆಯುತ್ತಿದೆ. ಕುರೈಶರ ಸುಪ್ರಸಿದ್ಧ ವ್ಯಾಪಾರಿಗಳು ತಂತಮ್ಮ ಮಳಿಗೆಗಳನ್ನು ಸಜ್ಜುಗೊಳಿಸಿಟ್ಟಿದ್ದಾರೆ. ಇದೇ ಪೇಟೆಯಲ್ಲಿ ಒಂದೆಡೆ ಇಬ್ಬರು ಗ್ರಾಮೀಣ ಅರಬರು ಕೆಲವು ವಸ್ತುಗಳನ್ನು ಖರೀದಿಸುತ್ತಿದ್ದಾರೆ. ಇಪ್ಪತ್ತೆರಡು ವರ್ಷ ಪ್ರಾಯದ ಸ್ಫುರದ್ರೂಪಿ ಯುವ ವರ್ತಕನು ಶುಭ್ರವಾದ ಬಿಳಿ ಬಟ್ಟೆಯಲ್ಲಿ ಲವಲವಿಕೆಯೊಂದಿಗೆ ವ್ಯಾಪಾರ ನಡೆಸುತ್ತಿದ್ದಾನೆ. ಆತ ಗ್ರಾಹಕರಿಗೆ ಸರಕಿನ ಗುಣಗಳ ಜೊತೆಗೆ ಅದರ ದೋಷವನ್ನೂ ತಿಳಿಸುತ್ತಿದ್ದಾನೆ. ವಂಚನೆ-ಮೋಸಗಳು ಅವನ ವ್ಯಾಪಾರದಲ್ಲಿ ಇಲ್ಲವೇ ಇಲ್ಲ. ಇತರ ಎಲ್ಲ ವರ್ತಕರು ಗ್ರಾಹಕರನ್ನು ಒಲಿಸುವ ಮತ್ತು ಅವರ ಅನುಭವಹೀನತೆಯ ದುರ್ಲಾಭ ಪಡೆಯುವ ಯತ್ನದಲ್ಲಿ ನಿರತರಾಗಿದ್ದಾರೆ. ಆದರೆ ಉಕಾಝ್ ಪೇಟೆಯ ಈ ಅದ್ಭುತ ವ್ಯಾಪಾರಿಗೆ ತನ್ನ ಸರಕು ಮಾರಾಟವಾಗುವುದಕ್ಕಿಂತಲೂ ಗ್ರಾಹಕರ ಹಿತಾಸಕ್ತಿಯು ಹೆಚ್ಚು ಪ್ರಿಯವಾಗಿದೆ. ಇವರೇ ಮುಹಮ್ಮದ್(ಸ)! ಮಾತಿನಲ್ಲಿ ಸತ್ಯವಂತ ಮತ್ತು ವ್ಯವಹಾರದಲ್ಲಿ ಪ್ರಾಮಾಣಿಕರು. ಇತರ ವ್ಯಾಪಾರಿಗಳ ಆದಾಯವು ಹೆಚ್ಚಿನಂಶ ಬಡ್ಡಿ ವ್ಯವಹಾರವನ್ನು ಅವಲಂಬಿಸಿದೆ. ಬಡ ಜನರು ನಗದು ವ್ಯಾಪಾರ ನಡೆಸುವ ಸಾಮರ್ಥ್ಯ ಉಳ್ಳವರಲ್ಲ. ಆದ್ದರಿಂದ ಚಕ್ರಬಡ್ಡಿಯ ಮೇಲೆ ಸಾಲ ಪಡೆಯುತ್ತಾರೆ. ತನ್ಮೂಲಕ ಅರಬ್ ಬಡ್ಡಿಕೋರರ ಬಲೆಯಲ್ಲಿ ಬಿದ್ದು ಜೀವಮಾನವಿಡೀ ನರಳುತ್ತಾರೆ. ಈ ಬಡ್ಡಿ ವ್ಯವಸ್ಥೆಯಿಂದಾಗಿ ಅಪವ್ಯಯ ಮಾಡುವವರು ಮತ್ತು ಕೀರ್ತಿಗಾಗಿ ವ್ಯಯಿಸುವವರು ಸದಾ ವರ್ತಕರಿಂದ, ಬಂಡವಾಳ ಶಾಹಿಗಳಿಂದ ಮತ್ತು ಬಡ್ಡಿಯ ವ್ಯಾಪಾರಿಗಳಿಂದ ಸಾಲ ಪಡೆಯುತ್ತಿರುತ್ತಾರೆ. ಮುಂದೆ ಅವರಿಗೆ ಅದಕ್ಕೆ ಬಹಳ ಬಡ್ಡಿ ನೀಡಬೇಕಾಗುತ್ತದೆ. ಯಾವ ಧನಿಕನೂ ಚಿಕ್ಕಾಸನ್ನೂ ಬಡ್ಡಿ ಇಲ್ಲದೆ ಸಾಲ ನೀಡಲು ಸಿದ್ಧನಿರಲಿಲ್ಲ. ಅವರಿಗೆ ಬಡ್ಡಿಯು ಅಸಲಿಗಿಂತಲೂ ಹೆಚ್ಚು ಪ್ರಿಯವಾಗಿದೆ. ಅವರ ಸಂಪತ್ತಿನ ವೃದ್ಧಿ ಮತ್ತು ಪ್ರಸಾರವು ಬಡ್ಡಿಯನ್ನೇ ಅವಲಂಬಿಸಿದೆ. ಆದರೆ ಆ ಪೇಟೆಯಲ್ಲಿ ಒಬ್ಬ ವರ್ತಕನಿಗೆ ಮಾತ್ರ ಬಡ್ಡಿ ಎಂದರೆ ಎಲ್ಲಿಲ್ಲದ ದ್ವೇಷ. ಬಡ್ಡಿ ಪಡೆಯದೆ ಸಾಮಾನು ಅಥವಾ ನಗದು ಸಾಲ ನೀಡುವುದರಲ್ಲಿ ಅವರಿಗೆ ಸ್ವಲ್ಪವೂ ಅಳುಕಿಲ್ಲ. ಅವರ ಮಟ್ಟಿಗೆ ಸಂಪತ್ತು ಶೇಖರಣೆಯು ಜೀವನದ ಧ್ಯೇಯವಲ್ಲ. ಅವರೇ ಮುಹಮ್ಮದ್(ಸ). ಅವರ ಚಿಕ್ಕಪ್ಪ ಬಡ್ಡಿಯ ವ್ಯಾಪಾರದಿಂದಲೇ ಲಕ್ಷಾಧೀಶರಾಗಿರುವರು. ಆದರೆ ಅವರಿಗೆ ಅದರ ಪರಿವೆ ಇಲ್ಲ. ಅವರು ಈಗಲೂ ಒಂದು ಬಡ ವರ್ತಕರಾಗಿದ್ದಾರೆ.

ಮುಹಮ್ಮದ್(ಸ) ವ್ಯಾಪಾರ ಮಾಡುತ್ತಾ ಹಲವು ವರ್ಷಗಳು ಕಳೆದಿವೆ. ತಮ್ಮ ಸತ್ಯಸಂಧತೆ ಮತ್ತು ಪ್ರಾಮಾಣಿಕತೆಗಾಗಿ ಅವರು 'ಸಾದಿಕ್' (ಸತ್ಯಸಂಧ) ಮತ್ತು 'ಅಮೀನ್' (ಪ್ರಾಮಾಣಿಕ) ಎಂಬ ಖ್ಯಾತಿ ಪಡೆದಿದ್ದಾರೆ. ಆದರೂ ಅವರ ಬಂಡವಾಳವು ಅವರೆಲ್ಲ ಪಿತೃ ಸೋದರರಿಗಿಂತ ಕಡಿಮೆಯಿದೆ. ಅವರ ಸರಕುಗಳು ಶೀಘ್ರ ಮಾರಾಟವಾಗುತ್ತವೆ. ಆದರೆ ಅವರು ಕನಿಷ್ಠ ಲಾಭ ಪಡೆಯುತ್ತಾರೆ.

ಒಂದು ದಿನ ಉತ್‌ಬಾನ ಮನದಲ್ಲಿ ಒಂದು ಯೋಚನೆ ಹೊಳೆಯುತ್ತದೆ. ಆತ ಮುಹಮ್ಮದ್‌ರ(ಸ) ಹಿಂದೆ ನಡೆಯುತ್ತಾನೆ. ಮುಹಮ್ಮದ್‌ರ(ಸ) ಕೈಯಲ್ಲಿ ಧಾನ್ಯ ಮತ್ತು ನಾಣ್ಯಗಳ ಚಿಕ್ಕ ಚಿಕ್ಕ ಪೊಟ್ಟಣಗಳಿರುವುದನ್ನು ಅವನು ಕಂಡಿದ್ದಾನೆ. ಅವರು ಅದನ್ನು ಹಿಡಿದು

ಒಂದು ಓಣಿಯಲ್ಲಿ ಸಾಗುತ್ತಿದ್ದಾರೆ. ಮುಹಮ್ಮದ್(ಸ) ಒಂದು ಮನೆಯ ಬಾಗಿಲು ತಟ್ಟುತ್ತಾರೆ. ದುರ್ಬಲ ಮುದುಕಿಯೊಬ್ಬಳು ಹೊರಬರುತ್ತಾಳೆ. ಮುಹಮ್ಮದ್(ಸ) ಆಕೆಯ ಕೈಯಲ್ಲಿ ಒಂದು ಚೀಲ ಕೊಟ್ಟು ಆಕೆಯ ಕೃತಜ್ಞತೆಗೂ ಕಾಯದೆ ಮುಂದು ವರಿಯುತ್ತಾರೆ. ಉತ್‌ಬಾ ಇದನ್ನು ಕಂಡು ಆಶ್ಚರ್ಯ ಚಕಿತನಾಗುತ್ತಾನೆ.

ಇದು ಫುಜ್ಜಾರ್ ಯುದ್ಧದಲ್ಲಿ ಮಡಿದ ಕೈಸ್‌ನ ಮನೆ. ಇಲ್ಲಿ ಅವನ ಚಿಕ್ಕ ಚಿಕ್ಕ ಮಕ್ಕಳು ಮತ್ತು ರೋಗ ಪೀಡಿತ ತಾಯಿ ಮಾತ್ರ ಇರುತ್ತಾರೆ. ಅವರಿಗೆ ಯಾರೂ ಗತಿ ಇಲ್ಲ.

ಉತ್‌ಬಾ ಮುಹಮ್ಮದ್‌ರ(ಸ) ಹಿಂದೆಯೇ ಅವರಿಗರಿಯದಂತೆ ನಡೆಯುತ್ತಾನೆ. ಕೆಲವು ಹೆಜ್ಜೆಗಳ ಬಳಿಕ ಅವರು ಮತ್ತೊಂದು ಬಾಗಿಲನ್ನು ತಟ್ಟುತ್ತಾರೆ. ಕೆಲವೇ ಕ್ಷಣಗಳಲ್ಲಿ ಓರ್ವ ಮುದುಕ ಹೊರಬರುತ್ತಾನೆ. ಅವನ ಕಣ್ಣುಗಳು ಗುಳಿ ಬಿದ್ದಿವೆ. ಮುಖ ಸುಕ್ಕುಗಟ್ಟಿದೆ. ಬಣ್ಣ ಹಳದಿಯೇರಿದೆ. ಕೈಗಳು ನಡುಗುತ್ತಿವೆ. ಮುಹಮ್ಮದ್(ಸ) ಅವರೊಂದಿಗೆ ಕೈ ಕುಲುಕಿ ಇನ್ನೊಂದು ಚೀಲವನ್ನು ಅವರ ಕೈಯಲ್ಲಿಟ್ಟು ಮುಂದುವರಿ ಯುತ್ತಾರೆ. ಮುದುಕನ ತುಟಿಗಳು ಅಲುಗಾಡುತ್ತವೆ. ಅವನು ಅವರಿಗಾಗಿ ಪ್ರಾರ್ಥಿಸುವಂತೆ ಭಾಸವಾಗುತ್ತದೆ. ಮುಹಮ್ಮದ್(ಸ) ಇನ್ನೂ ಸ್ವಲ್ಪ ಮುಂದೆ ಹೋಗುತ್ತಾರೆ. ಅಲ್ಲಿ ಕೆಲವು ಮಕ್ಕಳು ಆಡುತ್ತಿದ್ದಾರೆ. ಅವರ ಬಟ್ಟೆ ಮತ್ತು ಮೈಯಲ್ಲಿ ಧೂಳು ತುಂಬಿದೆ. ಅವರಲ್ಲಿ ಒಬ್ಬನು ಮುಹಮ್ಮದ್(ಸ) ಬರುತ್ತಿರುವುದನ್ನು ಕಂಡನು: 'ನೋಡಲ್ಲಿ ಮುಹಮ್ಮದ್(ಸ) ಬರುತ್ತಿದ್ದಾರೆ' ಎನ್ನುತ್ತಲೇ ಎಲ್ಲ ಮಕ್ಕಳೂ ಮುಹಮ್ಮದ್‌ರನ್ನು(ಸ) ಸುತ್ತುವರಿಯುತ್ತಾರೆ. ಕೆಲವರು ಅವರ ಕಾಲುಗಳನ್ನು ಬಿಗಿಹಿಡಿದರೆ ಇನ್ನು ಕೆಲವರು ಅವರ ಅಂಗಿಯ ತುದಿ ಹಿಡಿಯುತ್ತಾರೆ. ಮತ್ತೆ ಕೆಲವರು ಅವರ ಕೈಯಲ್ಲಿರುವ ಚೀಲಗಳ ಮೇಲೆ ಕೈಯಾಡಿಸುತ್ತಾರೆ. ಇವರಲ್ಲಿ ಅನೇಕರು ಕಡುಬಡವರ ಮಕ್ಕಳು. ಕೆಲವು ಮಂದಿ ಅನಾಥರೂ ಇದ್ದಾರೆ. ಉತ್‌ಬಾನಿಗೆ ಇಂತಹ ಕೊಳಕು ಮಕ್ಕಳೆಂದರೆ ಹಿಂದಿನಿಂದಲೂ ದ್ವೇಷ. ಬಡ-ನಿರ್ಗತಿಕ ಜನರನ್ನು ಕಂಡರೆ ಆಗುತ್ತಿರಲಿಲ್ಲ, ಅವರ ಮಕ್ಕಳ ಬಗ್ಗೆ ಅವನ ಮನದಲ್ಲಿ ಸ್ವಲ್ಪವೂ ಅನುಕಂಪವಿಲ್ಲ. ಆದರೆ ಮುಹಮ್ಮದ್(ಸ) ಅವರನ್ನು ಮುದ್ದಿಸುವುದು, ಪ್ರೀತಿಸುವುದು, ವಾತ್ಸಲ್ಯದಿಂದ ತಲೆ ನೇವರಿಸುವುದು ಕಂಡು ಅವನಿಗೆ ಎಲ್ಲಿಲ್ಲದ ಆಶ್ಚರ್ಯ. ಮುಹಮ್ಮದ್(ಸ) ತಮ್ಮ ಕೈಯಲ್ಲಿದ್ದ ಚಿಕ್ಕ ಚಿಕ್ಕ ಪೊಟ್ಟಣಗಳನ್ನು ಒಂದೊಂದಾಗಿ ಅವರಿಗೆ ನೀಡುತ್ತಾರೆ. ಮಕ್ಕಳು ಅವುಗಳನ್ನು ಹಿಡಿದುಕೊಂಡು ಕೇಕೆ ಹಾಕುತ್ತಾ ತಂತಮ್ಮ ಮನೆಗಳಿಗೆ ಓಡುತ್ತಾರೆ. ಹಿಂತಿರುಗುವಾಗ ಮುಹಮ್ಮದ್(ಸ) ಉತ್‌ಬಾನನ್ನು ಕಾಣುತ್ತಾರೆ. ಆದರೆ ಅವರ ಕಾಂತಿಯುತ ಮುಖದಲ್ಲಿ ಮನಶ್ಶಾಂತಿಯ ತರಂಗಗಳನ್ನು ಕಂಡು ಅವನು ಮೂಕನಾಗಿ ಬಿಡುತ್ತಾನೆ. ಏನೂ ಮಾತಾಡಿಸದೆ ಮುಂದುವರಿದು ಬಿಡುತ್ತಾನೆ. ಅವನು ಮನಸ್ಸಿನಲ್ಲೇ ಹೀಗೆಂದುಕೊಳ್ಳುತ್ತಾನೆ:

"ಹೌದು, ಇದು ವಿಷಯ. ಮುಹಮ್ಮದ್‌ರಿಗೆ(ಸ) ಸಂಪತ್ತಿನ ಬೆಲೆ ಗೊತ್ತಿಲ್ಲ. ಅದನ್ನು ನೀರಿನಂತೆ ವಿಧವೆಯರಲ್ಲಿ ಮತ್ತು ಅನಾಥರಲ್ಲಿ ವ್ಯಯಿಸುತ್ತಿದ್ದಾನೆ. ಇಲ್ಲದಿದ್ದರೆ ಇಂದು ಅವನು ಮಕ್ಕಾದ ಅತಿ ದೊಡ್ಡ ಶ್ರೀಮಂತನಾಗಿರುತ್ತಿದ್ದ. ವ್ಯಾಪಾರದಲ್ಲಿ ಅವನು ಬಹಳ

ಖ್ಯಾತಿ ಪಡೆದಿದ್ದಾನೆ. ಗ್ರಾಹಕರು ಅವನ ಮಳಿಗೆಯನ್ನೇ ಹುಡುಕಿ ಬರುತ್ತಾರೆ. ಇವನೂ ಇವನ ಚಿಕ್ಕಪ್ಪಂದಿರಾದ ಅಬೂಲಹಬ್, ಅಬ್ಬಾಸ್(ರ) ಮತ್ತು ಹಮ್‌ಝಾರಂತೆ(ರ) ಸಂಪತ್ತಿನ ಬೆಲೆ ತಿಳಿದವನಾಗಿರುತ್ತಿದ್ದರೆ ಇವನನ್ನು ಮೀರಿಸುವ ಶ್ರೀಮಂತ ಇಂದು ಮಕ್ಕಾದಲ್ಲಿ ಬೇರೆ ಯಾರೂ ಇರುತ್ತಿರಲಿಲ್ಲ.

## ಸಾದಿಕ್ ಮತ್ತು ಅಮೀನ್

ಉಕಾಝ್ ಪೇಟೆಯ ಈ ವರ್ತಕ ಬಹಳ ವಿಚಿತ್ರ ವ್ಯಕ್ತಿ. ಎಲ್ಲರಿಗಿಂತಲೂ ಭಿನ್ನ. ಸವಿಮಾತು, ನಿರಾಡಂಬರ ನಡಿಗೆ, ನಿಷ್ಕಲ್ಮಶ ವ್ಯವಹಾರ ಮತ್ತು ನಿಷ್ಕಳಂಕ ಚಾರಿತ್ರ್ಯ.

ಒಂದು ದಿನ ಪೇಟೆಯಲ್ಲಿ ಅಬ್ದುಲ್ಲಾ ಬಿನ್ ಅಬೀಲ್ ಹಮ್‌ಸಾ ಎಂಬ ವ್ಯಕ್ತಿ ಅವರೊಂದಿಗೆ ವ್ಯವಹಾರ ಮುಗಿಸಿ "ಮುಹಮ್ಮದ್! ನೀವು ಇಲ್ಲೇ ಇರಿ. ನಾನು ಸ್ವಲ್ಪ ಹೊತ್ತಿನಲ್ಲಿ ಬರುತ್ತೇನೆ" ಎಂದು ಹೇಳಿ ಹೋಗುತ್ತಾನೆ. ಮುಹಮ್ಮದ್(ಸ) ಅಲ್ಲೇ ನಿಂತಿರುತ್ತಾರೆ. ಅಬ್ದುಲ್ಲಾ ತನ್ನ ಯಾವುದೋ ಕೆಲಸದ ನಿಮಿತ್ತ ಹೋದವನು ಮತ್ತೊಂದು ವ್ಯವಹಾರದಲ್ಲಿ ತಲ್ಲೀನನಾಗಿ ಬಿಡುತ್ತಾನೆ. ಮುಹಮ್ಮದ್‌ರಿಗೆ(ಸ) ಸ್ವಲ್ಪ ಹೊತ್ತಿನಲ್ಲೇ ಬರುತ್ತೇನೆ ಎಂದಿರುವುದು ಅವನಿಗೆ ಪೂರ್ಣ ಮರೆತು ಹೋಗಿತ್ತು. ಇದೇ ಸ್ಥಿತಿಯಲ್ಲಿ ಮೂರು ದಿನಗಳು ಕಳೆದುವು. ಅಂದು ಅವನಿಗೆ ಮುಹಮ್ಮದ್‌ರ(ಸ) ನೆನಪಾಗುತ್ತದೆ. ಅವರೊಂದಿಗೆ ವ್ಯವಹಾರ ಮುಗಿಸಿ ಸ್ವಲ್ಪ ಹೊತ್ತಿನಲ್ಲಿ ಬರುವುದಾಗಿ ಹೇಳಿಬಂದು ಮೂರು ದಿನಗಳು ಕಳೆದ ಬಗ್ಗೆ ವಿಷಾದವಾಯಿತು. ಉಕಾಝ್ ಪೇಟೆಗೆ ಹೊರಡುವಾಗ ಅವನು ಯೋಚಿಸುತ್ತಿದ್ದ, "ಮುಹಮ್ಮದ್(ಸ) ತನ್ನ ಸರಕುಗಳನ್ನೆಲ್ಲಾ ಮಾರಿ ಹೊರಟು ಹೋಗಿರಬೇಕು... ಇಲ್ಲ ಮುಹಮ್ಮದ್(ಸ) ಅಲ್ಲಿಂದ ಹೊರಟಿದ್ದರೆ ನನ್ನ ಬಳಿ ಬರುತ್ತಿದ್ದರು. ನನಗೆ ನನ್ನ ವಾಗ್ದಾನವನ್ನು ನೆನಪಿಸುತ್ತಿದ್ದರು. ಅವರು ಖಂಡಿತ ಅಲ್ಲೇ ಇರಬೇಕು" ಎಂದವನೇ ಬೇಗ ಬೇಗ ಹೆಜ್ಜೆ ಹಾಕುತ್ತಾ ಪೇಟೆಯತ್ತ ನಡೆಯುತ್ತಾನೆ.

ಮುಹಮ್ಮದ್(ಸ) ಮೂರು ದಿನಗಳ ಹಿಂದೆ ಇದ್ದ ಸ್ಥಳದಲ್ಲೇ ಇದ್ದಾರೆ. ಅವರನ್ನು ಕಾಣುತ್ತಲೇ ಅಬ್ದುಲ್ಲಾ ನಾಚಿ ತಲೆ ತಗ್ಗಿಸುತ್ತಾನೆ. ಅವನಲ್ಲಿ ತನ್ನ ತಪ್ಪಿನ ಪ್ರಜ್ಞೆ ಮೂಡುತ್ತದೆ. ಓರ್ವ ಅಪರಾಧಿಯಂತೆ ಮುಂದುವರಿದು,

"ಮುಹಮ್ಮದ್(ಸ) ನನ್ನನ್ನು ಕ್ಷಮಿಸಿ. ನನಗೆ ಬಹಳ ವಿಷಾದವಿದೆ. ನಾನು ಹೇಳಿದ ಸಮಯಕ್ಕೆ ಬರಲಿಲ್ಲ. ನಾನು ಆ ವಿಷಯವನ್ನು ಪೂರ್ಣವಾಗಿ ಮರೆತಿದ್ದೆ."

ಮುಹಮ್ಮದ್(ಸ) ಅವರತ್ತ ಶಾಂತಚಿತ್ತರಾಗಿ ನೋಡುತ್ತಾ,

"ನೀವು ನನ್ನನ್ನು ಬಹಳ ಹೊತ್ತು ಕಾಯುವಂತೆ ಮಾಡಿದಿರಿ. ಮೂರು ದಿನಗಳಿಂದ ನಿರಂತರ ನಾನು ನಿಮ್ಮನ್ನು ಕಾಯುತ್ತಿರುವೆನು."

"ಮುಹಮ್ಮದ್! ನೀವು ಖಂಡಿತ ಒಳ್ಳೆಯವರು. ಜನರು ನಿಮ್ಮನ್ನು 'ಅಮೀನ್' ಮತ್ತು 'ಸಾದಿಕ್' ಎನ್ನುವುದು ನಿಜ. ಖಂಡಿತ ನೀವು ಅತ್ಯಂತ ಸತ್ಯಸಂಧ ಮತ್ತು ಪ್ರಾಮಾಣಿಕ

ರಾಗಿರುವಿರಿ."

ಈ ಅಬ್ದುಲ್ಲಾ ಹೋದಲ್ಲೆಲ್ಲಾ ಮುಹಮ್ಮದರ ವಚನಪಾಲನೆ, ಪ್ರಾಮಾಣಿಕತೆ ಮತ್ತು ಸತ್ಯಸಂಧತೆಯ ಬಗ್ಗೆ ಚರ್ಚಿಸುತ್ತಿರುತ್ತಾನೆ. ಆ ಚರ್ಚೆಯು ಮಕ್ಕಾದ ಬೀದಿ ಕೇರಿಗಳಿಂದ ಹೊರಟು ದೂರ ದೂರದ ವರೆಗೆ ವ್ಯಾಪಿಸುತ್ತಿದೆ.

## ಖದೀಜಾ

ಮಕ್ಕಾದ ಜನದಟ್ಟಣೆಯ ಪ್ರದೇಶದಲ್ಲಿ ನಗರದ ಹೆಚ್ಚಿನ ಶ್ರೀಮಂತರು ಮತ್ತು ವರ್ತಕರು ವಾಸಿಸುತ್ತಿದ್ದಾರೆ. ಅವರ ಮನೆಗಳು ವಿಶಾಲವೂ ಸುಂದರವೂ ಸುಸಜ್ಜಿತವೂ ಆಗಿವೆ. ಅವುಗಳ ಮಧ್ಯೆ ಒಂದು ಉನ್ನತ ಅರಮನೆಯಂತಹ ಕಟ್ಟಡವಿದೆ. ಆಕರ್ಷಕವಾದ ಆ ಕಟ್ಟಡದ ಸುತ್ತಲೂ ಕೋಟೆಯಿದೆ. ಅದರೊಳಗೆ ಅನೇಕ ಕುದುರೆಲಾಯ ಮತ್ತು ಒಂಟೆಲಾಯಗಳಿವೆ. ಅವುಗಳಲ್ಲಿರುವ ಒಂಟೆ, ಕುದುರೆ ಮತ್ತು ಕತ್ತೆಗಳಿಗೆ ಲೆಕ್ಕವಿಲ್ಲ. ಆ ಆವರಣದೊಳಗೆ ಅನೇಕ ಗೋದಾಮುಗಳೂ ಇವೆ. ಅವುಗಳಲ್ಲಿ ವ್ಯಾಪಾರ ಸರಕು ತುಂಬಿವೆ. ದಾಸ-ದಾಸಿಯರ ವಾಸಕ್ಕೆ ಪ್ರತ್ಯೇಕ ಮನೆಗಳಿವೆ.

ಅಂಗಳದ ಮಧ್ಯೆ ಓರ್ವ ಗೌರವಾನ್ವಿತ ಮಹಿಳೆ ಕುಳಿತಿದ್ದಾರೆ. ಮುಖದ ಮೇಲೆ ಗಾಂಭೀರ್ಯ ಎದ್ದು ಕಾಣುತ್ತದೆ. ಮಾತು ಘನ ವ್ಯಕ್ತಿತ್ವದ ಪ್ರತೀಕವಾಗಿದೆ. ವಯಸ್ಸು ಸುಮಾರು ಮೂವತ್ತೇಳು ವರ್ಷಗಳಾಗಿರಬಹುದು. ಆದರೆ ಆರೋಗ್ಯವಂತ ಮತ್ತು ಸುಂದರ ಮೈಕಟ್ಟು. ಅವರ ಮುಂದೆ ಕೆಲವು ದಾಸಿಯರಿದ್ದಾರೆ. ಒಬ್ಬ ಮಧ್ಯ ವಯಸ್ಕ ನೀಗ್ರೋ ಗುಲಾಮನಿದ್ದಾನೆ. ಅವನ ಮುಖಭಾವದಿಂದ ಜ್ಞಾನ ಮತ್ತು ವಿವೇಕ ವ್ಯಕ್ತವಾಗುತ್ತವೆ. ಆತ ಸವಿನಯವಾಗಿ ನಿಂತುಕೊಂಡಿದ್ದಾನೆ. ಒಡತಿ ಹೇಳುತ್ತಿದ್ದಾರೆ:

"ಮೈಸರ, ಸಿರಿಯಾದ ಯಾತ್ರಾ ತಂಡ ಯಾವಾಗ ಹೊರಡುತ್ತದೆ?"

ಮೈಸರ: "ಒಡತಿ! ಇನ್ನೊಂದು ಎಂಟು ಹತ್ತು ದಿನಗಳಲ್ಲಿ ಹೊರಡಬಹುದು."

ಒಡತಿ: "ನೀನು ಸರಕುಗಳನ್ನು ಸಿದ್ಧಗೊಳಿಸಿರುವೆಯಾ?"

ಮೈಸರ: "ಹೌದು, ಇಲ್ಲಿಂದ ಸಿರಿಯಾಕ್ಕೆ ಹೋಗುವ ಸರಕುಗಳು ಸಿದ್ಧವಾಗಿವೆ. ಅಲ್ಲಿಂದ ತರಬೇಕಾದ ಸಾಮಾನುಗಳ ಪಟ್ಟಿಯೂ ಸಿದ್ಧವಿದೆ. ಇನ್ನು ಯಾತ್ರಾ ತಂಡ ಹೊರಡುವುದೇ ತಡ."

ಒಡತಿ: "ಈ ಸಲ ನಿನ್ನ ಜೊತೆ ಒಬ್ಬ ಹೊಸ ಪ್ರತಿನಿಧಿಯನ್ನು ಕಳುಹಿಸಬೇಕೆಂದಿದ್ದೇನೆ. ನಿನ್ನ ಅಭಿಪ್ರಾಯವೇನು?"

ಮೈಸರ: "ತಮ್ಮ ಇಚ್ಛೆಯಂತೆಯೇ ಆಗಲಿ ಒಡತಿ."

ಒಡತಿ: "ನಾನು ಹಲವು ದಿನಗಳಿಂದ ಅಬೂತಾಲಿಬರ ಸೋದರ ಪುತ್ರರ ಕುರಿತು ಕೇಳುತ್ತಿದ್ದೇನೆ. ಅವರ ಸತ್ಯಸಂಧತೆ ಮತ್ತು ಪ್ರಾಮಾಣಿಕತೆಯ ಖ್ಯಾತಿಯು ಬಹಳ ದೂರದ ವರೆಗೆ ಹಬ್ಬಿದೆ."

ಮೈಸರ: "ಹೌದು ಒಡತಿ. ತಾವು ಹೇಳುತ್ತಿರುವುದು ನಿಜ. ಮಕ್ಕಾದ ಪ್ರತಿಯೊಬ್ಬ ವ್ಯಕ್ತಿ

ಆ ಯುವ ವರ್ತಕನ ಗುಣಗಳನ್ನು ಒಪ್ಪುತ್ತಾನೆ. ಅವರು ಪ್ರತಿಸಲ ಲಾಭವನ್ನು ಅತ್ಯಧಿಕಗೊಳಿಸಿರುವರು."

ಒಡತಿ: "ಈ ಸಲ ನನ್ನ ಸರಕುಗಳನ್ನು ಕೊಟ್ಟು ಅವರನ್ನು ನಿನ್ನ ಜೊತೆ ಕಳುಹಿಸಬೇಕೆಂದಿದ್ದೇನೆ ನೀನೇನು ಹೇಳುತ್ತಿ?"

ಮೈಸರ: "ಯಜಮಾನ್ತಿ! ನನಗೆ ತಮ್ಮೊಂದಿಗೆ ಪೂರ್ಣ ಸಹಮತವಿದೆ."

ಒಡತಿ: "ಹಾಗಾದರೆ ನೀನು ಹೋಗಿ ಅವರಿಗೆ ನನ್ನ ಸಂದೇಶ ತಿಳಿಸು. ಅವರಿಗೆ ಒಪ್ಪಿಗೆಯಾದರೆ ಜೊತೆಯಲ್ಲೇ ಕರೆದುಕೊಂಡು ಬಾ."

ಮೈಸರ ವಿನಯಪೂರ್ವಕ ಸಲಾಮ್ ಹೇಳಿ ನಿರ್ಗಮಿಸುತ್ತಾನೆ. ಒಡತಿ ದಾಸಿಯ ರೊಂದಿಗೆ ಮಾತುಕತೆಯಲ್ಲಿ ನಿರತರಾಗುತ್ತಾರೆ.

ಇವರೇ ಖದೀಜ. ಅವರ ತಂದೆ ಖುವೈಲದ್ ಬಿನ್ ಅಸದ್. ಮಖ್ಝೂಮ್ ಗೋತ್ರದ ಪ್ರತಿಷ್ಠಿತ ವ್ಯಕ್ತಿ ಮತ್ತು ಪ್ರಸಿದ್ಧ ವ್ಯಾಪಾರಿ. ಈ ಮಹಿಳೆ ಮೊದಲು ಅತೀಕ್ ಬಿನ್ ಆಯಿಝ್ ಮಖ್ಝೂಮಿಯನ್ನು ಮದುವೆಯಾಗಿದ್ದರು. ಆದರೆ ಸ್ವಲ್ಪ ಸಮಯದಲ್ಲೇ ಅವರು ತೀರಿಕೊಂಡರು. ತರುವಾಯ ಅಬೂಹಾಲ ಬಿನ್ ಝುರಾರಃರೊಂದಿಗೆ ಮದುವೆಯಾಯಿತು. ಅವರಿಂದ ಹುಟ್ಟಿದ ಮೂರು ಪುತ್ರರೇ ಹಾಲ, ಹಾರಿಸ್ ಮತ್ತು ಹಿಂದ್. ಆದರೆ ಅಬೂಹಾಲ ಕೂಡಾ ಕೆಲವೇ ಸಮಯದಲ್ಲಿ ತೀರಿಕೊಂಡರು. ಹೀಗೆ ಈ ಗೌರವಾನ್ವಿತ ಮಹಿಳೆ ಎರಡನೆಯ ಸಲ ವಿಧವೆಯಾದರು. ಈ ದುಃಖ ಮಾಯುವ ಮೊದಲೇ ತಂದೆಯವರೂ ನಿಧನರಾದರು. ಹೀಗೆ ಅವರು ಇಮ್ಮಡಿ ದುಃಖದಲ್ಲಿ ಮುಳುಗಿದರು.

ಪತಿ ಮತ್ತು ತಂದೆಯ ವಿರಹವು ಬೆನ್ನು ಬೆನ್ನಿಗೇ ಬಂದು ಖದೀಜಾರನ್ನು ಗಂಭೀರವದನರಾಗಿಸಿತು. ಆದ್ದರಿಂದಲೇ ಅವರು ಯೌವನದ ಹರೆಯದಲ್ಲಿದ್ದಾಗಲೂ ಮದುವೆಯ ಎಲ್ಲ ಪ್ರಸ್ತಾಪಗಳನ್ನು ತಿರಸ್ಕರಿಸಿದರು. ಬಡವರ, ನಿರ್ಗತಿಕರ, ವಿಧವೆಯರ ಮತ್ತು ತಬ್ಬಲಿಗಳ ಸೇವೆಯಲ್ಲೇ ತಮ್ಮನ್ನು ತೊಡಗಿಸಿಕೊಂಡರು. ಅವರ ಈ ಪರಿಶುದ್ಧ ಚಾರಿತ್ರ್ಯ ಮತ್ತು ಬಡವರ ಅನುಕಂಪದ ಕಾರಣ ಜನರು ಅವರನ್ನು ಆದರದಿಂದ 'ತಾಹಿರಾ' ಎಂದು ಕರೆಯುತ್ತಿದ್ದರು. ಅವರು ತಮ್ಮ ಸೊತ್ತನ್ನು ವ್ಯಾಪಾರದಲ್ಲಿ ತೊಡಗಿಸಿದ್ದರು. ಲಾಭದ ಸಿಂಹಪಾಲು ಬಡವರ ಸೇವೆಯಲ್ಲೇ ವ್ಯಯವಾಗುತ್ತಿತ್ತು. ಅವರಿಗೆ ನೆರವಾಗುವುದರಲ್ಲಿ ಖದೀಜಾರಿಗೆ ಅತೀವ ಆನಂದ ದೊರೆಯುತ್ತಿತ್ತು. ಮೈಸರ ಅವರ ನಂಬಿಗಸ್ಥ ಸೇವಕನಾಗಿದ್ದ. ಅತ್ಯಂತ ಪ್ರಾಮಾಣಿಕ ಮತ್ತು ಧೀರ ಸೇವಕ. ಅವರ ಎಲ್ಲ ಪ್ರತಿನಿಧಿಗಳ ಉಸ್ತುವಾರಿ ಈತನೇ ವಹಿಸುತ್ತಿದ್ದ.

ಮುಹಮ್ಮದ್(ಸ) ಧನಿಕರ ಸರಕುಗಳನ್ನು ಮಾರಾಟಕ್ಕಾಗಿ ಸಿರಿಯಾ ಮತ್ತು ಯಮನ್‌ಗೆ ಒಯ್ಯುತ್ತಿದ್ದರು. ಅವರಿಗೆ ಅತ್ಯಧಿಕ ಲಾಭ ಗಳಿಸಿ ಕೊಡುತ್ತಿದ್ದರು. ತಮ್ಮ ಸೇವೆಗೆ ಸಿಕ್ಕಿದ ಪ್ರತಿಫಲವನ್ನು ದೀನ ದಲಿತರಿಗೆ ಹಂಚುತ್ತಿದ್ದರು. ಅವರ ಪರಿಶ್ರಮ ಮತ್ತು ಪ್ರಾಮಾಣಿಕತೆಯ ವಿಷಯಗಳನ್ನು ಖದೀಜ ಅನೇಕ ಸಲ ಕೇಳಿದ್ದರು.

ಖದೀಜ ತನ್ನ ದಾಸಿಯರೊಂದಿಗೆ ಮಾತುಕತೆಯಲ್ಲಿ ನಿರತರಾಗಿರುವಾಗಲೇ ಮೈಸರ

ಮುಹಮ್ಮದ್‌ರನ್ನು(ಸ) ಕರೆದು ತರುತ್ತಾರೆ. ಮುಹಮ್ಮದ್(ಸ) ಅನುಮತಿ ಪಡೆದು ಒಳಗೆ ಪ್ರವೇಶಿಸುತ್ತಾರೆ. ಒಬ್ಬ ಗಂಭೀರ ಮತ್ತು ಸುಂದರ ಯುವಕ ಅತ್ಯಂತ ಶುಭ್ರ ಬಟ್ಟೆಗಳನ್ನು ಧರಿಸಿ ಬರುತ್ತಿದ್ದಾರೆ. ಅವರ ನಡಿಗೆಯಲ್ಲಿ ಗಾಂಭೀರ್ಯ, ಮುಖದಲ್ಲಿ ಲಜ್ಜೆ ಮತ್ತು ಹಣೆಯಲ್ಲಿ ಕಾಂತಿ ಸ್ಪಷ್ಟವಾಗಿ ಗೋಚರಿಸುತ್ತಿದೆ. ಖದೀಜ ಸ್ವಲ್ಪ ಸರಿಯಾಗಿ ಕುಳಿತುಕೊಳ್ಳುತ್ತಾರೆ.

ಮುಹಮ್ಮದ್(ಸ) ಸಲಾಮ್ ಹೇಳಿದ ಬಳಿಕ ಈ ರೀತಿ ಮಾತು ಆರಂಭಿಸುತ್ತಾರೆ. "ತಾವು ನನ್ನನ್ನು ಕರೆದಿರಾ?"

ಖದೀಜ: "ಹೌದು, ತಾವು ನನ್ನ ಸರಕುಗಳೊಂದಿಗೆ ಸಿರಿಯಾಕ್ಕೆ ಹೋಗಿ ಅಲ್ಲಿಂದ ಅವಶ್ಯಕ ವಸ್ತುಗಳನ್ನು ತರಬೇಕೆಂದು ನಾನು ಬಯಸುತ್ತೇನೆ. ಇದಕ್ಕೆ ಪ್ರತಿಯಾಗಿ ತಮಗೆ ಇತರೆಲ್ಲರಿಗಿಂತ ಅಧಿಕ ಪ್ರತಿಫಲ ನೀಡಲಾಗುವುದು. ತಮ್ಮ ಪ್ರಾಮಾಣಿಕತೆ ಮತ್ತು ಬುದ್ಧಿವಂತಿಕೆಯ ಬಗ್ಗೆ ನಾನು ಬಹಳಷ್ಟು ಕೇಳಿದ್ದೇನೆ."

ಮುಹಮ್ಮದ್(ಸ): "ಸರಿ, ನಾನು ಅದಕ್ಕೆ ಸಿದ್ಧ."

ಖದೀಜ: "ಇವನು ಮೈಸರ, ನನ್ನ ಸೇವಕ. ಇವನು ತಮ್ಮ ಜೊತೆಗಿರುವನು."

ಮುಹಮ್ಮದ್(ಸ): "ಆಗಲಿ, ಸಂತೋಷ."

ಖದೀಜ: "ಮೈಸರ! ಹೋಗು ಇವರ ಜೊತೆಯಲ್ಲಿ ಸಿದ್ಧತೆ ಮಾಡು. ಯಾತ್ರಾ ತಂಡ ಸರಿಯಾದ ಸಮಯಕ್ಕೆ ಸಿರಿಯಾಕ್ಕೆ ಹೊರಡುವಂತಾಗಲಿ."

ಮುಹಮ್ಮದ್(ಸ) ಹೊರಟು ಹೋದರು. ಖದೀಜಾ ಅವರ ಸವಿಮಾತುಗಳಿಂದ ಬಹಳ ಪ್ರಭಾವಿತರಾದರು.

"ಈ ಪ್ರಾಯದಲ್ಲಿ ಇಂತಹ ಲಜ್ಜೆ, ಬುದ್ಧಿವಂತಿಕೆ ಮತ್ತು ಮಾತಿನ ಮಾಧುರ್ಯ. ಈ ಎಲ್ಲ ವಿಷಯಗಳನ್ನು ಯಾವ ಪ್ರತಿನಿಧಿಯಲ್ಲೂ ನಾನು ಈ ತನಕ ಕಂಡಿಲ್ಲ. ಈ ಯುವಕ ಎಷ್ಟು ಸರಳ ಸ್ವಭಾವಿ! ಧೀಮಂತ!"

ಖದೀಜ ಸ್ವಲ್ಪ ಹೊತ್ತು ಮುಹಮ್ಮದ್‌ರ(ಸ) ಕುರಿತೇ ಯೋಚಿಸುತ್ತಿದ್ದರು.

## ಸಿರಿಯಾದಿಂದ

ಸಿರಿಯಾ ದೇಶವು ಮಕ್ಕಾದಿಂದ ಒಂದು ತಿಂಗಳ ಪ್ರಯಾಣದ ದೂರದಲ್ಲಿದೆ. ಮಕ್ಕಾದಿಂದ ಯಾತ್ರಾ ತಂಡವು ಹೊರಟು ಎರಡೂವರೆ ತಿಂಗಳಾಯಿತು. ಒಂದು ಅಪರಾಹ್ನ ಖದೀಜ ತಮ್ಮ ಮಾಳಿಗೆಯಲ್ಲಿ ನಿಂತು ಸಿರಿಯಾದ ಕಡೆಗೆ ಹೋಗುವ ದಾರಿಯಲ್ಲೇ ದೃಷ್ಟಿ ನೆಟ್ಟಿದ್ದರು. ದೂರದಿಂದ ಓರ್ವ ಒಂಟೆ ಸವಾರನು ಬರುತ್ತಿರುವುದು ಅವರಿಗೆ ಕಾಣಿಸಿತು. ಅವರು ಎವೆಯಿಕ್ಕದೆ ಅವನನ್ನೇ ನೋಡ ತೊಡಗಿದರು. ಒಂಟೆಯು ಬಹಳ ಶೀಘ್ರ ಗತಿಯಿಂದ ಚಲಿಸುತ್ತಿತ್ತು. ಸವಾರನು ಅತ್ಯಂತ ಭದ್ರವಾಗಿ ಅದರ ಮೇಲೆ ಕುಳಿತಿದ್ದ. ಸವಾರನು ಹತ್ತಿರ ಬರುತ್ತಿದ್ದಂತೆ ಖದೀಜಾರ ಅನುಮಾನ ಸರಿಯಾಯಿತು.

"ಓಹ್! ಇದು ಮುಹಮ್ಮದ್. ಇಷ್ಟೊಂದು ದೀರ್ಘ ಪ್ರಯಾಣದ ಹೊರತಾಗಿಯೂ

ಅವರ ಮುಖ ಎಷ್ಟು ಪ್ರಶಾಂತ ಮತ್ತು ತೇಜೋಮಯವಾಗಿದೆ."

ಅವರು ಮಾಳಿಗೆಯಿಂದ ಕೆಳಗಿಳಿದರು. ಅಷ್ಟರಲ್ಲಿ ಮುಹಮ್ಮದ್‌ರೂ(ಸ) ತಲುಪಿದರು. ಒಂಟೆಯನ್ನು ಲಾಯದಲ್ಲಿ ಬಿಟ್ಟು ಓರ್ವ ದಾಸಿಯ ಮೂಲಕ ತಾನು ಬಂದ ವಿಷಯ ಹೇಳಿ ಕಳುಹಿಸಿದರು. ಅಷ್ಟರಲ್ಲಿ ಖದೀಜಾ ತಾನೇ ಅಲ್ಲಿಗೆ ತಲುಪಿ ಕುಶಲ ವಿಚಾರಿಸುತ್ತಾರೆ. ಅದೇ ವೇಳೆ ದಾಸಿಯು ಪಾನಕ ತಂದು ಕೊಡುತ್ತಾಳೆ. ಮುಹಮ್ಮದ್(ಸ) ಬಲಗೈಯಿಂದ ಪಿಂಗಾಣಿಯನ್ನೆತ್ತಿ 'ಬಿಸ್ಮಿಲ್ಲಾಹ್' ಎನ್ನುತ್ತಾ ಮೂರ್ನಾಲ್ಕು ಗುಟುಕುಗಳಲ್ಲಿ ಕುಡಿದು ಬಿಡುತ್ತಾರೆ. ಖದೀಜಾ ಅವರ ಈ ಗಂಭೀರ ಶೈಲಿಯಿಂದ ಬಹಳ ಪ್ರಭಾವಿತರಾಗುತ್ತಾರೆ. ಮುಹಮ್ಮದ್(ಸ) ಕೃತಜ್ಞತೆ ಸೂಚಿಸಿ ತಮ್ಮ ಮನೆಗೆ ತೆರಳುತ್ತಾರೆ.

ಸಂಜೆಯ ವೇಳೆಗೆ ಯಾತ್ರಾ ತಂಡದ ಘಂಟಾ ನಾದ ಕೇಳಿಸುತ್ತದೆ. ಖದೀಜಾರ ದಾಸ-ದಾಸಿಯರು ತಮ್ಮ ಒಡತಿಯ ಆಜ್ಞೆಯ ಮೇರೆಗೆ ತಂಡದ ಸ್ವಾಗತಕ್ಕಾಗಿ ಬಾಗಿಲ ಹೊರಗೆ ಮೈದಾನದಲ್ಲಿ ಸೇರುತ್ತಾರೆ. ಒಂಟೆಗಳ ಒಂದು ಸಾಲು ಯಾತ್ರಾ ತಂಡದಿಂದ ಬೇರ್ಪಟ್ಟು ಖದೀಜಾರ ಮನೆಯತ್ತ ಬರುತ್ತಿದೆ. ಅವುಗಳ ಮೇಲೆ ಸರಕುಗಳನ್ನು ಹೇರಲಾಗಿದೆ. ಮುಂದಿನ ಒಂಟೆಯ ಮೇಲೆ ಮೈಸರ ಕುಳಿತಿದ್ದಾನೆ. ಒಂಟೆಯ ಸಾಲು ಮೈದಾನದಲ್ಲಿ ಬಂದು ನಿಲ್ಲುತ್ತದೆ. ದಾಸ-ದಾಸಿಯರು ಸರಕುಗಳನ್ನಿಳಿಸಿ ಗೋದಾಮುಗಳಿಗೆ ಸಾಗಿಸುತ್ತಿದ್ದಾರೆ. ಸೂರ್ಯ ಮುಳುಗುವುದರೊಳಗೆ ಎಲ್ಲ ಸಾಮಾನುಗಳು ಗೋದಾಮು ಸೇರುತ್ತವೆ ಮತ್ತು ಒಂಟೆಗಳು ಲಾಯಕ್ಕೆ ಹೋಗುತ್ತವೆ.

ಮೈಸರ ಮನೆ ತಲುಪಿದ ಸಂತೋಷದಲ್ಲಿ ತನ್ನ ದಣಿವನ್ನು ಮರೆತು ಬಿಡುತ್ತಾನೆ. ಒಂದಿಷ್ಟು ಕೈಕಾಲು ಸಡಿಲು ಮಾಡಿ ಊಟ ಮುಗಿಸಿದಾಗ ದಾಸಿ ಬಂದು ಖದೀಜಾ ಕರೆಯುತ್ತಿರುವುದಾಗಿ ತಿಳಿಸುತ್ತಾಳೆ. ವಿನಮ್ರತೆಯೊಂದಿಗೆ ಸಲಾಮ್ ಹೇಳಿ ಮೈಸರ ಮಾತು ಆರಂಭಿಸುತ್ತಾನೆ:

"ಒಡತಿ, ತಮಗೆ ಶುಭವಾಗಲಿ. ಯಾತ್ರಾ ತಂಡವು ಕ್ಷೇಮವಾಗಿ ಮರಳಿದೆ" ಎಂದನು. ಖದೀಜಾ ಸಂತೋಷ ವ್ಯಕ್ತಪಡಿಸುತ್ತಾ: "ಯಾತ್ರೆಯ ವಿವರ ಕೇಳಿ ತಿಳಿದುಕೊಳ್ಳಲಿಕ್ಕಾಗಿ ನಿನ್ನನ್ನು ಕರೆಸಿರುವೆನು. ಈ ಸಲ ಮುಹಮ್ಮದ್(ಸ) ನಿಮ್ಮ ಜೊತೆಗಿದ್ದುದರಿಂದ ಇಷ್ಟೊಂದು ಕುತೂಹಲ" ಎನ್ನುತ್ತಾರೆ. ಒಡತಿಯ ಅಪ್ಪಣೆ ಸಿಗುತ್ತಲೇ ಮೈಸರ ತಮ್ಮ ಪ್ರವಾಸ ಕಥನವನ್ನು ಮುಂದಿಡುತ್ತಾನೆ:

"ಒಡತಿ. ತಮಗೆ ಈ ಪ್ರವಾಸ ಕಥನ ಕೇಳಲಿಕ್ಕಿರುವ ಕುತೂಹಲಕ್ಕಿಂತ ಹೆಚ್ಚು ಅದನ್ನು ಹೇಳುವುದಕ್ಕೆ ನಾನು ಕಾತರನಾಗಿದ್ದೇನೆ. ತಾವು ಕರೆಯುವುದನ್ನೇ ನಾನು ಕಾಯುತ್ತಿದ್ದೆ."

ಖದೀಜ: "ಹಾಗಾದರೆ ವಿವರಿಸು."

ಮೈಸರ: "ಒಡತಿ, ನನಗಂತೂ ದೀರ್ಘ ಕಾಲದಿಂದ ತಮ್ಮ ಸೇವೆ ಮಾಡುವ ಅವಕಾಶ ಸಿಕ್ಕಿದೆ. ಈ ಮಧ್ಯೆ ಬೇರೆ ಬೇರೆ ರೀತಿಯ ಗ್ರಾಹಕರು, ವರ್ತಕರು ಮತ್ತು ಪ್ರತಿನಿಧಿಗಳನ್ನು ಕಂಡಿದ್ದೇನೆ. ನಾನು ವೈವಿಧ್ಯಮಯ ಅನುಭವಗಳನ್ನು ಪಡೆದಿದ್ದೇನೆ. ತರತರದ ಸಂಭವಗಳನ್ನು

ಕಂಡಿದ್ದೇನೆ. ಈಗಂತೂ ನನ್ನ ಕೂದಲು ಹಣ್ಣಾಗಿದೆ. ಆದರೆ ಮುಹಮ್ಮದ್‌ರ(ಸ) ಜೊತೆಯಲ್ಲಿ ನನಗಾದ ಅನುಭವ ವಿಚಿತ್ರವೂ ಅಪೂರ್ವವೂ ಆಗಿದೆ. ಪ್ರಯಾಣದ ಸಂಕಷ್ಟಗಳಲ್ಲಿಯೂ ಮುಹಮ್ಮದ್(ಸ) ಹರ್ಷಚಿತ್ತರಾಗಿರು ತ್ತಿದ್ದರು. ಅವರ ಮುಖ ದುಃಖ-ದುಮ್ಮಾನಗಳಿಂದ ಮುಕ್ತವಾಗಿರುತ್ತಿತ್ತು. ಮನಸ್ಸು ಚಿಂತೆ ಮತ್ತು ಕೊರಗಿನಿಂದ ಸದಾ ದೂರವಿರುತ್ತಿತ್ತು. ಗ್ರಾಹಕರ ಸಂದಣಿ ಹಾಗೂ ಗುಲ್ಲು ಗದ್ದಲದ ಮಧ್ಯೆಯೂ ಅವರು ಸದಾ ಸಹನೆ ಮತ್ತು ಸಂಯಮದಿಂದಿರುತ್ತಿದ್ದರು. ಅವರ ಮೌನ ಗಂಭೀರ. ಮಾತು ಆಕರ್ಷಕ. ಅದರಲ್ಲಿ ಸವಿ ಮತ್ತು ಮಾಧುರ್ಯವಿದೆ. ಜನರು ಪ್ರವಾಸದಲ್ಲಿ ಹರಟೆ ಕೊಚ್ಚುವುದು ಸಾಮಾನ್ಯ. ಆದರೆ ಮುಹಮ್ಮದ್(ಸ) ಎಂದೂ ನಿರರ್ಥಕ ಮಾತು ಆಡಿದವರಲ್ಲ. ಅವರು ಅಗತ್ಯದ ವೇಳೆ ಮಾತ್ರ ಮಾತನಾಡುತ್ತಿದ್ದರು. ಅವರ ಮಾತು ಮುತ್ತಿನ ಹಾರದಂತಿರುತ್ತಿತ್ತು. ನಾನು ಅನೇಕ ಪ್ರತಿನಿಧಿಗಳನ್ನು ಕಂಡಿದ್ದೇನೆ. ಆದರೆ ಮುಹಮ್ಮದ್‌ರ(ಸ) ಜ್ಞಾನ ಮತ್ತು ವಿವೇಕ ಯಾರಲ್ಲೂ ಕಂಡಿಲ್ಲ. ಜನರು ಅವರನ್ನು 'ಅಮೀನ್' ಮತ್ತು 'ಸಾದಿಕ್' ಎಂದು ಸರಿಯಾಗಿಯೇ ಹೇಳುತ್ತಿದ್ದಾರೆ. ಸರಕಿನ ಪ್ರದರ್ಶನ, ಬೆಲೆ ನಿರ್ಧರಿಸುವ ಕ್ರಮ, ಸರಕಿನ ಪರಿಶೀಲನೆ, ವ್ಯವಹಾರ ಜ್ಞಾನಕ್ಕೆ ಸಂಬಂಧಿಸಿದಂತೆ ಅವರಲ್ಲಿರುವ ಗುಣಗಳ ಕುರಿತು ಸಿರಿಯಾದ ಪೇಟೆಯಲ್ಲಿ ವಿಚಾರಿಸಬೇಕು.

ಅವರು ದಿನದ ಬೆಳಕಿನಲ್ಲಿ ಸುಂದರವಾಗಿ ಮತ್ತು ರಾತ್ರಿಯ ಕತ್ತಲೆಯಲ್ಲಿ ಅತಿ ಸುಂದರವಾಗಿ ಕಾಣುತ್ತಾರೆ. ಅವರು ನಗುವಾಗ ಅವರ ಮುತ್ತಿನಂತಹ ಹಲ್ಲುಗಳಿಂದ ಜ್ಯೋತಿಯು ಸ್ಫುರಿಸುತ್ತದೆ. ಅವರ ಬಳಿಯಿಂದ ಸಾಗುವ ಗಾಳಿ ಸುಗಂಧಮಯವಾಗುತ್ತದೆ. ಅವರ ಬೆವರಲ್ಲಿ ವಿಚಿತ್ರ ರೀತಿಯ ಸುಗಂಧವಿದೆ. ಅವರು ಯಾವ ಒಂಟೆಯಲ್ಲಿ ಸವಾರಿ ಮಾಡಿದರೂ ಅದರ ವೇಗ ಹೆಚ್ಚುತ್ತದೆ. ಅವರು ಯಾವ ವ್ಯವಹಾರ ಮಾಡಿದರೂ ಇತರರಿಗಿಂತ ಅಧಿಕ ಲಾಭಗಳಿಸುತ್ತಾರೆ."

"ಒಡತಿಯವರೇ! ಅವರ ಪ್ರತಿಯೊಂದು ಚಲನವಲನದಲ್ಲಿ ಮೊಗ್ಗೆಗಳ ಕಂಪು ಮತ್ತು ತರುಲತೆಗಳ ತೊನೆದಾಟವಿದೆ. ಅವರ ಉಪಾಯಗಳು ಪರ್ವತದಷ್ಟು ಉನ್ನತ. ಅವರ ಚಿಂತನೆಯು ಮರಳುಗಾಡಿನಷ್ಟು ವಿಶಾಲ. ಅವರ ಚಾರಿತ್ರ್ಯ ಹೂವಿನಷ್ಟು ಸುಕೋಮಲವಾಗಿದೆ. ಒಂದು ಲಕ್ಷ ಜನರಲ್ಲೂ ಅಂಥವರು ಒಬ್ಬರೂ ದೊರೆಯಲಾರರು. ಇನ್ನು ಮುಂದೆ ತಮ್ಮ ವ್ಯಾಪಾರವನ್ನು ಪೂರ್ಣವಾಗಿ ಅವರಿಗೆ ವಹಿಸಿಕೊಡಿ. ತಮ್ಮ ವ್ಯಾಪಾರವು ಶೋಭಿಸುವುದು ಖಂಡಿತ."

ಇಷ್ಟು ಹೇಳಿ ಮೈಸರ ಸುಮ್ಮನಾಗುತ್ತಾನೆ. ಮಕ್ಕಳು ಈ ವಿವರ ಕೇಳಿ ಚಕಿತರಾಗುತ್ತಾರೆ. ದಾಸಿಯರು ಸ್ಥಂಭೀಭೂತರಾಗುತ್ತಾರೆ. ಸ್ವಲ್ಪ ಹೊತ್ತು ಹೀಗೆಯೇ ಕಳೆದ ಬಳಿಕ ಖದೀಜಾ ಮೈಸರರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ:

"ಮುಂದಿನ ತಿಂಗಳು 10ನೇ ತಾರೀಕಿನೊಳಗಾಗಿ ಯಮನ್‌ಗೆ ಹೊರಡುವ ಸಿದ್ಧತೆ ಮಾಡಿರಿ."

ಮೈಸರ: "ಹಾಗೆಯೇ ಆಗಲಿ. ಅನುಮತಿ ಕೊಟ್ಟರೆ ಒಂದು ಸ್ವಾರಸ್ಯಕರ ಘಟನೆಯನ್ನು ವಿವರಿಸುತ್ತೇನೆ."

ಖದೀಜಾ: "ಹೇಳು, ಹೇಳು."

ಮೈಸರ: "ನಾವು ಬಸ್ರಾ ತಲುಪಿ ಒಂದು ಮರದ ನೆರಳಲ್ಲಿ ಸ್ವಲ್ಪ ಹೊತ್ತು ತಂಗಿದಾಗ ಹತ್ತಿರದಲ್ಲಿದ್ದ ಆಶ್ರಮದ ಸನ್ಯಾಸಿ ನಸ್ತೂರಾ ನನ್ನನ್ನು ಕರೆದು ಮುಹಮ್ಮದರ(ಸ) ಕುರಿತು ವಿಚಾರಿಸಿದರು. ನಾನು ಅವರು ಹಾಶಿಮ್ ಮನೆತನಕ್ಕೆ ಸೇರಿದ ಓರ್ವ ಪ್ರತಿಷ್ಠಿತ ವ್ಯಕ್ತಿ ಎಂದು ಹೇಳಿದೆ. ಆಗ ನಸ್ತೂರಾ ಹೇಳಿದನು: "ಈ ಮರದ ನೆರಳಲ್ಲಿ ಪ್ರವಾದಿಯ ಹೊರತು ಯಾರೂ ತಂಗಲಾರರು" ಎಂದು ನಮ್ಮ ಗ್ರಂಥಗಳಲ್ಲಿದೆ. ತರುವಾಯ ಆತ ಮುಹಮ್ಮದರ(ಸ) ಕಣ್ಣಿನಲ್ಲಿರುವ ಕೆಂಪು ರೇಖೆಯ ಕುರಿತು ವಿಚಾರಿಸಿದರು. ಅದು ಯಾವಾಗಲೂ ಅವರ ಕಣ್ಣಿನಲ್ಲಿರುತ್ತದೆಂದು ಹೇಳಿದಾಗ ಖಂಡಿತವಾಗಿಯೂ ಇವರು ಅಂತ್ಯ ಪ್ರವಾದಿಯಾಗಿದ್ದಾರೆ" ಎಂದನು.

ಖದೀಜಾ ಮೂಕ ವಿಸ್ಮಿತರಾಗಿದ್ದಾರೆ. ಮೈಸರ ಮೌನವಾಗಿ ನಿಂತಿದ್ದಾರೆ. ಇದೇ ಸ್ಥಿತಿಯಲ್ಲಿ ಸ್ವಲ್ಪ ಹೊತ್ತು ಕಳೆಯುತ್ತದೆ. ಖದೀಜಾ ಎಚ್ಚರಗೊಂಡವರಂತೆ ಮೈಸರನಿಗೆ ಹೋಗಲು ಅನುಮತಿ ನೀಡುತ್ತಾರೆ.

ಮರುದಿನ ಸೂರ್ಯೋದಯದ ಬಳಿಕ ಮುಹಮ್ಮದ್(ಸ) ಬರುತ್ತಾರೆ. ವ್ಯಾಪಾರದ ಲೆಕ್ಕ ಸಲ್ಲಿಸಿ ತಮ್ಮ ಸಂಭಾವನೆಯನ್ನು ಪಡೆದು ಮರಳುತ್ತಿದ್ದಾಗ,

"ಮುಹಮ್ಮದರೇ, ತಾವಿನ್ನು ಯಮನ್‌ಗೆ ಹೋಗಲು ಸಿದ್ಧವಾಗಿರಿ. ಮುಂದಿನ ತಿಂಗಳ 10ರೊಳಗೆ ಹೊರಡುವ ಸಿದ್ಧತೆ ಮಾಡಲಾಗುವುದು" ಎಂದರು.

'ಆದೀತು' ಎನ್ನುತ್ತಾ ಮುಹಮ್ಮದ್(ಸ) ಹೊರಟು ಹೋಗುತ್ತಲೇ ಖದೀಜಾ ಯೋಚನಾ ಮಗ್ನರಾಗುತ್ತಾರೆ.

'ಮುಹಮ್ಮದ್ ಯುವಕರಾಗಿದ್ದೂ ಎಷ್ಟು ಪರಿಶುದ್ಧ ಶೀಲವಂತರಾಗಿದ್ದಾರೆ. ಅವರು ಸದಾ ಶಾಂತಚಿತ್ತರೂ ಪ್ರಸನ್ನ ವದನರೂ ಆಗಿರುತ್ತಾರೆ. ನನ್ನ ಜೀವನದಲ್ಲೂ ಇಂತಹ ಶಾಂತಿ ಮತ್ತು ಮಂದಹಾಸವಿರುತ್ತಿದ್ದರೆ!'

ಅಧ್ಯಾಯ - ೪

# ಕುಟುಂಬ ಜೀವನ

## ವಿವಾಹ

ಮುಹಮ್ಮದ್(ಸ) ವ್ಯಾಪಾರ ನಿಮಿತ್ತ ಸಿರಿಯಾ ಮತ್ತು ಯಮನ್‌ಗೆ ಅನೇಕ ಸಲ ಹೋಗಿ ಬರುತ್ತಾರೆ. ಪ್ರತಿಸಲವು ಹಿಂದಿನ ಸಲಕ್ಕಿಂತ ಅಧಿಕ ಲಾಭಗಳಿಸಿ ತರುತ್ತಾರೆ. ಅವರ ವ್ಯಾಪಾರ ಪ್ರವಾಸಗಳು ಮಕ್ಕಾದ ವರ್ತಕರಲ್ಲಿ ಚರ್ಚಾ ವಿಷಯವಾಗಿದೆ. ಮೈಸರನ ಕೆಲಸ ಹೆಚ್ಚಾಗಿದೆ. ಖದೀಜಾರ ಸೇವಕ ಝೈದ್ ಮನೆಯ ಕೆಲಸ ಕಾರ್ಯಗಳಲ್ಲಿ ನೆರವಾಗ ತೊಡಗಿದ್ದಾನೆ. ಮುಹಮ್ಮದ್‌ರ(ಸ) ಆದಾಯ ಹೆಚ್ಚಾದುದರಿಂದ ಅಬೂತಾಲಿಬ್‌ರ ಮನೆಯಲ್ಲೂ ಸುಭಿಕ್ಷೆಯಿದೆ. ಆದರೆ ಮುಹಮ್ಮದ್(ಸ) ಇನ್ನೂ ಮಕ್ಕಾದ ದೀನ ದಲಿತರು, ವಿಧವೆಯರು ಮತ್ತು ಅನಾಥರನ್ನು ಮರೆತಿರಲಿಲ್ಲ. ಅವರಿಗೆ ಹಿಂದಿಗಿಂತಲೂ ಹೆಚ್ಚು ನೆರವು ನೀಡುತ್ತಿದ್ದರು. ಅವರ ವೈಯಕ್ತಿಕ ಬಂಡವಾಳವು ಈಗಲೂ ಧನ-ಕನಕಗಳ ಬದಲು ಸತ್ಯಸಂಧತೆ ಮತ್ತು ಪ್ರಾಮಾಣಿಕತೆಯೇ ಆಗಿದೆ. ಹೀಗೆ ಎರಡು ವರ್ಷಗಳು ಖದೀಜಾರ ವ್ಯಾಪಾರ ಪ್ರತಿನಿಧಿಯಾಗಿ ಕಳೆದುವು. ಈಗ ಮುಹಮ್ಮದ್‌ರಿಗೆ(ಸ) 25 ವರ್ಷ ಪ್ರಾಯ. ಖದೀಜಾರು ಅವರಿಗಿಂತ 15 ವರ್ಷ ಹಿರಿಯವರು.

ಖದೀಜಾರ ವ್ಯಾಪಾರ ಪ್ರತಿನಿಧಿಯಾದ ದಿನದಿಂದಲೇ ಖದೀಜಾ ಮುಹಮ್ಮದ್ ರಿಂದ(ಸ) ಬಹಳವಾಗಿ ಆಕರ್ಷಿತರಾಗಿರುವರು. ತನಗರಿವಿಲ್ಲದಂತೆಯೇ ಅನೇಕ ಸಲ ಅವರ ಬಗ್ಗೆ ಯೋಚಿಸುತ್ತಿದ್ದರು.

ಮುಹಮ್ಮದ್(ಸ) ಯಮನ್‌ನ ಪ್ರವಾಸದಿಂದ ಮರಳುತ್ತಾರೆ. ಮೈಸರ ಇನ್ನಷ್ಟು ಸ್ವಾರಸ್ಯಕರ ವಿಷಯಗಳನ್ನು ತನ್ನ ಒಡತಿಗೆ ತಿಳಿಸಿದ್ದಾರೆ. ಇದರಿಂದ ಅವರ ಬಗೆಗಿನ ಅಭಿಮಾನ ಮತ್ತು ಒಲವು ಖದೀಜಾರ ಮನದಾಳದಲ್ಲಿ ಬೇರೂರುತ್ತದೆ. ಮುಹಮ್ಮದ್‌ರ(ಸ) ಜೀವನವು ಈಗ ಒಂದು ತೆರೆದ ಗ್ರಂಥದಂತೆ ಅವರ ಮುಂದಿದೆ. ಅದರಲ್ಲಿ ಸೌಂದರ್ಯದ ಮೋಹಕತೆಯಿದೆ. ಶೀಲ-ಚಾರಿತ್ರ್ಯಗಳ ರೂಪುರೇಷೆಯಿದೆ. ಸದ್ಗುಣಗಳ ಸುಂದರ ಬರಹವಿದೆ. ಕರ್ತವ್ಯ ನಿಷ್ಠೆಯ ಚಿತ್ರವಿದೆ. ಉನ್ನತ ಧ್ಯೇಯದ ವರ್ಣವಿದೆ. ಅದರ ಪ್ರತಿಯೊಂದು ಪುಟವೂ ಆಕರ್ಷಕ. ಪ್ರತಿ ಪಂಕ್ತಿಯೂ ಮನಮುಟ್ಟುವಂತಹುದು. ಅದರಲ್ಲಿ ಕಲಬೆರಕೆ,ವಂಚನೆಗಳ

ಛಾಯೆಯೇ ಇಲ್ಲ. ಅದರ ವಾಕ್ಯಗಳು ಅಜ್ಞಾನದ ಅಂಧಕಾರದಲ್ಲಿ ಜ್ಯೋತಿಯ ಕಿರಣ ಗಳಾಗಿವೆ. ಅದರ ಪದಗಳಲ್ಲಿ ಮೃದುತ್ವವೂ ಮಾಧುರ್ಯವೂ ಇದೆ. ಓದುಗನಿಗೆ ನೆಮ್ಮದಿಯ ಸಂದೇಶವಿದೆ. ಪ್ರವಾಸಿಗನಿಗೆ ಗುರಿಯ ಸೂಚನೆಯಿದೆ. ಮಿತ್ರನಿಗೆ ನಿಸ್ವಾರ್ಥತೆಯ ಕಂಪು ಇದೆ. ಇದು ಶತ್ರುಗಳಿಗೂ ಶಾಂತಿ-ಸೌಹಾರ್ದದ ಕನ್ನಡಿಯಂತಿರುವ ಗ್ರಂಥ.

ಖದೀಜಾ ಈ ಗ್ರಂಥದ ಒಂದೊಂದು ಪುಟ ಮತ್ತು ಒಂದೊಂದು ಸಾಲಿನಲ್ಲಿ ಲೀನವಾಗಿ ಬಿಡುತ್ತಾರೆ. ಅದರ ಪ್ರತಿಯೊಂದು ಪುಟ ಮತ್ತು ಪ್ರತಿಯೊಂದು ಪದ ಅವರನ್ನು ಕರೆದು ಈ ರೀತಿ ಹೇಳುತ್ತದೆ:

"ಓ ಪರಿಶುದ್ಧ ಮಹಿಳೆ! ಜನರು ನಿನ್ನನ್ನು ತಾಹಿರಾ ಎನ್ನುತ್ತಾರೆ. ಮುಹಮ್ಮದ್(ಸ) 'ಸಾದಿಕ್' ಮತ್ತು 'ಅಮೀನ್' ಆಗಿದ್ದಾರೆ. ನಿನ್ನ ಮತ್ತು ಮುಹಮ್ಮದ್‌ರ(ಸ) ಒಲವು ಅಭಿರುಚಿಗಳಲ್ಲಿ ಸಾಮ್ಯತೆ ಇದೆ. ಸಾಮರಸ್ಯವಿದೆ. ಹಾಗೆಯೇ ನಿನ್ನ ಮತ್ತು ಮುಹಮ್ಮದ್‌ರ(ಸ) ಜೋಡಿಯು ಆನಂದಮಯವಾದೀತು. ನಿನ್ನ ಏಕಾಂತತೆಯನ್ನು ಬೆಳಗಿಸುವುದು ಮುಹಮ್ಮದ್‌ರ(ಸ) ಜ್ಯೋತಿಯಿಂದ ಮಾತ್ರ ಸಾಧ್ಯ. ನೀನು ನಿನ್ನ ಜೀವನದಲ್ಲಿ ಒಂದು ಕೊರತೆಯನ್ನು ಕಾಣುತ್ತಿರುವೆ. ಮುಹಮ್ಮದ್‌ರನ್ನು(ಸ) ವರಿಸುವ ಮೂಲಕ ಅದನ್ನು ನೀಗಿಸು."

ಖದೀಜಾರ ಮನದಲ್ಲಿ ಮುಹಮ್ಮದ್‌ರನ್ನು(ಸ) ಜೀವನ ಸಂಗಾತಿಯಾಗಿಸುವ ಬಯಕೆ ಪ್ರಬಲವಾಗುತ್ತದೆ. ಒಂದು ದಿನ ಅವರು ಅದನ್ನು ತನ್ನ ಸ್ನೇಹಿತೆ ನಫೀಸಾರೊಂದಿಗೆ ಹೇಳುತ್ತಾರೆ.

"ನಾನು ಈ ಏಕಾಂತವಾಸದಿಂದ ಬೇಸತ್ತು ಹೋಗಿರುವೆನು. ಜೀವನ ಸಂಗಾತಿಯೊಬ್ಬನನ್ನು ಆರಿಸಿಕೊಂಡು ಮದುವೆ ಮಾಡಿಕೊಳ್ಳಲು ನೀವು ನೀಡಿದ ಸಲಹೆಯ ಬಗ್ಗೆ ಈಗ ಗಂಭೀರವಾಗಿ ವಿಚಾರ ಮಾಡುತ್ತಿರುವೆನು. ಆದರೆ ನಾನು ಬಯಸುವ ಸಂಗಾತಿಯು ನನಗೆ ಸಿಗುವುದು ಅಷ್ಟು ಸುಲಭದ ವಿಷಯವಲ್ಲ."

ನಫೀಸಾ: ನೀವು ವಿಚಿತ್ರ ಮಾತಾಡುತ್ತಿರುವಿರಿ. ನೀವು ಮೆಚ್ಚಿರುವಂತಹ ಆ ಅದೃಷ್ಟಶಾಲಿ ಯಾರೆಂದು ತಿಳಿಸಿ.

ಖದೀಜಾ: ಅವರು ಪ್ರಾಯದಲ್ಲಿ ನನಗಿಂತ 15 ವರ್ಷ ಕಿರಿಯರು ಮತ್ತು ಸೌಂದರ್ಯದಲ್ಲಿ ಅನೇಕ ಪಟ್ಟು ಹೆಚ್ಚಿನವರಾಗಿರುವರು. ಎಲ್ಲರ ದೃಷ್ಟಿಗಳು ಅವರ ಕಡೆಗೆ ತಿರುಗುತ್ತವೆ. ಆದರೆ ಅವರ ದೃಷ್ಟಿ ಯಾರ ಮೇಲೂ ಬೀಳುವುದಿಲ್ಲ. ಅವರ ವ್ಯಕ್ತಿತ್ವವು ಪ್ರೀತಿ ವಾತ್ಸಲ್ಯಗಳ ಮಧುರ ಸಾಗರವಾಗಿದೆ. ಮೂರು ಮಕ್ಕಳ ತಾಯಿಯಾಗಿರುವ ಈ ವಿಧವೆಯನ್ನು ಅವರು ಸ್ವೀಕರಿಸುವರೇ ಎಂದು ನಾನು ಚಿಂತಿತಳಾಗಿದ್ದೇನೆ.

ನಫೀಸಾ: ನನಗೆ ಗೊತ್ತಾಯಿತು ಬಿಡಿ.

ಖದೀಜಾ: ಇಷ್ಟು ಬೇಗ!

ನಫೀಸಾ: ಹೌದು, ನಿಮ್ಮ ಆಯ್ಕೆಯು ಅಪ್ರತಿಮವಾಗಿದೆ.

ಖದೀಜಾ: ಅದು ಹೇಗೆ?

ನಫೀಸಾ: ಅಬೂತಾಲಿಬರ ಸೋದರ ಪುತ್ರರಿಗಿಂತ ಮಿಗಿಲಾದವರು ಯಾರಿರಬಹುದು?

ಖದೀಜಾ: ಅವರು ನನ್ನನ್ನು ಸ್ವೀಕರಿಸುವರೆಂದು ನಿಮಗೆ ಅನಿಸುತ್ತದೆಯೇ?

ನಫೀಸಾ: ಅವರಂತಹ ಶುದ್ಧ ಚಾರಿತ್ರ್ಯದವರಿಗೆ ಇದೇನೂ ಆಶ್ಚರ್ಯದ ವಿಷಯವಾಗದು.

ಖದೀಜಾ: [illegible] ಸತ್ಯ ಹೇಳುತ್ತಿರುವಿರಾ?

ನಫೀಸಾ: ಹೌದು. [illegible] ಮೇಲೆ ಭರವಸೆ ಇಡಿ.

ಖದೀಜಾ: ನೀವು [illegible]ರೆ ಭರವಸೆ ತನ್ನಿಂತಾನೆ ಮೂಡುತ್ತದೆ.

ನಫೀಸಾ ನಿರ್ಗಮಿಸುತ್ತಾಳೆ. ಖದೀಜಾ ಮನದಲ್ಲೇ ಅಲ್ಲಾಹನಲ್ಲಿ ಈ ರೀತಿ ಪ್ರಾರ್ಥಿಸುತ್ತಾರೆ:

"ಓ ಸಕಲ ಆರಾಧ್ಯರ ಆರಾಧ್ಯನೇ! ನೀನು ಮನಸ್ಸಿನ ರಹಸ್ಯವನ್ನು ಬಲ್ಲವನು. ನನಗೆ ಜೀವನದ ಯಾತ್ರೆ ಮುಂದುವರಿಸಲು ಮುಹಮ್ಮದ್‌ರ(ಸ) ಸಹವಾಸ ಬೇಕು. ಅವರ ಸೌಂದರ್ಯ ಮತ್ತು ಯೌವನಕ್ಕಿಂತಲೂ ಹೆಚ್ಚಾಗಿ ನನಗೆ ಅವರ ಆಸರೆಯ ಅಗತ್ಯವಿದೆ. ನನ್ನ ದಿನರಾತ್ರಿಗಳ ನೀರವತೆಯನ್ನು ಚಿರವಸಂತವಾಗಿ ಮಾರ್ಪಡಿಸು. ಮುಹಮ್ಮದ್‌ರ(ಸ) ದಾಸಿಯಾಗುವ ನನ್ನ ಬಯಕೆಯನ್ನು ಈಡೇರಿಸು. ನೀನು ಎಲ್ಲ ಬಯಕೆಗಳನ್ನು ಪೂರೈಸುವವನು. ಈ ಬಯಕೆಯನ್ನು ನೀನೇ ಸೃಷ್ಟಿಸಿರುವೆ. ನೀನೇ ಇದನ್ನು ಪೂರೈಸು."

ಮುಹಮ್ಮದ್(ಸ) ಖದೀಜಾರ ಮನೆಯ ಬಯಲಿನಲ್ಲಿ ವ್ಯಾಪಾರ ಸರಕನ್ನು ಪರಿಶೀಲಿಸುತ್ತಿದ್ದಾರೆ. ನಫೀಸಾ ಬಂದು ಅವರ ಮುಂದೆ ಖದೀಜಾರ ಮದುವೆಯ ಪ್ರಸ್ತಾಪವಿಡುತ್ತಾರೆ. ಮುಹಮ್ಮದ್(ಸ) ಆಶ್ಚರ್ಯಚಕಿತರಾಗುತ್ತಾರೆ. ಅವರು ಅದನ್ನು ಕನಸು ಮನಸ್ಸಿನಲ್ಲೂ ಎಣಿಸಿರಲಿಲ್ಲ. ಮುಹಮ್ಮದ್(ಸ) ತಮ್ಮ ದೊಡ್ಡಪ್ಪ ಅಬೂತಾಲಿಬರಲ್ಲಿ ವಿಷಯ ತಿಳಿಸಿದಾಗ ಅವರಿಗೂ ಆಶ್ಚರ್ಯವಾಗುತ್ತದೆ. ಮಕ್ಕಾದ ಅನೇಕ ಸರದಾರರ ಪ್ರಸ್ತಾಪಗಳನ್ನು ತಿರಸ್ಕರಿಸಿದ ಖದೀಜಾ, ಮುಹಮ್ಮದ್‌ರನ್ನು(ಸ) ವರಿಸಲು ಮುಂದೆ ಬಂದುದು ಅವರ ಮಟ್ಟಿಗೆ ವಿಸ್ಮಯಕಾರಿಯಾಗಿತ್ತು. ಈ ಸಂಬಂಧ ಅವರಿಗೆ ಇಷ್ಟವಾಯಿತಾದರೂ 3 ಮಕ್ಕಳ ತಾಯಿಯಾದ ಹಾಗೂ ಎರಡು ಪತಿಯಂದಿರನ್ನು ಕಳಕೊಂಡ ಮಹಿಳೆ ಎಂಬ ನೆಲೆಯಲ್ಲಿ ಅವರು ಚಿಂತಿತರಾಗಿದ್ದರು. ಆದರೆ ಮುಹಮ್ಮದ್‌ರಿಗೆ(ಸ) ಅವರ ಪಾವನ ಚಾರಿತ್ರ್ಯ, ಸಹನಶೀಲತೆ ಮತ್ತು ಧೀಮಂತಿಕೆ ಬಹಳ ಮೆಚ್ಚುಗೆಯಾಗಿತ್ತು. ಆದ್ದರಿಂದ ಅಬೂತಾಲಿಬ್ ತಮ್ಮ ಸೋದರ-ಸೋದರಿಯ ರೊಂದಿಗೆ ಸಮಾಲೋಚನೆ ಮಾಡಿದ ಬಳಿಕ ಖದೀಜಾರ ಚಿಕ್ಕಪ್ಪ ಅಮ್ರ್ ಬಿನ್ ಅಸದ್‌ರ ಮುಂದೆ ಮದುವೆಯ ಪ್ರಸ್ತಾಪ ಎತ್ತುತ್ತಾರೆ. ಅವರು ತತ್‌ಕ್ಷಣ ಅದನ್ನು ಅಂಗೀಕರಿ ಸುತ್ತಾರೆ. ಖದೀಜಾರ ಸೋದರರಿಗೂ ಅದರಿಂದ ತುಂಬ ಸಂತೋಷವಾಗುತ್ತದೆ. ಮದುವೆಯ ದಿನಾಂಕ ನಿಶ್ಚಯಿಸಲ್ಪಡುತ್ತದೆ. ನಫೀಸಾ ತನ್ನ ಸ್ನೇಹಿತೆಯನ್ನು ಅಭಿನಂದಿಸುತ್ತಾರೆ. ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ.

ಮುಹಮ್ಮದ್(ಸ) ಮತ್ತು ಖದೀಜಾ ಮದುವೆಗೆ ಸಿದ್ಧವಾಗಿದ್ದಾರೆ. ಪವಿತ್ರ ಜೋಡಿ, ಪಾವನ ಸಂಗಾತಿಗಳು. ಆಕಾಶದಿಂದ ಅವರ ಮೇಲೆ ಅನುಗ್ರಹ ವರ್ಷಿಸುತ್ತಿವೆ. ಖದೀಜಾ ತನ್ನ ಸೌಭಾಗ್ಯದ ಬಗ್ಗೆ ಬಹಳ ಸಂತೋಷಗೊಂಡಿದ್ದಾರೆ. ಬಂಧುಬಳಗದವರು ನೆರೆದಿದ್ದಾರೆ.

ದಾಸ-ದಾಸಿಯರು ವಿನಮ್ರರಾಗಿ ನಿಂತಿದ್ದಾರೆ. ಅತಿಥಿಗಳೂ ಆತಿಥೇಯರೂ ಮೌನವಾಗಿ ಕುಳಿತಿದ್ದಾರೆ. ಅಬೂತಾಲಿಬ್ ನಿಕಾಹ್‌ನ ಖುತ್‌ಬಾ (ಪ್ರವಚನ) ನೀಡುತ್ತಿದ್ದಾರೆ:

ಎಲ್ಲ ಸ್ತುತಿಗಳು ಅಲ್ಲಾಹನಿಗೆ ಮೀಸಲು. ಅವನು ನಮ್ಮನ್ನು ಇಬ್ರಾಹೀಮ್ ಮತ್ತು ಇಸ್ಮಾಈಲರ ಸಂತತಿಯಾಗಿ ಮಾಡಿದನು. ತನ್ನ ಭವನದ ಸಂರಕ್ಷಣೆ ಮತ್ತು ಅದರ ಧರ್ಮದರ್ಶಿತ್ವವನ್ನು ನಮಗೆ ವಹಿಸಿಕೊಟ್ಟನು. ನಮಗೆ ಹಜ್ಜ್ ಮಾಡಬಹುದಾದ ಒಂದು ಭವನವನ್ನೂ ಶಾಂತಿಧಾಮವನ್ನೂ ದಯಪಾಲಿಸಿದನು. ನಮ್ಮನ್ನು ಜನರ ನಾಯಕರಾಗಿ ಮಾಡಿದನು. ಆ ಅಲ್ಲಾಹನಿಗೆ ಅನಂತ ವಂದನೆಗಳು. ನನ್ನ ಸೋದರ ಪುತ್ರ ಮುಹಮ್ಮದ್ ಬಿನ್ ಅಬ್ದುಲ್ಲಾನಿಗೆ ಸರಿಸಾಟಿಯಾಗಬಲ್ಲವರು ಯಾರೂ ಇಲ್ಲ. ಅವನ ಬಳಿ ಸಂಪತ್ತಿಲ್ಲವೆಂಬುದು ನಿಜ. ಆದರೆ ಸಂಪತ್ತೆಂಬುದು ಒಂದು ನೆರಳಿನಂತೆ. ಅದು ಕ್ಷಣಿಕವಾದುದು. ಸಭಿಕರೇ, ನಿಮಗೆ ಮುಹಮ್ಮದನ ಮನೆತನದ ಬಗ್ಗೆ ತಿಳಿದೇ ಇದೆ. ಆತ ಖುವೈಲದ್‌ರ ಮಗಳಾದ ಖದೀಜಾಳೊಂದಿಗೆ ವಿವಾಹವಾಗ ಬಯಸುತ್ತಾನೆ. ತನ್ನ ಸೊತ್ತಿನಿಂದ 20 ಒಂಟೆಗಳನ್ನು ಮಹರ್(ವಿವಾಹ ಧನ) ಎಂದು ನಿಶ್ಚಯಿಸಿದ್ದಾನೆ. ಅಲ್ಲಾಹನಾಣೆ! ನನ್ನ ಸೋದರ ಪುತ್ರ ಮಹಿಮಾವಂತ. ಅವನ ಭವಿಷ್ಯವು ಅತ್ಯುಜ್ವಲವಾಗಿದೆ.

ತರುವಾಯ ಕುರೈಶರ ಅತ್ಯಂತ ಗೌರವಾನ್ವಿತ ಮಹಿಳೆ ಖದೀಜಾ ಅತ್ಯಂತ ಪ್ರಾಮಾಣಿಕರಾದ ಮುಹಮ್ಮದ್‌ರ(ಸ) ಮನೆ ಸೇರುತ್ತಾರೆ.

## ಕಾಸಿಮ್ ಮತ್ತು ಝೈನಬ್

ಖದೀಜಾ ಈಗ ಮುಹಮ್ಮದ್‌ರ(ಸ) ಬಾಳಸಂಗಾತಿಯಾಗಿದ್ದಾರೆ. ಅವರ ಜೀವನದ ಶೂನ್ಯವು ಈ ಪಾವನ ಯುವಕನ ಸಹವಾಸದಿಂದ ತುಂಬಿದೆ. ಮುಹಮ್ಮದ್‌ರಷ್ಟು(ಸ) ಉನ್ನತ ಚಾರಿತ್ರ್ಯ ಮತ್ತು ವ್ಯಕ್ತಿತ್ವದ ಮನುಷ್ಯ ಅವರಿಗೆ ಈ ಭೂಮುಖದ ಮೇಲೆ ಬೇರೆ ಸಿಗಲಾರರು. ಆದ್ದರಿಂದ ಖದೀಜಾ ತನ್ನ ತನು-ಮನ-ಧನವನ್ನು ಮುಹಮ್ಮದ್‌ರ(ಸ) ಪಾದಗಳಲ್ಲಿ ಅರ್ಪಿಸುತ್ತಾರೆ.

ಮದುವೆಯ ನಂತರ ಮುಹಮ್ಮದ್‌ರು(ಸ) ಶಾಶ್ವತವಾಗಿ ತಮ್ಮ ಮನೆಗೆ ಬಂದು ನೆಲೆಸಬೇಕೆಂಬುದು ಖದೀಜಾರ ಬಯಕೆಯಾಗಿತ್ತು. ಅವರ ಈ ಆಶೆಯೂ ಈಡೇರಿತು. ಕೆಲವೇ ದಿನಗಳ ನಂತರ ಮುಹಮ್ಮದರು(ಸ) ಖದೀಜಾರ ಮನೆಯಲ್ಲೇ ಬಿಡಾರ ಹೂಡಿದರು. ಖದೀಜಾರ ಮನೆ ಈಗ ಮುಹಮ್ಮದರ ಮನೆಯಾಗಿ ಮಾರ್ಪಟ್ಟಿದೆ. ಖದೀಜಾ ಮತ್ತು ಮುಹಮ್ಮದ್ ಒಂದೇ ಆತ್ಮದ ಎರಡು ಶರೀರಗಳಾಗಿ ಮಾರ್ಪಟ್ಟಿ ದ್ದರು. ಖದೀಜಾರ ಮನೆಯಲ್ಲಿ ಅವರಿಗೆ ಶಾಂತಿ-ನೆಮ್ಮದಿ ಇತ್ತು. ಸುಖ-ಸೌಕರ್ಯ ಗಳಿದ್ದುವು. ಜೀವನೋಪಾಯದ ಚಿಂತೆಯಿಂದಲೂ ಅವರು ಮುಕ್ತರಾಗಿದ್ದರು. ಪತಿ-ಪತ್ನಿಯರು ಪರಸ್ಪರ ಪ್ರೀತಿಸುತ್ತಿದ್ದರು, ಗೌರವಿಸುತ್ತಿದ್ದರು. ಪರಸ್ಪರರ ಬಯಕೆ ಬೇಡಿಕೆ ಗಳನ್ನು ಪರಿಗಣಿಸುತ್ತಿದ್ದರು. ಇಬ್ಬರ ಒಲವು, ಅಭಿರುಚಿ, ಆಯ್ಕೆ ಒಂದೇ ತೆರನಾಗಿತ್ತು. ಪತ್ನಿಯು ಸದಾ ಪತಿಯ ಸೇವೆಯಲ್ಲಿ ನಿರತವಾಗಿದ್ದರೆ ಪತಿಯೂ ಪತ್ನಿಯ ಎಲ್ಲ ಬಯಕೆಗಳನ್ನು ಈಡೇರಿಸಲು

ಪ್ರಯತ್ನಿಸುತ್ತಿದ್ದರು. ಆ ಮನೆ ಒಂದು ಆದರ್ಶ ಮನೆಯಾಗಿತ್ತು.

ಮಕ್ಕಾದ ದೊಡ್ಡ ದೊಡ್ಡ ವ್ಯಾಪಾರಿಗಳು ಮತ್ತು ಶ್ರೀಮಂತರು ಅವರ ಮನೆಯ ಪರಿಸರದಲ್ಲೇ ವಾಸವಾಗಿದ್ದರು. ಅಬೂಲಹಬ್‌ರ ಮನೆಯೂ ಅಲ್ಲೇ ಇತ್ತು. ತನ್ನ ಶ್ರೀಮಂತ ಸೋದರ ಪುತ್ರನನ್ನು ಅವನು ಬಹಳ ಪ್ರೀತಿಯಿಂದ ಕಾಣುತ್ತಿದ್ದನು. ಮುಹಮ್ಮದರ ಮಿತ್ರ ಅಬೂಬಕರ್‌ರ ಮನೆಯೂ ಅದೇ ಕೇರಿಯಲ್ಲಿತ್ತು. ಅವರು ಬಟ್ಟೆ ವ್ಯಾಪಾರ ಮಾಡುತ್ತಿದ್ದರು. ಕಲಿಬಾದ ಪದಾಧಿಕಾರಿಯೂ ಖದೀಜಾರ ಸೋದರ ಪುತ್ರರೂ ಆದ ಹಕೀಮ್ ಬಿನ್ ಹಿಝಾಮ್ ಕೂಡಾ ಅಲ್ಲೇ ವಾಸವಾಗಿದ್ದರು. ಅವರು ಮುಹಮ್ಮದರಿಗಿಂತ ಪ್ರಾಯದಲ್ಲಿ 9 ವರ್ಷ ದೊಡ್ಡವರಾಗಿದ್ದರು. ಅಲ್ಲಿ ವಾಸವಾಗಿದ್ದ ಎಲ್ಲ ವರ್ತಕರೊಂದಿಗೆ ಈಗ ಮುಹಮ್ಮದರಿಗೆ(ಸ) ವ್ಯಾಪಾರ ಸಂಬಂಧವಿತ್ತು.

ಮರ ಅದರ ಫಲದಿಂದ ಗುರುತಿಸಲ್ಪಡುತ್ತದೆ. ಗುರು ತನ್ನ ಶಿಷ್ಯರಿಂದ ಗುರುತಿಸಲ್ಪಡುತ್ತಾನೆ ಮತ್ತು ಮನುಷ್ಯನು ತನ್ನ ಸ್ನೇಹಿತರಿಂದ ಗುರುತಿಸಲ್ಪಡುತ್ತಾನೆ. ಮುಹಮ್ಮದರ(ಸ) ಮಿತ್ರವೃಂದದಲ್ಲಿ ಯಾರೂ ದುಶ್ಶೀಲರಿಲ್ಲ, ನೀಚರಿಲ್ಲ, ಅಕ್ರಮಿ ಗಳಿಲ್ಲ, ದುರಾಚಾರಿಗಳಿಲ್ಲ. ಅವರ ಆಪ್ತ ಮಿತ್ರರಲ್ಲಿ ಅಬೂಬಕರ್, ಹಕೀಮ್ ಬಿನ್ ಹಿಝಾಮ್, ದಮಾ ಬಿನ್ ಸಅಲಬ, ಕೈಸ್ ಬಿನ್ ಸಾಯಿಬ್ ಸೇರಿದ್ದಾರೆ. ಅವರೆಲ್ಲರೂ ಮಕ್ಕಾದ ಪ್ರತಿಷ್ಠಿತ ವ್ಯಕ್ತಿಗಳಾಗಿದ್ದು ಮುಹಮ್ಮದ್(ಸ) ಅವರೊಂದಿಗೆ ಸಲುಗೆಯಿಂದ ಇರುತ್ತಿದ್ದರು. ಬಿಡುವಿನ ವೇಳೆ ಅವರ ಜೊತೆ ವಿಹಾರಕ್ಕೆ ಹೋಗುತ್ತಿದ್ದರು. ಬಿಲ್ಲು ವಿದ್ಯೆ ಮತ್ತು ಕುದುರೆ ಸವಾರಿಯ ಸ್ಪರ್ಧೆಯನ್ನು ವೀಕ್ಷಿಸುತ್ತಿದ್ದರು. ಕುಸ್ತಿಪಟುಗಳ ಕೌಶಲ್ಯವನ್ನು ನೋಡುತ್ತಿದ್ದರು. ಪರಸ್ಪರ ವ್ಯಾಪಾರ ವಹಿವಾಟುಗಳನ್ನು ನಡೆಸುತ್ತಿದ್ದರು. ಆದರೆ ಹರಟೆಕೊಚ್ಚುವ, ವ್ಯಂಗ್ಯ-ಅಣಕ ಮಾಡುವ ಅಭ್ಯಾಸ ಅವರ ಪೈಕಿ ಯಾರಿಗೂ ಇರಲಿಲ್ಲ. ದೀನ-ದಲಿತರ ಸೇವೆಯಲ್ಲಿ ಪರಸ್ಪರ ಸಹಕರಿಸುತ್ತಿದ್ದರು. ಪರಸ್ಪರ ನಿಷ್ಕಪಟವಾಗಿ ಪ್ರೀತಿಸುತ್ತಿದ್ದರು. ಅವರ ಮಿತ್ರತ್ವವೂ ಮಕ್ಕಾದ ಕೂಟಗಳಲ್ಲಿ ಚರ್ಚಾ ವಿಷಯವಾಗುತ್ತಿತ್ತು.

ಮುಹಮ್ಮದ್(ಸ) ಮತ್ತು ಖದೀಜಾರ ದಾಂಪತ್ಯ ಜೀವನಕ್ಕೆ ಎರಡೂವರೆ ವರ್ಷ ಸಂದಾಗ ಅವರಿಗೊಂದು ಗಂಡು ಮಗುವಾಗುತ್ತದೆ. ಅದರ ಹೆಸರು ಕಾಸಿಮ್ ಎಂದು ಇಡಲಾಗುತ್ತದೆ. ಅರಬರಲ್ಲಿ ಮಗನ ಹೆಸರಿನಿಂದಲೇ ತಂದೆಯನ್ನು ಕರೆಯುವುದು ರೂಢಿ. ಆದ್ದರಿಂದ ಮುಹಮ್ಮದರನ್ನು ಜನರು ಗೌರವದಿಂದ 'ಅಬುಲ್ ಕಾಸಿಮ್' ಎನ್ನತೊಡಗಿದರು. ಖದೀಜಾರು ಅವರನ್ನು ಅಬುಲ್ ಕಾಸಿಮ್ ಎಂದೇ ಸಂಬೋಧಿಸ ತೊಡಗಿದರು. ಸುಂದರ ವದನನಾದ ಕಾಸಿಮ್ ಬೆಳೆದು ಅಂಬೆಗಾಲಿಕ್ಕಿ ನಡೆಯ ತೊಡಗಿದ್ದನಷ್ಟೇ, ವಿಧಿಯು ಈ ದಂಪತಿಗಳನ್ನು ಒಂದು ಪರೀಕ್ಷೆಗೊಡ್ಡಿತು. ಕಾಸಿಮ್ ಕಾಯಿಲೆ ಬೀಳುತ್ತಾನೆ. ಎಷ್ಟೇ ಔಷಧೋಪಚಾರ ಮಾಡಿದರೂ ಫಲಿಸುವುದಿಲ್ಲ. ಕೆಲವೇ ದಿನಗಳಲ್ಲಿ ಮಗು ನಿಧನ ಹೊಂದುತ್ತದೆ. ಮುಹಮ್ಮದ್(ಸ) ಮತ್ತು ಖದೀಜಾ ಸಹನೆಯ ಸಾಕಾರ ಮೂರ್ತಿಗಳಂತೆ ಆ ತಾಳಲಾರದ ದುಃಖವನ್ನು ಸಹಿಸುತ್ತಾರೆ.

ಕಾಸಿಮರ ನಿಧನಕ್ಕೆ ಎರಡೂವರೆ ವರ್ಷ ಸಂದಿರಬಹುದು. ಖದೀಜಾ ಒಂದು ಹೆಣ್ಣು ಮಗುವಿಗೆ ಜನ್ಮ ನೀಡುತ್ತಾರೆ. 'ಝೈನಬ್' ಎಂದು ಅದನ್ನು ಹೆಸರಿಸಲಾಗುತ್ತದೆ. ಮುಹಮ್ಮದ್(ಸ) ಮತ್ತು ಖದೀಜಾರ ಜೀವನದಲ್ಲಿ ಈ ನಯನಾಜೂಕಿನ ಬೊಂಬೆಯ ಆಗಮನದಿಂದ ಮಂದಹಾಸ ಆವರಿಸುತ್ತದೆ. ಮುಹಮ್ಮದರು(ಸ) ವ್ಯಾಪಾರಕ್ಕಾಗಿ ಹೊರಗೆ ಹೋದಾಗ ಖದೀಜಾ ಈ ಬೊಂಬೆಯೊಂದಿಗೆ ಆಟವಾಡಿ ಕಾಲ ಕಳೆಯುತ್ತಿ ದ್ದರು. ಮುಹಮ್ಮದ್(ಸ) ಮರಳಿ ಬಂದಾಗ ಮಗುವನ್ನೆತ್ತಿ ಮುದ್ದಿಸುತ್ತಿದ್ದರು. ಅವರ ಮಡಿಲಲ್ಲಿ ಮಗು ಝೈನಬ್ ಆಟವಾಡುವಾಗ ಅವರು ಆನಂದ ತುಂದಿಲರಾಗಿ ಯಾತ್ರೆಯ ಎಲ್ಲ ದಣಿವನ್ನು ಮರೆತು ಬಿಡುತ್ತಿದ್ದರು.

## ಝೈದ್ ಬಿನ್ ಮುಹಮ್ಮದ್

ಕಲ್ಬ್ ಗೋತ್ರಕ್ಕೆ ಸೇರಿದ ಒಂದು ಯಾತ್ರಾತಂಡವು ದರೋಡೆಕೋರರ ಆಕ್ರಮಣಕ್ಕೆ ಬಲಿಯಾಗಿತ್ತು. ಸರಕುಗಳ ಜೊತೆಗೆ ಅವರು ಅನೇಕ ಬಾಲಕರನ್ನು ಅಪಹರಿಸಿಕೊಂಡು ಹೋಗಿದ್ದರು. ಆ ಪೈಕಿ ಹಾರಿಸ್‌ರ 8 ವರ್ಷದ ಪುತ್ರ ಝೈದ್ ಕೂಡಾ ಸೇರಿದ್ದರು. ಅವನನ್ನು ಉಕಾಝ್ ಪೇಟೆಗೆ ತಂದು ಮಾರಾಟ ಮಾಡಿದಾಗ ಹಕೀಮ್ ಬಿನ್ ಹಿಝಾಮ್ ಖರೀದಿಸಿ ತನ್ನ ಸೋದರತ್ತೆಯಾದ ಖದೀಜಾರಿಗೆ ನೀಡಿದ್ದರು. ಖದೀಜಾ ಆ ಬಾಲಕನಿಗೆ ತಾಯಿಯ ಪ್ರೀತಿ ನೀಡಿ ಸಾಕಿದ್ದರು. ಮುಹಮ್ಮದ್(ಸ) ಮತ್ತು ಖದೀಜಾರ ಮದುವೆಯ ಬಳಿಕ ಮುಹಮ್ಮದರ(ಸ) ಸೇವೆಗಾಗಿ ಖದೀಜಾ ಆ ಬಾಲಕನನ್ನು ಅವರಿಗೆ ನೀಡಿದ್ದರು. ಅವರ ಶಿಸ್ತು, ಅಚ್ಚುಕಟ್ಟು ಮತ್ತು ಉತ್ತಮ ಅಭ್ಯಾಸಗಳನ್ನು ಕಂಡು ಮುಹಮ್ಮದರು(ಸ) ಸಂತುಷ್ಟರಾಗಿದ್ದರು. ಅವನಿಗೆ ತಂದೆಯ ಪ್ರೀತಿ ವಾತ್ಸಲ್ಯಗಳನ್ನು ನೀಡುತ್ತಿದ್ದರು. ಇದರಿಂದ ಅವನ ಜೀವನವು ಲವಲವಿಕೆಯಿಂದ ಕೂಡಿತ್ತು. ಸದಾ ಸಂತುಷ್ಟನಾಗಿರುತ್ತಿದ್ದ ಝೈದ್ ತನ್ನ ಉನ್ನತ ಚಾರಿತ್ರ್ಯದಿಂದ ಪರಿಸರದ ಎಲ್ಲ ಜನರನ್ನೂ ಪ್ರಭಾವಿತಗೊಳಿಸಿದ್ದನು.

ಹಜ್ಜ್ ಕಾಲ. ಝೈದ್ ತನ್ನ 16ನೇ ವಸಂತವನ್ನು ಅನುಭವಿಸುತ್ತಿದ್ದಾನೆ. ಕಲ್ಬ್ ಗೋತ್ರಕ್ಕೆ ಸೇರಿದ ಕೆಲವರು ಹಜ್ಜ್‌ಗೆ ಬಂದಾಗ ಝೈದ್‌ರನ್ನು ಕಂಡು ಅವನನ್ನು ಗುರುತಿಸುತ್ತಾರೆ. ಊರಿಗೆ ಮರಳಿದಾಗ ಹಾರಿಸ್‌ರಿಗೆ ಅವರ ಪುತ್ರ ಝೈದ್ ಮಕ್ಕಾದಲ್ಲಿ ಇರುವ ಬಗ್ಗೆ ತಿಳಿಸುತ್ತಾರೆ. ಹಾರಿಸ್ ಮತ್ತು ಸೋದರ ಕಅಬ್ ತತ್‌ಕ್ಷಣ ಮಕ್ಕಾಗೆ ಹೊರಡುತ್ತಾರೆ. ಕಅಬಾ ಭವನದ ಸಮೀಪ ಮುಹಮ್ಮದರನ್ನು ಭೇಟಿಯಾಗಿ ಈ ರೀತಿ ನಿವೇದಿಸಿಕೊಳ್ಳುತ್ತಾರೆ:

"ಅಬ್ದುಲ್ಲಾ ಮತ್ತು ಅಬ್ದುಲ್ ಮುತ್ತಲಿಬರ ಪುತ್ರರೇ, ಕುರೈಶ್ ಸರದಾರರ ಪುತ್ರರೇ, ಹರಮ್‌ನ ನಿವಾಸಿ, ಕಅಬಾದ ಪ್ರಭುವಿನ, ನೆರೆಯವರು ಮತ್ತು ಅಲ್ಲಾಹನ ಮನೆಯ ಸಂರಕ್ಷಕರೇ, ದೀನ ದಲಿತರ ಕಣ್ಣೀರೊರೆಸುವ ಮತ್ತು ಬಂಧಿತರಿಗೆ ಉಣಬಡಿಸುವವರೇ, ನಾವು ನಿಮ್ಮಿಂದ ನಮ್ಮ ಮಗನ ವಿಮೋಚನೆಯನ್ನು ಬಯಸುತ್ತೇವೆ. ನಮ್ಮ ಮೇಲೆ ಉಪಕಾರ ಮಾಡಿ. ನೀವು ಅತ್ಯಧಿಕ ಉಪಕಾರ ಮಾಡುವವರು. ಅವನ ಪರಿಹಾರ ಧನ ಸ್ವೀಕರಿಸಿ ನಮ್ಮ ಮೇಲೆ ಕೃಪೆ ತೋರಿರಿ. ನೀವು ಬಯಸಿದಷ್ಟು ಪರಿಹಾರ ಧನ ಕೊಡಲು ನಾವು ಸಿದ್ಧರಿದ್ದೇವೆ."

ಮುಹಮ್ಮದ್(ಸ) ಅವರಲ್ಲಿ ವಿಚಾರಿಸಿ, ಅವರು ಝೈದ್‌ರ ತಂದೆ ಮತ್ತು ಚಿಕ್ಕಪ್ಪ ಎಂಬುದನ್ನೂ ತಮ್ಮ ಹುಡುಗನ ವಿಮೋಚನೆಗಾಗಿ ಬಂದಿರುವರೆಂಬುದನ್ನೂ ತಿಳಿದು ಕೊಳ್ಳುತ್ತಾರೆ.

ಮುಹಮ್ಮದ್(ಸ): "ನೀವು ಝೈದ್‌ನ ವಿಮೋಚನೆಯ ಹೊರತು ಇನ್ನಾವುದಕ್ಕಾದರೂ ಸಿದ್ಧವಿದ್ದೀರಾ?"

ಹಾರಿಸ್: "ಯಾವುದಕ್ಕೆ?"

ಮುಹಮ್ಮದ್(ಸ): "ನಾನು ಝೈದ್‌ನನ್ನು ಕರೆದು ವಿಚಾರಿಸುತ್ತೇನೆ. ಅವನು ನಿಮ್ಮ ಜೊತೆ ಬರಲು ಬಯಸಿದರೆ ಅವನಿಗಾಗಿ ಯಾವ ಪರಿಹಾರ ಧನವನ್ನೂ ನಾನು ಸ್ವೀಕರಿಸಲಾರೆ. ಹಾಗೆಯೇ ಅವನನ್ನು ಮುಕ್ತಗೊಳಿಸುವೆನು. ಆದರೆ ಅವನು ನನ್ನ ಜೊತೆಯಲ್ಲೇ ಇರಬಯಸಿದರೆ ಅವನನ್ನು ನಾನು ಒತ್ತಾಯ ಪೂರ್ವಕ ಕಳುಹಿಸಲಾರೆ."

ಹಾರಿಸ್: "ಇದು ನೀವು ನ್ಯಾಯಕ್ಕಿಂತಲೂ ಮಿಗಿಲಾದ ಮಾತನ್ನು ಆಡಿರುವಿರಿ. ನೀವು ಹುಡುಗನನ್ನು ಕರೆಯಿರಿ."

ಮುಹಮ್ಮದರು(ಸ) ಝೈದ್‌ನನ್ನು ಒಳಗಿನಿಂದ ಕರೆಸುತ್ತಾರೆ. ಅವನು ಬಂದಾಗ ಅವನನ್ನುದ್ದೇಶಿಸಿ:

"ಇವರಿಬ್ಬರನ್ನು ನೀನು ಬಲ್ಲೆಯಾ?" ಎಂದು ಕೇಳುತ್ತಾರೆ.

ಝೈದ್: "ಹೌದು ಬಲ್ಲೆ. ಅವರು ನನ್ನ ತಂದೆ ಮತ್ತು ಇವರು ನನ್ನ ಚಿಕ್ಕಪ್ಪ."

ಮುಹಮ್ಮದ್: "ನೀನು ಅವರನ್ನೂ ಬಲ್ಲೆ, ನನ್ನನ್ನೂ ಬಲ್ಲೆ. ನಿನಗೀಗ ಪೂರ್ಣ ಸ್ವಾತಂತ್ರ್ಯವಿದೆ. ನೀನು ಬಯಸಿದರೆ ಅವರ ಜೊತೆ ಹೋಗಬಹುದು ಅಥವಾ ನನ್ನ ಜೊತೆ ಇರಬಹುದು."

ಝೈದ್: "ಒಡೆಯರೇ, ನಾನು ನಿಮ್ಮನ್ನು ಬಿಟ್ಟು ಯಾರ ಜೊತೆಯೂ ಹೋಗಲಾರೆ."

ಈ ವಿಚಿತ್ರ ಮಾತು ಕೇಳಿ ಹಾರಿಸ್ ಮತ್ತು ಕಅಬ್ ಆಶ್ಚರ್ಯ ಚಕಿತರಾಗುತ್ತಾರೆ. ಇದೇನು ಹೇಳಿ ಬಿಟ್ಟ ಝೈದ್. ತಂದೆ, ಚಿಕ್ಕಪ್ಪನನ್ನು ಬಿಟ್ಟು ಮಗ ಅನ್ಯರ ಜೊತೆ ಇರುವುದೆ? ಸ್ವಾತಂತ್ರ್ಯಕ್ಕಿಂತ ಗುಲಾಮಗಿರಿಯನ್ನು ಇಷ್ಟಪಡುವುದೆ? ಮಗನ ವಿರಹದಲ್ಲಿ ಏಳೆಂಟು ವರ್ಷ ಚಡಪಡಿಸಿದ್ದಾಯಿತು. ಈಗ ಅವನನ್ನು ಭೇಟಿಯಾದಾಗ ಅವನು ಈ ರೀತಿ ಹೇಳಿ ಬಿಡುವುದೆ? ತಂದೆಯನ್ನು ಬಿಟ್ಟು ಒಡೆಯನ ಜೊತೆ ಇರುವುದೆ? ಇದೆಲ್ಲವೂ ಅವರಿಬ್ಬರ ಪಾಲಿಗೆ ಆಶ್ಚರ್ಯಕರವೂ ದುಃಖದಾಯಕವೂ ಆಗಿತ್ತು. ವಿಷಾದ ಮತ್ತು ಕೋಪ ಮಿಶ್ರಿತ ಧ್ವನಿಯಲ್ಲಿ,

"ನೀನು ಏನು ಹೇಳುತ್ತಿರುವೆ? ನೀನು ಗುಲಾಮಗಿರಿಯಲ್ಲಿ ಸಂತೃಪ್ತನಾಗಿರುವೆಯಾ? ನಿನಗೆ ಸ್ವಾತಂತ್ರ್ಯ ಇಷ್ಟವಿಲ್ಲವೇ? ನಮ್ಮನ್ನು ನೋಡು ನಿನ್ನನ್ನು ಅಗಲಿ ಏಳೆಂಟು ವರ್ಷಗಳನ್ನು ನಾವು ಕಣ್ಣೀರಲ್ಲೇ ಕಳೆದಿದ್ದೇವೆ. ನಿನ್ನ ಹುಡುಕಾಟದಲ್ಲಿ ರಾತ್ರಿ ಹಗಲು ನಿರತರಾಗಿದ್ದೆವು. ಆದರೆ ನೀನು ದಾಸ್ಯದಲ್ಲೇ ಸಂತುಷ್ಟನಾಗಿರುವೆ. ತಂದೆ ತಾಯಿಗಳನ್ನು ಬಿಟ್ಟು ಅನ್ಯರ ಜೊತೆ

ವಾಸಿಸಬಯಸುವೆ. ಇದೇನಿದು ನಿನ್ನ ವಿಚಿತ್ರ ವರ್ತನೆ?"

ಝೈದ್: "ನಾನು ಈ ನನ್ನ ಒಡೆಯರಲ್ಲಿ ಕಂಡಿರುವ ಗುಣಗಳನ್ನು ಇನ್ನೆಲ್ಲೂ ಕಂಡಿಲ್ಲ. ಅವರನ್ನು ಬಿಟ್ಟು ಲೋಕದಲ್ಲಿ ಇನ್ನಾರ ಜೊತೆಯೂ ನಾನು ಇರಲಾರೆ."

ಹಾರಿಸರ ಕೋಪ ಇಳಿಯಿತು. ಅವರು ಒಡೆಯ ಮತ್ತು ದಾಸ ಇಬ್ಬರನ್ನೂ ಗಮನವಿಟ್ಟು ನೋಡಿದರು. ಇಬ್ಬರಲ್ಲೂ ಯಾವುದೇ ರೀತಿಯ ಕಾಪಟ್ಯ ಅವರಿಗೆ ಕಾಣಲಿಲ್ಲ. ಇಬ್ಬರೂ ಯಾವುದೇ ಒತ್ತಡವಿಲ್ಲದೆ ಪರಸ್ಪರರನ್ನು ನಿಷ್ಕಳಂಕವಾಗಿ ಪ್ರೀತಿಸುತ್ತಿರುವುದನ್ನು ಕಂಡು ಮಗನ ಸಂತೋಷದಲ್ಲಿ ಅವರಿಗೂ ತೃಪ್ತಿಯೆನಿಸಿತು.

"ಮಗೂ, ನೀನು ನಿನ್ನ ಒಡೆಯನ ಬಳಿ ಸಂತುಷ್ಟನಾಗಿದ್ದರೆ ನನಗೂ ಸಂತೋಷವೆ. ನಿನ್ನ ಸಂತೋಷವೇ ನಮ್ಮ ಸಂತೋಷ."

ಝೈದ್‌ನ ನಿಷ್ಠೆಯ ಬಗ್ಗೆ ಮುಹಮ್ಮದರಿಗೆ(ಸ) ಹೆಮ್ಮೆ ಎನಿಸಿತು. ಅವರು ಆತನ ಕೈ ಹಿಡಿದು ಕಅಬಾ ಭವನದ 'ಹಜರುಲ್ ಅಸ್ವದ್'*ನ ಬಳಿ ನಿಂತರು. ಅಲ್ಲಿ ನೆರೆದಿದ್ದವರನ್ನು ಉದ್ದೇಶಿಸಿ ಹೀಗೆ ಹೇಳಿದರು:

"ಕುರೈಶ್ ಜನರೇ, ನೀವೆಲ್ಲಾ ಸಾಕ್ಷ್ಯವಹಿಸಿರಿ. ಇಂದಿನಿಂದ ಝೈದ್ ನನ್ನ ಪುತ್ರನಾಗಿರುವನು. ನಾನು ಅವನ ಉತ್ತರಾಧಿಕಾರಿ ಮತ್ತು ಅವನು ನನ್ನ ಉತ್ತರಾಧಿಕಾರಿ."

ಸಭಿಕರು ಈ ವಿಚಿತ್ರ ಘೋಷಣೆಯನ್ನು ಕೇಳಿ ಆಶ್ಚರ್ಯಗೊಂಡರು. ಇದು ಅರೇಬಿಯಾದ ವಿಚಿತ್ರ ಘಟನೆಯಾಗಿತ್ತು. ಜನರು ದರೋಡೆಗೈಯುತ್ತಿದ್ದರು. ಮನುಷ್ಯರನ್ನು ಜಾನುವಾರುಗಳಂತೆ ಮಾರುತ್ತಿದ್ದರು. ಒಡೆಯನು ಗುಲಾಮನನ್ನು ಸೊಂಟ ಮುರಿಯುವ ತನಕ ದುಡಿಸುತ್ತಿದ್ದ. ಅವನ ಮೇಲೆ ದೌರ್ಜನ್ಯವೆಸಗುತ್ತಿದ್ದ. ಅವನ ದೃಷ್ಟಿಯಲ್ಲಿ ಗುಲಾಮರು ಮನುಷ್ಯರಲ್ಲ. ಮನುಷ್ಯರಂತೆ ಬಾಳು ನಡೆಸುವ ಹಕ್ಕು ಅವರಿಗಿಲ್ಲ. ಆದರೆ ಇಲ್ಲಿ ಮಗನು ತಂದೆಯನ್ನು ಬಿಟ್ಟು ಒಡೆಯನ ಮೊರೆ ಹೋಗುತ್ತಾನೆ. ಒಡೆಯ ಗುಲಾಮನನ್ನು ಸ್ವತಂತ್ರಗೊಳಿಸುತ್ತಾನೆ. "ಇಂದಿನಿಂದ ಇವನು ನನ್ನ ಗುಲಾಮನಲ್ಲ; ನನ್ನ ಪುತ್ರ" ಎಂದು ಘೋಷಣೆ ಮಾಡುತ್ತಾರೆ.

ಇದು ಮಾನವಕುಲದ ಮೇಲೆ ಮುಹಮ್ಮದ್(ಸ) ಮಾಡಿದ ಮಹದುಪಕಾರ. ಮಾನವ ಸಂತತಿಯ ಸ್ವಾತಂತ್ರ್ಯದ ಪ್ರಪ್ರಥಮ ಘೋಷಣೆ.

ಈ ಕರುಣೆ ಮತ್ತು ಅನುಗ್ರಹವು ಹಾರಿಸ್‌ರ ಮನದಲ್ಲಿ ಶಾಂತಿ ತುಂಬಿತು. ಅವರು ತನ್ನ ಸೋದರ ಕಅಬ್‌ರೊಂದಿಗೆ ಸಂತೋಷದಿಂದ ಊರಿಗೆ ಮರಳಿದರು. ಝೈದ್ ಬಿನ್ ಹಾರಿಸ್‌ರನ್ನು ಜನರು ಈಗ ಝೈದ್ ಬಿನ್ ಮುಹಮ್ಮದ್ ಎನ್ನತೊಡಗಿದರು.

## ಚಾಣಾಕ್ಷ ತೀರ್ಪುಗಾರ

ಕಅಬಾ ಭವನವು ಎಲ್ಲ ಅರಬರ ಶ್ರದ್ಧೆ, ಭಕ್ತಿ ಹಾಗೂ ನಿರೀಕ್ಷೆಗಳ ಕೇಂದ್ರವಾಗಿದೆ. ಅದರ ಸುತ್ತಮುತ್ತ ಬೆಟ್ಟಗಳಿದ್ದು ಜೋರಾಗಿ ಮಳೆ ಬಿದ್ದರೆ ಬೆಟ್ಟಗಳಿಂದ ನೀರು ಹರಿದು

ಮಕ್ಕಾ ಪಟ್ಟಣಕ್ಕೆ ಬರುತ್ತದೆ. ಇದರಿಂದ ನೆರೆಯಂತಹ ಪರಿಸ್ಥಿತಿಯುಂಟಾಗುತ್ತದೆ. ಅನೇಕ ಸಲ ಇಂತಹ ನೆರೆ ಬಂದುದರಿಂದ ಕಅಬಾದ ಗೋಡೆಗಳು ಶಿಥಿಲಗೊಂಡಿವೆ. ಈ ಸಲದ ಮಳೆಯಿಂದ ಅದರ ಗೋಡೆಗಳಲ್ಲಿ ಬಿರುಕು ಕಾಣಿಸಿಕೊಂಡಿವೆ. ಅದರ ಅಡಿಪಾಯವೂ ಕ್ಷೀಣವಾಗಿದೆ. ಇಂತಹ ಸ್ಥಿತಿಯಲ್ಲಿ ಕಅಬಾದ ಪ್ರದಕ್ಷಿಣೆ ಮಾಡುವುದು ಅಪಾಯಕರವೆಂಬುದನ್ನು ಮನಗಂಡು ಕುರೈಶ್ ಸರದಾರರು ಒಂದೆಡೆ ಕಲೆತು ಸಮಾಲೋಚನೆ ನಡೆಸುತ್ತಾರೆ. ಅದರ ದುರಸ್ತಿ ಕಾರ್ಯದಿಂದ ಪ್ರಯೋಜನವಾಗದು. ಆದುದರಿಂದ ಸಂಪೂರ್ಣವಾಗಿ ಪುನರ್ನಿರ್ಮಾಣ ಮಾಡಬೇಕೆಂಬ ತೀರ್ಮಾನಕ್ಕೆ ಬರುತ್ತಾರೆ.

ಅದೇ ವೇಳೆ ರೋಮನ್ ವರ್ತಕರ ಹಡಗೊಂದು ಜಿದ್ದಾದ ಬಳಿ ಅಪಘಾತಕ್ಕೀಡಾಗಿ ಮುರಿದು ದಡ ಸೇರುತ್ತದೆ. ಅದರ ಯಜಮಾನ ಬಾಕೂಮ್ ಎಲ್ಲ ಸಾಮಾನುಗಳನ್ನೂ ಜಿದ್ದಾದ ಬಂದರಿನಲ್ಲಿ ಇಳಿಸುತ್ತಾನೆ. ಕುರೈಶ್ ಸರದಾರರು ವಿಷಯ ತಿಳಿದ ಕೂಡಲೇ ಜಿದ್ದಾಗೆ ತೆರಳಿ ಹಡಗಿನ ಹಲಗೆಗಳನ್ನು ಖರೀದಿಸಿದರು. ಅದರಿಂದ ಕಅಬಾಕ್ಕೆ ಮಾಡು ಹಾಕಿಕೊಡುವಂತೆ ಬಡಗಿಗಳಿಗೆ ವಹಿಸಿ ಕೊಡಲಾಯಿತು. ಕುರೈಶರ ವಿಭಿನ್ನ ಮನೆತನದವರು ತಂತಮ್ಮ ಪಾಲಿನ ಗೋಡೆ ನಿರ್ಮಾಣದ ಕಲ್ಲುಗಳನ್ನು ಶೇಖರಿಸಿದರು. ಎಲ್ಲರೂ ತಂತಮ್ಮ ಪಾಲಿನ ಶ್ರಮದಾನಕ್ಕೆ ಸಿದ್ಧವಾದರು. ಕಅಬಾದ ಗೋಡೆಗಳನ್ನೂ ಅಸ್ತಿವಾರವನ್ನೂ ಪೂರ್ಣವಾಗಿ ಬದಲಿಸಿ ನವ ನಿರ್ಮಾಣ ಮಾಡಲಾಯಿತು. ಗೋಡೆ ಆಳೆತ್ತರಕ್ಕೆ ಏರಿದಾಗ 'ಹಜರುಲ್ ಅಸ್ವದ್' ಎಂಬ ಕಪ್ಪು ಶಿಲೆಯನ್ನು ಅದರಲ್ಲಿ ಪ್ರತಿಷ್ಠಾಪಿಸುವ ಬಗ್ಗೆ ವಿವಿಧ ಮನೆತನದವರ ಮಧ್ಯೆ ವಿವಾದವೆದ್ದಿತು. ಪ್ರತಿಯೊಂದು ಮನೆತನವೂ ಈ ಸೌಭಾಗ್ಯ ತನ್ನ ಪಾಲಿಗೆ ಬರಬೇಕೆಂದು ಬಯಸುತ್ತಿತ್ತು. ಮಾತುಕತೆಯ ಮೂಲಕ ಸಮಸ್ಯೆ ಇತ್ಯರ್ಥವಾಗ ದಿದ್ದಾಗ ಖಡ್ಗಗಳು ಒರೆಗಳಿಂದ ಹೊರ ಬಂದುವು. ಇನ್ನೇನು ಒಂದು ಭೀಕರ ಯುದ್ಧ ಸಂಭವಿಸಿಯೇ ತೀರುವುದು ಎನ್ನುವಷ್ಟರಲ್ಲಿ ವಯೋವೃದ್ಧ ಕುರೈಶ್ ಸರದಾರ ಅಬೂ ಉಮಯ್ಯ ಬಿನ್ ಮುಗೈರ ಒಂದು ಉಪಾಯ ಸೂಚಿಸುತ್ತಾರೆ, "ಇನ್ನು ಸಫಾ ಬೆಟ್ಟದ ಕಡೆಯಲ್ಲಿರುವ ಬಾಗಿಲಿನ ಮೂಲಕ ಯಾರು ಮೊದಲು ಒಳಗೆ ಬರುತ್ತಾರೋ ಅವರನ್ನು ತೀರ್ಪುಗಾರರಾಗಿ ಮಾಡಿ ಈ ಸಮಸ್ಯೆಗೆ ಅವರು ಹೇಳುವ ಪರಿಹಾರವನ್ನು ಒಪ್ಪಿಕೊಳ್ಳೋಣ" ಎನ್ನುತ್ತಾರೆ. ಎಲ್ಲರೂ ಅದಕ್ಕೆ ಸಮ್ಮತಿ ಸೂಚಿಸುತ್ತಾರೆ.

ಸಂದರ್ಭವಶಾತ್ ಆ ದ್ವಾರದ ಮೂಲಕ ಮೊಟ್ಟ ಮೊದಲು ಪ್ರವೇಶಿಸಿದವರು ಮುಹಮ್ಮದ್(ಸ) ಅವರಾಗಿದ್ದರು. ಕಅಬಾದ ಸುತ್ತಲೂ ನೆರೆದ ಜನರು, "ಅಮೀನ್ (ಪ್ರಾಮಾಣಿಕ) ಬಂದರು" ಎಂದು ಹರ್ಷದಿಂದ ಉದ್ಗರಿಸುತ್ತಾರೆ.

"ಮುಹಮ್ಮದರೇ, ಹಜರುಲ್ ಅಸ್ವದ್ ಪ್ರತಿಷ್ಠಾಪಿಸುವ ವಿಷಯದಲ್ಲಿ ನಮ್ಮೊಳಗೆ ತೀವ್ರ ಭಿನ್ನಾಭಿಪ್ರಾಯವಾಗಿದೆ. ಪ್ರತಿಯೊಂದು ಗೋತ್ರವೂ ಆ ಸೌಭಾಗ್ಯ ತನಗೆ ಒದಗಿ ಬರಬೇಕೆಂಬ ಛಲದಿಂದ ಯುದ್ಧಕ್ಕೆ ಸಿದ್ಧವಾಗಿದೆ. ಅದಕ್ಕೆ ನಾನೊಂದು ಪರಿಹಾರೋಪಾಯ ವನ್ನು ಸೂಚಿಸಿದ್ದೆ, ಸಫಾ ದ್ವಾರದ ಮೂಲಕ ಒಳಗೆ ಬರುವ ಪ್ರಥಮ ಕುರೈಶಿಯನ್ನು ತೀರ್ಪುಗಾರನಾಗಿ

ಮಾಡುವುದೆಂದು ನಾವು ತೀರ್ಮಾನಿಸಿದ್ದೇವೆ. ಈಗ ನೀವೇ ನಮ್ಮ ತೀರ್ಪುಗಾರರು, ನಿಮ್ಮ ತೀರ್ಪಿಗೆ ನಾವೆಲ್ಲರೂ ಬದ್ಧರಾಗಿದ್ದೇವೆ" ಎನ್ನುತ್ತಾರೆ ಅಬೂ ಉಮಯ್ಯ.

ಮುಹಮ್ಮದ್(ಸ) ಸಭಿಕರಿಂದ ಅನುಮೋದನೆ ಪಡೆದ ಬಳಿಕ ತಮ್ಮ ಶಾಲನ್ನು ನೆಲದ ಮೇಲೆ ಹಾಸಿ ಹಜರುಲ್ ಅಸ್ವದನ್ನು ಅದರ ಮೇಲೆ ಇರಿಸುತ್ತಾರೆ. ಎಲ್ಲ ಗೋತ್ರ ನಾಯಕರೂ ಅದರ ಒಂದೊಂದು ಮೂಲೆಯನ್ನು ಹಿಡಿದೆತ್ತಿ ಅದನ್ನು ಪ್ರತಿಷ್ಠಾಪಿಸಬೇಕಾದಲ್ಲಿಗೆ ನಡೆಯುತ್ತಾರೆ. ಅಲ್ಲಿ ಅದನ್ನು ಮುಹಮ್ಮದ್(ಸ) ತಮ್ಮ ಕೈಗಳಿಂದ ಎತ್ತಿ ಅದರ ಜಾಗದಲ್ಲಿ ಪ್ರತಿಷ್ಠಾಪಿಸುತ್ತಾರೆ. ಸಭೆಯು ಹರ್ಷೋದ್ಗಾರಗಳೊಂದಿಗೆ ಮುಹಮ್ಮದ್(ಸ) ಅವರ ಕುಶಾಗ್ರ ಬುದ್ಧಿ, ಪ್ರಾಮಾಣಿಕತೆ ಮತ್ತು ಸ್ಥಿತಪ್ರಜ್ಞೆಯನ್ನು ಹಾಡಿ ಹೊಗಳುತ್ತದೆ.

ಕಅಬಾದ ನಿರ್ಮಾಣ ಕಾರ್ಯವು ಕೆಲವೇ ದಿನಗಳಲ್ಲಿ ಪೂರ್ಣಗೊಂಡಿತು. ಮರದ ಛಾವಣಿಯ ನಿರ್ಮಾಣವೂ ಮುಗಿಯಿತು. ಒಳ ಪ್ರವೇಶಕ್ಕಾಗಿ ಒಂದು ದ್ವಾರವನ್ನೂ ಇರಿಸಲಾಯಿತು.

ಮುಹಮ್ಮದ್‌ರಿಗೆ(ಸ) ಈಗ 37 ವರ್ಷ. ಮಕ್ಕಾದಲ್ಲಿ ಬರಗಾಲ. ಎಲ್ಲೆಡೆ ಹಾಹಾಕಾರ. ದೊಡ್ಡ ದೊಡ್ಡ ಧನಿಕರೂ ಚಿಂತೆಗೀಡಾಗಿದ್ದಾರೆ. ವ್ಯಾಪಾರ ವಹಿವಾಟು ಸ್ಥಗಿತಗೊಂಡಿದೆ. ಧಾನ್ಯ, ಮೇವು ಮತ್ತು ಹಾಲಿಗೆ ತೀವ್ರ ಕ್ಷಾಮ ತಲೆದೋರಿದೆ. ಜನರು ಹಸಿವಿನಿಂದ ಸಾಯುತ್ತಿರುವಾಗಲೂ ಸಾಹುಕಾರರು ತಮ್ಮ ಬಡ್ಡಿ ವ್ಯವಹಾರವನ್ನು ಕುದುರಿಸುತ್ತಿದ್ದಾರೆ. ಬಡವರು ಹೆಚ್ಚಿನ ಬಡ್ಡಿದರಕ್ಕೆ ಅವರಿಂದ ಸಾಲ ಪಡೆಯಲು ನಿರ್ಬಂಧಿತರಾಗಿದ್ದಾರೆ. ಒಡಲ ಅಗ್ನಿಯನ್ನು ತಣಿಸಲು ಅವರ ಮುಂದೆ ಅನ್ಯಮಾರ್ಗವಿಲ್ಲ. ವ್ಯಾಪಾರಿಗಳು ಲಾಭಬಡುಕರಾಗಿದ್ದಾರೆ. ಅಕ್ರಮ ದಾಸ್ತಾನುಗಾರರು ತಮ್ಮ ಗೋದಾಮು ಗಳನ್ನು ತುಂಬುತ್ತಿದ್ದಾರೆ. ತೀವ್ರ ಕ್ಷಾಮದಿಂದ ಅವರ ಮನದಲ್ಲಿ ಅನುಕಂಪದ ಬದಲು ಧನಮೋಹವು ಮನೆಮಾಡಿದೆ. ಸಂಪತ್ತಿನ ಮೋಹಪಾಶದಲ್ಲಿ ಸಿಲುಕಿದವನು ಅದರ ಗುಲಾಮಗಿರಿಯಿಂದ ಎಂದೂ ಮುಕ್ತಿ ಪಡೆಯುವುದಿಲ್ಲ. ಧನ ಶೇಖರಣೆಯೇ ಅವನ ಜೀವನದ ಧ್ಯೇಯವಾಗಿ ಮಾರ್ಪಡುತ್ತದೆ. ಮಕ್ಕಾದ ಎಲ್ಲಾ ಸಾಹುಕಾರರು ದರ್ಪದಲ್ಲಿ ಬೀಗುತ್ತಿದ್ದಾರೆ. ಹೊಟ್ಟೆ ಬಟ್ಟೆಗಿಲ್ಲದ ಸಾಮಾನ್ಯ ಜನರು ಅವರ ಮನೆಗಳ ಮುಂದೆ ಅನ್ನದ ತುತ್ತಿಗಾಗಿ, ಅರಿವೆಯ ತುಂಡಿಗಾಗಿ ದೀನಭಾವದಿಂದ ಸಾಲುಗಟ್ಟಿ ನಿಲ್ಲುತ್ತಿದ್ದಾರೆ.

ಆದರೆ ಇದೇ ನಗರದಲ್ಲಿ ಮುಹಮ್ಮದರ(ಸ) ಮನೆಯ ದ್ವಾರವು ಎಲ್ಲ ಬಡವರಿಗೆ ಮುಕ್ತವಾಗಿದೆ. ಅಲ್ಲಿ ಹಸಿದವನಿಗೆ ಅನ್ನ ದೊರೆಯುತ್ತದೆ. ಹೊರಗಿನಿಂದ ಆಹಾರ ಧಾನ್ಯಗಳನ್ನು ತರಿಸಿ ಧರ್ಮಾರ್ಥವಾಗಿ ವಿತರಿಸಲಾಗುತ್ತಿದೆ. ಅವರ ಪತ್ನಿ ಖದೀಜಾರ ಪೂರ್ಣ ಬೆಂಬಲ ದೊಂದಿಗೆ ಈ ಕಾರ್ಯ ನಡೆಯುತ್ತಿದೆ. ಅವರ ಸಂಪತ್ತಿನ ಹೆಚ್ಚಿನಂಶವು ಬಡಬಗ್ಗರ ಸೇವೆಯಲ್ಲಿ ವ್ಯಯವಾಗುತ್ತಿದೆ. ಈ ಪಾವನ ದಂಪತಿಗಳು ಅನೇಕರನ್ನು ಸಾವಿನ ದವಡೆಯಿಂದ ರಕ್ಷಿಸಿದ್ದಾರೆ. ಮಕ್ಕಾ ಪಟ್ಟಣದಲ್ಲೆಲ್ಲ ಅವರ ಔದಾರ್ಯ ಮತ್ತು ದಾನಶೀಲತೆ ಚರ್ಚಾ ವಿಷಯವಾಗಿದೆ.

ಅಧ್ಯಾಯ - ೫

# ಪ್ರವಾದಿತ್ವ ಪ್ರಾಪ್ತಿ

## ಹಿರಾ ಗುಹೆಯಲ್ಲಿ

ಮುಹಮ್ಮದರಿಗೀಗ 39 ವರ್ಷ ಪ್ರಾಯ ದಾಟಿದೆ. ಅವರು ತಮ್ಮ ಪುತ್ರಿಯರಾದ ಝೈನಬ್, ರುಕಿಯ್ಯಾ ಮತ್ತು ಉಮ್ಮು ಕುಲ್ಸೂಮರ ಮದುವೆ ಮಾಡಿಸಿಯಾಗಿದೆ. ಅಲೀ ಇನ್ನೂ ಬಾಲಕ. ಝೈದ್ ಯುವಕನಾಗಿದ್ದಾನೆ. ವ್ಯಾಪಾರ-ವಹಿವಾಟುಗಳನ್ನೆಲ್ಲಾ ಈಗ ನೌಕರರೇ ನೋಡಿಕೊಳ್ಳುತ್ತಿದ್ದಾರೆ. ಖದೀಜಾರ ಎಲ್ಲ ಸೊತ್ತು ಈಗ ಮುಹಮ್ಮದರ(ಸ) ಮೇಲ್ನೋಟದಲ್ಲಿದೆ. ಅವರಿಗಿಷ್ಟ ಬಂದಂತೆ ಖರ್ಚು ಮಾಡಬಹುದಾಗಿತ್ತು. ಆದರೆ ಅವರೆಂದೂ ಅದರಿಂದ ಸುಖ-ಭೋಗ ವಸ್ತುಗಳನ್ನು ಖರೀದಿಸಲಿಲ್ಲ. ಮಕ್ಕಾದ ಸರದಾರರು ಸುಖಲೋಲುಪತೆಯಲ್ಲಿ ಮೈಮರೆಯುತ್ತಿದ್ದರು. ಹೆಸರು ಕೀರ್ತಿಗಾಗಿ ಎಲ್ಲವನ್ನೂ ಮಾಡುತ್ತಿದ್ದರು. ಅವರ ರಾತ್ರಿಗಳು ರಂಗೇರಿದವುಗಳಾಗಿದ್ದುವು. ಮದ್ಯಪಾನ, ನೃತ್ಯ, ಸಂಗೀತಗಳು ಅವರ ನಿತ್ಯ ಮನರಂಜನಾ ಕಾರ್ಯಗಳಾಗಿದ್ದುವು. ಆದರೆ ಮುಹಮ್ಮದ್(ಸ) ಧನದ ಪೂಜೆ ಮಾಡುವ ಬದಲು ಜನಸೇವೆ ಮಾಡುತ್ತಿದ್ದರು. ಬಿಡುವಿನ ವೇಳೆಯನ್ನು ಮನರಂಜನೆಯಲ್ಲಿ ಕಳೆಯುವ ಬದಲು ದೇವಾರಾಧನೆ, ದೇವಧ್ಯಾನ ಮತ್ತು ದೇವಚಿಂತನೆಯಲ್ಲಿ ಕಳೆಯುತ್ತಿದ್ದರು.

ಏಕಾಂತವಾಸವು ಅವರಿಗೆ ಈಗೀಗ ಹೆಚ್ಚೆಚ್ಚು ಪ್ರಿಯವಾಗ ತೊಡಗಿತ್ತು. ಏಕಾಂತದಲ್ಲಿ ಧ್ಯಾನ ಮಗ್ನರಾಗುತ್ತಿದ್ದರು. ಬುದ್ಧಿ ಬಂದಂದಿನಿಂದ ಜೀವನ ಮತ್ತು ನಿಸರ್ಗದ ಕುರಿತು ಅವರು ಮಾಡುತ್ತಿದ್ದ ಚಿಂತನೆ ಈಗ ಪಕ್ವಗೊಂಡಿತ್ತು. ಅವರಲ್ಲಿ ನಿಸರ್ಗದ ನಿಗೂಢತೆಯನ್ನು ಭೇದಿಸುವ ಕುತೂಹಲ ಹೆಚ್ಚಿದೆ. ಈ ಕಳಕಳಿ ಏಕಾಂತವನ್ನು ಬಯಸುತ್ತಿತ್ತು. ಚಿಂತನ ಶೀಲತೆಯನ್ನು ಅರಸುತ್ತಿತ್ತು. ಚಿಂತನಶೀಲ ಮನಸ್ಸು ಯಾರೂ ಸುಳಿಯದ ಏಕಾಂತತೆಯನ್ನು ಅಪೇಕ್ಷಿಸುತ್ತಿತ್ತು. ಜನರು ಸಂಪತ್ತು ಅರಮನೆಗಳನ್ನು ಅರಸುತ್ತಿದ್ದರೆ ಮುಹಮ್ಮದರು(ಸ) ಜನರ ಕಣ್ಣುಗಳಿಂದ ಅಡಗಿ ಸೃಷ್ಟಿಯ ವಾಸ್ತವಿಕತೆಯನ್ನು ನೋಡಬಯಸುತ್ತಾರೆ. ಸೃಷ್ಟಿಕರ್ತ, ಸೃಷ್ಟಿ ಮತ್ತು ಉದ್ದೇಶ ಇದುವೇ ಅವರ ಚಿಂತನೆಯ ಮುಖ್ಯ ವಿಷಯವಾಗಿತ್ತು. ಅವುಗಳ ಕುರಿತು ಅರಿಯಲು ಏಕಾಂತತೆ

ಮತ್ತು ಏಕಾಗ್ರತೆ ಬೇಕಿತ್ತು. ಪ್ರತಿಕ್ಷಣವು ಅವರ ಕುತೂಹಲ ಹೆಚ್ಚುತ್ತಿತ್ತು. ದಾಹ ತೀಕ್ಷ್ಣವಾಗುತ್ತಿತ್ತು. ಅವರ ಅಂತರಾತ್ಮವು ಸೃಷ್ಟಿಕರ್ತನಲ್ಲಿ ಮೊರೆಯಿಡುತ್ತಿತ್ತು.

"ಓ ನೈಜ ಆರಾಧ್ಯನೇ ನೀನೆಲ್ಲಿರುವೆ? ನಿನ್ನ ದರ್ಶನ ಭಾಗ್ಯವನ್ನು ನನಗೇಕೆ ಕರುಣಿಸುವುದಿಲ್ಲ. ನಿನ್ನ ದಿವ್ಯ ಪ್ರಭೆಯಿಂದ ನನ್ನನ್ನು ಅಸ್ಪಸ್ಥಗೊಳಿಸಿರುವ ಅಂಧಕಾರವನ್ನು ಏಕೆ ಹೊಡೆದೋಡಿಸುವುದಿಲ್ಲ."

ಮಕ್ಕಾ ನಗರದಿಂದ ಮೂರು ಮೈಲಿ ದೂರದಲ್ಲಿರುವ 'ನೂರ್' ಪರ್ವತದ ಅತ್ಯುನ್ನತ ಶಿಖರದಲ್ಲಿ ಒಂದೆಡೆ 'ಹಿರಾ' ಎಂಬ ಗವಿಯಿದೆ. ಅರ್ಧರಾತ್ರಿಯ ಭಯಾನಕ ಘಳಿಗೆಯಲ್ಲಿ ಸುಖ ದುಃಖಗಳ ಚಿಂತೆಯಿಂದ ಮುಕ್ತವಾದ ಮುಹಮ್ಮದ್(ಸ) ಸಾಷ್ಟಾಂಗ ವೆರಗಿದ್ದಾರೆ. ನೀರವತೆ, ನಿಶ್ಶಬ್ದತೆಯ ಮಧ್ಯೆ ಆ ಏಕೈಕ ವ್ಯಕ್ತಿ ತನ್ನ ಸೃಷ್ಟಿಕರ್ತನ ಆರಾಧನೆ, ಧ್ಯಾನ ಮತ್ತು ಚಿಂತನೆಯಲ್ಲಿ ತಲ್ಲೀನರಾಗಿದ್ದಾರೆ. ಆಮಿನಾ ಮತ್ತು ಅಬ್ದುಲ್ಲಾರ ಪುತ್ರ ಮಕ್ಕಾದ ಅತ್ಯಂತ ಪರಿಶುದ್ಧ ಮತ್ತು ಶ್ರೀಮಂತ ಮಹಿಳೆಯ ಪತಿ ಮುಹಮ್ಮದ್(ಸ) ಈ ಗುಹೆಯ ಅಂಧಕಾರದಲ್ಲಿ ಜಗದೊಡೆಯನ ಸಾಕ್ಷಾತ್ಕಾರದ ಭಾಗ್ಯಕ್ಕಾಗಿ ಚಡಪಡಿಸುತ್ತಿದ್ದಾರೆ. ದಿನದ ಬೆಳಕಿರಲಿ, ರಾತ್ರಿಯ ಕತ್ತಲಿರಲಿ ಇಲ್ಲಿ ಸದಾ ಪ್ರೇಮದ ದೀಪವು ಉರಿಯುತ್ತಿರುತ್ತದೆ. ಸೂರ್ಯ ಚಂದ್ರರಿಗೂ ಅವರ ಧ್ಯಾನ-ಚಿಂತನೆಗಳಲ್ಲಿ ವಿಘ್ನ ಉಂಟು ಮಾಡುವ ಧೈರ್ಯವಿಲ್ಲದೆ ಗುಹೆಯ ಪಾರ್ಶ್ವಗಳಿಂದಲೇ ತಮ್ಮ ಪಯಣವನ್ನು ಮುಂದು ವರಿಸುತ್ತವೆ. ಮುಹಮ್ಮದರು ಆದಮರ ಸಂತತಿಗಳ ಪಥಭ್ರಷ್ಟತೆಯ ವ್ಯಥೆಯನ್ನು ಮನದೊಳಗೆ ಇರಿಸಿ ತಮ್ಮ ಸೃಷ್ಟಿಕರ್ತನಾದ ಒಡೆಯನಿಂದ ಮಾರ್ಗದರ್ಶನಕ್ಕಾಗಿ ಬೇಡುತ್ತಿದ್ದರು. ಪ್ರತಿದಿನವೂ ನಿರೀಕ್ಷೆಯ ದಿನ. ಪ್ರತಿರಾತ್ರಿಯೂ ಸುವಾರ್ತೆಯ ರಾತ್ರಿಯಾದೀತೆಂಬ ನಂಬಿಕೆ ಬಲಗೊಳ್ಳುತ್ತದೆ.

ಇಂದು ರಬೀಉಲ್ ಅವ್ವಲ್ ತಿಂಗಳ ಒಂಬತ್ತನೆಯ ದಿನ (ಕ್ರಿ. ಶ. 610 ಫೆಬ್ರುವರಿ 12). ಮುಹಮ್ಮದರು ತಮ್ಮ ಜೀವನದ 39 ವರ್ಷ 3 ತಿಂಗಳು ಮತ್ತು 16 ದಿನಗಳನ್ನು ಪೂರ್ತಿಗೊಳಿಸಿದ್ದಾರೆ. ರಾತ್ರಿಯ ಅಂಧಕಾರದಲ್ಲಿ ಹಿರಾಗುಹೆಯಲ್ಲಿ ಧ್ಯಾನ ಮಗ್ನರಾಗಿ ಕುಳಿತಿದ್ದಾರೆ. ಇದ್ದಕ್ಕಿದ್ದಂತೆ ಗುಹೆಯಲ್ಲಿ ಶುಭ್ರ ಪ್ರಕಾಶ ಆವರಿಸುತ್ತದೆ. ಮುಹಮ್ಮದ್(ಸ) ಬೆಚ್ಚಿ ಬೀಳುತ್ತಾರೆ. ಮುಹಮ್ಮದರ(ಸ) ಮುಂದೆ ಓರ್ವ ದೇವದೂತರು ನಿಂತಿದ್ದಾರೆ. "ಮುಹಮ್ಮದರೇ, ನಿಮಗೆ ಶುಭವಾಗಲಿ. ನೀವು ಅಲ್ಲಾಹನ ಪ್ರವಾದಿಯಾಗಿರುವಿರಿ. ನಾನು ಜಿಬ್ರೀಲ್."

ಅಲ್ಲಾಹನ ಅತ್ಯಂತ ನಿಕಟ ದೇವಚರ ಜಿಬ್ರೀಲ್(ಅ) ಈ ಸುವಾರ್ತೆಯನ್ನು ನೀಡಿ ಮರೆಯಾಗುತ್ತಾರೆ.

## ವರಕ ಬಿನ್ ನೌಫಲ್

ಮುಹಮ್ಮದ್(ಸ) ಜಿಬ್ರೀಲರ ನಿರ್ಗಮನದ ಬಳಿಕ ಮನೆಗೆ ಮರಳುತ್ತಾರೆ. ಅವರು ತೀವ್ರ ಉದ್ವಿಗ್ನತೆಯ ಸ್ಥಿತಿಯಲ್ಲಿದ್ದರು. ಮನೆಗೆ ಪ್ರವೇಶಿಸುತ್ತಲೇ ಖದೀಜಾರು

ಮುಹಮ್ಮದ್‌ರ(ಸ) ಮುಖದಲ್ಲಿ ಗಾಬರಿಯನ್ನು ಗುರುತಿಸಿದರು. ಅವರೂ ಕಳವಳಗೊಳ್ಳುತ್ತಾರೆ.

"ನನಗೆ ಹೊದಿಸಿರಿ, ನನಗೆ ಹೊದಿಸಿರಿ" ಎನ್ನುತ್ತಾ ಮುಹಮ್ಮದ್(ಸ) ಹಾಸಿಗೆಗೆ ಒರಗಿದರು. ಖದೀಜಾ ಅವರಿಗೊಂದು ಕಂಬಳಿಯನ್ನು ಹೊದಿಸುತ್ತಾರೆ. ಖದೀಜಾ ಕಂಪಿಸುವ ಅಧರಗಳೊಂದಿಗೆ: "ದೇವರೇ! ಅಬುಲ್ ಕಾಸಿಮ್‌ರಿಗೆ ಏನಾಯಿತು" ಎನ್ನುತ್ತಾರೆ.

ಯೋಚನಾ ಲಹರಿಯು ಅವರನ್ನು ಹಿರಾಗುಹೆಯ ಕಡೆಗೆ ಒಯ್ಯುತ್ತದೆ. ಅಲ್ಲಿಗೆ ಅವರು ಅನೇಕ ಸಲ ತಮ್ಮ ಪತಿಗೆ ಹುರಿದ ಧಾನ್ಯದ ಹುಡಿಯನ್ನೂ ನೀರನ್ನೂ ನೀಡಲು ಹೋಗಿದ್ದರು. 'ಇಂದು ಏನೋ ಅಸಾಮಾನ್ಯ ಘಟನೆ ನಡೆದಿರಬೇಕು' ಎನ್ನುತ್ತಾ ಆಕಾಶದತ್ತ ದೃಷ್ಟಿ ಎತ್ತಿ ಪ್ರಾರ್ಥನಾ ಭಂಗಿಯಲ್ಲಿ ನಿಂತರು. ಅಷ್ಟರಲ್ಲಿ ಮುಹಮ್ಮದ್(ಸ) ಎಚ್ಚರಗೊಂಡು ಹಿರಾ ಗುಹೆಯಲ್ಲಿ ನಡೆದ ಘಟನೆಯನ್ನು ವಿವರಿಸಿ "ನನಗೆ ನನ್ನ ಪ್ರಾಣದ ಭಯವಾಗುತ್ತಿದೆ. ನಾನು ವಿಚಿತ್ರ ಘಟನೆಗಳನ್ನು ಕಾಣುತ್ತಿದ್ದೇನೆ" ಎನ್ನುತ್ತಾರೆ.

ಖದೀಜಾ(ರ), ಮುಹಮ್ಮದ್(ಸ) ಅವರ ಜೀವನ ಸಂಗಾತಿಯಾಗಿದ್ದು ಅವರ ಅಂತರಂಗ ಬಹಿರಂಗಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು. ಪತಿಯ ಜೀವನದ ಯಾವ ಭಾಗವೂ ಅವರಿಂದ ಮರೆಯಾಗಿರಲಿಲ್ಲ. 15 ವರ್ಷಗಳ ದಾಂಪತ್ಯ ಜೀವನದಲ್ಲಿ ಅವರನ್ನು ಅಡಿಯಿಂದ ಮುಡಿತನಕ ಅರಿತಿದ್ದರು. ಅವರ ಬಯಕೆ-ಬೇಡಿಕೆಗಳನ್ನೂ ಆಶೆ-ಆಕಾಂಕ್ಷೆ ಗಳನ್ನೂ, ದಿನದ ಬೆಳಕಿನಲ್ಲೂ ರಾತ್ರಿಯ ಅಂಧಕಾರದಲ್ಲೂ ಅವರು ಮುಗ್ಧರೂ ಪ್ರಾಮಾಣಿಕರೂ ಪ್ರೀತಿಸುವವರೂ ಆಗಿದ್ದರು.

ತಮ್ಮ ಪ್ರಿಯತಮನ ಈ ಮಾತುಗಳನ್ನು ಕೇಳಿ: "ಖಂಡಿತ ಇಲ್ಲ, ಅಲ್ಲಾಹನಾಣೆ! ಆತನು ನಿಮ್ಮನ್ನೆಂದೂ ದುಃಖಕ್ಕೀಡು ಮಾಡಲಾರ. ನೀವು ಬಂಧು-ಬಳಗದವರೊಂದಿಗೆ ಸದ್ವರ್ತನೆ ಮಾಡುವವರು. ದೀನ-ದಲಿತರ ಮತ್ತು ಬಡ ಬಗ್ಗರ ಭಾರ ಹೊರುವವರು. ದರಿದ್ರರಿಗೆ ನೆರವಾಗುವವರು. ಅತಿಥಿಗಳನ್ನು ಆದರಿಸು ವವರು. ಸಂಕಷ್ಟಗಳ ವೇಳೆಯೂ ಸತ್ಯ ಮತ್ತು ನ್ಯಾಯದ ಪಕ್ಷ ವಹಿಸುವವರು. ಸತ್ಯಸಂಧರು" ಎನ್ನುತ್ತಾರೆ.

ಮುಹಮ್ಮದ್‌ರನ್ನು(ಸ) ಕರೆದುಕೊಂಡು ಖದೀಜಾ ತಮ್ಮ ಸೋದರ ಸಂಬಂಧಿ ವರಕ ಬಿನ್ ನೌಫಲ್‌ರ ಬಳಿ ಹೋಗುತ್ತಾರೆ. ಈ ಘಟನೆಯ ವಾಸ್ತವಿಕತೆಯನ್ನು ಅವರಿಂದ ಕೇಳಿ ತಿಳಿಯಬೇಕೆಂಬುದೇ ಉದ್ದೇಶ. ವರಕ ಪ್ರವಾದಿ ಈಸಾರ(ಅ) ಅನು ಯಾಯಿಯಾಗಿದ್ದರು. ವಯೋವೃದ್ಧರೂ ಜ್ಞಾನರೂ ಬಲಹೀನರೂ ಕುರುಡರೂ ಆಗಿದ್ದರು.

ಖದೀಜಾ(ರ) ವರಕ ಬಿನ್ ನೌಫಲ್‌ರನ್ನುದ್ದೇಶಿಸಿ ಈ ರೀತಿ ಹೇಳುತ್ತಾರೆ:

"ಅಣ್ಣಾ! ಸ್ವಲ್ಪ ನಿಮ್ಮ ಸೋದರ ಪುತ್ರನ ಮಾತು ಕೇಳಿ."

ವರಕ ಬಿನ್ ನೌಫಲ್ ವಿಚಾರಿಸಿದಾಗ ಮುಹಮ್ಮದ್(ಸ) ಹಿರಾಗುಹೆಯಲ್ಲಿ ನಡೆದ ಘಟನೆಯನ್ನು ವಿವರಿಸುತ್ತಾರೆ. ಅವರ ಮಾತುಗಳನ್ನು ಗಮನವಿಟ್ಟು ಆಲಿಸಿದ ವರಕ ಸ್ವಲ್ಪ ಹೊತ್ತು ಯೋಚಿಸಿದ ಬಳಿಕ: "ಅದು ಮೂಸಾರ(ಅ) ಬಳಿಗೆ ಬಂದ ದೇವದೂತರೇ ಆಗಿದ್ದಾರೆ. ನಿಮ್ಮ ಪ್ರವಾದಿತ್ವದ ಕಾಲದಲ್ಲಿ ನಾನು ಶಕ್ತಿಶಾಲಿಯೂ ಯುವಕನೂ

ಆಗಿರುತ್ತಿದ್ದರೆ! ನಿಮ್ಮ ಜನಾಂಗವು ನಿಮ್ಮನ್ನು ದೇಶದಿಂದ ಹೊರ ಹಾಕುವಾಗ ನಾನು ಜೀವಿಸಿರುತ್ತಿದ್ದರೆ!" ಎನ್ನುತ್ತಾರೆ.

ಮುಹಮ್ಮದ್(ಸ) ಆಶ್ಚರ್ಯಚಕಿತರಾಗಿ "ನನ್ನನ್ನು ಇವರು ದೇಶದಿಂದ ಹೊರ ಹಾಕುವರೇ?" ಎಂದು ಕೇಳುತ್ತಾರೆ.

"ಹೌದು, ನೀವು ಯಾವುದನ್ನು ತಂದಿರುವಿರೋ ಅದನ್ನು ತಂದ ಯಾವ ವ್ಯಕ್ತಿಯನ್ನೂ ಜನರು ದ್ವೇಷಿಸದೆ ಬಿಟ್ಟಿಲ್ಲ. ನಾನು ಆ ವೇಳೆಗೆ ಬದುಕಿದ್ದರೆ ಖಂಡಿತ ನಿಮಗೆ ನೆರವಾಗುವೆನು" ಎನ್ನುತ್ತಾರೆ ವರಕ ಬಿನ್ ನೌಫಲ್.

## ಪ್ರಥಮ ದಿವ್ಯವಾಣಿ

ಮಕ್ಕಾ ಪಟ್ಟಣವು ಗಾಢಾಂಧಕಾರದಲ್ಲಿ ಮುಳುಗಿದೆ. ಅಲ್ಲೊಂದು ಇಲ್ಲೊಂದರಂತೆ ಕೆಲವು ಮಿನುಗು ದೀಪಗಳು ಗೋಚರಿಸುತ್ತಿವೆ. ಅರ್ಧರಾತ್ರಿಯಾಗಿದ್ದರೂ ಚಾವಡಿಗಳಲ್ಲಿ ನೃತ್ಯ ಸಂಗೀತದ ಕೂಟಗಳು ನಡೆಯುತ್ತಿವೆ. ಸುರಾಪಾನದ ಕೇಂದ್ರಗಳಲ್ಲಿಯೂ ಸಾಕಷ್ಟು ಜನರಿದ್ದಾರೆ. ಜೂಜು ಕಟ್ಟೆಗಳಲ್ಲಿ ಸ್ಪರ್ಧೆಗಳು ಬಿರುಸಿನಿಂದ ಸಾಗುತ್ತಿವೆ. ವೇಶ್ಯಾವಾಟಿಕೆ ಗಳಲ್ಲಿ ಶೈತಾನನ ನೃತ್ಯ ಈಗಲೂ ಜಾರಿಯಲ್ಲಿದೆ.

ಮಕ್ಕಾದಿಂದ ಮೂರು ಮೈಲಿ ದೂರದ ನೂರ್ ಪರ್ವತದ ಶಿಖರದ ಬಳಿಯಿರುವ ಹಿರಾಗುಹೆಯಲ್ಲಿ ಮುಹಮ್ಮದ್(ಸ) ಎಂದಿನಂತೆ ಸೃಷ್ಟಿಕರ್ತನ ಮುಂದೆ ಸಾಷ್ಟಾಂಗವೆರಗಿ ಪ್ರಾರ್ಥನಾ ನಿರತರಾಗಿದ್ದಾರೆ. ಇದೇ ಗುಹೆಯಲ್ಲಿ ಆರು ತಿಂಗಳ ಹಿಂದೆ ಅವರು ದೇವದೂತ ಜಿಬ್ರೀಲರನ್ನು ಕಂಡಿದ್ದರು. ಆಗ ಅವರು ಮುಹಮ್ಮದ್‌ರಿಗೆ(ಸ) ಪ್ರವಾದಿತ್ವದ ಸುವಾರ್ತೆಯನ್ನು ನೀಡಿ ಹೋಗಿದ್ದರು. ತರುವಾಯ 6 ತಿಂಗಳ ಕಾಲ ಅವರು ಪುನಃ ಬರಲೇ ಇಲ್ಲ. ಅವರ ನಿರೀಕ್ಷೆ ಯಲ್ಲಿ ಮುಹಮ್ಮದ್(ಸ) ಹಲವು ರಾತ್ರಿಗಳನ್ನು ಏಕಾಂತ ವಾಸದಲ್ಲಿ ಕಳೆದಿರುವರು.

ರಮಝಾನ್ ತಿಂಗಳ 18ನೆಯ (ಕ್ರಿ.ಶ. 610 ಆಗಸ್ಟ್ 17) ಶುಕ್ರವಾರ ರಾತ್ರಿ. ಮುಹಮ್ಮದ್(ಸ) ಹಿರಾಗುಹೆಯಲ್ಲಿ ಸಾಷ್ಟಾಂಗವೆರಗಿ ಮಾನವರ ಪಥ ಭ್ರಷ್ಟತೆಯ ಬಗ್ಗೆ ಸೃಷ್ಟಿಕರ್ತನಲ್ಲಿ ಮೊರೆಯಿಡುತ್ತಾರೆ. ಅಷ್ಟರಲ್ಲಿ ಏನೋ ಸಪ್ಪಳ ವಾಗುತ್ತದೆ. ಮುಹಮ್ಮದ್(ಸ) ತಲೆಯೆತ್ತಿ ನೋಡುತ್ತಾರೆ. ಜಿಬ್ರೀಲ್(ಅ) ನಿಂತಿದ್ದಾರೆ. 6 ತಿಂಗಳ ಹಿಂದೆ ಕಂಡ ಅದೇ ದೇವದೂತರು ಅವರನ್ನು ಕಾಣಲು ಮತ್ತು ಅವರ ಮುಖಾಂತರ ಸೃಷ್ಟಿಕರ್ತನ ಸಂದೇಶ ಆಲಿಸಲು ಮುಹಮ್ಮದ್(ಸ) ಕಾತರರಾಗಿದ್ದರು. ಅವರ ನಿರೀಕ್ಷೆ ಯಲ್ಲಿ 6 ತಿಂಗಳು ಕಳೆದಿದ್ದುವು. ಅಕಸ್ಮಾತ್ ಅವರನ್ನು ಕಂಡಾಗ ಮುಹಮ್ಮದ್(ಸ) ಅವರಿಗಾದ ಅನುಭವವು ಮನುಷ್ಯನ ಊಹೆಗೆ ನಿಲುಕುವಂತಹದ್ದಾಗಿರಲಿಲ್ಲ.

ಜಿಬ್ರೀಲ್: 'ಓದಿರಿ.'

ಮುಹಮ್ಮದ್(ಸ): 'ನಾನು ಓದು ಬಲ್ಲವನಲ್ಲ!'

ಜಿಬ್ರೀಲ್(ಅ) ಮುಹಮ್ಮದ್‌ರನ್ನು(ಸ) ಬಿಗಿದಪ್ಪುತ್ತಾರೆ. ಆ ಬಳಿಕ ಪುನಃ ಹೇಳುತ್ತಾರೆ.

'ಓದಿರಿ.'

ಮುಹಮ್ಮದ್(ಸ): 'ನಾನು ಓದು ಬಲ್ಲವನಲ್ಲ!'

ಈ ರೀತಿ ಮೂರು ಸಲ ಮುಹಮ್ಮದ್‌ರನ್ನು(ಸ) ಆಲಂಗಿಸಿ ಬಿಟ್ಟ ಬಳಿಕ:

"(ಸಂದೇಶವಾಹಕರೇ) ಓದಿರಿ, ನಿಮ್ಮನ್ನು ಸೃಷ್ಟಿಸಿದ ನಿಮ್ಮ ಪ್ರಭುವಿನ ನಾಮದೊಂದಿಗೆ. ಅವನು, ಹೆಪ್ಪುಗಟ್ಟಿದ ರಕ್ತದ ಒಂದು ಪಿಂಡದಿಂದ ಮಾನವನನ್ನು ಸೃಷ್ಟಿಸಿದನು. ಓದಿರಿ, ಮತ್ತು ನಿಮ್ಮ ಪ್ರಭು ಮಹಾ ಉದಾರಿ- ಅವನು ಲೇಖನಿಯ ಮೂಲಕ ವಿದ್ಯೆ ಕಲಿಸಿದನು- ಮಾನವನು ತಿಳಿದಿರದಂತಹ ಜ್ಞಾನವನ್ನು ಅವನಿಗೆ ದಯಪಾಲಿಸಿದನು." **(ಪವಿತ್ರ ಕುರ್‌ಆನ್, 96:1-5)**

ಇದುವೇ ಪ್ರಪ್ರಥಮವಾಗಿ ಅವತೀರ್ಣಗೊಂಡ ಪವಿತ್ರ ಕುರ್‌ಆನಿನ ಸೂಕ್ತಗಳು. 'ಅಲ್ ಅಲಕ್' ಎಂಬ ಅಧ್ಯಾಯದ ಮೊದಲ ಐದು ವಚನಗಳು. ಈ ಪವಿತ್ರ ವಚನಗಳ ಅವತೀರ್ಣದೊಂದಿಗೆ ಹಿರಾಗುಹೆಯ ಅದೃಷ್ಟ ಅರಳುತ್ತದೆ. ಅದು ದೈವಿಕ ಪ್ರಭೆಯಿಂದ ಪ್ರಕಾಶಮಾನಗೊಳ್ಳುತ್ತದೆ. ಜಿಬ್ರೀಲ್ ಒಂದು ಬಂಡೆಯ ಮೇಲೆ ತನ್ನ ರೆಕ್ಕೆಯನ್ನು ಬಡಿಯುತ್ತಾರೆ. ನೀರು ಚಿಮ್ಮಿ ಹರಿಯುತ್ತದೆ. ಜಿಬ್ರೀಲ್ ಅದರ ನೀರಿನಿಂದ ವುಝೂ (ಅಂಗಸ್ನಾನ) ಮಾಡುತ್ತಾರೆ. ಮುಹಮ್ಮದ್(ಸ)ರೂ ಹಾಗೆಯೇ ಮಾಡುತ್ತಾರೆ. ಅನಂತರ ಜಿಬ್ರೀಲರನ್ನು ಹಿಂಬಾಲಿಸಿ ಮುಹಮ್ಮದ್(ಸ) ನಮಾಝ್ ಮಾಡುತ್ತಾರೆ.

ಇದುವೇ ಪ್ರಪ್ರಥಮ ನಮಾಝ್. ಅಂದಿನಿಂದ ಪ್ರಭಾತ ಮತ್ತು ಅಪರಾಹ್ನದ (ಫಜ್ರ್ ಮತ್ತು ಅಸರ್) ಎರಡೆರಡು ರಕಅತ್‌ಗಳ ನಮಾಝ್‌ನ ಕ್ರಮ ಜಾರಿಗೆ ಬಂತು.

## ಸತ್ಯವಿಶ್ವಾಸಿಗಳ ವೃಂದ

ಜಿಬ್ರೀಲ್ ನಿರ್ಗಮಿಸಿದೊಡನೆ ಮುಹಮ್ಮದ್(ಸ) ಉದ್ವಿಗ್ನತೆಯೊಂದಿಗೆ ಮನೆಯ ಕಡೆಗೆ ಮರಳುತ್ತಾರೆ. ಮುಹಮ್ಮದ್‌ರನ್ನು(ಸ) ಕಂಡು ಕಳವಳಗೊಂಡು ಬರಮಾಡಿದ ಖದೀಜಾರಿಗೆ ಮುಹಮ್ಮದ್(ಸ) "ನನಗೆ ಹೊದಿಸಿರಿ, ನನಗೆ ಹೊದಿಸಿರಿ" ಎನ್ನುತ್ತಾರೆ. ಕಂಪಿಸುವ ಕೈಗಳಿಂದ ಮಂಚದ ಮೇಲೆ ಹಾಸಿಗೆ ಹಾಸಿದ ಖದೀಜಾ, ಪ್ರವಾದಿವರ್ಯರು(ಸ) ಒರಗಿದೊಡನೆಯೇ ಕಂಬಳಿಯೊಂದನ್ನು ಅವರಿಗೆ ಹೊದಿಸುತ್ತಾರೆ. ಅವರ ಯೋಚನಾ ಲಹರಿಯು ಅವರನ್ನು ಹಿರಾಗುಹೆಯ ಕಡೆಗೆ ಒಯ್ಯಿತು. 6 ತಿಂಗಳ ಹಿಂದೆ ಅಲ್ಲಿ ನಡೆದ ಘಟನೆ ಮತ್ತು ಮುಹಮ್ಮದ್(ಸ) ಇದೇ ರೀತಿ ಬಂದು "ನನಗೆ ಹೊದಿಸಿರಿ, ನನಗೆ ಹೊದಿಸಿರಿ" ಎಂದು ಹೇಳಿದ್ದು ನೆನಪಾಯಿತು.

'ಇಂದು ಮತ್ತೆ ಏನೋ ಅಸಾಮಾನ್ಯ ಘಟನೆ ನಡೆದಿರಬೇಕು' ಎನ್ನುತ್ತಾ ಪ್ರಾರ್ಥನಾ ಭಾವದೊಂದಿಗೆ ಆಕಾಶದ ಕಡೆಗೆ ನೋಡಿದರು. ಅಷ್ಟರಲ್ಲಿ ಪ್ರವಾದಿ(ಸ) ಎಚ್ಚರಗೊಂಡು ತಮ್ಮ ಮುಖದಿಂದ ಕಂಬಳಿಯನ್ನು ಸರಿಸಿ ಹಿರಾಗುಹೆಯಲ್ಲಿ ನಡೆದ

ಘಟನೆಯನ್ನು ವಿವರಿಸಿದರು. "ಅಲ್ಲಾಹನು ನಿಮ್ಮನ್ನು ದುಃಖಕ್ಕೀಡು ಮಾಡಲಾರನು" ಎನ್ನುತ್ತಾ "ನೀವು ಖಂಡಿತವಾಗಿಯೂ ಅಲ್ಲಾಹನ ಪ್ರವಾದಿಯಾಗಿರುವಿರಿ" ಎಂದು ಹೇಳುವ ಮೂಲಕ ಪ್ರಪ್ರಥಮ ಸತ್ಯವಿಶ್ವಾಸಿ ಎನಿಸಿಕೊಳ್ಳುತ್ತಾರೆ.

ತಮ್ಮ ಮೇಲೆ ಅವತೀರ್ಣಗೊಂಡ ಪ್ರಥಮ ದಿವ್ಯವಾಣಿಯನ್ನು ತಿಳಿಸುವ ಮೂಲಕ ಪ್ರವಾದಿ ಮುಹಮ್ಮದ್(ಸ) ತಮ್ಮ ಪ್ರವಾದಿತ್ವದ ಕರ್ತವ್ಯ ನಿರ್ವಹಣೆಯ ಕಾರ್ಯವನ್ನು ಆರಂಭಿಸಿದಂತಾಯಿತು. ಅವರ ಮೇಲೆ ವಿಶ್ವಾಸ ಘೋಷಿಸುವ ಸೌಭಾಗ್ಯವು ಪ್ರಥಮವಾಗಿ ಓರ್ವ ಮಹಿಳೆಯ ಪಾಲಿಗೆ ಬಂತು. ಅವರು ತಮ್ಮ 15 ವರ್ಷಗಳ ಸಹವಾಸದ ಅನುಭವದಿಂದ ಮುಹಮ್ಮದ್‌ರನ್ನು(ಸ) ಜಗತ್ತಿನ ಅತ್ಯಂತ ಸತ್ಯಸಂಧ ಮತ್ತು ಪಾವನ ಮನುಷ್ಯನೆಂಬುದನ್ನು ಕಂಡುಕೊಂಡಿದ್ದರು.

ಅಬೂತಾಲಿಬರ ಪುತ್ರ ಅಲೀ ಪ್ರಾಯದಲ್ಲಿ ಕಿರಿಯವರಾಗಿದ್ದರೂ ಮುಹಮ್ಮದ್(ಸ) ಅವರ ಸಹವಾಸದಲ್ಲಿ ಸತ್ಯ ಮತ್ತು ಪ್ರಾಮಾಣಿಕತೆಯ ಉತ್ತಮ ತರಬೇತಿ ಹೊಂದಿದ್ದರು. ಅವರ ಮುಂದೆ ಮುಹಮ್ಮದ್(ಸ) ತಮ್ಮ ಸಂದೇಶವನ್ನಿಟ್ಟಾಗ ಅವರೂ ಸತ್ಯಧರ್ಮದ ದೀಕ್ಷೆ ತೊಡುತ್ತಾರೆ. ಅದೇ ಮನೆಯಲ್ಲಿ ಬೆಳೆದು ದೊಡ್ಡವರಾಗಿರುವ ಝೈದ್ ಬಿನ್ ಹಾರಿಸ್ ಆ ಮನೆಯನ್ನು ತಮ್ಮ ತಂದೆ ತಾಯಿಗಳ ಮನೆಗಿಂತ ಹೆಚ್ಚು ನೆಚ್ಚಿಕೊಂಡವರು. ಪ್ರವಾದಿ ಮುಹಮ್ಮದ್‌ರ(ಸ) ಗುಣ-ಸ್ವಭಾವಗಳಿಂದ ಅತ್ಯಧಿಕ ಪ್ರಭಾವಿತರಾಗಿದ್ದವರು. ಅವರು ಕೂಡಾ ಪ್ರವಾದಿವರ್ಯರ ಸಂದೇಶ ಕೇಳಿದೊಡನೆ ಅದನ್ನು ಸ್ವೀಕರಿಸುತ್ತಾರೆ. ಮುಹಮ್ಮದ್‌ರ(ಸ) ಆಪ್ತ ಮಿತ್ರರಾದ ಅಬೂಕಹಾಫರ ಪುತ್ರ ಅಬೂಬಕರ್ ಬಟ್ಟೆ ವ್ಯಾಪಾರಿ. ಕುಶಾಗ್ರಮತಿಯೂ ಸಚ್ಚಾರಿತ್ರ್ಯವಂತರೂ ಆದ ಅವರು ಕೂಡಾ ಮುಹಮ್ಮದ್‌ರ(ಸ) ಸಂದೇಶ ಕೇಳಿದೊಡನೆ ಹಿಂದೆ ಮುಂದೆ ನೋಡದೆ ಅದನ್ನು ಅಂಗೀಕರಿಸುತ್ತಾರೆ. ಆಗ ಅವರಿಗೆ 38 ವರ್ಷ ಪ್ರಾಯವಾಗಿತ್ತು. ಇಂದಿನ ತನಕ ಅವರು ತಮ್ಮ ಮಿತ್ರರಾದ ಮುಹಮ್ಮದ್‌ರಿಂದ(ಸ) ಒಂದೇ ಒಂದು ಸುಳ್ಳನ್ನು ಆಲಿಸಿರಲಿಲ್ಲ. ಅವರ ಜೀವನವು ತೆರೆದ ಪುಸ್ತಕದಂತೆ ಅಬೂಬಕರ್‌ರ ಮುಂದಿತ್ತು.

ಪ್ರವಾದಿ ಮುಹಮ್ಮದ್‌ರ(ಸ) ಅತ್ಯಂತ ನಿಕಟವರ್ತಿಗಳಾದ ಈ ಮಹಾನು ಭಾವರುಗಳ ಇಸ್ಲಾಮ್ ಸ್ವೀಕಾರವು ಪ್ರವಾದಿತ್ವದ ಬಗ್ಗೆ ಮುಹಮ್ಮದ್‌ರ(ಸ) ಘೋಷಣೆಯ ಸತ್ಯತೆಯ ಅತ್ಯಂತ ಪ್ರಬಲ ಪುರಾವೆಗಳಲ್ಲೊಂದಾಗಿದೆ. ದಿವ್ಯವಾಣಿಯ ಪ್ರಥಮ ಅವತರಣದ ದಿನವೇ ಈ ನಾಲ್ಕು ಮಂದಿ ಪವಿತ್ರಾತ್ಮರು ಬಿಚ್ಚು ಮನಸ್ಸಿನೊಂದಿಗೆ ಅದನ್ನು ಸ್ವೀಕರಿಸಿದರು. ತನ್ಮೂಲಕ ಮಾನವ ಇತಿಹಾಸದಲ್ಲಿ ಅಚ್ಚಳಿಯದ ಸೌಭಾಗ್ಯಶೀಲತೆಯು ಅವರ ಪಾಲಿಗೆ ಬಂತು. ಮುಹಮ್ಮದ್(ಸ) ಹೇಳುವುದು ಸದಾ ಸತ್ಯವೇ ಆಗಿರುತ್ತದೆಂಬುದು ಅವರ ಇಸ್ಲಾಮ್ ಸ್ವೀಕಾರದಿಂದ ಸಾಬೀತಾಯಿತು.

## ಹೊದ್ದು ಮಲಗುವವರೇ!

ಮಕ್ಕಾದಿಂದ ಮೂರು ಮೈಲಿ ದೂರದ ಒಂದು ಕಣಿವೆಯಲ್ಲಿ ಮುಹಮ್ಮದ್(ಸ) ಸಂತುಲಿತ ಹೆಜ್ಜೆಗಳೊಂದಿಗೆ ನಡೆಯುತ್ತಿದ್ದಾರೆ. ಭಾರವಾದ ಅವರ ಹೆಜ್ಜೆಗಳು ಅವರ ಹೃದಯದ ತುಮುಲವನ್ನು ಸೂಚಿಸುತ್ತವೆ. ಯಾವುದೋ ಗಾಢವಾದ ಚಿಂತೆಯಲ್ಲಿರುವಂತೆ ಮುಖಭಾವವು ಗಂಭೀರವಾಗಿದೆ. ಪ್ರಥಮ ದಿವ್ಯವಾಣಿಯ ಅವತರಣದ ಬಳಿಕ ದಿವ್ಯ ದರ್ಶನಕ್ಕಾಗಿ ಕಾತರಗೊಂಡು ಮನೆಯಿಂದ ಹೊರಟು ಬಂದಿದ್ದಾರೆ. ಹಿರಾ ಗುಹೆಗೆ ಹೋಗಿ ನಿರೀಕ್ಷೆ ಮತ್ತು ಆಶೆಯ ದೀಪ ಹಚ್ಚಿ ಕುಳಿತುಕೊಳ್ಳುವುದೇ ಅವರ ಉದ್ದೇಶ. ಅವರ ಹಣೆಯ ಮೇಲೆ ಬೆವರಿನ ಹನಿಗಳು ಗೋಚರಿಸುತ್ತವೆ. ಉಸಿರಾಟವು ತುಸು ಜೋರಾಗಿದೆ. ಆದರೆ ನಡಿಗೆ ವ್ಯತ್ಯಾಸ ಗೊಂಡಿಲ್ಲ.

ಮುಹಮ್ಮದ್(ಸ) ಅವರ ಹೆಚ್ಚಿನ ಸಮಯ ಈಗ ರಹಸ್ಯ ಧರ್ಮಪ್ರಚಾರ ಕಾರ್ಯಗಳಲ್ಲಿ ವಿನಿಯೋಗವಾಗುತ್ತಿದೆ. ಉಳಿದ ಸಮಯವನ್ನು ದೇವಸ್ಮರಣೆ ಮತ್ತು ದೇವ ಚಿಂತನೆಯಲ್ಲಿ ಕಳೆಯುತ್ತಿದ್ದರು. ಮನೆಯವರೊಂದಿಗೆ ಹೆಚ್ಚಿನ ವೇಳೆಯನ್ನು ಕಳೆಯುತ್ತಿರಲಿಲ್ಲ. ವ್ಯಾಪಾರದಲ್ಲಿಯೂ ಈಗ ತೀರಾ ಅಭಿರುಚಿ ಇಲ್ಲದಾಗಿದೆ. ಸೃಷ್ಟಿಕರ್ತನ ದೂತನಿಗಾಗಿ ಸದಾ ಕಾಯುತ್ತಿರುತ್ತಾರೆ. ಅನೇಕ ದಿನಗಳು ಕಳೆದಿವೆ. ದೇವದೂತರ ದರ್ಶನ ಭಾಗ್ಯ ಮತ್ತೆ ಪ್ರಾಪ್ತವಾಗಿಲ್ಲ. ದಿವ್ಯವಾಣಿಯ ಅವತರಣ ಸ್ಥಗಿತಗೊಂಡಿದೆ.

ದಿವ್ಯವಾಣಿಯ ಅವತರಣವು ಸ್ಥಗಿತಗೊಂಡಿರುವುದರಿಂದ ಮುಹಮ್ಮದ್(ಸ) ಬಹಳ ನೊಂದುಕೊಂಡಿದ್ದಾರೆ. ಈ ಆಘಾತವು ಅಸಹ್ಯವಾಗ ತೊಡಗಿದಾಗ ಪರ್ವತದ ಶಿಖರಕ್ಕೇರುತ್ತಾರೆ. ಆದರೆ ಪರ್ವತದ ಶಿಖರವನ್ನು ತಲುಪಿದಾಗ ಜಿಬ್ರೀಲ್ ಪ್ರತ್ಯಕ್ಷವಾಗುತ್ತಾರೆ. ಅವರ ದರ್ಶನವಾಗುತ್ತಲೇ ಪ್ರವಾದಿ(ಸ) ನಿಂತು ಬಿಡುತ್ತಾರೆ. ಮೈಯೆಲ್ಲ ಕಣ್ಣಾಗಿಸಿ ಅವರತ್ತ ನೋಡುತ್ತಾರೆ. ಅವರಲ್ಲಿ ಏನೋ ಕೇಳಬೇಕು ಎನ್ನುವುದಕ್ಕೆ ಮುಂಚೆಯೇ ಅವರು "ಮುಹಮ್ಮದರೇ! ನೀವು ಅಲ್ಲಾಹನ ಪ್ರವಾದಿ ಯಾಗಿರುವಿರಿ" ಎನ್ನುತ್ತಾರೆ.

ಈ ಗಂಭೀರ ಶಬ್ದಗಳು ಕಿವಿಗಳ ಮೂಲಕ ಮನದಾಳಕ್ಕೆ ಇಳಿಯುತ್ತವೆ. ಹೃದಯದ ತುಮುಲವು ಒಮ್ಮೆಗೇ ನಿಂತು ಶಾಂತಚಿತ್ತರಾಗುತ್ತಾರೆ. ಸೃಷ್ಟಿಕರ್ತನು ತನ್ನನ್ನು ಸ್ಮರಿಸಿರುವುದು ಅವರ ಪಾಲಿಗೆ ಅತ್ಯಧಿಕ ಸಂತೋಷ ಮತ್ತು ಶಾಂತಿಯ ಹೇತುವಾಗಿತ್ತು. ಇದುವೇ ಅವರ ಮಟ್ಟಿಗೆ ಅತಿ ದೊಡ್ಡ ಸೌಭಾಗ್ಯವಾಗಿತ್ತು. ಅಷ್ಟು ಮಾತ್ರ ಹೇಳಿ ಜಿಬ್ರೀಲ್ ಮರೆಯಾಗುತ್ತಾರೆ.

ಆ ದಿನಗಳ ಕುರಿತು ಸ್ವಯಂ ಪ್ರವಾದಿವರ್ಯರು ಹೀಗೆ ವಿವರಿಸಿದ್ದಾರೆ:

"ಒಂದು ದಿನ ನಾನು ಮಾರ್ಗದಲ್ಲಿ ನಡೆಯುತ್ತಿದ್ದೆ. ಇದ್ದಕ್ಕಿದ್ದಂತೆಯೇ ಆಕಾಶ ದಿಂದ ಒಂದು ಧ್ವನಿ ಕೇಳಿಸಿತು. ತಲೆ ಎತ್ತಿ ನೋಡಿದಾಗ ಹಿರಾಗುಹೆಯಲ್ಲಿ ನನ್ನ ಬಳಿಗೆ ಬಂದ ಅದೇ ದೇವದೂತ ಜಿಬ್ರೀಲ್ ಆಕಾಶ ಮತ್ತು ಭೂಮಿಯ ಮಧ್ಯೆ

ಒಂದು ಆಸನದಲ್ಲಿ ಕುಳಿತಿದ್ದಾರೆ. ಇದನ್ನು ಕಂಡು ನಾನು ಭಯಭೀತನಾದೆ. ಮನೆಗೆ ಹೋಗಿ ನಾನು "ನನಗೆ ಹೊದಿಸಿರಿ, ನನಗೆ ಹೊದಿಸಿರಿ" ಎಂದೆ. ಮನೆಯಾಕೆ ನನಗೆ ಕಂಬಳಿಯನ್ನು ಹೊದಿಸಿದರು. ಆ ಕೂಡಲೇ ಅಲ್ಲಾಹನ ವಾಣಿ ಅವತೀರ್ಣಗೊಂಡಿತು.

"ಹೊದ್ದು ಮಲಗುವವರೇ! ಎದ್ದೇಳಿರಿ ಮತ್ತು ಎಚ್ಚರಿಸಿರಿ. ನಿಮ್ಮ ಪ್ರಭುವಿನ ಹಿರಿಮೆಯನ್ನು ಘೋಷಿಸಿರಿ ಮತ್ತು ನಿಮ್ಮ ವಸ್ತ್ರಗಳನ್ನು ಶುಚಿಯಾಗಿರಿಸಿರಿ. ಮಾಲಿನ್ಯ ದಿಂದ ದೂರವಿರಿ. ಹೆಚ್ಚು ಪಡೆಯಲಿಕ್ಕಾಗಿ ಉಪಕಾರ ಮಾಡಬೇಡಿರಿ ಮತ್ತು ನಿಮ್ಮ ಪ್ರಭುವಿಗಾಗಿ ತಾಳ್ಮೆವಹಿಸಿರಿ." (ಪವಿತ್ರ ಕುರ್‌ಆನ್: 74: 1-7)

ತರುವಾಯ ನಿರಂತರವಾಗಿ ನನ್ನ ಮೇಲೆ ದಿವ್ಯವಾಣಿ ಅವತೀರ್ಣಗೊಳ್ಳ ಲಾರಂಭಿಸಿತು.

'ಅಲ್ ಅಲಕ್' ಅಧ್ಯಾಯದ ಪ್ರಥಮ ಐದು ಸೂಕ್ತಗಳು ಪ್ರವಾದಿ ವರ್ಯರಿಗೆ(ಸ) ದಿವ್ಯ ಕುರ್‌ಆನಿನ ಅವತೀರ್ಣದ ಪ್ರಥಮ ಅನುಭವವಾಗಿತ್ತು. ಆ ಸೂಕ್ತಗಳಲ್ಲಿ ಅವರನ್ನು ಯಾವ ಕಾರ್ಯಕ್ಕಾಗಿ ನಿಯೋಗಿಸಲಾಗಿತ್ತು ಎಂಬು ದನ್ನು ಅವರಿಗೆ ತಿಳಿಸ ಲಾಗಿರಲಿಲ್ಲ. ಮುಂದೆ ಏನು ಮಾಡಬೇಕೆಂಬ ಸೂಚನೆಯೂ ಅದರಲ್ಲಿರಲಿಲ್ಲ. ದಿವ್ಯವಾಣಿಯ ಒಂದು ಪ್ರಾಥಮಿಕ ಪರಿಚಯ ಮಾಡಿಸಿ ಅವರನ್ನು ಕೆಲವು ಕಾಲ ಹಾಗೆಯೇ ಬಿಟ್ಟು ಬಿಡಲಾಗಿತ್ತು. ಈ ಪ್ರಥಮ ಅನುಭವದಿಂದ ಅವರ ಆತ್ಮ ಮತ್ತು ಶರೀರದ ಮೇಲೆ ಬಿದ್ದಂತಹ ತೀವ್ರ ಸ್ವರೂಪದ ಭಾರದ ಪ್ರಭಾವವು ಕಡಿಮೆಯಾಗಿ ಅವರು ಮಾನಸಿಕವಾಗಿ ಮುಂದೆ ದಿವ್ಯವಾಣಿಯನ್ನು ಸ್ವೀಕರಿಸಿಕೊಳ್ಳಲು ಶಕ್ತರಾಗ ಬೇಕೆಂಬುದೇ ಅದರ ಉದ್ದೇಶವಾಗಿತ್ತು. ತನ್ಮೂಲಕ ಪ್ರವಾದಿತ್ವದ ಕರ್ತವ್ಯ ನಿರ್ವಹಣೆಗೆ ಅವರು ಸಿದ್ಧರಾದರು. ಅನಂತರ ಅವತೀರ್ಣ ಗೊಂಡದ್ದು 'ಅಲ್ ಮುದ್ದಸ್ಸಿರ್' ಎಂಬ ಅಧ್ಯಾಯದ ಪ್ರಥಮ 7 ಸೂಕ್ತಗಳು. ಪೂರ್ವೋಕ್ತ ಪ್ರವಾದಿ ಮಾತಿನಲ್ಲಿ ಆ ಸೂಕ್ತಗಳನ್ನೇ ಉದ್ಧರಿಸಲಾಗಿದೆ. ಈ ಸೂಕ್ತ ಗಳಲ್ಲಿ ಪ್ರಥಮ ಬಾರಿಗೆ ಜನರು ನಡೆಯುತ್ತಿರುವ ಮಾರ್ಗದ ದುಷ್ಪರಿಣಾಮಗಳ ಬಗ್ಗೆ ಅವರನ್ನು ಎಚ್ಚರಿಸಬೇಕೆಂದು ಅವರಿಗೆ ಆದೇಶಿಸಲಾಗಿದೆ. ಇತರರ ಹಿರಿಮೆಯ ಡಂಗುರವೇ ಘೋಷಿಸುತ್ತಿರುವ ಈ ಲೋಕದಲ್ಲಿ ಸೃಷ್ಟಿಕರ್ತನಾದ ಅಲ್ಲಾಹನ ಹಿರಿಮೆಯನ್ನು ಸಾರಿ ಹೇಳಬೇಕೆಂದು ಆಜ್ಞಾಪಿಸಲಾಗಿದೆ. ಈಗ ಅವರ ಮುಂದೆ ಇರುವ ಹೊಣೆಗಾರಿಕೆಗಳ ಪ್ರಯುಕ್ತ ಅವರ ಜೀವನವು ಎಲ್ಲ ರೀತಿಯಿಂದಲೂ ಪರಿಶುದ್ಧವಾಗಿರಬೇಕೆಂದು ಸೂಚಿಸಲಾಯಿತು. ಎಲ್ಲ ರೀತಿಯ ಲೌಕಿಕ ಲಾಭದ ಬಯಕೆಗಳಿಂದ ಮುಕ್ತರಾಗಿ ಪೂರ್ಣ ನಿಷ್ಠೆಯೊಂದಿಗೆ ಜನರ ಸುಧಾರಣೆಯ ಕರ್ತವ್ಯವನ್ನು ನಿರ್ವಹಿಸಬೇಕೆಂದು ಆಜ್ಞಾಪಿಸಲಾಯಿತು. ಕೊನೆಯ ಭಾಗದಲ್ಲಿ ಈ ಕರ್ತವ್ಯ ನಿರ್ವಹಣೆಯ ಮಾರ್ಗದಲ್ಲಿ ಎದುರಾಗ ಬಹುದಾದ ಎಲ್ಲ ರೀತಿಯ ಸಂಕಷ್ಟಗಳನ್ನು ತಮ್ಮ ಪ್ರಭುವಿಗಾಗಿ ಸಹಿಸುತ್ತಿರಬೇಕೆಂದು ಆದೇಶಿಸಲಾಯಿತು.

ಈ ಆಜ್ಞೆಯ ಮೇರೆಗೆ ಪ್ರವಾದಿ(ಸ) ಇಸ್ಲಾಮ್‌ನ ಪ್ರಚಾರ ಆರಂಭಿಸಿದರು. ನಿರಂತರ ಅವತೀರ್ಣಗೊಳ್ಳುತ್ತಿದ್ದ ಪವಿತ್ರ ಕುರ್‌ಆನಿನ ಸೂಕ್ತಗಳನ್ನೂ ಅಧ್ಯಾಯಗಳನ್ನೂ ಜನರ

ಮುಂದೆ ಓದಿ ಕೇಳಿಸಲಾರಂಭಿಸಿದರು. ಆಗ ಮಕ್ಕಾ ನಗರದಲ್ಲಿ ಕೋಲಾಹಲ ವೆದ್ದಿತ್ತು. ವಿರೋಧದ ಬಿರುಗಾಳಿಯೇ ಎದ್ದಿತು.

ಯಾವ ವಾತಾವರಣದಲ್ಲಿ ಮುಹಮ್ಮದ್‌ರಿಗೆ(ಸ) ಈ ಕಾರ್ಯವೆಸಗುವ ಆಜ್ಞೆ ನೀಡಲಾಗಿತ್ತೋ ಅದರ ಒಂದು ಚಿತ್ರವನ್ನು ಇಲ್ಲಿ ಕೊಡಲಾಗಿದೆ:

ಪ್ರವಾದಿ ಮುಹಮ್ಮದ್(ಸ) ಅವರ ಪ್ರಪ್ರಥಮ ರಂಗವೆನಿಸಿದ ಅರೇಬಿಯಾದ ಅತ್ಯಂತ ಹತ್ತಿರದ ವಾತಾವರಣವನ್ನು ನೆನಸಿದಾಗಲೂ ಹೃದಯ ಝಲ್ಲೆನ್ನುತ್ತದೆ. ಅಲ್ಲಿ ಹಿಂದೆ ಆದ್ ಮತ್ತು ಸಮೂದ್‌ರ ಕಾಲದಲ್ಲಿ ಸಬಾ, ಏಡನ್ ಮತ್ತು ಯಮನ್‌ನ ಸಾಮ್ರಾಜ್ಯಗಳ ನೆರಳಲ್ಲಿ ಸಂಸ್ಕೃತಿ ಮತ್ತು ನಾಗರಿಕತೆಯ ಬೆಳಕು ಹರಿ ದಿತ್ತಾದರೂ ಈಗ ಅದು ನಂದಿ ಹೋಗಿ ಶತಮಾನಗಳೇ ಕಳೆದಿದ್ದುವು. ಅರೇಬಿಯಾದ ಇತರ ಭಾಗಗಳಲ್ಲಿ ಕರಾಳ ಯುಗದ ಅಂಧಕಾರ ವ್ಯಾಪಿಸಿತ್ತು. ಅಲ್ಲಿ ನಾಗರಿಕತೆಯ ಬೆಳಕು ಹರಿದೇ ಇರಲಿಲ್ಲ. ಮಾನವೀಯತೆಯು ನಿದ್ದೆಯಿಂದ ಎಚ್ಚರಗೊಂಡೇ ಇರ ಲಿಲ್ಲ. ಎಲ್ಲ ಕಡೆಯೂ ಅರಾಜಕತೆ ವ್ಯಾಪಿಸಿತ್ತು. ಮನುಷ್ಯ ಮನುಷ್ಯರ ಮಧ್ಯೆ ಒಡಕು ಉಂಟಾಗಿತ್ತು. ಜಗಳ, ಯುದ್ಧ, ಕೊಳ್ಳೆ, ದರೋಡೆಗಳು ವ್ಯಾಪಕವಾಗಿದ್ದುವು. ವ್ಯಭಿಚಾರ, ಶರಾಬು ಮತ್ತು ಜೂಜಿನಿಂದ ಮೈವೆತ್ತ ಅಜ್ಞಾನ ಕಾಲದ ಸಂಸ್ಕೃತಿಯು ಉತ್ತುಂಗತೆಯಲ್ಲಿತ್ತು. ಕುರೈಶರು ಕೂಡಾ ಬಹುದೇವ ವಿಶ್ವಾಸ ಮತ್ತು ಮೂರ್ತಿಪೂಜೆ ಯನ್ನು ಧರ್ಮವಾಗಿಸಿಕೊಂಡಿದ್ದರು. ಈ ಧಾರ್ಮಿಕತೆಯ ಜೊತೆಗೇ ಕಲಬಾದ ಧರ್ಮದರ್ಶಿತ್ವ ಮತ್ತು ಪೌರೋಹಿತ್ಯವನ್ನು ನಿರ್ವಹಿಸುತ್ತಿದ್ದರು. ಯಹೂದಿಗಳು ವೇದಾಂತ ಮತ್ತು ಕರ್ಮಶಾಸ್ತ್ರದ ಕೂದಲು ಸೀಳುವಿಕೆಯನ್ನು ತಮ್ಮ ವ್ಯಾಪಾರವಾಗಿ ಮಾಡಿಕೊಂಡಿದ್ದರು. ಮಕ್ಕಾ ಮತ್ತು ತಾಯಿಫ್‌ನ ಸಾಹುಕಾರರು ಬಡ್ಡಿ ವ್ಯವಹಾರದ ಒಂದು ವ್ಯವಸ್ಥಿತ ಜಾಲವನ್ನೇ ಹರಡಿದ್ದರು. ಜನರನ್ನು ಹಿಡಿದು ಗುಲಾಮರಾಗಿ ಮಾಡುವ ಮತ್ತು ಅವರ ವ್ಯಾಪಾರ ನಡೆಸುವ ಪದ್ಧತಿಯು ಬಹಿರಂಗವಾಗಿ ಜಾರಿಯಲ್ಲಿತ್ತು.

ಒಟ್ಟಿನಲ್ಲಿ ಮನುಷ್ಯನು ಸ್ವೇಚ್ಛೆಯ ಆರಾಧನೆಯ ಅತ್ಯಂತ ನಿಕೃಷ್ಟ ಮಟ್ಟವನ್ನು ತಲುಪಿ ಕ್ರೂರ ಪ್ರಾಣಿ ಮತ್ತು ಜಾನುವಾರುಗಳಂತೆ ಜೀವಿಸುತ್ತಿದ್ದನು. ಶಕ್ತಿವಂತನು ಬಲಹೀನನನ್ನು ಕುರಿಮಂದೆಯಂತೆ ನಿಯಂತ್ರಣದಲ್ಲಿಟ್ಟು ಕೊಂಡಿದ್ದನು. ದುರ್ಬಲರು ಬಲಾಢ್ಯರ ಮುಂದೆ ಬಾಗುತ್ತಿದ್ದರು.

## ಅಲ್ಲಾಹನು ಕೈ ಬಿಟ್ಟಿಲ್ಲ

ದಿವ್ಯವಾಣಿಯ ಅವತರಣವು ಮತ್ತೊಮ್ಮೆ ಸ್ಥಗಿತಗೊಂಡಿತು. ಮುಹಮ್ಮದ್(ಸ) ಮತ್ತೊಮ್ಮೆ ಕಳವಳಗೊಂಡರು. ಸುಮಾರು ನಲ್ವತ್ತು ದಿನಗಳು ಕಳೆದುವು. ಇಸ್ಲಾಮ್ ಮತ್ತು ಸತ್ಯನಿಷೇಧದ ಮಧ್ಯೆ ಹೋರಾಟ ಆರಂಭವಾಗಿತ್ತು. ಇಸ್ಲಾಮಿನ ಶಕ್ತಿಯ ನೈಜ ಚಿಲುಮೆಯೇ ಬತ್ತಿ ಹೋಗಿತ್ತು. ಅದುವೇ ಈ ಹೋರಾಟದಲ್ಲಿ ಮುಹಮ್ಮದ್‌ರ(ಸ) ಏಕೈಕ ಆಸರೆಯಾಗಿತ್ತು. ಮಾರ್ಗದರ್ಶನದ ಆ ಕೇಂದ್ರದಿಂದ ಬರುತ್ತಿದ್ದ ಕಿರಣಗಳನ್ನು ನೋಡಲು ಕಣ್ಣುಗಳು ಹಾತೊರೆಯುತ್ತಿದ್ದುವು. ದಾರಿ ನೋಡುತ್ತಾ ಕಣ್ಣುಗಳು ಸೋತು ಹೋಗಿದ್ದುವು.

ಹೃದಯ ಛಿದ್ರಛಿದ್ರವಾಗಿತ್ತು. ವೈರಿಗಳ ನಾಲಿಗೆಯು ಕತ್ತರಿಯಂತೆ ಚಲಿಸುತ್ತಿದ್ದುವು. ಅಣಕ, ವ್ಯಂಗ್ಯದ ಮಾತಿನ ಬಾಣಗಳೇ ಹರಿದು ಬರುತ್ತಿದ್ದುವು. ಮುಹಮ್ಮದ್(ಸ) ಮನೆಯಿಂದ ಹೊರ ಬರುವುದೇ ತಡ ಬಹುದೇವಾರಾಧಕರು ಅಣಕಿಸ ತೊಡಗುತ್ತಿದ್ದರು.

"ಮುಹಮ್ಮದರ ಪ್ರಭು ಅವರಿಂದ ಕ್ರುದ್ಧನಾಗಿದ್ದಾನೆ. ಅವರನ್ನು ಈಗ ಪೂರ್ಣವಾಗಿ ಬಿಟ್ಟು ಬಿಟ್ಟಿದ್ದಾನೆ."

ಮನೆಯಲ್ಲಿದ್ದರೆ ನೆರೆಮನೆಯ ಗೋಡೆಯಿಂದ ಚಿಕ್ಕಮ್ಮ ಅಬೂಲಹಬನ ಪತ್ನಿ ಉಮ್ಮುಜಮೀಲ್ ಕೊರಳು ಚಾಚಿ ವ್ಯಂಗ್ಯಮಾಡುತ್ತಿದ್ದರು:

"ಮುಹಮ್ಮದ್! ಈಗ ನಿನ್ನ ಶೈತಾನ್ ನಿನ್ನನ್ನು ಬಿಟ್ಟಿರುವಂತೆ ಕಾಣುತ್ತದಲ್ಲಾ! ಹಲವು ದಿನಗಳಿಂದ ಯಾವುದೇ ಹೊಸ ವಿಷಯವನ್ನು ನೀನು ಹೇಳಿಲ್ಲ. ನಿನಗೆ ಯಾವುದೋ ಭೂತ ಹಿಡಿದಿದೆ ಎಂದು ನಾನು ಹೇಳಿರಲಿಲ್ಲವೇ? ಅದನ್ನು ನೀನು ಈ ತನಕ ದಿವ್ಯವಾಣಿಯೆಂದು ಭ್ರಮಿಸಿದ್ದೆ"

ಮನನೋಯಿಸುವ ಇಂತಹ ಮಾತುಗಳನ್ನು ಕೇಳಿ ಕೇಳಿ ಸಾಕಾಯಿತು. ಈಗೀಗ ಅವು ಅಸಹನೀಯವೆನಿಸತೊಡಗಿವೆ. ಆದರೆ ಅದನ್ನು ನಿಲ್ಲಿಸುವುದು ಹೇಗೆ? ನನ್ನಿಂದ ನನ್ನ ಪ್ರಭು ಕುಪಿತನಾಗುವಂತಹ ಯಾವುದಾದರೂ ತಪ್ಪು ಸಂಭವಿಸಿತೇ? ಅವನು ಅದಕ್ಕಾಗಿ ನನ್ನನ್ನು ಸತ್ಯ-ಮಿಥ್ಯಗಳ ಈ ಸಂಘರ್ಷದಲ್ಲಿ ಒಬ್ಬಂಟಿಗನಾಗಿ ಬಿಟ್ಟಿರುವನೇ? ಈ ದುಃಖ ದುಮ್ಮಾನವು ಅಸಹನೀಯವಾದಾಗ ಜಿಬ್ರೀಲ್ ಮತ್ತೆ ಸುವಾರ್ತೆಯೊಂದಿಗೆ ಹಾಜರಾಗುತ್ತಾರೆ.

"ಪ್ರಕಾಶಮಯ ಹಗಲಿನಾಣೆ ಮತ್ತು ರಾತ್ರಿಯಾಣೆ! ಅದು ಪ್ರಶಾಂತವಾಗಿ ಆವರಿಸುವಾಗ (ಸಂದೇಶವಾಹಕರೇ) ನಿಮ್ಮ ಪ್ರಭು ನಿಮ್ಮನ್ನು ಖಂಡಿತ ಕೈ ಬಿಡಲಿಲ್ಲ ಮತ್ತು ಅವನು ಕೋಪಿಸಲೂ ಇಲ್ಲ. ಖಂಡಿತವಾಗಿಯೂ ಅನಂತರದ ಕಾಲಘಟ್ಟವು ನಿಮ್ಮ ಪಾಲಿಗೆ ಮುಂಚಿನ ಕಾಲಘಟ್ಟಕ್ಕಿಂತ ಉತ್ತಮವಾಗಿರುವುದು. ಸದ್ಯದಲ್ಲೇ ನಿಮ್ಮ ಪ್ರಭು, ನೀವು ಸಂತುಷ್ಟರಾಗುವಷ್ಟನ್ನು ನಿಮಗೆ ಕೊಡುವನು. ಅವನು ನಿಮ್ಮನ್ನು ಅನಾಥನಾಗಿ ಕಂಡು ಆಶ್ರಯವನ್ನು ಒದಗಿಸಲಿಲ್ಲವೇ? ಮತ್ತು ನಿಮ್ಮನ್ನು ಸನ್ಮಾರ್ಗವರಿಯದವರಾಗಿ ಕಂಡು ಮಾರ್ಗದರ್ಶನ ಮಾಡಲಿಲ್ಲವೇ? ನಿಮ್ಮನ್ನು ನಿರ್ಗತಿಕನಾಗಿ ಕಂಡು ಸ್ಥಿತಿವಂತನಾಗಿ ಮಾಡ ಲಿಲ್ಲವೇ? ಆದುದರಿಂದ ಅನಾಥನ ಮೇಲೆ ಕಾಠಿಣ್ಯ ತೋರಬೇಡಿರಿ ಮತ್ತು ಯಾಚಕ ನನ್ನು ಜರೆಯಬೇಡಿರಿ. ನಿಮ್ಮ ಪ್ರಭುವಿನ ಅನುಗ್ರಹವನ್ನು ಪ್ರಕಟಪಡಿಸಿರಿ."

**(ಪವಿತ್ರ ಕುರ್‌ಆನ್, 93:1-11)**

ಎಂಬರ್ಥದ 'ಅದ್ದುಹಾ' ಎಂಬ ಅಧ್ಯಾಯವನ್ನು ತಲುಪಿಸುತ್ತಾರೆ. ಪ್ರವಾದಿ ಮುಹಮ್ಮದ್‌ರ(ಸ) ಎಲ್ಲ ದುಃಖವೂ ಮಾಯವಾಗಿ ಅವರು ಪ್ರಸನ್ನವದನರಾಗುತ್ತಾರೆ. ದಿವ್ಯವಾಣಿ ಸ್ಥಗಿತಗೊಂಡುದುದು ತಮ್ಮ ಬಗ್ಗೆ ಅಲ್ಲಾಹನ ಅಸಂತುಷ್ಟಿಯಿಂದಲ್ಲ. ಬದಲಾಗಿ ಅದರಲ್ಲಿ ಪ್ರಕಾಶಮಾನ ಹಗಲಿನ ಬಳಿಕ ರಾತ್ರಿಯ ನೆಮ್ಮದಿದಾಯಕ ಇರುಳನ್ನು ಆವರಿಸು ವುದರಲ್ಲಿ ಇರುವಂತಹ ಔಚಿತ್ಯವೇ ಅಡಗಿದೆ ಎಂಬುದು ಅವರಿಗೆ

ಮನವರಿಕೆಯಾಯಿತು. ದಿವ್ಯವಾಣಿಯ ತೀಕ್ಷ್ಣ ಪ್ರಭೆಯಿಂದ ಅವರ ಅಂಗಾಂಗಗಳಲ್ಲಿ ಆಗುತ್ತಿದ್ದ ತೀವ್ರ ಸ್ವರೂಪದ ಬಳಲಿಕೆಯನ್ನು ನಿವಾರಿಸಲು ಈ ರೀತಿ ಬಿಡುವು ನೀಡುವುದು ಅನಿವಾರ್ಯವಾಗಿತ್ತು ಎಂಬುದು ಅವರಿಗೆ ವೇದ್ಯವಾಯಿತು. ತರುವಾಯ ದಿವ್ಯವಾಣಿಯ ಅವತರಣದ ಕಾಠಿಣ್ಯವನ್ನು ಸಹಿಸುವ ಶಕ್ತಿಯು ಅವರಲ್ಲಿ ಮೂಡಿದಾಗ ಮತ್ತು ದಿವ್ಯವಾಣಿಯ ಸ್ವೀಕಾರವು ಅವರಿಗೆ ಅಭ್ಯಾಸವಾಗಿ ಬಿಟ್ಟಾಗ ದಿವ್ಯವಾಣಿಯ ಅವತರಣವು ನಿರಂತರವಾಗಿ ಆಗತೊಡಗಿತು.

ಅಧ್ಯಾಯ - ೬

# ಧರ್ಮ ಪ್ರಚಾರ

## ಅರ್ಕಮ್‌ರ ಮನೆ

ಇದು ಇಸ್ಲಾಮ್ ಧರ್ಮದ ಗುಪ್ತ ಪ್ರಚಾರದ ಕಾಲವಾಗಿತ್ತು. ಮೆಲ್ಲಮೆಲ್ಲನೆ ಮುಸ್ಲಿಮರ ಸಂಖ್ಯೆ ವೃದ್ಧಿಸುತ್ತಿತ್ತು. ಈ ತನಕ ಸುಮಾರು ನಲ್ವತ್ತು ಮಂದಿ ಇಸ್ಲಾಮ್ ಸ್ವೀಕರಿಸಿದ್ದರು. ಆದರೆ ಧರ್ಮ ಪ್ರಚಾರ ಕಾರ್ಯಗಳಿಗೆ ಈಗಲೂ ಒಂದು ಕೇಂದ್ರ ಲಭ್ಯವಾಗಿರಲಿಲ್ಲ. ನೆರೆಮನೆಯವರ ಕೀಟಲೆಯಿಂದಾಗಿ ಮುಹಮ್ಮದ್(ಸ) ಅವರ ನಿವಾಸದಲ್ಲಿ ಮುಸ್ಲಿಮರು ಸೇರುವುದು ಸಾಧ್ಯವಿರಲಿಲ್ಲ. ಮುಸ್ಲಿಮರು ಒಬ್ಬಂಟಿಗರಾಗಿ ಅಥವಾ ಪರ್ವತದ ಕಣಿವೆಗಳಲ್ಲಿ ಯಾರಿಗೂ ಕಾಣದಂತೆ ಸಾಮೂಹಿಕವಾಗಿ ನಮಾಝ್ ನಿರ್ವಹಿಸುತ್ತಿದ್ದರು.

ಎಂದಿನಂತೆ ಸಅದ್ ತಮ್ಮ ಕೆಲವು ಸಂಗಾತಿಗಳೊಂದಿಗೆ ಪರ್ವತದ ತಪ್ಪಲಿನಲ್ಲಿ ನಮಾಝ್ ನಿರ್ವಹಿಸುತ್ತಿದ್ದರು. ಅಷ್ಟರಲ್ಲಿ ಪರ್ವತದ ತುದಿಯಿಂದ ಒಬ್ಬ ಕುರುಬ ಅವರನ್ನು ಈ ಸ್ಥಿತಿಯಲ್ಲಿ ಕಂಡು ಬೆರಗಾಗಿ ಬೊಬ್ಬಿಡುತ್ತಾನೆ; "ಇಲ್ಲಿ ನೋಡಿ ಇವರಿಗೇನಾಗಿದೆ?"

ಈ ಸ್ವರ ಕೇಳಿ ದೂರ ದೂರದಿಂದ ಕುರುಬರು, ದನ ಮೇಯಿಸುವವರು, ದಾರಿಹೋಕರು, ವೀಕ್ಷಕರು ಅಲ್ಲಿ ಬಂದು ಸೇರುತ್ತಾರೆ. ಎಲ್ಲರೂ ಸೇರಿ ಮುಸ್ಲಿಮರನ್ನು ಗೇಲಿ ಮಾಡಲಾರಂಭಿಸುತ್ತಾರೆ. ಇದರಿಂದ ಅವರಿಗೆ ನಮಾಝ್ ಮಾಡುವುದು ಕಷ್ಟವಾಯಿತು. ಹೇಗೂ ನಮಾಝ್ ಮುಗಿಸಿ ಬಂದವರೇ ಸಅದ್ ಅವರನ್ನು ಗುಲ್ಲೆಬ್ಬಿಸುವುದರಿಂದ ತಡೆಯಲು ಪ್ರಯತ್ನಿಸಿದರು. ಆದರೆ ಅವರು ಜಗಳಕ್ಕಿಳಿದರು. ಗಲಭೆಕೋರರು ಹಿಂತೆರಳದಿರುವುದನ್ನು ಕಂಡು ಸಅದ್ ಹತ್ತಿರವೇ ಇದ್ದ ಒಂಟೆಯ ದೊಡ್ಡ ಎಲುಬೊಂದನ್ನು ಎತ್ತಿ ಓರ್ವ ಅಕ್ರಮಿಯ ತಲೆಗೆ ಬಲವಾಗಿ ಹೊಡೆದರು. ಏಟು ಬಹಳ ಪ್ರಬಲವಾಗಿತ್ತು. ಒಂದೇ ಏಟಿಗೆ ಬಿದ್ದವನು ಚಡಪಡಿಸುತ್ತಾ ಕೊನೆಯುಸಿರೆಳೆದನು. ಇದನ್ನು ಕಂಡ ಇತರರು ಹೆದರಿ ಕಾಲಿಗೆ ಬುದ್ಧಿ ಹೇಳಿದರು.

ಸಅದ್‌ನ ಮೇಲೆ ಕೈ ಮಾಡುವುದು ಸುಲಭದ ಕೆಲಸವಾಗಿರಲಿಲ್ಲ. ಅವರು ಬಹಳ ಪರಾಕ್ರಮಿಯಾಗಿರುವುದರ ಜೊತೆಗೆ ಅವರಿಗೆ ತಮ್ಮ ಗೋತ್ರದ ಪೂರ್ಣ ಬೆಂಬಲವೂ ಪ್ರಾಪ್ತವಿತ್ತು. ಆದರೂ ಅವರ ವಿರುದ್ಧ ಪ್ರತೀಕಾರದ ಬೆಂಕಿಯು ಒಳಗೊಳಗೇ ಉರಿಯುತ್ತಿತ್ತು.

ಇಂತಹ ಪರಿಸ್ಥಿತಿಯಲ್ಲಿ ಮುಸ್ಲಿಮರ ಮಟ್ಟಿಗೆ ಒಂದು ಕೇಂದ್ರವು ಬಹಳ ಮುಖ್ಯವಾಗಿತ್ತು. ಅಲ್ಲಿ ಸುರಕ್ಷಿತವಾಗಿ ನಮಾಝ್ ಮಾಡಬಹುದಾಗಿತ್ತು. ಧರ್ಮಪ್ರಚಾರದ ಕಾರ್ಯವನ್ನು ಅಲ್ಲಿಂದಲೇ ನಡೆಸಬಹುದಾಗಿತ್ತು. ಪೋಲಿ ಹುಡುಗರ ತಂಡಗಳು ಸದಾ ಮುಸ್ಲಿಮರ ಹಿಂದೆ ಬಿದ್ದಿದ್ದವು. ಅವರು ನಮಾಝ್ ಮಾಡುವುದನ್ನು ಕಂಡ ಕೂಡಲೇ ಅವರ ಮೇಲೆ ಆಕ್ರಮಣ ನಡೆಸಬೇಕೆಂದು ಯೋಚಿಸಿತ್ತು.

ಇದೇ ವೇಳೆ ಒಮ್ಮೆ ಒಂದು ಕಣಿವೆಯಲ್ಲಿ ಮುಹಮ್ಮದ್(ಸ) ಮತ್ತು ಅಲೀಯವರು ಜೊತೆಯಾಗಿ ನಮಾಝ್ ಮಾಡುತ್ತಿರುವುದನ್ನು ಅಬೂತಾಲಿಬ್ ಕಂಡರು.

"ನೀವು ಅನುಸರಿಸುತ್ತಿರುವ ಈ ಹೊಸ ಧರ್ಮ ಯಾವುದು?" ಎಂದು ಅವರು ಪ್ರಶ್ನಿಸಿದರು.

ಅದಕ್ಕೆ ಮುಹಮ್ಮದ್(ಸ) "ನಮ್ಮ ಪಿತಾಮಹರಾದ ಇಬ್ರಾಹೀಮ್(ಅ) ಅವರ ಧರ್ಮವಿದು. ನಮಾಝ್ ಇದರ ಒಂದು ಅಂಗವಾಗಿದೆ" ಎನ್ನುತ್ತಾರೆ.

"ನಾನಂತೂ ಈ ಧರ್ಮವನ್ನು ಅನುಸರಿಸಲಾರೆ. ಆದರೆ ನಿಮಗೆ ಇದನ್ನು ಅನುಸರಿಸುವ ಅನುಮತಿಯಿದೆ. ಯಾರೂ ನಿಮ್ಮನ್ನು ಇದರಿಂದ ತಡೆಯಲಾರರು."

ಮಕ್‌ಝೂಮ್ ಗೋತ್ರದ ಅರ್ಕಮ್ ಎಂಬವರ ಇಸ್ಲಾಮ್ ಸ್ವೀಕಾರದ ಬಳಿಕ ಅವರು ತಮ್ಮ ಮನೆಯನ್ನು ಧರ್ಮಪ್ರಚಾರ ಕೇಂದ್ರವಾಗಿ ಮಾಡಲು ಮುಂದಾದರು. ಅವರ ಮನೆಯು ಸಫಾ ಬೆಟ್ಟದಲ್ಲಿತ್ತು. ಅಲ್ಲಿಂದ ಕಅಬಾ ಭವನವು ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಇದು ಸುರಕ್ಷಿತ ಸ್ಥಳವಾಗಿತ್ತು. ಆ ಕಡೆ ಜನರ ಓಡಾಟ ಹೆಚ್ಚಿರಲಿಲ್ಲ. ಆದ್ದರಿಂದ ಅಲ್ಲಿ ಬಂದು ಹೋಗುವವರು ಇತರರ ಕಣ್ಣಿಗೆ ಬೀಳುವ ಸಂಭವ ಕಡಿಮೆಯಿತ್ತು. ಈ ರೀತಿ ಅರ್ಕಮ್‌ರ ಮನೆಯು ಈಗ ಪ್ರವಾದಿ ಮುಹಮ್ಮದ್(ಸ) ಅವರ ಧರ್ಮ ಪ್ರಚಾರದ ಕೇಂದ್ರವಾಯಿತು.

## ಹಾಶಿಮ್ ಮನೆತನದ ಔತಣಕೂಟ

ಇಂದು ಹಾಶಿಮ್ ಮನೆತನದವರಿಗೆ ಮುಹಮ್ಮದ್‌ರ(ಸ) ಮನೆಯಲ್ಲಿ ಒಂದು ಔತಣಕೂಟ ಏರ್ಪಡಿಸಲಾಗಿದೆ. ಅವರ ತಂದೆಯ ಎಲ್ಲಾ ಸೋದರರು, ಅವರ ಎಲ್ಲಾ ಪುತ್ರರು ಮತ್ತು ಇತರೆಲ್ಲಾ ಬಂಧುಗಳೂ ಸೇರಿದ್ದಾರೆ. ಈ ತನಕ ಸುಮಾರು 40 ಮಂದಿ ಪ್ರವಾದಿವರ್ಯರ(ಸ) ಮನೆಯ ಅತಿಥಿ ಗೃಹವನ್ನು ತಲುಪಿದ್ದಾರೆ. ಬಗೆ ಬಗೆಯ ಸ್ವಾದಿಷ್ಟ ಭಕ್ಷ್ಯ ಭೋಜನಗಳು ಸಿದ್ಧಗೊಂಡು ಜೋಡಿಸಿಡಲ್ಪಟ್ಟಿವೆ. ಅಲೀ(ರ) ಮತ್ತು ಝೈದ್(ರ) ಚುರುಕಿನಿಂದ ಅತಿಥಿಗಳ ಸೇವೆ ಮಾಡುತ್ತಾ ಅತ್ತಿತ್ತ ಓಡಾಡುತ್ತಿದ್ದಾರೆ. ಮುಹಮ್ಮದ್(ಸ) ಮೇಲ್ನೋಟ ವಹಿಸುತ್ತಿದ್ದಾರೆ.

ಮದಿರಾಪಾನದ ವ್ಯವಸ್ಥೆ ಇಲ್ಲದ ಈ ಔತಣ ಕೂಟ ಅಬೂಲಹಬ್‌ನಿಗೆ ಅಷ್ಟೊಂದು ಹಿಡಿಸಿರಲಿಲ್ಲ. ಸುರಾಪಾನದ ಕಥೆಗಳನ್ನು ಹೇಳುತ್ತಾ ಬಹಳ ಹೊತ್ತು ಕಳೆಯುತ್ತಾನೆ. ಅಬೂಲಹಬ್‌ನ ತಲೆ ಹರಟೆಯಿಂದ ಅನೇಕರಿಗೆ ಜಿಗುಪ್ಸೆ ಉಂಟಾಗುತ್ತದೆ. ಜನರು

ಒಬ್ಬೊಬ್ಬರಾಗಿ ತಮ್ಮ ಮನೆಗಳಿಗೆ ತೆರಳ ತೊಡಗುತ್ತಾರೆ. ಕೆಲವೇ ಸಮಯದಲ್ಲಿಅತಿಥಿ ಗೃಹವು ಖಾಲಿಯಾಗುತ್ತದೆ.

ಮುಹಮ್ಮದ್(ಸ) ಒಂದು ಉದ್ದೇಶಕ್ಕಾಗಿ ಈ ಔತಣ ಕೂಟ ಏರ್ಪಡಿಸಿದ್ದರು. ತಮ್ಮ ಹತ್ತಿರದ ಸಂಬಂಧಿಕರನ್ನು ಎಚ್ಚರಿಸಬೇಕೆಂಬ ದೇವಾಜ್ಞೆ ಅವರಿಗೆ ಲಭಿಸಿತ್ತು. ಈ ಔತಣ ಕೂಟದ ಮೂಲಕ ಆ ಆದೇಶವನ್ನು ಪಾಲಿಸಬೇಕೆಂಬುದು ಅವರ ಬಯಕೆಯಾಗಿತ್ತು.

"ನಿಮ್ಮ ಅತ್ಯಂತ ನಿಕಟ ಸಂಬಂಧಿಕರಿಗೆ ಎಚ್ಚರಿಕೆ ನೀಡಿರಿ. ಸತ್ಯವಿಶ್ವಾಸಿಗಳ ಪೈಕಿ ನಿಮ್ಮನ್ನು ಅನುಸರಿಸುವವರೊಂದಿಗೆ ಸೌಜನ್ಯದಿಂದ ವರ್ತಿಸಿರಿ. ಆದರೆ ಅವರು ನಿಮ್ಮ ಆಜ್ಞೋಲ್ಲಂಘನೆ ಮಾಡಿದರೆ, ನೀವು ಮಾಡುವ ಕಾರ್ಯಗಳಿಂದ ನಾನು ಹೊಣೆಮುಕ್ತನಾಗಿದ್ದೇನೆಂದು ಹೇಳಿ ಬಿಡಿರಿ ಮತ್ತು ಆ ಮಹಾ ಪ್ರಬಲನೂ ಕರುಣಾನಿಧಿಯೂ ಆಗಿರುವವನ ಮೇಲೆ ಭರವಸೆಯನ್ನಿಡಿರಿ- ನೀವು ಏಳುವಾಗ ಅವನು ನಿಮ್ಮನ್ನು ನೋಡುತ್ತಿರುತ್ತಾನೆ ಮತ್ತು ಸಾಷ್ಟಾಂಗವೆರಗುವವರ ಮಧ್ಯೆ ನಿಮ್ಮ ಚಲನವಲನ ಗಳ ಮೇಲೆ ಕಣ್ಣಿಟ್ಟಿರುತ್ತಾನೆ. ನಿಶ್ಚಯವಾಗಿಯೂ ಅವನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ." ಎಂಬ 'ಅಶ್ಶುಅರಾ' ಅಧ್ಯಾಯದ (214-220) ವಚನಗಳು ಈಗಾಗಲೇ ಅವತೀರ್ಣಗೊಂಡಿದ್ದುವು. ಆದರೆ ಈ ಔತಣಕೂಟದಲ್ಲಿ ಅಲ್ಲಾಹನ ಈ ಆದೇಶವನ್ನು ಅನುಷ್ಠಾನಕ್ಕೆ ತರುವುದು ಸಾಧ್ಯವಾಗಲಿಲ್ಲ. ಏಕೆಂದರೆ ಅಬೂಲಹಬನ ಹರಟೆಯ ಕಾರಣ ಅಲ್ಲಿ ಪ್ರವಾದಿವರ್ಯರಿಗೆ(ಸ) ಮಾತಾಡುವ ಸಂದರ್ಭವೇ ಒದಗಲಿಲ್ಲ. ಔತಣದ ಕೊನೆಯಲ್ಲಿ ತಮ್ಮ ಮಾತುಗಳನ್ನಿಡ ಬೇಕೆಂದು ಮುಹಮ್ಮದ್(ಸ) ಬಯಸಿ ದ್ದರು. ಆದರೆ ಅವರ ಮನದಿಂಗಿತವನ್ನರಿತ ಅಬೂಲಹಬ್ ಈ ರೀತಿ ಹೇಳಿದನು:

"ಇಲ್ಲಿ ನಿನ್ನ ತಂದೆಯ ಎಲ್ಲ ಸೋದರರೂ ಅವರ ಮಕ್ಕಳೂ ಇದ್ದಾರೆ. ನಿನಗೇನು ಹೇಳಬೇಕಿದ್ದರೂ ಹೇಳು. ಆದರೆ ಧರ್ಮಭ್ರಷ್ಟತೆಯ ಮಾತುಗಳನ್ನಾಡಬೇಡ. ಈ ಹೊಸ ಧರ್ಮದ ಪ್ರಚಾರ ಆರಂಭಿಸುವ ಮೂಲಕ ನೀನು ನಮ್ಮ ಮನೆತನಕ್ಕೆ ತಂದೊಡ್ಡಿರುವಂತಹ ವಿಪತ್ತು ಯಾವ ವ್ಯಕ್ತಿಯೂ ಈ ತನಕ ತಂದಿರಲಿಲ್ಲ."

ಅನಂತರ ತನ್ನ ಹುರುಳಿಲ್ಲದ ಮಾತಿನ ಕಂತೆಯನ್ನು ಬಿಚ್ಚುತ್ತಾನೆ. ಆದ್ದರಿಂದ ಮರುದಿನ ಮುಹಮ್ಮದ್(ಸ) ತಮ್ಮ ಮನೆತನದವರನ್ನು ಪುನಃ ಔತಣಕ್ಕೆ ಆಹ್ವಾನಿಸುತ್ತಾರೆ. ಇಂದು ಕೂಡಾ ಉತ್ತಮ ಊಟದ ಏರ್ಪಾಡಾಗಿತ್ತು. ಊಟ ಮುಗಿಯುತ್ತಲೇ ತಮ್ಮ ಮಾತುಗಳನ್ನು ಅವರ ಮುಂದಿಡಲು ಪ್ರವಾದಿ(ಸ) ಸಿದ್ಧವಾಗಿ ನಿಂತಿದ್ದರು. ಊಟ ಮುಗಿದ ಕೂಡಲೇ ಅಬೂಲಹಬನಿಗೆ ಮಾತಿಗೆ ಅವಕಾಶ ಕೊಡದೆ ಪ್ರವಾದಿ(ಸ) ಈ ರೀತಿ ತಮ್ಮ ಮಾತುಗಳನ್ನು ಅವರ ಮುಂದಿಡುತ್ತಾರೆ:

"ಸಭಿಕರೇ, ನಾನು ನಿಮ್ಮೆಲ್ಲರಿಗೆ ಇಹ-ಪರಲೋಕಗಳ ಕಲ್ಯಾಣವನ್ನು ತಂದಿರುವೆನು. ಇದಕ್ಕಿಂತ ಉತ್ತಮವಾದುದನ್ನು ಅರೇಬಿಯಾದಲ್ಲಿ ಯಾವ ವ್ಯಕ್ತಿಯೂ ಈ ತನಕ ತಂದಿರಲಿಲ್ಲ. ನಿಮ್ಮ ಮುಂದೆ ಈ ಆಹ್ವಾನ ಇಡಬೇಕೆಂದು ಅಲ್ಲಾಹನು ನನಗೆ

ಆಜ್ಞಾಪಿಸಿರುವನು. ಹೇಳಿರಿ ನಿಮ್ಮ ಪೈಕಿ ಯಾರು ನನಗೆ ನೆರವಾಗುತ್ತೀರಿ."

ಕಳೆದ ಮೂರು ವರ್ಷಗಳಲ್ಲಿ ಮುಹಮ್ಮದ್‌ರ(ಸ) ಸಂದೇಶದ ಕುರಿತು ಹಾಶಿಮ್ ಮನೆತನದ ಪ್ರತಿಯೊಬ್ಬರಿಗೂ ತಿಳಿದಿತ್ತು. ಆದರೆ ನೇರವಾಗಿ ಅವರ ಮುಂದೆ ಈಆಹ್ವಾನ ಇಟ್ಟುದು ಇದೇ ಮೊದಲ ಸಲವಾಗಿತ್ತು. ಆದ್ದರಿಂದ ಮುಹಮ್ಮದ್‌ರ(ಸ) ಮಾತು ಕೇಳಿ ಎಲ್ಲರೂ ಮೌನ ತಾಳಿದರು. ಕೆಲವು ಹೊತ್ತು ಸಭೆಯು ನಿಶ್ಶಬ್ದವಾಯಿತು. ಕೆಲವರು ಆಶ್ಚರ್ಯದಿಂದ ಒಬ್ಬರನ್ನೊಬ್ಬರು ದಿಟ್ಟಿಸ ತೊಡಗಿದರು. ಕಣ್ಣು ಸನ್ನೆಯಲ್ಲೇ ಮಾತುಕತೆ ನಡೆಯಿತು. ಆದರೆ ಯಾರಿಗೂ ಬಾಯಿ ಬಿಚ್ಚುವ ಧೈರ್ಯವಿರಲಿಲ್ಲ. ಆಗಿನ್ನೂ 9 ವರ್ಷ ಪ್ರಾಯದವರಾಗಿದ್ದ ಅಲೀ(ರ) ಹೀಗೆ ಹೇಳಿದರು:

"ಯಾ ರಸೂಲಲ್ಲಾಹ್! (ಓ ಪ್ರವಾದಿವರ್ಯರೇ!) ನಾನು ಹಾಜರಿದ್ದೇನೆ. ನನಗೆ ಕಣ್ಣು ಬೇನೆಯಿದೆ, ನನ್ನ ಕಾಲುಗಳು ಸಣಕಲಾಗಿವೆ. ನಾನು ಈ ಮನೆಯಲ್ಲಿ ಎಲ್ಲರಿಗಿಂತ ಕಿರಿಯವನು. ಆದರೂ ನಾನು ನಿಮಗೆ ನೆರವಾಗುವೆನು."

ಸಭಿಕರು ಈ ಮಾತು ಕೇಳಿ ನಕ್ಕು ಬಿಟ್ಟರು. ಅಬೂಲಹಬ್ ಕೇಕೆ ಹಾಕತೊಡಗಿದ. ಈ ಔತಣ ಕೂಟವೂ ಯಾವುದೇ ಫಲಿತಾಂಶವಿಲ್ಲದೆ ಕೊನೆಗೊಂಡಿತು.

ಮುಹಮ್ಮದ್(ಸ) ಮಾತ್ರ ಅಲ್ಲಾಹನ ಆದೇಶದ ಪಾಲನೆಯಲ್ಲಿ ಪಟ್ಟು ಬಿಡದೆ ನಿರತರಾಗಿದ್ದರು. ಕೆಲವೇ ದಿನಗಳ ಬಳಿಕ ಮತ್ತೊಂದು ಔತಣ ಕೂಟವನ್ನು ಏರ್ಪಡಿಸಿ ಎಲ್ಲರನ್ನೂ ಕರೆಸುತ್ತಾರೆ. ಅದರ ಕೊನೆಯಲ್ಲಿ ತನ್ನ ಅಜ್ಜನ ಸಂತಾನವನ್ನು ಅಭಿಸಂಬೋಧಿಸಿ ಒಬ್ಬೊಬ್ಬರನ್ನು ಹೆಸರೆತ್ತಿ ಕೂಗುತ್ತಾ ಈ ರೀತಿ ಸ್ಪಷ್ಟವಾಗಿ ಹೇಳಿದರು: "ಓ ಅಬ್ಬಾಸರೇ! ಪ್ರವಾದಿಯ ಅತ್ತೆಯವರಾದ ಸಫಿಯಾ! ಮುಹಮ್ಮದರ ಮಗಳಾದ ಫಾತಿಮಾ! ನೀವೆಲ್ಲರೂ ನರಕಾಗ್ನಿಯ ಶಿಕ್ಷೆಯಿಂದ ನಿಮ್ಮನ್ನು ರಕ್ಷಿಸಿಕೊಳ್ಳುವ ಬಗ್ಗೆ ಚಿಂತಿಸಿರಿ. ಅಲ್ಲಾಹನ ಹಿಡಿತದಿಂದ ನಿಮ್ಮನ್ನು ನಾನು ರಕ್ಷಿಸಲಾರೆ. ನನ್ನ ಸೊತ್ತಿನಲ್ಲಿ ಏನು ಬೇಕಾದರೂ ನೀವು ಕೇಳಿ ಪಡೆಯಬಹುದಾಗಿದೆ."

ಆಗ ಅಬೂತಾಲಿಬರು ಮುಹಮ್ಮದರನ್ನುದ್ದೇಶಿಸಿ ಹೀಗೆ ಹೇಳಿದರು:

"ನಾನು ಅಬ್ದುಲ್ ಮುತ್ತಲಿಬರ ಧರ್ಮವನ್ನು ತೊರೆಯಲಾರೆ. ಆದರೆ ಯಾವ ಕಾರ್ಯಕ್ಕಾಗಿ ನೀನು ನೇಮಿಸಲ್ಪಟ್ಟಿರುವೆಯೋ ಅದನ್ನು ನೀನು ಮಾಡು. ನಾನು ನಿನಗೆ ನೆರವಾಗುವೆನು. ನಿನಗೆ ರಕ್ಷಣೆ ಒದಗಿಸುವೆನು."

ಇದನ್ನು ಕೇಳಿ ಕುಪಿತನಾದ ಅಬೂಲಹಬ್ ಹೀಗೆಂದನು:

"ಅಲ್ಲಾಹನಾಣೆ! ಇದು ಅತ್ಯಂತ ಕೆಟ್ಟ ವಿಷಯ. ಇತರರು ಅವನ ಕೈ ಹಿಡಿಯುವುದಕ್ಕೆ ಮುಂಚೆ ನೀವೇ ಅವನನ್ನು ತಡೆಯಬೇಕಾಗಿತ್ತು."

ಅಬೂತಾಲಿಬ್‌ರು ಮಾತ್ರ ತಮ್ಮ ಮಾತಿನಲ್ಲಿ ಅಚಲರಾಗಿದ್ದರು, "ಅಲ್ಲಾಹನಾಣೆ! ನಮ್ಮ ಶರೀರದಲ್ಲಿ ಪ್ರಾಣ ಇರುವ ತನಕ ನಾವು ಅವರ ರಕ್ಷಣೆ ಮಾಡುವೆವು."

ಮುಹಮ್ಮದ್(ಸ) ತಮ್ಮ ಸಂದೇಶವನ್ನು ತಮ್ಮ ಆಪ್ತ ಬಂಧುಗಳ ಮುಂದೆ

ಇಟ್ಟಾಗಿತ್ತು. ಅಲ್ಲಾಹನ ಆಜ್ಞೆಯನ್ನು ಅವರು ಅತ್ಯುತ್ತಮವಾದ ರೀತಿಯಲ್ಲಿ ಪಾಲಿಸಿದ್ದರು. ಆದರೆ ಹಝ್ರುತ್ ಅಲೀಯವರ(ರ) ಅವರ ಹೊರತು ಇನ್ನಾರಿಂದಲೂ ಅನುಕೂಲಕರ ಪ್ರತಿಕ್ರಿಯೆ ವ್ಯಕ್ತವಾಗಲಿಲ್ಲ. ಎಲ್ಲರೂ ಮೌನವಾಗಿ ಎದ್ದು ಹೋದರು. ಆದರೆ ಪ್ರವಾದಿ ವರ್ಯರ(ಸ) ಮಾತು ಪ್ರತಿಯೊಬ್ಬನ ಮನಸ್ಸಿನಲ್ಲೂ ಅಲ್ಲೋಲ ಕಲ್ಲೋಲ ಉಂಟು ಮಾಡಿತ್ತು. ಮುಹಮ್ಮದ್(ಸ) ಏನೋ ವಿಚಿತ್ರ ಮಾತು ಹೇಳಿದಂತೆ ಅವರಿಗೆ ಭಾಸವಾಗಿತ್ತು.

## ಸಫಾ ಬೆಟ್ಟದ ಮೇಲೆ

ಉದಯರವಿಯ ಕಿರಣಗಳು ಸಫಾ ಬೆಟ್ಟವನ್ನು ಚುಂಬಿಸಿದೆಯಷ್ಟೆ. ಮಕ್ಕಾ ನಿವಾಸಿಗಳಿಗೆ 'ಯಾ ಸಬಾಹಾ' (ಅಯ್ಯೋ! ಬೆಳಗ್ಗಿನ ಆಪತ್ತು) ಎಂಬ ಕೂಗು ಕೇಳಿಸುತ್ತದೆ.

"ಹುಬಲ್‌ಗೆ ಜಯವಾಗಲಿ, ಲಾತ್‌ಗೆ ಜಯವಾಗಲಿ, ಎಲ್ಲವೂ ಸುಗಮವಾಗಲಿ" ಎಂಬುದು ಕೇಳುಗರ ತಕ್ಷಣದ ಪ್ರತಿಕ್ರಿಯೆಯಾಗಿತ್ತು.

ಅರಬರ ವಾಡಿಕೆಯಂತೆ ಸಾಮೂಹಿಕ ವಿಪತ್ತಿನ ಅರಿವಾದವನು ಇದೇ ರೀತಿ ಸಫಾ ಬೆಟ್ಟವನ್ನೇರಿ ಕೂಗುತ್ತಾನೆ. ಜನರು ಸೇರಿದ ಬಳಿಕ ಆ ಅಪಾಯವನ್ನು ನೀಗಿಸುವ ಬಗ್ಗೆ ಸಮಾಲೋಚಿಸಲಾಗುತ್ತದೆ.

ಇಂದು ಮುಂಜಾನೆ ಈ ಕರೆ ಕೇಳಿ ಜನರು ಬೆಚ್ಚಿ ಬೀಳುತ್ತಾರೆ. ಕೂಗುವವನು ಬೆಳಗ್ಗಿನ ಆಪತ್ತಿನ ಬಗ್ಗೆ ಎಚ್ಚರಿಸುತ್ತಿದ್ದಾನೆ. ರಾತ್ರಿಯ ಕತ್ತಲಲ್ಲಿ ಏನೋ ವಿಶೇಷ ಘಟನೆ ಸಂಭವಿಸಿರಬೇಕು.

ಜನರು ಸಫಾ ಪರ್ವತದ ಕಡೆಗೆ ತಂಡೋಪತಂಡವಾಗಿ ಧಾವಿಸುತ್ತಿದ್ದಾರೆ. ಕರೆ ನೀಡುವವನು ಕೂಗಿ ಕೂಗಿ ಕರೆ ನೀಡುತ್ತಿದ್ದಾನೆ: "ಓ ಕುರೈಶರೇ! ಕಅಬ್ ಬಿನ್ ಲಾವಿಯ ಮನೆತನದವರೇ, ಮುರ್‍ರ್ರಃ ಮನೆತನದವರೇ, ಅಬ್ದ್ ಮನಾಫ್ ಗೋತ್ರದವರೇ, ಅಬ್ದ್ ಶಮ್ಸ್ ಮನೆತನದವರೇ, ಹಾಶಿಮ್ ಗೋತ್ರದವರೇ, ಅಬ್ದುಲ್ ಮುತ್ತಲಿಬರ ಸಂತಾನವೇ ಓಡೋಡಿ ಬನ್ನಿ."

ಜನರು ಮನೆಗಳಿಂದ ಹೊರಟು ಓಡುತ್ತಿದ್ದಾರೆ. ಖುದ್ದಾಗಿ ಬರಲು ಸಾಧ್ಯವಿಲ್ಲದವನು ತನ್ನ ಪರವಾಗಿ ಒಬ್ಬನನ್ನು ಕಳುಹಿಸುತ್ತಾನೆ. ನೋಡು ನೋಡುತ್ತಿರುವಂತೆಯೇ ಒಂದು ದೊಡ್ಡ ಗುಂಪು ಜಮಾವಣೆಯಾಗುತ್ತದೆ. ಎಲ್ಲರ ಕಣ್ಣುಗಳೂ ಕರೆ ನೀಡಿದವನ ಕಡೆಗಿದೆ.

ಅದು ಮುಹಮ್ಮದ್(ಸ). ಮಕ್ಕಾದ ಅತ್ಯಧಿಕ ಸತ್ಯಸಂಧ ವ್ಯಕ್ತಿ. ಅತ್ಯಂತ ಪ್ರಾಮಾಣಿಕ ವ್ಯಕ್ತಿ. ಎಲ್ಲರಿಗಿಂತ ಪವಿತ್ರವಾದ ವ್ಯಕ್ತಿ. ಅವರ ತುಟಿಗಳಿಂದ ಈ ತನಕ ಯಾರೂ ಒಂದು ಸುಳ್ಳು ಮಾತನ್ನೂ ಆಲಿಸಿರಲಿಲ್ಲ. ಜನರು ಅವರನ್ನು ಸದಾ 'ಸಾದಿಕ್' ಮತ್ತು 'ಅಮೀನ್' ಎಂದೇ ಕರೆಯುತ್ತಿದ್ದರು.

ಇವರೇಕೆ ಕರೆಯುತ್ತಿದ್ದಾರೆ? ಇವರೇನು ಹೇಳಬಯಸುತ್ತಾರೆ? ಬೇಗ ಹೇಳಿ ಬಿಡುವುದಿಲ್ಲವೇಕೆ? ಜನಮನಗಳಲ್ಲಿ ಎದ್ದೇಳುತ್ತಿರುವ ಪ್ರಶ್ನೆಗಳಿವು. ಆದರೆ ಇದರ ಉತ್ತರಕ್ಕಾಗಿ ಮುಹಮ್ಮದ್‌ರ(ಸ) ಕಡೆಗೇ ಎಲ್ಲರೂ ದೃಷ್ಟಿ ನೆಟ್ಟಿದ್ದಾರೆ.

ಮುಹಮ್ಮದರಿಗೆ ದೇವಾಜ್ಞೆಯಾಗಿದೆ:

"ನಿಮಗೆ ಆಜ್ಞಾಪಿಸಲಾಗಿರುವುದನ್ನು ಘಂಟಾಘೋಷವಾಗಿ ಸಾರಿ ಬಿಡಿರಿ. ಬಹುದೇವಾರಾಧಕರನ್ನು ಸ್ವಲ್ಪವೂ ಗಣನೆಗೆ ತೆಗೆದುಕೊಳ್ಳಬೇಡಿರಿ. ಅಪಹಾಸ್ಯ ಮಾಡುವವರನ್ನು ನಿಮ್ಮ ಪರವಾಗಿ ನಾವು ನೋಡಿಕೊಳ್ಳುತ್ತೇವೆ. ಅವರು ಅಲ್ಲಾಹನ ಜೊತೆ ಇತರ ದೇವರನ್ನು ಕಟ್ಟಿಕೊಂಡವರು. ಆದರೆ ಸದ್ಯವೇ ಅವರಿಗೆ ಅರಿವಾಗಲಿದೆ. ಅವರು ನಿಮ್ಮ ಕುರಿತು ಆಡುತ್ತಿರುವ ಮಾತುಗಳಿಂದ ನೀವು ಮನನೊಂದುಕೊಂಡಿದ್ದೀರೆಂಬುದು ನಮಗೆ ತಿಳಿದಿದೆ. ಆದ್ದರಿಂದ ನಿಮ್ಮ ಪ್ರಭುವಿನ ಪ್ರಶಂಸೆಯೊಂದಿಗೆ ಅವನ ಕೀರ್ತನೆ ಮಾಡಿರಿ ಮತ್ತು ಅವನ ಮುಂದೆ ಸಾಷ್ಟಾಂಗವೆರಗುವವರಲ್ಲಾಗಿರಿ. ಖಂಡಿತವಾಗಿ ಬರಲಿರುವ ಆ ಅಂತಿಮ ಗಳಿಗೆಯ ತನಕ ನಿಮ್ಮ ಪ್ರಭುವನ್ನು ಆರಾಧಿಸಿರಿ."

ಅಲ್ ಹಿಜ್ರ್ ಅಧ್ಯಾಯದ ಈ ವಚನಗಳು ಅವತೀರ್ಣಗೊಂಡ ಬಳಿಕವೇ ಪ್ರವಾದಿ(ಸ) ಸಫಾ ಬೆಟ್ಟವೇರಿ ತಮ್ಮ ಜನಾಂಗದವರನ್ನು ಕೂಗಿ ಕರೆದಿದ್ದರು. ಈಗ ಘಂಟಾಘೋಷವಾಗಿ ಆ ಸಂದೇಶವನ್ನು ಸಾರಿ ಬಿಡುವ ಸಮಯ ಒದಗಿ ಬಂದಿತ್ತು. ಮಿಥ್ಯ ಆರಾಧ್ಯರ ಪೊಳ್ಳುತನವನ್ನು ಬಹಿರಂಗ ಪಡಿಸುವ ಸಂದರ್ಭವು ಲಭಿಸಿತ್ತು. ಜಗತ್ತಿನ ಮಿಥ್ಯ ಶಕ್ತಿಗಳನ್ನು ಎದುರಿಸುವ ಅವಕಾಶ ಮುಂದೆ ಬಂದಿತ್ತು. ಇದು ಎಷ್ಟು ಕಷ್ಟಕರವಾದ ಕೆಲಸವಾದರೂ ಇದನ್ನು ಮಾಡಿಯೇ ತೀರಬೇಕಾಗಿತ್ತು. ಇದುವೇ ಅತ್ಯಂತ ನಿರ್ಣಾಯಕ ಘಳಿಗೆಯಾಗಿತ್ತು. ಈ ಒಂದು ಘೋಷಣೆಯಿಂದ ಸಂಪೂರ್ಣ ಜಗತ್ತಿನ ವೈರವನ್ನು ಕಟ್ಟಿಕೊಳ್ಳಬೇಕಾಗುತ್ತದೆ. ಆದರೆ ಪ್ರವಾದಿ ಮುಹಮ್ಮದ್(ಸ) ಘಂಟಾಘೋಷವಾಗಿ 'ಯಾ ಸಬಾಹಾ!' ಎನ್ನುತ್ತಾ ಜನರನ್ನು ಕರೆದು ಸೇರಿಸಿದರು.

ಜನಸಂದಣಿ ಸೇರಿದೆ. ಎಲ್ಲರೂ ಇವರೇನು ವಾರ್ತೆ ಕೊಡುತ್ತಾರೆಂದು ಕೇಳಲು ಕಾತರರಾಗಿದ್ದಾರೆ. ಕುತೂಹಲದಿಂದ ಕಿವಿ ನಿಮಿರಿಸಿ ನಿಂತಿದ್ದಾರೆ. ಅಷ್ಟರಲ್ಲಿ ಪ್ರವಾದಿ ಮುಹಮ್ಮದ್(ಸ) ಸಭಿಕರನ್ನುದ್ದೇಶಿಸಿ ಈ ರೀತಿ ಪ್ರಶ್ನಿಸಿದರು:

"ನೀವು ನನ್ನನ್ನು ಸತ್ಯವಂತನೆಂದು ತಿಳಿಯುತ್ತೀರೋ ಸುಳ್ಳುಗಾರನೆಂದೋ?"

ಎಲ್ಲರೂ ಒಕ್ಕೊರಳಿನಿಂದ: "ನಾವು ನಿಮ್ಮಿಂದ ಎಂದೂ ಯಾವುದೇ ಸುಳ್ಳು ಅಥವಾ ಅಸಂಬದ್ಧ ಮಾತು ಕೇಳಿಲ್ಲ. ನೀವು ಅಮೀನ್ ಮತ್ತು ಸಾದಿಕ್ ಆಗಿರುವಿರೆಂದು ನಾವು ದೃಢವಾಗಿ ನಂಬಿದ್ದೇವೆ."

ಮುಹಮ್ಮದ್(ಸ): "ಹಾಗಾದರೆ ಕೇಳಿ! ನಾನು ಪರ್ವತದ ಶಿಖರದಲ್ಲಿ ನಿಂತಿರುವೆನು. ನೀವೆಲ್ಲರೂ ಅದರ ಕೆಳಗಿರುವಿರಿ. ಪರ್ವತದ ಎರಡೂ ಕಡೆ ನನ್ನ ದೃಷ್ಟಿಯಿದೆ. ದರೋಡೆ ಕೋರರ ಒಂದು ಸಶಸ್ತ್ರ ತಂಡವು ಮಕ್ಕಾ ನಗರದ ಮೇಲೆ ಆಕ್ರಮಣ ಮಾಡಲಿಕ್ಕೆ ಬರುತ್ತಿರುವುದನ್ನು ನಾನು ದೂರದಿಂದ ಕಾಣುತ್ತಿದ್ದೇನೆ ಎಂದು ಹೇಳಿದರೆ ನೀವು ನಂಬುವಿರಾ?"

ಜನರು: "ಖಂಡಿತವಾಗಿಯೂ! ನಿಮ್ಮಂತಹ ಸತ್ಯಸಂಧನ ಮಾತನ್ನು ನಿರಾಕರಿಸಲು ಯಾವ ಕಾರಣವೂ ಇಲ್ಲ. ವಿಶೇಷವಾಗಿ ನೀವು ಎರಡೂ ಕಡೆ ನೋಡಬಲ್ಲಷ್ಟು ಉನ್ನತ ಸ್ಥಾನದಲ್ಲಿ ನಿಂತಿರುವಾಗ ಯಾರೂ ನಿಮ್ಮನ್ನು ಸುಳ್ಳಾಗಿಸಲಾರರು."

ಮುಹಮ್ಮದ್(ಸ): "ಇದೆಲ್ಲವೂ ನಿಮಗೆ ತಿಳಿಯ ಹೇಳುವ ಒಂದು ಉಪಮೆ ಮಾತ್ರ. ಮರಣವು ನಿಮ್ಮನ್ನು ಆವರಿಸಿದೆ ಎಂಬುದನ್ನು ಖಾತ್ರಿಯಾಗಿ ತಿಳಿದಿರಿ. ನಿಮಗೆ ನಿಮ್ಮ ಪ್ರಭುವಿನ ಮುಂದೆ ಹಾಜರಾಗಬೇಕಾಗಿದೆ. ನೀವು ಇಹಲೋಕವನ್ನು ನೋಡುತ್ತಿರು ವಂತೆ ನಾನು ಪರಲೋಕವನ್ನು ನೋಡುತ್ತಿರುವೆನು."

ಜನರು ನಿಶ್ಶಬ್ದವಾಗಿ ನಿಂತಿದ್ದಾರೆ. ಮುಹಮ್ಮದ್(ಸ) ಮುಂದುವರಿಸುತ್ತಾ ಹೇಳುತ್ತಾರೆ: "ಅಲ್ಲಾಹನ ಅತ್ಯಂತ ಕಠಿಣ ಶಿಕ್ಷೆಯು ಬರುವುದಕ್ಕೆ ಮುಂಚಿತವಾಗಿ ನಾನು ನಿಮ್ಮನ್ನು ಎಚ್ಚರಿಸುತ್ತಿದ್ದೇನೆ. ನಿಮ್ಮ ಪ್ರಾಣಗಳನ್ನು ಆ ಶಿಕ್ಷೆಯಿಂದ ರಕ್ಷಿಸುವ ಬಗ್ಗೆ ಚಿಂತಿಸಿರಿ. ನಾನು ಅಲ್ಲಾಹನ ವಿರುದ್ಧ ನಿಮಗೇನೂ ನೆರವಾಗಲಾರೆ. ನಿರ್ಣಾಯಕ ವಾದ ಆ ದಿನದಂದು ದೇವಭಯ ಉಳ್ಳವರು ಮಾತ್ರ ಪರಸ್ಪರ ಸಂಬಂಧಿಕರಾಗಿರುವರು. ಇತರರು ಸತ್ಕರ್ಮಗಳನ್ನು ತರುವಾಗ ನೀವು ಲೋಕದ ಶಾಪವನ್ನು ಎತ್ತಿ ತರುವಂತಾಗ ದಿರಲಿ. ಆಗ ನೀವು 'ಯಾ ಮುಹಮ್ಮದ್; ಯಾ ಮುಹಮ್ಮದ್!' ಎಂದು ಕೂಗಿ ಕರೆಯುವಿರಿ. ಆದರೆ ನಾನಾಗ ಏನೂ ಮಾಡುವ ಸ್ಥಿತಿಯಲ್ಲಿರಲಾರೆ. ನಿಮ್ಮ ಕಡೆ ಯಿಂದ ಮುಖ ತಿರುಗಿಸಿಕೊಳ್ಳದೆ ನನಗೆ ನಿರ್ವಾಹವಿರಲಾರದು. ಲೋಕದಲ್ಲಿ ನನಗೆ ನಿಮ್ಮೊಂದಿಗೆ ರಕ್ತ ಸಂಬಂಧವಿರುವುದು ನಿಜ. ಇಲ್ಲಿ ನಾನು ನಿಮ್ಮೊಂದಿಗೆ ಸದ್‌ವ್ಯವಹಾರ ಮಾಡುವೆನು. ಆದರೆ ಅಲ್ಲಾಹನಿಂದ ನಿಮಗೆ ಏನನ್ನೂ ಕೊಡಿಸಲು ಮತ್ತು ಪರಲೋಕದಲ್ಲಿ ನಿಮಗೇನಾದರೂ ಪಾಲು ದೊರಕಿಸಿ ಕೊಡಲು ನಾನು ಶಕ್ತನಲ್ಲ. ನೀವು 'ಲಾ ಇಲಾಹ ಇಲ್ಲಲ್ಲಾಹ್' (ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ) ಎಂದು ಘೋಷಿಸಿದರೆ ಮಾತ್ರ ಅದು ಸಾಧ್ಯ. ಆಗ ನಾನು ನಿಮ್ಮ ಪರವಾಗಿ ನಿಮ್ಮ ಪ್ರಭುವಿನ ಬಳಿ ಸಾಕ್ಷ್ಯವಹಿಸುವೆನು. ಆ ವಚನದ ಮೂಲಕ ಅರಬರು ನಿಮಗೆ ಅಧೀನರಾಗುವರು ಮತ್ತು ಅರಬೇತರರು ನಿಮಗೆ ವಿಧೇಯರಾಗುವರು."

ಸತ್ಯ ವಚನದ ಹಾದಿಯಲ್ಲಿ ಅತಿದೊಡ್ಡ ಮತ್ತು ಪ್ರಪ್ರಥಮ ತಡೆಯು ಪೂರ್ವಜರ ಅಂಧಾನುಕರಣೆಯಾಗಿರುತ್ತದೆ. ಇದರಿಂದಾಗಿ ಜನರು ವಿವೇಕ ಮತ್ತು ಧೀಮಂತಿಕೆಯ ಯಾವ ಮಾತನ್ನೂ ಆಲಿಸಲು ಸಿದ್ಧರಿರುವುದಿಲ್ಲ. ಸಫಾ ಬೆಟ್ಟದ ತಪ್ಪಲಲ್ಲಿ ಮುಹಮ್ಮದ್‌ರ(ಸ) ಈ ಪ್ರವಚನವನ್ನು ಕೇಳಿದವರೂ ಇದೇ ರೀತಿಯ ಜನರಾಗಿದ್ದರು. ಅವರು ಅಲ್ಲಾಹನ ಭವನವನ್ನು ಮಿಥ್ಯ ಆರಾಧ್ಯರ ಮೂರ್ತಿಗಳಿಂದ ತುಂಬಿದ್ದರು. ಕಅಬಾದ ಪ್ರಭುವನ್ನು ಬಿಟ್ಟು ಅವನ ಭವನದಲ್ಲಿ ಮಿಥ್ಯ ಆರಾಧ್ಯರನ್ನು ಪೂಜಿಸುತ್ತಿದ್ದರು. ಅವುಗಳ ಶ್ರದ್ಧೆಯಲ್ಲಿ ಅಂಧರಾಗಿ ಬಿಟ್ಟಿದ್ದರು. ಮುಹಮ್ಮದ್‌ರು(ಸ) ತಮ್ಮ ಮಾತು ಮುಗಿಸಿ ಪ್ರಶ್ನಾರ್ಥಕ ದೃಷ್ಟಿಯಲ್ಲಿ ಅವರನ್ನು ನೋಡಿದಾಗ ಮೊತ್ತ ಮೊದಲು ಅವರ ಚಿಕ್ಕಪ್ಪ ಅಬೂಲಹಬನು ಕೋಪದಲ್ಲಿ ಕೆಂಡವಾಗಿ ಗುಡುಗಿದನು:

"ನಾಶವಾಗಿ ಹೋಗು ನೀನು. ಇದನ್ನು ಕೇಳಿಸಲಿಕ್ಕೆ ನಮ್ಮನ್ನು ಇಲ್ಲಿ ಒಟ್ಟು ಸೇರಿಸಿದೆಯಾ?"

ಮಕ್ಕಾದ ಅತಿ ದೊಡ್ಡ ಬಡ್ಡಿಕೋರ ಸಾಹುಕಾರನು ತನ್ನ ಸೋದರ ಪುತ್ರನ ಮಾತು ಕೇಳಿ ಕ್ರುದ್ಧನಾದುದು ಸಹಜವೇ ಆಗಿತ್ತು. ಧನ ಕನಕಗಳನ್ನು ಪೂಜಿಸುವವರಿಂದ ಇದಕ್ಕಿಂತ ಭಿನ್ನವಾದುದನ್ನು ನಿರೀಕ್ಷಿಸಲಾಗದು.

ಸಭೆಯು ಗುಸುಗುಸು ಮಾತಾಡುತ್ತಾ ಹಳಿಯುತ್ತಾ ಶಪಿಸುತ್ತಾ ವಿಸರ್ಜನೆ ಗೊಂಡಿತು. ಮುಹಮ್ಮದ್(ಸ) ಒಬ್ಬರೇ ಸಫಾ ಬೆಟ್ಟದ ಮೇಲೆ ಉಳಿದರು. ಅಲ್ಲಾಹನ ಪ್ರವಾದಿ ಅಲ್ಲಾಹನ ದಾಸರಿಗೆ ಇಹ-ಪರಲೋಕಗಳ ಸುಖ-ಸೌಭಾಗ್ಯಗಳ ದಾರಿ ತೋರುತ್ತಿದ್ದರು. ಆದರೆ ಸ್ವೇಚ್ಛೆಯ ದಾಸರು ಹಲ್ಲು ಕಡಿಯುತ್ತಾ ಕಾಲು ಬಡಿಯುತ್ತಾ ಹಿಂತೆರಳಿದರು.

## ಸತ್ಯ ಮಾರ್ಗದ ಪ್ರಥಮ ಹುತಾತ್ಮ

ಖದೀಜಾರ ಪೂರ್ವ ಪತಿಯ ಪುತ್ರ ಹಾರಿಸ್ ಮುಹಮ್ಮದ್‌ರ(ಸ) ಮಡಿಲಲ್ಲೇ ಬೆಳೆದವರು. ಅವರು ತಮ್ಮ ಮನೆಯಲ್ಲಿ ಮಲಗಿದ್ದರು. ಒಮ್ಮೆಲೇ ಕಅಬಾ ಭವನದಿಂದ ಏನೋ ಬೊಬ್ಬೆ ಕೇಳಿಸುತ್ತದೆ. ಅವರು ಬೆಚ್ಚಿ ಬೀಳುತ್ತಾರೆ. 'ಯಾ ಅಲ್ಲಾಹ್ ಏನಾಯಿತು' ಎನ್ನುತ್ತಾ ದಿಗ್ಗನೆ ಎದ್ದು ಕಅಬಾದ ಕಡೆಗೆ ಧಾವಿಸುತ್ತಾರೆ.

ಕಅಬಾ ವಿಗ್ರಹಾಲಯವಾಗಿ ಮಾರ್ಪಟ್ಟಿದೆ. ವಾಸ್ತವದಲ್ಲಿ ಅದರ ನಿರ್ಮಾತೃ ಅದನ್ನು 'ಅಲ್ಲಾಹನ ಭವನ'ವೆಂದು ಸಾರಿದ್ದರು. ಅದು ಏಕದೇವಾರಾಧನೆಗಾಗಿ ನಿರ್ಮಿಸಲ್ಪಟ್ಟಿತ್ತು. ಆದರೆ ಶತಮಾನಗಳು ಸಂದಂತೆ ಕಅಬಾದ ನಿರ್ಮಾಪಕರಾದ ಹ. ಇಬ್ರಾಹೀಮ್‌ರ(ಅ) ಸಂತತಿಗಳು ಕಅಬಾದೊಳಗೆ ಒಂದೊಂದೇ ವಿಗ್ರಹವನ್ನು ತಂದಿರಿಸಿದರು. ಈಗ ಅವುಗಳ ಸಂಖ್ಯೆ 360ಕ್ಕಿಂತಲೂ ಮೀರಿತ್ತು.

ಏಕದೇವತ್ವ ಸಂದೇಶದ ಕೇಂದ್ರವಾಗಿ ನಿರ್ಮಿಸಲ್ಪಟ್ಟಿದ್ದ ಭವನದಲ್ಲಿಯೇ ಇಂದು ದೇವನ ಏಕತೆ ಸಾರುವುದನ್ನು ಆ ಭವನದ ಅವಹೇಳನವೆಂದು ಪರಿಗಣಿಸುತ್ತಿದ್ದರು. ವಿಗ್ರಹಗಳ ಇರುವಿಕೆಯಿಂದ ಕಅಬಾದ ಅವಹೇಳನವಾಗುತ್ತಿರಲಿಲ್ಲ. ವಿಗ್ರಹಗಳ ಮುಂದೆ ಹಣೆಯಿಟ್ಟು ನಮಸ್ಕರಿಸುವುದರಿಂದಲೂ ಅದರ ಅವಹೇಳನವಾಗುತ್ತಿರಲಿಲ್ಲ. ನಗ್ನವಾಗಿ ಪ್ರದಕ್ಷಿಣೆ ಮಾಡುವುದರಿಂದ, ಸಿಳ್ಳು ಹೊಡೆದು ಚಪ್ಪಾಳೆ ತಟ್ಟುವುದರಿಂದ, ದೇವೇತರರ ಹೆಸರಲ್ಲಿ ಪ್ರಾಣಿ ಬಲಿ ನೀಡುವುದರಿಂದ, ಪುರೋಹಿತರ ದಕ್ಷಿಣೆ ಮತ್ತು ಧರ್ಮದರ್ಶಿಗಳ ಶುಲ್ಕವನ್ನು ವಸೂಲು ಮಾಡುವುದರಿಂದ ಕಅಬಾ ಭವನದ ಅವಮಾನವಾಗುತ್ತಿರಲಿಲ್ಲ. ಆದರೆ ಆ ಭವನದ ನೈಜ ಒಡೆಯನ ಹೆಸರೆತ್ತಿದ ಕೂಡಲೇ ಅದರ ಅವಹೇಳನವಾಗುತ್ತಿತ್ತು!

ಸತ್ಯಸಂದೇಶವನ್ನು ಘಂಟಾಘೋಷವಾಗಿ ಪ್ರಚಾರ ಮಾಡಬೇಕೆಂಬ ಆಜ್ಞೆಯು ಪ್ರವಾದಿವರ್ಯರಿಗೆ(ಸ) ಭೂಮಿ-ಆಕಾಶಗಳ ಪ್ರಭುವಿನ ವತಿಯಿಂದ ಲಭಿಸಿ ಆಗಿತ್ತು. ಈ ಮಾರ್ಗದಲ್ಲಿ ಯಾರನ್ನೂ ಲೆಕ್ಕಿಸಬೇಡಿ ಎಂಬ ದೇವಾದೇಶವೂ ಬಂದಿತ್ತು. ಆದ್ದರಿಂದ

ಇಂದು ಅವರು ಕಅಬಾದಲ್ಲಿ ಕಅಬಾದ ಪ್ರಭುವಿನ ನಾಮವನ್ನು ಬಹಿರಂಗವಾಗಿ ಎತ್ತಿದರು. ಕಅಬಾದ ಬಳಿ ನಿಂತು ಏಕದೇವತ್ವದ ಘೋಷಣೆ ಮಾಡಿದರು. ವಿಗ್ರಹಾರಾಧಕರ ಮಧ್ಯೆ ಕೋಲಾಹಲವೆದ್ದಿತು.

"ಅವಮಾನ-ಕಅಬಾ ಭವನದ ಅವಮಾನ-ನಮ್ಮ ದೇವತೆಗಳ ಅವಮಾನ" ಎಂಬ ಕೂಗು ನಾಲ್ಕು ದಿಕ್ಕುಗಳಿಂದಲೂ ಮೊಳಗಿತು.

ಇಂದು ಇಡೀ ಮಕ್ಕಾದ ಪ್ರೀತಿ ಮತ್ತು ಗೌರವಗಳಿಗೆ ಪಾತ್ರರಾಗಿದ್ದ 'ಸತ್ಯಸಂಧ' ಮತ್ತು 'ಪ್ರಾಮಾಣಿಕ' ಎಂಬ ಬಿರುದಾಂಕಿತ ಮುಹಮ್ಮದ್(ಸ) ಆ ಜನರ ಮಧ್ಯೆ ನಿಂತಿದ್ದರು. ಎಲ್ಲರಿಗಿಂತಲೂ ಉತ್ತಮ ವ್ಯಕ್ತಿಯೆಂದು ಪರಿಗಣಿಸಲ್ಪಡುತ್ತಿದ್ದ ಆ ವ್ಯಕ್ತಿಯನ್ನು ಸತ್ಯ ಹೇಳಿದ, ಪವಿತ್ರ ಸಂದೇಶವನ್ನು ಬಿತ್ತರಿಸಿದ ಮತ್ತು ಸತ್ಯಾಸತ್ಯಗಳ ವ್ಯತ್ಯಾಸವನ್ನು ತಿಳಿಸಿದ ತಪ್ಪಿಗಾಗಿ ನಾಲ್ಕೂ ದಿಕ್ಕುಗಳಿಂದ ಸುತ್ತುವರಿಯಲಾಗಿದೆ.

ಸತ್ಯನಿಷೇಧಿಗಳ ಭಾವನೆಗಳು ಕೆರಳಿವೆ. ಏಕ ದೇವಾರಾಧನೆಯ ವಚನವು ಅವರಲ್ಲಿ ದ್ವೇಷ ಮತ್ತು ವೈರದ ಅಗ್ನಿಯನ್ನು ಹೊತ್ತಿಸಿದೆ. ಅವರು ನಾಲ್ಕೂ ಕಡೆಗಳಿಂದ ಧಾವಿಸಿ ಬಂದು ಕೋಲಾಹಲವೆಬ್ಬಿಸಿದ್ದಾರೆ.

ಮುಹಮ್ಮದ್(ಸ) ಈ ರಕ್ತದಾಹಿಗಳ ಮಧ್ಯೆ ಪ್ರಾಣಾಪಾಯದಲ್ಲಿ ಸಿಲುಕಿದ್ದಾರೆ. ಅಷ್ಟರಲ್ಲಿ ಹಾರಿಸ್ ಬಿನ್ ಅಬೀ ಹಾಲ ಅಲ್ಲಿಗೆ ಬರುತ್ತಾರೆ. ಜನಸಂದಣಿಯ ಮಧ್ಯೆ ನುಗ್ಗುತ್ತಾ ಪ್ರವಾದಿವರ್ಯರ(ಸ) ಬಳಿಗೆ ಬರುತ್ತಾರೆ. ಆದರೆ ಸತ್ಯನಿಷೇಧಿಗಳಾದ ಬಹುದೇವಾ ರಾಧಕರ ಕೆರಳಿದ ಖಡ್ಗಗಳು ಅವರ ಮೇಲೆ ಎರಗುತ್ತವೆ. ಅವರು ಸತ್ಯಧರ್ಮಕ್ಕಾಗಿ ತಮ್ಮ ಪ್ರಾಣವನ್ನು ಅರ್ಪಿಸುತ್ತಾರೆ. ಸನ್ಮಾರ್ಗಕ್ಕೆ ತನ್ನ ಪ್ರಾಣದ ಹರಕೆ ಅರ್ಪಿಸಿ ಹುತಾತ್ಮರಾಗುತ್ತಾರೆ.

ಇದು ಸತ್ಯದ ಪಕ್ಷವಹಿಸಿದ್ದಕ್ಕಾಗಿ ಹತ್ಯೆಗೈಯಲ್ಪಟ್ಟ ಪ್ರಥಮ ಪ್ರಾಣವಾಗಿತ್ತು. ಮುಸ್ಲಿಮರಲ್ಲಿ ಹುತಾತ್ಮತೆಯ ಕಿರೀಟ ತೊಟ್ಟ ಪ್ರಥಮ ವ್ಯಕ್ತಿ ಹ. ಹಾರಿಸ್(ರ) ಅವರಾಗಿದ್ದರು.

## ಕಅಬಾದ ನೆರಳಲ್ಲಿ

ಕಅಬಾ ಭವನದ ಬಳಿ ಪ್ರವಾದಿ ಮುಹಮ್ಮದ್(ಸ) ನಮಾಝ್ ಮಾಡುತ್ತಿದ್ದಾರೆ. ಇಸ್ಲಾಮೀ ಕ್ರಮದಲ್ಲಿ ಮಾಡುತ್ತಿರುವ ಈ ನಮಾಝನ್ನು ಕಂಡು ಇವರು ಯಾವುದೋ ಹೊಸ ಧರ್ಮದಲ್ಲಿ ಸ್ಥಿರವಾಗಿ ಬಿಟ್ಟಿದ್ದಾರೆಂಬುದು ಕುರೈಶರಿಗೆ ಮನವರಿಕೆಯಾಯಿತು. ಅವರು ಮುಹಮ್ಮದ್‌ರನ್ನು(ಸ) ಆಶ್ಚರ್ಯ ಚಕಿತ ದೃಷ್ಟಿಯಿಂದ ನೋಡುತ್ತಿರುವಂತೆ ಅಬೂಜಹಲ್, "ಲಾತ್ ಮತ್ತು ಉಝ್ಝಾರ ಆಣೆ! ಮುಹಮ್ಮದ್‌ರನ್ನು(ಸ) ಈ ರೀತಿ ನಮಾಝ್ ಮಾಡುವುದನ್ನು ಕಂಡರೆ ಅವರ ಕುತ್ತಿಗೆಯ ಮೇಲೆ ಕಾಲಿಡುವುದಾಗಿಯೂ ಅವರ ಮುಖವನ್ನು ನೆಲಕ್ಕೆ ಒರಸುವುದಾಗಿಯೂ ನಾನು ಪ್ರತಿಜ್ಞೆ ಮಾಡಿರುತ್ತೇನೆ. ಈಗ ನಾನು

ಅದನ್ನು ಮಾಡಿಯೇ ತೀರುವೆನು" ಎನ್ನುತ್ತಾ ರೋಷಾವೇಶ ಮತ್ತು ಉತ್ಸಾಹದಿಂದ ಮುನ್ನುಗ್ಗಿದನು. ಜನರು ಅವನನ್ನು ಎವೆಯಿಕ್ಕದೆ ನೋಡುತ್ತಿದ್ದರು. ಅದರೂ ಅವನು ಹಿಂಜರಿಯುವುದನ್ನು ಕಂಡು ಅವರ ವಿಸ್ಮಯಕ್ಕೆ ಮಿತಿಯೇ ಇರಲಿಲ್ಲ. ಅವನು ತನ್ನ ಮುಖವನ್ನು ಯಾವುದೋ ವಸ್ತುವಿನಿಂದ ರಕ್ಷಿಸುತ್ತಿರುವಂತೆ ಕಾಣುತ್ತದೆ. ಆತ ಮರಳಿ ಅವರ ಬಳಿಗೆ ಬಂದಾಗ ಅವನ ಮುಖವು ಬಿಳಿಚಿ ಹೋಗಿತ್ತು. 'ನಿನಗೇನಾಯಿತು?' ಎಂದು ಜನರು ಆಶ್ಚರ್ಯದಿಂದ ಕೇಳಿದರು.

ಅಬೂಜಹಲ್: ನನ್ನ ಮತ್ತು ಮುಹಮ್ಮದ್‌ರ(ಸ) ನಡುವೆ ಒಂದು ಅಗ್ನಿಕುಂಡ ಮತ್ತು ಒಂದು ಭಯಾನಕ ವಸ್ತುವಿತ್ತು. ಅದಕ್ಕೆ ಕೆಲವು ರೆಕ್ಕೆಗಳೂ ಇದ್ದುವು.

ಅಲ್ಲಾಹನು ತನ್ನ ಆಪ್ತರನ್ನು(ಸ) ರಕ್ಷಿಸುವ ಅಗೋಚರ ವ್ಯವಸ್ಥೆಯನ್ನು ಮಾಡಿದ್ದನು. ಆ ಕುರಿತು ಮುಹಮ್ಮದ್(ಸ) ಹೀಗೆ ಹೇಳಿರುವರು: "ಅವನು ನನ್ನ ಬಳಿ ಸುಳಿಯುತ್ತಿದ್ದರೆ ದೇವಚರರು ಅವನನ್ನು ನುಚ್ಚುನೂರುಗೊಳಿಸಿ ಬಿಡುತ್ತಿದ್ದರು."

ಒಮ್ಮೆ ಪ್ರವಾದಿ(ಸ) ಮಕಾಮು ಇಬ್ರಾಹೀಮ್‌ನಲ್ಲಿ* ನಮಾಝ್ ಮಾಡುತ್ತಿದ್ದಾಗ ಅವರನ್ನು ಅಬೂಜಹಲ್ ಹೀಗೆ ಜರೆದಿದ್ದನು: "ಮುಹಮ್ಮದ್! ನಿನ್ನನ್ನು ನಾನು ಇದರಿಂದ ತಡೆದಿರಲಿಲ್ಲವೆ?"

ಮುಹಮ್ಮದ್(ಸ) ಅವನನ್ನು ಕಠಿಣವಾಗಿ ಗದರಿಸಿದ್ದರು. ಆಗ ಅವನು ರೋಷಾಕುಲನಾಗಿ ಹೀಗೆ ಹೇಳಿದ: "ಮುಹಮ್ಮದ್! ಯಾರ ಭರವಸೆಯ ಮೇಲೆ ನೀನು ನನ್ನನ್ನು ಗದರಿಸುತ್ತಿರುವೆ? ಅಲ್ಲಾಹನಾಣೆ ಈ ಕಣಿವೆಯಲ್ಲಿ ನನಗೆ ಅತ್ಯಧಿಕ ಬೆಂಬಲಿಗರಿದ್ದಾರೆ."

ಆಗ ಅಲ್ಲಾಹನ ವತಿಯಿಂದ ಈ ದಿವ್ಯವಾಣಿಯು ಅವತೀರ್ಣವಾಯಿತು: "ಸರ್ವಥಾ ಅಲ್ಲ, ಮಾನವನು ವಿದ್ರೋಹವೆಸಗುತ್ತಾನೆ- ತನ್ನನ್ನು ಸರ್ವಸ್ವತಂತ್ರ ನೆಂದು ಕಂಡು. (ವಸ್ತುತಃ ಅವನಿಗೆ) ನಿನ್ನ ಪ್ರಭುವಿನ ಕಡೆಗೇ ಖಂಡಿತ ಮರಳಬೇಕಾಗಿದೆ. ಒಬ್ಬ ದಾಸನು ನಮಾಝ್ ಮಾಡುತ್ತಿರುವಾಗ ಅವನನ್ನು ತಡೆಯುವ ವ್ಯಕ್ತಿಯನ್ನು ನೀವು ಕಂಡಿರಾ? ನಿಮ್ಮ ಅಭಿಪ್ರಾಯವೇನು? (ಆ ದಾಸನು) ಸನ್ಮಾರ್ಗದಲ್ಲಿದ್ದರೆ- ಅಥವಾ ಧರ್ಮನಿಷ್ಠೆಯ ಉಪದೇಶ ನೀಡುತ್ತಿದ್ದರೆ? (ತಡೆಯುವವನಾದ ಈ ವ್ಯಕ್ತಿಯು ಸತ್ಯವನ್ನು) ತಿರಸ್ಕರಿಸುವವನೂ ವಿಮುಖನಾಗುವವನೂ ಆಗಿದ್ದರೆ, ನಿಮ್ಮ ಅಭಿಪ್ರಾಯ ವೇನು? ಅಲ್ಲಾಹನು ನೋಡುತ್ತಿದ್ದಾನೆಂಬುದನ್ನು ಅವನು ತಿಳಿದಿಲ್ಲವೇ? ಖಂಡಿತ ಅಲ್ಲ, ಅವನು (ತನ್ನ ನಿಲುವನ್ನು) ತೊರೆಯದಿದ್ದರೆ ನಾವು ಅವನ ಜುಟ್ಟನ್ನು ಹಿಡಿದು ಎಳೆಯು ವೆವು. ಸುಳ್ಳುಗಾರ ಹಾಗೂ ಮಹಾ ಅಪರಾಧಿ ಜುಟ್ಟನ್ನು. ಅವನು ತನ್ನ ಬೆಂಬಲಿಗರ ಹಿಂಡನ್ನು ಕರೆದುಕೊಳ್ಳಲಿ- ನಾವೂ ಯಾತನೆ ನೀಡುವ ದೇವಚರರನ್ನು ಕರೆಸಿಕೊಳ್ಳುವೆವು- ಖಂಡಿತ ಅಲ್ಲ, ಅವನ ಮಾತನ್ನು ಅನುಸರಿಸ ಬೇಡಿರಿ, ಸಾಷ್ಟಾಂಗ ವೆರಗಿರಿ ಮತ್ತು (ನಿಮ್ಮ ಪ್ರಭುವಿನ) ಸಾಮಿಪ್ಯ ಪಡೆಯಿರಿ." **(ಪವಿತ್ರ ಕುರ್‌ಆನ್: 96: 6-19)**

# ಪೇಟೆಯಲ್ಲಿ ಧರ್ಮ ಪ್ರಚಾರ

ದುಲ್ ಮಜಾರ್ಝ್‌ನ ಪೇಟೆಯಲ್ಲಿ ಜನಸಂದಣಿ ನೆರೆದಿದೆ. ಎಲ್ಲೆಲ್ಲೂ ಗುಲ್ಲು ಗದ್ದಲ. ಸ್ವಲ್ಪ ದೂರದಲ್ಲಿ ಓರ್ವ ನವಯುವಕ ತನ್ನ ತಂದೆಯ ಜತೆ ಬೇಗ ಬೇಗ ಹೆಜ್ಜೆ ಹಾಕುತ್ತಾ ಪೇಟೆಯತ್ತ ಸಾಗುತ್ತಿದ್ದಾನೆ.

ಪೇಟೆಯಲ್ಲಿ ಎಲ್ಲೆಡೆ ಕಂಬಳಿಯ ಡೇರೆಗಳು ಗೋಚರಿಸುತ್ತಿವೆ. ಅರಬ್ ಸ್ತ್ರೀಯರು ಮತ್ತು ಮಕ್ಕಳು ತಂತಮ್ಮ ಸರಕುಗಳೊಂದಿಗೆ ಡೇರೆಗಳೊಳಗಿದ್ದಾರೆ. ಕೆಲವೆಡೆ ಡೇರೆಗಳ ಮುಂದೆ ಒಂಟೆಗಳೂ ಇವೆ. ಹೆಚ್ಚಿನ ಒಂಟೆಗಳು ದೂರದ ಕಾಡಿನಲ್ಲಿ ಮೇಯುತ್ತಿವೆ. ಡೇರೆಗಳಿಂದ ಸ್ವಲ್ಪವೇ ದೂರ ವ್ಯಾಪಾರ ಸರಕುಗಳ ಪ್ರದರ್ಶನ ಮಾರಾಟ ನಡೆಯುತ್ತಿದೆ.

ಇದು ಅರಬರ ಸಾಂಸ್ಕೃತಿಕ ಜಾತ್ರೆಯೂ ಹೌದು. ಇಲ್ಲಿ ಸಾವಿರಾರು ದಿರ್ಹಮ್ ಮತ್ತು ದೀನಾರ್‌ಗಳ ವ್ಯಾಪಾರ ನಡೆಯುತ್ತದೆ. ಇದು ಅರಬರ ಸಾಮೂಹಿಕ ಹಿತಾಸಕ್ತಿಯ ಕೇಂದ್ರವೆನಿಸಿದೆ. ಇದರಲ್ಲಿ ಅರಬರ ಸಾಂಸ್ಕೃತಿಕ ಜೀವನದ ದರ್ಶನವೂ ಆಗುತ್ತಿತ್ತು. ಒಂದೆಡೆ ಕುಸ್ತಿ ಪಂದ್ಯಾಟ ನಡೆಯುತ್ತಿದ್ದರೆ ಇನ್ನೊಂದೆಡೆ ಕವಿ-ಕಾವ್ಯಗೋಷ್ಠಿಗಳು ನಡೆಯುತ್ತಿವೆ. ಒಂದೆಡೆ ಸುಂದರಿಯರ ಗಾನ-ನರ್ತನಗಳು ನಡೆಯುತ್ತಿವೆ. ಇನ್ನೊಂದೆಡೆ ಕುದುರೆ ಸವಾರಿಯ ಸ್ಪರ್ಧೆ ನಡೆಯುತ್ತಿದೆ.

ಪೇಟೆಗೆ ಪ್ರವೇಶಿಸುತ್ತಲೇ ರಬೀಅನ ಎಲ್ಲ ಬಳಲಿಕೆಯೂ ದೂರವಾಗುತ್ತದೆ. ಆಯಾಸದ ಸ್ಥಾನದಲ್ಲಿ ಮುಖದ ಮೇಲೆ ಹರ್ಷದ ರೇಖೆಗಳು ಮೂಡಿದುವು. ತಂದೆ ಮಗ ಇಬ್ಬರೂ ಒಬ್ಬ ಸ್ಫುರದ್ರೂಪಿ ಗಂಭೀರ ವ್ಯಕ್ತಿಯ ಬಳಿ ಹೋದರು. ಅವರು ಬಿಳಿ ವಸ್ತ್ರಗಳನ್ನು ಧರಿಸಿದ್ದು ಜನರಿಗೆ ಏನೋ ಹೇಳುತ್ತಿದ್ದರು. ರಬೀಅ ಇನ್ನಷ್ಟು ಸಮೀಪ ಹೋದಾಗ ಆ ಗೌರವಾನ್ವಿತ ವ್ಯಕ್ತಿ ಜನರಿಗೆ ಈ ರೀತಿ ಉಪದೇಶಿಸುತ್ತಿದ್ದರು: "ಜನರೇ, ಹೇಳಿರಿ: 'ಅಲ್ಲಾಹನಲ್ಲದೆ ಅನ್ಯ ಆರಾಧ್ಯನಿಲ್ಲ' ನೀವು ಜಯಶೀಲರಾಗುವಿರಿ."

ರಬೀಅ ತನ್ನ ತಂದೆಯಲ್ಲಿ ಆ ವ್ಯಕ್ತಿ ಯಾರೆಂದು ವಿಚಾರಿಸಿದರು.

"ಮುಹಮ್ಮದ್(ಸ)" ಎನ್ನುತ್ತಾ ಇನ್ನೇನೋ ಹೇಳ ಹೊರಟ ಇಬಾದುದ್ದೈಲಿ. ಮುಹಮ್ಮದ್‌ರ(ಸ) ಹಿಂದಿನಿಂದ ಓರ್ವ ಕೆಂಪು ಮುಖದ ವ್ಯಕ್ತಿ ಬಂದು ಈ ರೀತಿ ಹೇಳಿದನು: "ಜನರೇ, ಇವನ ಮಾತು ಕೇಳಬೇಡಿ. ಇವನು ಸುಳ್ಳುಗಾರ. ಇವನು ತನ್ನ ಪೂರ್ವಜರ ಧರ್ಮವನ್ನು ತೊರೆದಿರುವನು."

ಅವನ ಮಾತು ಕೇಳುತ್ತಲೇ ಗುಂಪಿನೊಳಗಿಂದ ಒಬ್ಬ ವ್ಯಕ್ತಿ ಜೋರಾಗಿ ಕೂಗಿ ಹೇಳಿದನು:

"ಮುಹಮ್ಮದರೇ, ನಿಮ್ಮ ಚಿಕ್ಕಪ್ಪನೇ ನಿಮ್ಮನ್ನು ಸುಳ್ಳುಗಾರನೆನ್ನುತ್ತಿರುವಾಗ ನಾವು ನಿಮ್ಮ ಮಾತನ್ನು ಒಪ್ಪುವುದಾದರೂ ಹೇಗೆ? ಆತ ಪ್ರಾಯದಲ್ಲೂ ನಿಮಗಿಂತ ಹಿರಿಯನು.

ಲೋಕಾನುಭವ ಉಳ್ಳವನು. ಮಕ್ಕಾದ ಅತಿ ದೊಡ್ಡ ಧನಿಕ. ಆತ ಹೇಳುವುದು ಸರಿಯೇ ಆಗಿರಬೇಕು."

ಇದನ್ನು ಕೇಳಿ ಜನರ ಗುಂಪು ಮುಹಮ್ಮದ್(ಸ) ಅವರ ಮಾತುಗಳನ್ನು ನಿರ್ಲಕ್ಷಿಸಿ ಚದುರಿತು.

ಯಾರಿಗೆ ಮುಹಮ್ಮದ್(ಸ) ತಮ್ಮ ಸಂದೇಶವನ್ನು ನೀಡುತ್ತಿದ್ದರೋ ಅವರು ತಮ್ಮ ವಂಶ, ಕುಲ, ಗೋತ್ರಗಳ ಪಕ್ಷಪಾತಕ್ಕೆ ಸಿಲುಕಿದ್ದರು. ಅವರ ಮುಂದಿದ್ದುದು ಕೇವಲ ಲೌಕಿಕ ಧ್ಯೇಯೋದ್ದೇಶಗಳ ಪೂರೈಕೆ ಮಾತ್ರ. ಆದರ ಹೊರತು ಇನ್ನಾವ ವಸ್ತುವೂ ಅವರ ಮಟ್ಟಿಗೆ ಗಮನಾರ್ಹವಾಗಿರಲಿಲ್ಲ.

ಮುಹಮ್ಮದ್(ಸ) ಇದರಿಂದ ನಿರಾಶರಾಗಲಿಲ್ಲ. ಅವರು ಅಲ್ಲಾಹನಿಂದ ದೂರ ಸರಿದು ಪಥಭ್ರಷ್ಟರಾಗಿರುವ ಅವನ ದಾಸರಿಗೆ ಅವನ ಸಂದೇಶ ತಲುಪಿಸಲಿಕ್ಕಾಗಿಯೇ ನೇಮಕಗೊಂಡಿದ್ದರು. ಆದ್ದರಿಂದ ಅವರು ಒಂದೊಂದು ಗೋತ್ರದ ಜನರೆಡೆಗೆ ಹೋಗಿ ಈ ರೀತಿ ಹೇಳುತ್ತಿದ್ದರು:

"ಓ..... ಗೋತ್ರದವರೇ, ನಾನು ನಿಮ್ಮ ಕಡೆಗೆ ಅಲ್ಲಾಹನ ಸಂದೇಶವಾಹಕನಾಗಿರುವೆನು. ನೀವು ಕೇವಲ ಅಲ್ಲಾಹನ ದಾಸ್ಯ-ಆರಾಧನೆ ಮತ್ತು ಅನುಸರಣೆ ಮಾಡಬೇಕೆಂದೂ ಅವನ ಜತೆ ಯಾರನ್ನೂ ಭಾಗೀದಾರರನ್ನಾಗಿ ಮಾಡಬಾರದೆಂದೂ ನಾನು ನಿಮಗೆ ಆದೇಶಿಸುತ್ತೇನೆ. ನೀವು ನನ್ನನ್ನು ದೃಢೀಕರಿಸಿರಿ ಮತ್ತು ನನಗೆ ನೆರವಾಗಿರಿ. ತನ್ಮೂಲಕ ನಾನು ಅಲ್ಲಾಹನು ನನಗೆ ವಹಿಸಿಕೊಟ್ಟಿರುವ ಕೆಲಸವನ್ನು ಪೂರ್ಣಗೊಳಿಸುವೆನು."

ರಬೀಅರಿಗೆ ಮುಹಮ್ಮದ್‌ರ(ಸ) ವ್ಯಕ್ತಿತ್ವದ ಬಗ್ಗೆ ಅಭಿರುಚಿ ಉಂಟಾಯಿತು. ಅವರ ಮಾತುಗಳು ರಬೀಅರಿಗೆ ಬಹಳ ಹಿಡಿಸಿದ್ದುವು. ಅವರ ಸವಿಮಾತುಗಳಿಂದ ರಬೀಅ ಬಹಳ ಪ್ರಭಾವಿತರಾಗಿದ್ದರು.

"ಅಲ್ಲಾಹನಾಣೆ ಈ ಸುಂದರ ವದನವು ಸತ್ಯನಿಷೇಧಿ ಆಗಿರಲಾರದು. ಇವರು ಸತ್ಯವಂತರು. ಖಂಡಿತ ಎಲ್ಲರಿಗಿಂತಲೂ ಹೆಚ್ಚು ಸತ್ಯವಂತರು. ಅನ್ಯಥಾ ಕಲ್ಲೇಟು ತಿಂದು ನೊಂದು ನಿರಾಶರಾಗುತ್ತಿದ್ದರು."

ರಬೀಅ ಇದೇ ರೀತಿ ಯೋಚಿಸುತ್ತಾ ಮುಹಮ್ಮದ್‌ರ(ಸ) ಹಿಂದೆಯೇ ವಿಭಿನ್ನ ಗೋತ್ರಗಳ ಡೇರೆಗಳೆಡೆಗೆ ಹೋದರು. ಅಬೂಲಹಬ್ ಕೂಡಾ ಅವರನ್ನು ಹಿಂಬಾಲಿಸುತ್ತಿದ್ದನು. ಮುಹಮ್ಮದ್(ಸ) ತಮ್ಮ ಮಾತು ಮುಗಿಸುತ್ತಲೇ ಆತ ಬೊಬ್ಬೆ ಹಾಕಿ ಜನರಿಗೆ ಹೀಗೆ ಹೇಳುತ್ತಿದ್ದನು:

"ಓ..... ಗೋತ್ರದವರೇ, ಈತ ನಿಮ್ಮನ್ನು ಲಾತ್ ಮತ್ತು ಉಝ್ಝಾಗಳಿಂದ ವಿಮುಖಗೊಳಿಸಿ ನವೀನ ಪಥಭ್ರಷ್ಟತೆಯ ಕಡೆಗೆ ತರಬಯಸುತ್ತಾನೆ. ಈತನ ಮಾತನ್ನು ಎಷ್ಟು ಮಾತ್ರಕ್ಕೂ ಕೇಳಬೇಡಿ. ಈತನನ್ನು ಅನುಸರಿಸಬೇಡಿ."

'ದುಲ್ ಮಜಾಝ್'ನ ಪೇಟೆಯಲ್ಲೇ ಮುಹಮ್ಮದ್(ಸ) ಈ ರೀತಿ ಜನರಿಗೆ ಉಪದೇಶಿಸುತ್ತಾ ಸಾಗುತ್ತಿರುವುದನ್ನು ತಾರಿಕ್ ಬಿನ್ ಅಬ್ದುಲ್ಲಾ ಅಲ್ ಮಹಾರಬಿ ಆಲಿಸಿದರು:

"ಜನರೇ, 'ಅಲ್ಲಾಹನಲ್ಲದೆ ಅನ್ಯ ಆರಾಧ್ಯನಿಲ್ಲ'ವೆಂದು ಹೇಳಿರಿ. ನೀವು ಜಯಶೀಲರಾಗುವಿರಿ."

ಅವರ ಹಿಂದೆಯೇ ಅಬೂಲಹಬ್ ಅವರೆಡೆಗೆ ಕಲ್ಲೆಸೆಯುತ್ತಾ ನಡೆಯುತ್ತಿದ್ದಾನೆ. ಮುಹಮ್ಮದ್(ಸ) ಅವರ ಪಾದಗಳು ರಕ್ತದಿಂದ ತೊಯ್ದು ಹೋಗುತ್ತವೆ. ಆತ ಹೀಗೆ ಹೇಳುತ್ತಾ ಸಾಗುತ್ತಿದ್ದಾನೆ,

"ಇವನು ಸುಳ್ಳುಗಾರ, ಇವನ ಮಾತನ್ನು ಕೇಳದಿರಿ."

ಓರ್ವ ಅತ್ಯಂತ ಸತ್ಯಸಂಧ ವ್ಯಕ್ತಿಯು ಅಲ್ಲಾಹನ ಸತ್ಯಸಂದೇಶವನ್ನು ಜನರಿಗೆ ತಲುಪಿಸುತ್ತಿರುವಾಗ ಅವರನ್ನು ಸುಳ್ಳುಗಾರನೆನ್ನಲಾಗುತ್ತಿದೆ. ಮಿಥ್ಯ ದೇವರುಗಳನ್ನು ನಂಬಿರುವ ಸುಳ್ಳುಗಾರ ವ್ಯಕ್ತಿಯನ್ನು ಸತ್ಯವಂತನೆಂದು ಪರಿಗಣಿಸಲಾಗುತ್ತಿದೆ. ಅವನನ್ನು ಬುದ್ಧಿವಂತಿಕೆ ಮತ್ತು ದೊಡ್ಡಸ್ತಿಕೆಯ ಪ್ರತೀಕವೆಂದು ಪರಿಗಣಿಸಲಾಗುತ್ತಿದೆ. ಇದೆಷ್ಟು ವಿಚಿತ್ರ!

## ಅಧ್ಯಾಯ - ೭

# ಸತ್ವ ಪರೀಕ್ಷೆಗಳು

### ಅಪಹಾಸ್ಯ

ಮುಹಮ್ಮದ್(ಸ) ಒಂದು ಯಾತ್ರಾ ತಂಡವು ಬಂದಿಳಿದಿರುವ ಸ್ಥಳಕ್ಕೆ ಧಾವಿಸುತ್ತಿದ್ದಾರೆ. ಈ ರೀತಿ ಮಕ್ಕಾ ಪಟ್ಟಣದಲ್ಲಿ ಹೊರಗಿನ ವ್ಯಾಪಾರಿ ತಂಡಗಳು ಬಂದಿಳಿದಾಗಲೆಲ್ಲಾ ಅಲ್ಲಿಗೆ ಭೇಟಿ ನೀಡಿ ಅವರಿಗೆ ಅಲ್ಲಾಹನ ವಚನವನ್ನು ಕೇಳಿಸುವುದು ಪ್ರವಾದಿವರ್ಯರ(ಸ) ರೂಢಿಯಾಗಿತ್ತು. ಇಂದು ಕೂಡಾ ಅವರು ಅದೇ ಉದ್ದೇಶದಿಂದ ಅಲ್ಲಿಗೆ ಹೋಗುತ್ತಿದ್ದಾರೆ. ಪುಂಡ-ಪೋಕರಿಗಳ ಒಂದು ಗುಂಪು ಅವರನ್ನು ಕಂಡು ಕೇಕೆ ಹಾಕಿ ನಗುತ್ತಿತ್ತು. ಒಬ್ಬನು ಕೃತಕ ಕೆಮ್ಮು ತಂದುಕೊಂಡು ಹೀಗೆನ್ನುತ್ತಾನೆ:

"ಅಲ್ಲಿ ನೋಡಿ, ನನ್ನನ್ನು ಅಲ್ಲಾಹನು ತನ್ನ ಪ್ರವಾದಿಯಾಗಿ ಮಾಡಿರುವನು ಎಂದು ಹೇಳಿಕೊಳ್ಳುತ್ತಿರುವವನೊಬ್ಬ ಹೋಗುತ್ತಿರುವುದು. ನಾವು ನಮ್ಮ ಶ್ರದ್ಧೆ ಭಕ್ತಿಗಳಲ್ಲಿ ಅಚಲರಾಗಿರದಿದ್ದರೆ ಅವನು ನಮ್ಮನ್ನು ನಮ್ಮ ದೇವರುಗಳಿಂದ ವಿಮುಖಗೊಳಿಸಿ ದಾರಿಗೆಡಿಸಿ ಬಿಡುತ್ತಿದ್ದನು."

ಈ ಗುಂಪಿನಲ್ಲಿ ಉಕ್‌ಬಾ, ಉತ್‌ಬಾ, ರಬೀಅ ಮತ್ತು ಉಮಯ್ಯ ಇದ್ದಾರೆ.

ಉಕ್‌ಬಾ: "ಅಲ್ಲಿ ನೋಡಿ ಆತನ ಮೇಲೆ ಆಕಾಶದಿಂದ ದಿವ್ಯವಾಣಿ ಇಳಿಯು ತ್ತಿದೆಯಂತೆ."

ರಬೀಅ (ಗಹಗಹಿಸಿ ನಗುತ್ತಾ) "ಅವನ ಜತೆಗಿರುವ ದೇವದೂತರು ನಿಮಗೆ ಗೋಚರಿಸುವುದಿಲ್ಲವೇ?"

ಉಕ್‌ಬಾ: "ಲಾತ್ ಮತ್ತು ಉಝ್ಝಾಗಳ ಆಣೆ! ಆತನ ಜತೆ ಒಬ್ಬ ದೇವದೂತ ನನ್ನಾದರೂ ಕಂಡರೆ ನಾನು ಖಂಡಿತ ಅವನ ಅನುಯಾಯಿಯಾಗಿ ಬಿಡಲು ತಡಮಾಡಲಾರೆ."

ಉತ್‌ಬಾ: "ನಾನಂತೂ ಖಂಡಿತ ಅವನನ್ನು ನಂಬಲಾರೆ. ಅಲ್ಲಾಹನು ಸ್ವತಃ ಬಂದು ಇದು ನನ್ನ ಸಂದೇಶವಾಹಕ, ನೀವು ಇವರ ಮಾತು ಕೇಳಿ ಎಂದು ಹೇಳಿದರೆ ಮಾತ್ರ ನಾನು ನಂಬುವೆನು."

ಉಮಯ್ಯ: "ನೀವಿಬ್ಬರೂ ತಿಳಿಗೇಡಿಗಳು. ಅವನಂತೂ ನುರಿತ ಜಾದೂಗಾರ. ತನ್ನ ಜಾದೂವಿನ ಬಲದಿಂದ ನಿಮಗೆ ದೇವದೂತರನ್ನು ತೋರಿಸುವುದು ಅವನಿಗೆ ಕಷ್ಟದ ಕೆಲಸವೇನಲ್ಲ."

'ಇದನ್ನು ಕೇಳಿ ಗುಂಪು ಕೇಕೆ ಹಾಕುತ್ತದೆ. ಸಿಳ್ಳು ಹೊಡೆಯುತ್ತದೆ. ತರತರದ ಶಬ್ದ ಹೊರಡಿಸುತ್ತದೆ. ಮುಹಮ್ಮದ್(ಸ) ಅತ್ಯಂತ ಗಂಭೀರವಾಗಿ ಅವರ ಬಳಿಯಿಂದ ಹಾದು ಹೋಗುತ್ತಾರೆ.

ರಬೀಅ: "ನನ್ನದಂತೂ ಕೇವಲ ಒಂದೇ ಬೇಡಿಕೆ. ಮುಹಮ್ಮದ್(ಸ) ಒಂದು ಏಣಿ ಇಟ್ಟು ಆಕಾಶಕ್ಕೆ ಏರಬೇಕು. ಅಲ್ಲಿಂದ ಸ್ವರ್ಣಾಕ್ಷರಗಳಿಂದ ಬರೆದ ಒಂದು ಗ್ರಂಥವನ್ನು ತರಬೇಕು. ಆಗ ಮಾತ್ರ ನಾನವನ ಮಾತನ್ನು ನಂಬುವೆ."

ಉಕ್‌ಬಾ: "ನೀವೆಂತಹ ಮಾತಾಡುತ್ತಿದ್ದೀರಿ. ಮುಹಮ್ಮದ್(ಸ) ನಮ್ಮಂತಹ ಎಲುಬು ಮಾಂಸಗಳಿರುವ ಒಬ್ಬ ಮನುಷ್ಯ. ಅವನಿಗೆ ಹಸಿವಾಗುತ್ತದೆ. ಅವನಿಗೆ ಮಡದಿ ಮಕ್ಕಳಿದ್ದಾರೆ. ಅವನೂ ಪೇಟೆ ಬೀದಿಗಳಲ್ಲಿ ನಡೆದಾಡುತ್ತಾನೆ. ಅವನ ಮೇಲೆ ತರತರದ ಆಕ್ರಮಣಗಳು ನಡೆಯುತ್ತಿವೆ. ಇವನು ಮಾತ್ರ ಯಾರಿಗೂ ಏನೂ ಮಾಡುವಂತಿಲ್ಲ. ಇಂತಹವರನ್ನು ಪ್ರವಾದಿಯೆಂದು ನಂಬುವುದಾದರೂ ಹೇಗೆ?"

ರಬೀಅ: "ಇವನಿಂದ ಮುಕ್ತಿ ಪಡೆಯುವ ದಾರಿ ಒಂದೇ. ಅವನ ಮಾತನ್ನೇ ಆಲಿಸದಿರುವುದು."

ಉಮಯ್ಯ: "ಹೌದು, ನೀನು ಹೇಳುತ್ತಿರುವುದು ನಿಜ. ಮುಹಮ್ಮದ್‌ನ(ಸ) ಮೇಲೆ ವಿಶ್ವಾಸವಿರಿಸಿದವರು ಅವಿವೇಕಿಗಳು. ಇವನು ನಿಜವಾಗಿ ಪ್ರವಾದಿಯಾಗಿರುತ್ತಿದ್ದರೆ ಇವನ ಹಿಂದೆ ಮುಂದೆ ದೇವದೂತರಿರುತ್ತಿದ್ದರು. ಇವನಿಗೆ ಬಂಗಾರದ ಮನೆ ಇರುತ್ತಿತ್ತು. ಉತ್ತಮ ತೋಟಗಳಿರುತ್ತಿದ್ದುವು. ಕಾಲುವೆಗಳಿರುತ್ತಿದ್ದುವು. ಇವನು ಬಹಳ ಠೀವಿಯಿಂದ ಬಾಳುತ್ತಿದ್ದನು. ಆಗ ಖಂಡಿತ ಇವನು ಪ್ರವಾದಿಯೆಂದು ನಾವೂ ನಂಬುತ್ತಿದ್ದೆವು."

ಉಕ್‌ಬಾ: "ಹೌದು, ಆದ್ದರಿಂದಲೇ ಅವನ ಜತೆ ನೀಚರೂ ನಿಕೃಷ್ಟರೂ ಬಡವರೂ ಸೇರಿದ್ದಾರೆ. ಸಮಾಜದಲ್ಲಿ ಅವರಿಗೆ ಯಾವ ಸ್ಥಾನಮಾನವೂ ಇಲ್ಲ. ಕೆಲವು ಮಂದಿ-ಗುಲಾಮರು ಮತ್ತು ತಿಳಿಗೇಡಿಗಳು. ಈ ಕುರ್‌ಆನ್ ಸತ್ಯವಾಗಿರುತ್ತಿದ್ದರೆ ಮತ್ತು ಮುಹಮ್ಮದ್‌ರು(ಸ) ಸರಿಯಾದ ವಿಷಯದ ಕಡೆಗೇ ಕರೆ ನೀಡುತ್ತಿದ್ದರೆ ಜನಾಂಗದ ಸರದಾರರೂ ಗೌರವಾನ್ವಿತ ವ್ಯಕ್ತಿಗಳೂ ಮುಂದಾಗಿ ಅದನ್ನು ಸ್ವೀಕರಿಸುತ್ತಿದ್ದರು."

ಇಷ್ಟಾದ ಬಳಿಕ ಸಭೆಯಲ್ಲಿ ಮೌನ ಆವರಿಸಿತು. ಅಷ್ಟರಲ್ಲಿ ಆಸ್ ಬಿನ್ ವಾಯಿಲ್ ಸಹ್ಮಿ ಅಲ್ಲಿಗೆ ಬಂದು ವಿಚಾರಿಸಿದನು: "ಏನು ಸಮಾಲೋಚನೆ ಮಾಡುತ್ತಿರುವಿರಿ?"

ಉಕ್‌ಬಾ: "ಮುಹಮ್ಮದನ ಕುರಿತು ಮಾತಾಡುತ್ತಿದ್ದೇವೆ."

ಆಸ್: "ಸುಮ್ಮನೆ ಬಿಡಿರಿ. ಯಾರ ಬಗ್ಗೆ ಪ್ರಸ್ತಾಪಿಸುತ್ತಿರುವಿರಿ. ಅವನಂತೂ ಹಿಂದೆ-

ಮುಂದೆ ಯಾರೂ ಇಲ್ಲದ ಮನುಷ್ಯ. ಅವನ ನಂತರ ಯಾರೂ ಅವನ ಹೆಸರೆತ್ತುವವರಿಲ್ಲ. ಅವನು ಸತ್ತರೆ ಅವನ ಕಥೆ ಮುಗಿಯಿತು. ಆಗ ಅವನ ಉಪಟಳಗಳಿಂದ ನೀವು ಸಂಪೂರ್ಣ ಮುಕ್ತರಾಗುತ್ತೀರಿ."

ಮುಹಮ್ಮದ್(ಸ)ರವರ ಹೆಸರು ಇಂದಿಗೂ ಲೋಕದ ಮೂಲೆ ಮೂಲೆಗಳಲ್ಲಿ ಅತ್ಯಂತ ಗೌರವಾದರಗಳೊಂದಿಗೆ ಎತ್ತಲ್ಪಡುತ್ತಿದೆ. ಆದರೆ ಈ ಅಕ್ರಮಿ ಮತ್ತು ಮತ್ಸರಿಗಳ ಹೆಸರೆತ್ತುವವರು ಯಾರೂ ಇಲ್ಲ. ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಅವರ ಈ ಎಲ್ಲ ಮಾತುಗಳಿಗೆ ಉತ್ತರ ನೀಡಿರುವನು: "(ಸಂದೇಶವಾಹಕರೇ) ನಾವು ನಿಮಗೆ ಕೌಸರ್ ದಯ ಪಾಲಿಸಿರುತ್ತೇವೆ. ನೀವಿನ್ನು ನಿಮ್ಮ ಪ್ರಭುವಿಗಾಗಿಯೇ ನಮಾಝ್ ನಿರ್ವಹಿಸಿರಿ ಮತ್ತು ಬಲಿ ದಾನ ನೀಡಿರಿ. ಖಂಡಿತ ವಾಗಿಯೂ ನಿಮ್ಮ ಶತ್ರುವೇ ಮೂಲ ಕಡಿಯಲ್ಪಟ್ಟವನಾಗಿರುವನು."

**(ಪವಿತ್ರ ಕುರ್‌ಆನ್: 108)**

"(ಓ ಪೈಗಂಬರರೇ,) ನಿಮಗಿಂತ ಮುಂಚೆಯೂ ಅನೇಕ ಮಂದಿ ಸಂದೇಶವಾಹಕರು ಅಪಹಾಸ್ಯಗೊಳಿಸಲ್ಪಟ್ಟಿದ್ದಾರೆ. ಆದರೆ, ಕೊನೆಗೆ ಅವರು ಅಪಹಾಸ್ಯ ಮಾಡುತ್ತಿದ್ದ ವಾಸ್ತವಿಕತೆಯೇ ಅವರ ಮೇಲೆ ಬಂದೆರಗಿತು. ನೀವು ಭೂಮಿಯ ಮೇಲೆ ಸಂಚರಿಸಿ ಸುಳ್ಳಾಗಿಸುವವರ ಪರಿಣಾಮವೇನಾಯಿತೆಂಬುದನ್ನು ಕಣ್ಣಾರೆ ನೋಡಿಕೊಳ್ಳಿರೆಂದು ಇವರೊಡನೆ ಹೇಳಿರಿ." **(ಪವಿತ್ರ ಕುರ್‌ಆನ್: 6: 10-11)**

"ಅವರು ಹೇಳಿದರು, "ನೀವು ನಮಗಾಗಿ ಭೂಮಿಯನ್ನು ಸೀಳಿ ಒಂದು ಚಿಲುಮೆಯನ್ನು ಹರಿಸುವವರೆಗೂ ನಾವು ನಿಮ್ಮ ಮಾತನ್ನು ನಂಬಲಾರೆವು. ಅಥವಾ ನಿಮಗಾಗಿ ಖರ್ಜೂರಗಳ ಮತ್ತು ದ್ರಾಕ್ಷೆಗಳ ಒಂದು ತೋಟ ಉಂಟಾಗಬೇಕು ಮತ್ತು ನೀವು ಅದರಲ್ಲಿ ಕಾಲುವೆಗಳನ್ನು ಹರಿಸಬೇಕು- ಅಥವಾ ನಿಮ್ಮ ವಾದದಂತೆ ಆಕಾಶವನ್ನು ತುಂಡು ತುಂಡಾಗಿ ಮಾಡಿ ನಮ್ಮ ಮೇಲೆ ಬೀಳಿಸಬೇಕು ಇಲ್ಲವೇ ಅಲ್ಲಾಹನನ್ನೂ ದೇವಚರರನ್ನೂ ಮುಖಾಮುಖಿ ನಮ್ಮ ಮುಂದೆ ತರಬೇಕು- ಅಥವಾ ನಿಮಗಾಗಿ ಒಂದು ಚಿನ್ನದ ಮನೆ ತಯಾರಾಗಬೇಕು ಅಥವಾ ನೀವು ಆಕಾಶದ ಮೇಲೆ ಏರಬೇಕು. ನೀವು ನಮಗಾಗಿ ನಾವು ಓದಬಹುದಾದ ಒಂದು ಲೇಖನವನ್ನು ತರದಿದ್ದರೆ ನಿಮ್ಮ ಏರುವಿಕೆಯನ್ನೂ ನಾವು ನಂಬಲಾರೆವು"- ಓ ಪೈಗಂಬರರೇ, "ನನ್ನ ಪ್ರಭು ಪರಮ ಪಾವನನು. ನಾನೊಬ್ಬ ಸಂದೇಶ ತರುವ ಮಾನವನಾಗಿರುವೆನಲ್ಲದೆ ಇನ್ನೇನಾದರೂ ಆಗಿರುವೆನೇ?" ಎಂದು ಅವರೊಡನೆ ಕೇಳಿರಿ." **(ಪವಿತ್ರ ಕುರ್‌ಆನ್: 17: 90-93)**

"ಓ ಪೈಗಂಬರರೇ, ನಾವು ನಿಮ್ಮ ಮೇಲೆ ಕಾಗದದಲ್ಲಿ ಬರೆದ ಒಂದು ಗ್ರಂಥ ವನ್ನು ಅವತೀರ್ಣಗೊಳಿಸುತ್ತಿದ್ದರೆ ಮತ್ತು ಜನರು ಅದನ್ನು ಕೈಗಳಿಂದ ಮುಟ್ಟಿಯೂ ನೋಡಿಕೊಳ್ಳುತ್ತಿದ್ದರೆ ಆಗಲೂ ಸತ್ಯನಿಷೇಧಿಗಳು, ಇದು ವ್ಯಕ್ತವಾದ ಮಾಟವಲ್ಲದೆ ಇನ್ನೇನೂ ಅಲ್ಲವೆಂದೇ ಹೇಳುತ್ತಿದ್ದರು. ಈ ಪ್ರವಾದಿಯ ಮೇಲೆ ಒಬ್ಬ 'ದೇವಚರ' ಏಕೆ

ಇಳಿಸಲ್ಪಡಲಿಲ್ಲವೆಂದು ಇವರು ಕೇಳುತ್ತಾರೆ. ನಾವು ದೇವಚರನನ್ನು ಇಳಿಸುತ್ತಿದ್ದರೆ, ಇಷ್ಟರೊಳಗೆ ಎಂದೋ ತೀರ್ಮಾನವೇ ಆಗಿಬಿಡುತ್ತಿತ್ತು. ಅನಂತರ ಇವರಿಗೆ ಅವಧಿ ಕೊಡಲಾಗುತ್ತಿರಲಿಲ್ಲ. ಒಂದು ವೇಳೆ ನಾವು ದೇವಚರನನ್ನು ಇಳಿಸುತ್ತಿದ್ದರೂ ಅವನನ್ನು ಮಾನವರೂಪದಲ್ಲೇ ಇಳಿಸುತ್ತಿದ್ದೆವು. ಹೀಗೆ ಇವರನ್ನು ಈಗ ಇವರು ಸಿಲುಕಿಬಿದ್ದಿರುವ ಸಂಶಯದಲ್ಲೇ ಸಿಲುಕಿಸಿಬಿಡುತ್ತಿದ್ದೆವು." (ಪವಿತ್ರ ಕುರ್‌ಆನ್: 6: 7-9)

## ಜಾದೂಗಾರ!

ಮುಹಮ್ಮದ್(ಸ) ತಮ್ಮ ಪ್ರವಾದಿತ್ವವನ್ನು ಘೋಷಿಸಿ ದೇವ ಸಂದೇಶದ ಪ್ರಚಾರವನ್ನು ಆರಂಭಿಸಿದ ನಂತರ ಮಕ್ಕಾದ ಎಲ್ಲ ಕೂಟಗಳು, ಚಾವಡಿಗಳು, ಪೇಟೆ-ಕೇರಿಗಳು ಮತ್ತು ಬೀದಿ ಬೀದಿಗಳಲ್ಲಿ ಪ್ರವಾದಿ(ಸ) ಪ್ರಸ್ತುತ ಪಡಿಸುತ್ತಿರುವ ಇಸ್ಲಾಮಿನ ಸಂದೇಶ ಮತ್ತು ಕುರ್‌ಆನಿನ ವಿಷಯಗಳ ಕುರಿತು ಚರ್ಚೆ ನಡೆಯುತ್ತಿತ್ತು. ಹಜ್ಜ್‌ನ ದಿನಗಳು ಸಮೀಪಿಸಿದ್ದುವು. ಮುಹಮ್ಮದ್‌ರ(ಸ) ವಿರುದ್ಧ ಹಾಜಿಗಳಲ್ಲಿ ಪ್ರಚಾರ ನಡೆಸದಿದ್ದರೆ ಅವರ ಮಧುರವಾಣಿಯಿಂದ ಅನೇಕ ಜನರು ಪ್ರಭಾವಿತರಾಗುವ ಸಾಧ್ಯತೆ ಯಿದೆಯೆಂಬ ಚಿಂತೆ ಕುರೈಶ್ ಸರದಾರರನ್ನು ಕಾಡುತ್ತಿತ್ತು. ಹಾಜಿಗಳು ಮುಹಮ್ಮದ್ ರಿಂದ(ಸ) ಪ್ರಭಾವಿತರಾದರೆ ಅವರ ಸಂದೇಶ ಅರೇಬಿಯಾದ ಮೂಲೆ ಮೂಲೆಗೆ ತಲುಪುವ ಅಪಾಯವಿತ್ತು. ಆದ್ದರಿಂದ ಅದನ್ನು ತಡೆಯಲಿಕ್ಕಾಗಿ ಕುರೈಶ್ ಸರದಾರರ ಒಂದು ತುರ್ತು ಸಭೆಯನ್ನು ವಲೀದ್ ಬಿನ್ ಮುಗೀರಾ ಅವರ ನಿವಾಸದಲ್ಲಿ ಏರ್ಪಡಿಸಲಾಗಿತ್ತು. ಸಭೆಯನ್ನುದ್ದೇಶಿಸಿ ವಲೀದ್ ಹೀಗೆ ಹೇಳಿದರು:

"ಕುರೈಶ್ ಗೋತ್ರಜರೇ! ಹಜ್ಜ್‌ನ ಕಾಲ ಸಮೀಪಿಸಿದೆ. ಅರೇಬಿಯಾದ ವಿಭಿನ್ನ ಭಾಗಗಳಿಂದ ತಂಡ ತಂಡವಾಗಿ ಜನರು ನಿಮ್ಮ ಬಳಿ ಬರಲಿದ್ದಾರೆ. ಅವರೆಲ್ಲರೂ ಈಗಾಗಲೇ ನಿಮ್ಮ ಈ ಮನುಷ್ಯ[ಮುಹಮ್ಮದ್(ಸ)]ನ ಕುರಿತು ಕೇಳಿದ್ದಾರೆ. (ಆದ್ದರಿಂದ ಅವರು ಒಂದು ಜಿಜ್ಞಾಸೆಯೊಂದಿಗೆ ಬರಲಿದ್ದಾರೆ.) ಆದ್ದರಿಂದ ಈಗ ನೀವೆಲ್ಲರೂ ಈ ಬಗ್ಗೆ ಒಂದು ಮಾತನ್ನು ನಿರ್ಧರಿಸಬೇಕು ಮತ್ತು ಅದರಲ್ಲಿ ಪರಸ್ಪರ ಭಿನ್ನಮತ ತಾಳಬಾರದು. ಒಬ್ಬರು ಇನ್ನೊಬ್ಬರ ಮಾತನ್ನು ಸುಳ್ಳಾಗಿಸುವುದಾಗಲೀ ಅಲ್ಲಗಳೆಯುವುದಾಗಲೀ ಸಲ್ಲದು."

ಸಭಿಕರು ವಲೀದನ ಮಾತನ್ನು ಗಮನವಿಟ್ಟು ಆಲಿಸಿದರು. ವಲೀದ್‌ರವರೇ ಇದಕ್ಕೆ ಯಾವುದಾದರೊಂದು ಪರಿಹಾರ ಸೂಚಿಸಬೇಕೆಂದು ಒಮ್ಮತದಿಂದ ಕೇಳಿಕೊಂಡರು. ಆದರೆ ವಲೀದ್ ಬಹಳ ಚಾಣಾಕ್ಷಮತಿಯಾಗಿದ್ದ. ಅವನು ಹೇಳಿದ:

"ಮೊದಲು ನೀವೇ ಯಾವುದಾದರೊಂದು ಅಭಿಪ್ರಾಯ ಮುಂದಿಡಿರಿ. ಆ ಬಳಿಕ ನಾನು ನನ್ನ ಅಭಿಪ್ರಾಯ ಮುಂದಿಡುತ್ತೇನೆ."

ಒಬ್ಬನು ಎದ್ದು ನಿಂತು ಹೀಗೆ ಹೇಳಿದ:

"ಮುಹಮ್ಮದ್‌ರ(ಸ) ಕುರಿತು ಅವರೊಬ್ಬ ಮಾಂತ್ರಿಕನೆಂಬ ಅಭಿಪ್ರಾಯ ಜನರಲ್ಲಿ

ಮೂಡಿಸುವುದು ಸೂಕ್ತವೆಂಬುದು ನನ್ನ ಅಭಿಪ್ರಾಯ."

ವಲೀದ್: "ನಾವು ಅನೇಕ ಮಾಂತ್ರಿಕರನ್ನು ಕಂಡಿದ್ದೇವೆ. ಆದರೆ ಮಾಂತ್ರಿಕರ ಅಸಂಬದ್ಧ ಮಾತುಗಳೆಲ್ಲಿ ಮುಹಮ್ಮದ್‌ರ(ಸ) ವಾಣಿಯೆಲ್ಲಿ - ಅರಬ್ ಗೋತ್ರಗಳು ನಮ್ಮನ್ನು ಸುಳ್ಳಗಾರರೆಂದು ಭಾವಿಸುವಂತಹ ಮಾತುಗಳನ್ನು ನಾವಾಡಬಾರದು."

ಎರಡನೆಯವ: "ನಾವು ಅವನಿಗೆ ಹುಚ್ಚು ಹಿಡಿದಿದೆ ಎಂದು ಹೇಳೋಣ."

ವಲೀದ್: "ಹುಚ್ಚು ಮತ್ತು ಮುಹಮ್ಮದ್‌ರಿಗೆ(ಸ) ಯಾವ ಸಂಬಂಧ?"

ಮೂರನೆಯವ: "ಹಾಗಾದರೆ ನಾವು ಅವನನ್ನು ಕವಿ ಎನ್ನೋಣ."

ವಲೀದ್: "ಕವಿತೆ ಏನೆಂಬುದು ನಮಗೆ ಚೆನ್ನಾಗಿ ಗೊತ್ತು. ಕಾವ್ಯದ ವಿವಿಧ ಪ್ರಕಾರಗಳನ್ನು ನಾವು ಬಲ್ಲೆವು. ಮುಹಮ್ಮದ್‌ರ(ಸ) ವಾಣಿಗೂ, ಕವಿತೆಗೂ ಯಾವ ಹೋಲಿಕೆಯೂ ಇಲ್ಲ."

ನಾಲ್ಕನೆಯವ: "ಅವನು ಜಾದೂಗಾರನೆನ್ನೋಣ."

ವಲೀದ್: "ಮುಹಮ್ಮದ್‌ರಲ್ಲಿ(ಸ) ಇರುವಂತಹ ನೈರ್ಮಲ್ಯ ಮತ್ತು ಅಚ್ಚುಕಟ್ಟು ಜಾದೂಗಾರರಲ್ಲಿ ಎಲ್ಲಿರುತ್ತದೆ. ಜಾದೂಗಾರರ ದರಿದ್ರ ಮುಖಗಳು ಮತ್ತು ಕೀಳಭಿರುಚಿಗಳು ತೀರಾ ಭಿನ್ನವಾಗಿರುತ್ತವೆ."

ವಲೀದನ ಮಾತು ಕೇಳಿ ಎಲ್ಲರೂ ನಿರುತ್ತರರಾದರು. ಆದರೆ ಅಬೂಜಹಲ್ ವಲೀದ್‌ನನ್ನು ಬಿಡಲಿಲ್ಲ. ನೀವೇ ಒಂದು ಸೂಕ್ತ ಮಾತು ಹೇಳಿ ಎಂದು ಪಟ್ಟು ಹಿಡಿದನು. ಆರೋಪ ಹೊರಿಸುವುದರಲ್ಲಿ ಎಲ್ಲರೂ ಸೋತಿದ್ದೇವೆ. ಈಗ ವಲೀದ್‌ರ ಸರದಿ. ಅವರೇ ಒಂದು ಹೊಸ ವಿಷಯ ತಿಳಿಸಬೇಕು. ವಲೀದ್ ಅರ್ಧ ತೆರೆದ ಕಣ್ಣುಗಳಿಂದ ಸಭಿಕರನ್ನೊಮ್ಮೆ ನೋಡಿ ಗಂಭೀರವಾಗಿ ಯೋಚಿಸಿದ ಬಳಿಕ

"ಮುಹಮ್ಮದ್‌ರ(ಸ) ವಾಣಿಯಲ್ಲಿ ಅತ್ಯದ್ಭುತ ಮಾಧುರ್ಯವಿದೆ. ಅದರ ಬೇರುಗಳು ಆಳಕ್ಕೆ ಇಳಿದಿವೆ. ಅದರ ಗೆಲ್ಲುಗಳು ಅತ್ಯಂತ ಫಲಭರಿತವಾಗಿವೆ."

ಇದನ್ನು ಕೇಳಿ ಅಬೂಜಹಲ್ ಕೆರಳಿ ಹೀಗೆಂದನು: "ಅಬ್ದುಶ್ಶಮ್ಸ್‌ನ ತಂದೆಯವರೇ! ನೀವು ಮುಹಮ್ಮದ್‌ರ(ಸ) ಕುರಿತು ನಿರ್ಣಾಯಕವಾದ ಮಾತನ್ನು ಹೇಳುವ ತನಕ ನಿಮ್ಮ ಜನಾಂಗವು ನಿಮ್ಮಿಂದ ಸಂತೃಪ್ತವಾಗಲಾರದು."

ವಲೀದ್ ಸ್ವಲ್ಪ ಹೊತ್ತು ಯೋಚಿಸಿದ ಬಳಿಕ: "ಅತ್ಯಂತ ಸೂಕ್ತ ಮಾತು ನನ್ನ ದೃಷ್ಟಿಯಲ್ಲಿ ಒಂದೇ ಆಗಿದೆ. ಮುಹಮ್ಮದರ ವಾಣಿಯು ತಂದೆ-ಮಗ, ಅಣ್ಣ-ತಮ್ಮ ಮತ್ತು ಪತಿ-ಪತ್ನಿಯರ ಮಧ್ಯೆ ಒಡಕುಂಟು ಮಾಡುವಂತಹದ್ದಾಗಿದೆ. ಈ ವಾಣಿಯನ್ನು ಆಲಿಸಿದವನ ಕುಟುಂಬದಲ್ಲಿ ಪರಸ್ಪರ ದ್ವೇಷ ಹರಡುತ್ತದೆ. ಆದ್ದರಿಂದ ಆ ವಾಣಿಯನ್ನು ಆಲಿಸಲೇಬಾರದು."

ಅಬೂಜಹಲ್: "ನೀವು ಹೇಳುತ್ತಿರುವುದು ಸತ್ಯ."

ವಲೀದ್: "ಮುಹಮ್ಮದ್ ಇಂತಹ ಜಾದೂಗಾರನೆಂದೇ ಹೇಳಬೇಕೆಂದು ತೀರ್ಮಾನಿಸಿಕೊಳ್ಳಿ."

ಜನರು ಸಂತುಷ್ಟರಾಗಿ ಮರಳಿದರು. ಆದರೆ ವಲೀದ್‌ನ ಅಂತರಾತ್ಮದಲ್ಲಿ ಕೋಲಾಹಲವೆದ್ದಿದೆ. "ಮುಹಮ್ಮದ್‌ರಂತೂ ಜಾದೂಗಾರರಲ್ಲ. ಆದರೇನು ಮಾಡುವುದು ನಾನು ಏನಾದರೂ ಹೇಳಲೇಬೇಕಾಗಿತ್ತು." ಆತ ಚಿಂತಾಮಗ್ನನಾದ. ಆದರೆ ಸ್ವಲ್ಪವೇ ಹೊತ್ತಿನಲ್ಲಿ ಅವನ ಮನ-ಮಸ್ತಿಷ್ಕದಲ್ಲಿ ಲೌಕಿಕ ವ್ಯಾಮೋಹ ಮತ್ತು ನಾಯಕತ್ವದ ಬಯಕೆ ಮೇಲುಗೈ ಸಾಧಿಸಿತು. ಅವನು ಎದ್ದು ಹೆಗಲು ಕೊಡವಿ ಮನೆಯ ಕಡೆಗೆ ಹೊರಟನು.

ಇದರ ಬಗ್ಗೆಯೇ ಪವಿತ್ರ ಕುರ್‌ಆನಿನ 'ಅಲ್ ಮುದ್ದಸ್ಸಿರ್' ಎಂಬ ಅಧ್ಯಾಯದಲ್ಲಿ ಹೀಗೆ ಪ್ರಸ್ತಾಪಿಸಲಾಗಿದೆ: "ನನ್ನನ್ನೂ ನಾನು ಒಬ್ಬಂಟಿಯಾಗಿ ಸೃಷ್ಟಿಸಿದವನನ್ನೂ ಬಿಟ್ಟು ಬಿಡಿರಿ- ನಾನು ಅವನಿಗೆ ಹೇರಳ ಸಂಪತ್ತನ್ನು ಕೊಟ್ಟೆನು, ಅವನ ಜೊತೆಯಲ್ಲೇ ಹಾಜರಿರುವ ಪುತ್ರರನ್ನು ಕೊಟ್ಟೆನು- ಮತ್ತು ಅವನ ಪಾಲಿಗೆ ನಾಯಕತ್ವದ ಮಾರ್ಗವನ್ನು ಸುಗಮ ಗೊಳಿಸಿದೆನು- ಇಷ್ಟಿದ್ದೂ ಅವನು, ನಾನು ಅವನಿಗೆ ಇನ್ನಷ್ಟು ಕೊಡಬೇಕೆಂದು ಆಶಿಸುತ್ತಿದ್ದಾನೆ- ಖಂಡಿತ ಇಲ್ಲ. ಅವನು ನಮ್ಮ ವಚನಗಳನ್ನು ದ್ವೇಷಿಸುತ್ತಾನೆ. ನಾನಂತು ಅವನನ್ನು ಶೀಘ್ರವೇ ಒಂದು ಕಠಿಣ ಏರನ್ನು ಏರಿಸುವೆನು. ಅವನು ಯೋಚಿಸಿದನು ಮತ್ತು ಮಾತನ್ನು ಸೃಷ್ಟಿಸಲು ಪ್ರಯತ್ನಿಸಿದನು- ಅವನ ಮೇಲೆ ಶಾಪವಿರಲಿ, ಅವನು ಸೃಷ್ಟಿಸಲು ಪ್ರಯತ್ನಿಸಿದ ಮಾತು ಎಂತಹದು! ಹೌದು, ಅವನ ಮೇಲೆ ಶಾಪವಿರಲಿ. ಅವನು ಸೃಷ್ಟಿಸ ಬಯಸಿದ ಮಾತು ಎಂತಹದು? ಆ ಬಳಿಕ ಅವನು (ಜನರ ಕಡೆಗೆ) ನೋಡಿದನು- ತರುವಾಯ ಹಣೆ ಮುದುಡಿಸಿಕೊಂಡನು ಮತ್ತು ಮುಖ ಮುರಿದುಕೊಂಡನು, ಅನಂತರ ಮರಳಿದನು ಮತ್ತು ಅಹಂಭಾವಕ್ಕೊಳಗಾದನು. ಕೊನೆಗೆ ಹೀಗೆಂದನು, "ಇದು ಹಿಂದಿನಿಂದಲೇ ನಡೆದು ಬಂದಿ ರುವ ಒಂದು ಜಾದೂ ಅಲ್ಲದೆ ಇನ್ನೇನೂ ಅಲ್ಲ- ಇದೊಂದು ಮನುಷ್ಯವಾಣಿಯಾಗಿದೆ."

**(ಪವಿತ್ರ ಕುರ್‌ಆನ್: 74: 11-25)**

ಯೋಜನೆಯಂತೆ ಕುರೈಶರ ತಂಡಗಳು ಹಾಜಿಗಳ ಮಧ್ಯೆ ಹರಡಿದರು. "ನಮ್ಮ ಮಧ್ಯೆ ಮುಹಮ್ಮದ್(ಸ) ಎಂಬೋರ್ವ ವ್ಯಕ್ತಿ ಎದ್ದಿದ್ದಾನೆ. ದೊಡ್ಡ ಜಾದೂಗಾರನಾತ. ಅವನ ವಾಣಿಯು ಕುಟುಂಬಗಳಲ್ಲಿ ಒಡಕುಂಟು ಮಾಡುತ್ತದೆ. ಅವನಿಂದ ಜಾಗ್ರತರಾಗಿರ ಬೇಕು." ಎಂದು ಅವರನ್ನು ಎಚ್ಚರಿಸತೊಡಗಿದರು. ಆದರೆ ಈ ಅಪಪ್ರಚಾರದಿಂದ ಮುಹಮ್ಮದ್‌ರ(ಸ) ಖ್ಯಾತಿಯು ಅರೇಬಿಯಾದ ಮೂಲೆಮೂಲೆಗೆ ತಲುಪಿತು. ಅನೇಕ ಬುದ್ಧಿಜೀವಿಗಳು ಜಿಜ್ಞಾಸೆಯೊಂದಿಗೆ ಮಕ್ಕಾದ ಕಡೆಗೆ ಹೊರಟರು.

## ಅದೃಶಿಯ ದೂರು

ಕಅಬಾ ಭವನದಲ್ಲಿ ಕೆಲವು ಕುರೈಶ್ ಸರದಾರರು ಕುಳಿತು ಹರಟೆ ಹೊಡೆಯುತ್ತಿದ್ದಾರೆ. ಕೆಲವರು ಮೂರ್ತಿಗಳ ಮುಂದೆ ಸಾಷ್ಟಾಂಗವೆರಗುತ್ತಿದ್ದಾರೆ. ಇನ್ನು ಕೆಲವರು ಅವುಗಳ ಮುಂದೆ ಹರಕೆ-ಕಾಣಿಕೆಗಳನ್ನು ಸಲ್ಲಿಸುತ್ತಿದ್ದಾರೆ. ಅವರಿಂದ ಸ್ವಲ್ಪ ದೂರ ಮುಹಮ್ಮದ್(ಸ) ತಮ್ಮ ಪ್ರಭುವಿನ ಆರಾಧನೆಯಲ್ಲಿ ನಿರತರಾಗಿದ್ದಾರೆ. ಕುರೈಶರು ಅವರನ್ನು ನೋಡಿ ಗೇಲಿ ಮಾಡುತ್ತಿದ್ದಾರೆ, ಗಹಗಹಿಸಿ ನಗುತ್ತಿದ್ದಾರೆ. ಇವುಗಳಿಂದೆಲ್ಲ ನಿಶ್ಚಿಂತರಾಗಿ ಮುಹಮ್ಮದ್(ಸ)

ದೇವಸ್ಮರಣೆ ಮತ್ತು ಧ್ಯಾನದಲ್ಲಿ ಮಗ್ನರಾಗಿದ್ದಾರೆ. ಅಷ್ಟರಲ್ಲಿ ಓರ್ವ ಅದ್ರಶಿ ವ್ಯಾಪಾರಿ ಕಅಬಾ ಭವನಕ್ಕೆ ಪ್ರವೇಶಿಸುತ್ತಾನೆ. ಅವನ ಮುಖದಲ್ಲಿ ನೋವು ಮತ್ತು ಗಾಬರಿಯ ಲಕ್ಷಣಗಳು ಗೋಚರಿಸುತ್ತಿವೆ. ಅವನು ಕುರೈಶರ ಬಳಿ ತಲುಪಿ "ನನಗೆ ಸಹಾಯ ಮಾಡಿರಿ, ನಾನು ದೋಚಲ್ಪಟ್ಟಿರುವೆನು" ಎನ್ನುತ್ತಾನೆ.

ಒಬ್ಬ ಕುರೈಶ್ ಸರದಾರ ಗರ್ವದೊಂದಿಗೆ ತಲ್ಕಸಿಷೆ ಎತ್ತಿ ಅವನತ್ತ ದಿಟ್ಟಿಸುತ್ತಾ ಅಧಿಕಾರ ಸ್ವರದಲ್ಲಿ "ಏನಾಯಿತು?" ಎಂದು ಕೇಳಿದನು.

ಅದ್ರಶಿ: "ಸ್ವಲ್ಪ ಸಮಯದ ಹಿಂದೆ ಅಬೂಜಹಲ್ ನನ್ನಿಂದ ಒಂದು ಒಂಟೆ ಖರೀದಿಸಿ ಹಣವನ್ನು ಒಂದು ತಿಂಗಳೊಳಗೆ ಪಾವತಿ ಮಾಡುವೆನೆಂದು ಹೇಳಿದ್ದನು. ಆದರೆ ಅವನಲ್ಲಿ ಹಣ ವಸೂಲಿಗೆ ಹೋದಾಗಲೆಲ್ಲಾ ಅವನು ಒಂದಲ್ಲ ಒಂದು ನೆಪ ಹೇಳಿ ನುಣುಚಿಕೊಳ್ಳುತ್ತಿದ್ದ. ಇವತ್ತಂತೂ ಅವನು ಹಣ ಕೊಡುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿ ಬಿಟ್ಟ. ಮಾತ್ರವಲ್ಲ ಇನ್ನು ತಗಾದೆ ಮಾಡಿದರೆ ಕೊಂದು ಬಿಡುವುದಾಗಿಯೂ ಎಚ್ಚರಿಸಿರುವನು. ನೀವು ನನಗೆ ನೆರವಾಗದಿದ್ದರೆ ನಾನು ನಾಶ ಹೊಂದುವೆನು" ಎನ್ನುತ್ತಾನೆ.

ಇದನ್ನು ಕೇಳಿ ಸಭೆಯಲ್ಲಿ ಕೆಲವು ಕಾಲ ಮೌನ ಆವರಿಸಿತು. ಅನಂತರ ಆ ಕುರೈಶ್ ಸರದಾರ ಮುಹಮ್ಮದ್‌ರತ್ತ(ಸ) ಬೆಟ್ಟು ಮಾಡಿ: "ಅತ್ತ ನೋಡಿ. ಅಲ್ಲಿ ಕುಳಿತಿರುವ ಆ ವ್ಯಕ್ತಿಯನ್ನು ಕೇಳಿ. ಅವರು ನಿಮಗೆ ಅಬೂಜಹಲನಿಂದ ನಿಮ್ಮ ಹಣವನ್ನು ಖಂಡಿತ ಕೊಡಿಸುವರು" ಎಂದನು.

ಆಗಂತುಕ ವ್ಯಾಪಾರಿಯು ಆತನೆಡೆಗೆ ಸಂಶಯದ ದೃಷ್ಟಿ ಹಾಯಿಸಿದನು. "ಒಬ್ಬ ವ್ಯಕ್ತಿಯಿಂದ ಈ ಕೆಲಸ ಸಾಧ್ಯವೇ. ನೀವು ನಾಲ್ಕಾರು ಮಂದಿ ಜತೆಯಾಗಿ ಬಂದು ಹೇಳಿದರೆ ಅವರು ಹಣ ಕೊಡುತ್ತಾರೇನೋ" ಎಂದನು.

ಅಬೂಜಹಲನ ಬಳಿ ಹೋಗಿ ಈ ಅನ್ಯಾಯಕ್ಕೊಳಗಾದವನ ಪಕ್ಷವಹಿಸಿ ಮಾತಾಡುವ ಕೆಚ್ಚು ಅವರ ಪೈಕಿ ಯಾರಲ್ಲೂ ಇರಲಿಲ್ಲ. ಮುಹಮ್ಮದ್‌ರನ್ನು(ಸ) ಅಣಕಿಸುವ ಉದ್ದೇಶದಿಂದ ಮಾತ್ರ ಅವರು ಅದ್ರಶಿಗೆ ಪುನಃ ಹೇಳುತ್ತಾರೆ: "ಅದ್ರಶಿ ಸೋದರಾ! ನೀವು ಅವರನ್ನು ನಿಮ್ಮ ಜತೆಗೊಯ್ಯಿರಿ. ಅಬೂಜಹಲ್ ಅವರ ಮಾತು ಕೇಳುತ್ತಾನೆ. ಆತ ನಮ್ಮ ಮಾತು ಕೇಳಲಾರ. ನಾವು ಹೋಗುವುದರಿಂದ ನಿಮ್ಮ ಕೆಲಸ ಆಗುವ ಬದಲು ಕೆಡುವ ಸಾಧ್ಯತೆಯೇ ಹೆಚ್ಚು."

ಕುರೈಶರ ದುರಾಲೋಚನೆ ಮತ್ತು ವ್ಯಂಗ್ಯವನ್ನು ಅರಿಯದ ಅದ್ರಶಿ ಮುಹಮ್ಮದ್‌ರ(ಸ) ಬಳಿಗೆ ಹೋಗಿ ಮೊರೆಯಿಡುತ್ತಾರೆ. ಕುರೈಶರು ಅವರಿಬ್ಬರ ಕಡೆಗೆ ನೋಡಿ ನಗುತ್ತಾರೆ.

"ಅಲ್ಲಾಹನಾಣೆ. ಇಂದು ಮೋಜು ನೋಡಬೇಕು. ಲಾತ್ ಮತ್ತು ಉಝ್ಝಾರ ಆಣೆ ಇದು ಅಪ್ರತಿಮ ಸಲಹೆ" ಎಂದು ಅವರಲ್ಲೊಬ್ಬನು ಹೇಳುತ್ತಾನೆ.

ಮುಹಮ್ಮದ್(ಸ) ಅದ್ರಶಿ ವ್ಯಾಪಾರಿಯ ಜತೆ ಹೋಗುತ್ತಿರುವುದನ್ನು ಕಂಡು ಎಲ್ಲರಿಗೂ ಆಶ್ಚರ್ಯವಾಯಿತು. ಕೆಲವರು ಬೇಹುಗಾರಿಕೆಗಾಗಿ ಅವರ ಹಿಂದೆ ನಡೆಯತೊಡಗಿದರು.

ಮುಹಮ್ಮದ್(ಸ) ನೇರವಾಗಿ ಅಬೂಜಹಲನ ಮನೆಗೆ ಹೋದರು. ಬಾಗಿಲ ಬಳಿ ತಲುಪಿ ಕದ ತಟ್ಟಿದರು. ಅಬೂಜಹಲ್ ಬಾಗಿಲು ತೆಗೆದು ಹೊರಬಂದವನೇ ಅದ್ರಶಿಯ ಜತೆ ಮುಹಮ್ಮದ್‌ರನ್ನು(ಸ) ಕಂಡು ಆಶ್ಚರ್ಯಚಕಿತನಾದ. ಯಾವ ಪೀಠಿಕೆಯೂ ಇಲ್ಲದೆ ನೇರವಾಗಿ ಮುಹಮ್ಮದ್(ಸ) ಹೇಳಿದರು:

"ಈ ವ್ಯಕ್ತಿಯ ಹಣ ಕೊಟ್ಟು ಬಿಡಿ."

ತುಟಿ ಪಿಟಿಕ್ಕೆನ್ನದೆ ಅಬೂಜಹಲನು ಒಳಗೆ ಹೋದವನೇ ಆ ಒಂಟೆಯ ಮೌಲ್ಯವನ್ನು ತಂದು ಅದ್ರಶಿಯ ಕೈಗಿತ್ತನು. ಅದ್ರಶಿ ಮುಹಮ್ಮದ್‌ರಿಗೆ(ಸ) ಕೃತಜ್ಞತೆ ಸಲ್ಲಿಸಿ ಹೊರಟು ಹೋದನು.

ಕುರೈಶ್ ಗುಪ್ತಚರರು ಈ ದೃಶ್ಯವನ್ನು ಕಂಡು ತಮ್ಮ ಕಣ್ಣುಗಳನ್ನೇ ನಂಬದಾದರು. ಕೆಲವೇ ಸಮಯದ ಬಳಿಕ ಅವರು ಮತ್ತೆ ಕಲಬಾ ಭವನದ ಹತ್ತಿರ ಬಂದು ಸೇರುತ್ತಾರೆ. ನಡೆದ ಘಟನೆಯನ್ನು ವಿವರಿಸಿದ ಬಳಿಕ ಎಲ್ಲರೂ ಘಟನೆಯ ಬಗ್ಗೆ ವಿಸ್ಮಯ ವ್ಯಕ್ತ ಪಡಿಸುತ್ತಾರೆ.

ಮರುದಿನ ಕುರೈಶ್ ಸರದಾರರು ಅಬೂಜಹಲನನ್ನು ಕೆಣಕಿ "ಮುಹಮ್ಮದ್‌ರ(ಸ) ಮುಂದೆ ನಿನ್ನೆ ನೀವು ಅಷ್ಟು ದೌರ್ಬಲ್ಯ ಏಕೆ ಪ್ರಕಟಿಸಿದಿರಿ. ನೀವೂ ಮುಹಮ್ಮದರ ಅನುಯಾಯಿಯಾಗುವಿರೇನು?" ಎಂದು ಪ್ರಶ್ನಿಸಿದರು.

ಆಗ ಅಬೂಜಹಲ್: "ಅಲ್ಲಾಹನಾಣೆ! ನಾನೆಂದೂ ಅವನ ಅನುಯಾಯಿಯಾಗಲಾರೆ. ನಿನ್ನೆ ಅವನು ನನ್ನಲ್ಲಿಗೆ ಬಂದಾಗ ಅವನ ಎಡ ಬಲಗಳಲ್ಲಿ ನಾನು ಅನೇಕ ಬಿಲ್ಲಾಳುಗಳನ್ನು ಕಂಡೆ. ಅವನ ಆಜ್ಞೆಯನ್ನು ಮೀರಿದರೆ ಅವರೆಲ್ಲಿ ನನ್ನ ಮೇಲೆ ಮುಗಿ ಬೀಳುತ್ತಾರೋ ಎಂದು ನನಗೆ ಭಯವಾಯಿತು" ಎಂದನು.

## ಉತ್ಥಾನ ಆಮಿಷಗಳು

ಮುಹಮ್ಮದ್‌ರ(ಸ) ವಿರೋಧಿಗಳಿಗೆ ಅವರ ವ್ಯಕ್ತಿತ್ವವು ಅತ್ಯಂತ ಆಕರ್ಷಕ ಮತ್ತು ಮನಮೋಹಕವೆಂಬ ವಾಸ್ತವಿಕತೆಯ ಅರಿವು ಚೆನ್ನಾಗಿಯೇ ಇತ್ತು. ಅವರ ಸುಮಧುರ ವಾಣಿಯ ವಾಗ್ವೈಖರಿಯು ಅತ್ಯಂತ ಮನ ಮುಟ್ಟುವಂತಹದ್ದಾಗಿತ್ತು. ಪವಿತ್ರ ಕುರ್‌ಆನಿನ ಪ್ರಭಾವವನ್ನು ವಿರೋಧಿಗಳು ಅರಿತಿದ್ದರು. ಆದರೆ ಅದನ್ನು ಅವರು ಬಹಿರಂಗವಾಗಿ ಒಪ್ಪಿಕೊಳ್ಳಲು ಸಿದ್ಧರಿರಲಿಲ್ಲ. ಮುಹಮ್ಮದ್‌ರನ್ನು(ಸ) ಅವರ ಧರ್ಮಪ್ರಚಾರ ಕಾರ್ಯದಿಂದ ತಡೆಯದಿದ್ದರೆ ಮುಂದೊಂದು ದಿನ ಜನರು ದೊಡ್ಡ ಸಂಖ್ಯೆಯಲ್ಲಿ ಇಸ್ಲಾಮ್ ಸ್ವೀಕರಿಸುವರೆಂಬ ಭಯವಿತ್ತು. ಆದ್ದರಿಂದ ಅವರು ಪ್ರವಾದಿವರ್ಯರನ್ನು(ಸ) ಧರ್ಮ ಪ್ರಚಾರ ಕಾರ್ಯದಿಂದ ತಡೆಯುವ ಬಗ್ಗೆ ಯೋಚಿಸುತ್ತಿದ್ದರು. ಒಂದು ದಿನ ಕಲಬಾ ಭವನದಲ್ಲಿ ಅವರು ಇದೇ ಉದ್ದೇಶಕ್ಕಾಗಿ ಸೇರಿದ್ದರು. ಅಲ್ಲೇ ಒಂದು ಕಡೆ ಮುಹಮ್ಮದ್(ಸ) ದೇವಧ್ಯಾನದಲ್ಲಿ ಮಗ್ನರಾಗಿದ್ದರು. ಕುರೈಶ್ ಸರದಾರರು ಸ್ವಲ್ಪ ಸಮಯ ಲೋಕಾಭಿರಾಮದಲ್ಲಿ

ನಿರತರಾಗಿದ್ದರು. ತರುವಾಯ ಅವರಲ್ಲೊಬ್ಬ: "ಮುಹಮ್ಮದ್‌ರು(ಸ) ನಮ್ಮ ಧರ್ಮವನ್ನು ಕೆಡಿಸುತ್ತಿದ್ದಾರೆ. ಅವರ ಚಟುವಟಿಕೆಗಳು ದಿನ ಕಳೆದಂತೆ ಹೆಚ್ಚುತ್ತಲೇ ಇವೆ. ಅವರು ನಮ್ಮ ಮಧ್ಯೆ ಒಡಕುಂಟು ಮಾಡುತ್ತಿದ್ದಾರೆ. ನಮ್ಮ ವ್ಯವಹಾರಗಳನ್ನು ಕೆಡಿಸಿ ನಮ್ಮ ಧರ್ಮದಲ್ಲಿ ತರತರದ ಹುಳುಕು ಹುಡುಕುತ್ತಿದ್ದಾರೆ. ಒಮ್ಮೆ ಅವರನ್ನು ಮುಖತಃ ಭೇಟಿಯಾಗಿ ಈ ಸಮಸ್ಯೆಗೊಂದು ಪರಿಹಾರ ಕಂಡುಕೊಳ್ಳುವುದು ಒಳ್ಳೆಯದೆಂದು ನನಗನಿಸುತ್ತದೆ" ಎನ್ನುತ್ತಾನೆ.

"ನೀವು ಹೇಳುತ್ತಿರುವುದು ಸರಿ. ನಮಗೆ ನಿಮ್ಮೊಂದಿಗೆ ಪೂರ್ಣ ಸಹಮತವಿದೆ" ಸಭಿಕರು ಒಕ್ಕೊರಳಿನಿಂದ ಹೇಳಿದರು.

"ಹಾಗಾದರೆ ಮುಹಮ್ಮದ್‌ರನ್ನು(ಸ) ಕಂಡು ಮಾತಾಡಲು ನಮ್ಮಲ್ಲಿ ಒಬ್ಬ ಪ್ರತಿನಿಧಿಯನ್ನು ಆರಿಸೋಣ."

ಸಭೆಯಲ್ಲಿ ಸ್ವಲ್ಪ ಕಾಲ ಮೌನ ಆವರಿಸಿತು. ಆ ಬಳಿಕ ಅವರಲ್ಲೊಬ್ಬ ಏರಿದ ಧ್ವನಿಯಲ್ಲಿ ಹೀಗೆಂದನು: "ಮುಹಮ್ಮದ್‌ರೊಂದಿಗೆ(ಸ) ಮಾತಾಡಲು ಜಾದೂ, ಮಂತ್ರ ಮತ್ತು ಕಾವ್ಯಗಳನ್ನು ಅರಿತವನನ್ನು ಆರಿಸಬೇಕು. ಅನ್ಯಥಾ ಅವರೂ ಮುಹಮ್ಮದ್‌ರ(ಸ) ಮಾತಿನ ಮೋಡಿಗೆ ಬಲಿಯಾಗುವರು. ನಾವು ಆರಿಸುವ ಪ್ರತಿನಿಧಿಯು ಮುಹಮ್ಮದ್‌ರ(ಸ) ಮಾತುಗಳನ್ನು ಕೇಳಿ ಅದನ್ನು ಕಾವ್ಯ, ಮಂತ್ರ ಅಥವಾ ಜಾದೂಗಾರಿಕೆ ಎಂದು ಹೇಳಲು ಶಕ್ತನಾಗಿರಬೇಕು."

ತರುವಾಯ ಸಭೆಯಲ್ಲಿ ಗುಸುಗುಸು ಮಾತು ಆರಂಭವಾಯಿತು. ಕೊನೆಗೆ ಉತ್ಬಾ ಬಿನ್ ರಬೀಅರನ್ನು ಪ್ರತಿನಿಧಿಯಾಗಿ ಕಳುಹಿಸುವ ಬಗ್ಗೆ ಎಲ್ಲರೂ ಒಮ್ಮತಕ್ಕೆ ಬಂದರು. ಏಕೆಂದರೆ ಅವರು ಈ ಮೂರೂ ವಿದ್ಯೆಗಳಲ್ಲಿ ಪಾರಂಗತರಾಗಿದ್ದರು. "ಅಬುಲ್ ವಲೀದ್! ನಮಗೆ ನಿಮ್ಮ ಮೇಲೆ ಪೂರ್ಣ ಭರವಸೆ ಇದೆ. ನೀವು ಮಾತ್ರ ಈ ಕೆಲಸ ಮಾಡಬಲ್ಲಿರಿ" ಎಂದು ಒಬ್ಬನು ಉತ್ಬಾರನ್ನುದ್ದೇಶಿಸಿ ಹೇಳಿದಾಗ: "ನೀವೆಲ್ಲರೂ ನನ್ನ ಬಗ್ಗೆ ಒಮ್ಮತ ಹೊಂದಿದ್ದರೆ ಮತ್ತು ನನ್ನ ಮೇಲೆ ನಿಮಗೆ ಪೂರ್ಣ ಭರವಸೆ ಇದ್ದರೆ ನಾನು ನಿಮ್ಮ ಪ್ರತಿನಿಧಿಯಾಗಿ ಹೋಗಲು ಸಿದ್ಧ. ನಾನೀಗಲೇ ಮುಹಮ್ಮದ್‌ರ(ಸ) ಬಳಿಗೆ ಹೋಗಿ ಅವರ ಮುಂದೆ ಕೆಲವು ಸಲಹೆಗಳನ್ನಿಡುತ್ತೇನೆ. ಯಾವುದಾದರೊಂದು ವಿಷಯದಲ್ಲಿ ಅವರೊಂದಿಗೆ ನಮ್ಮ ಒಪ್ಪಂದವೇರ್ಪಟ್ಟು ಅವರು ನಮ್ಮ ವಿರೋಧವನ್ನು ಕೈ ಬಿಡಲೂ ಬಹುದು" ಎಂದು ಉತ್ಬಾ ತನ್ನ ಸಮ್ಮತಿಯನ್ನು ಸೂಚಿಸಿ ಮುಹಮ್ಮದ್‌ರು(ಸ) ಧ್ಯಾನಮಗ್ನ ರಾಗಿ ಕುಳಿತಿರುವಲ್ಲಿಗೆ ನಡೆದನು. ಮುಹಮ್ಮದ್(ಸ) ಅವನತ್ತ ಗಮನ ಹರಿಸಿದಾಗ ಉತ್ಬಾ ಹೀಗೆ ಹೇಳಿದನು:

"ಸೋದರ ಪುತ್ರಾ! ನಮ್ಮ ಮಧ್ಯೆ ನಿನಗಿರುವ ಗೌರವಾದರಗಳ ಬಗ್ಗೆ ನಿನಗೆ ತಿಳಿದೇ ಇದೆ. ವಂಶದ ದೃಷ್ಟಿಯಿಂದಲೂ ನೀನೊಂದು ಉನ್ನತ ಮತ್ತು ಗೌರವಾನ್ವಿತ ಕುಟುಂಬಕ್ಕೆ ಸೇರಿದವನು. ಕುಲದಲ್ಲೂ ಗುಣದಲ್ಲೂ ಉತ್ತಮನಾದ ನಿನ್ನಂತಹ ವ್ಯಕ್ತಿ ತನ್ನ ಜನಾಂಗಕ್ಕೆ ಈ ರೀತಿಯ ಸಂಕಷ್ಟವನ್ನು ತಂದೊಡ್ಡಬಹುದೇ? ನೀನು ನಮ್ಮ ಜನಾಂಗದಲ್ಲಿ ಒಡಕುಂಟು ಮಾಡಿದೆ. ಇಡೀ ಜನಾಂಗವನ್ನು ಮೂರ್ಖ ಮಾಡಿದೆ. ಜನಾಂಗದ ಆರಾಧ್ಯರನ್ನೂ

ಧರ್ಮವನ್ನೂ ಗೇಲಿ ಮಾಡಿದೆ. ಸತ್ತು ಹೋದ ನಮ್ಮ ತಂದೆ ತಾತಂದಿರನ್ನು ಸತ್ಯನಿಷೇಧಿಗಳು ಮತ್ತು ಪಥಭ್ರಷ್ಟರೆಂದು ಸಾರಿದೆ. ಈಗಲಾದರೂ ನನ್ನ ಮಾತು ಕೇಳು. ನಾನು ನಿನ್ನ ಮುಂದೆ ಕೆಲವು ಸಲಹೆಗಳನ್ನಿಡುತ್ತೇನೆ. ಆ ಪೈಕಿ ಯಾವುದನ್ನಾದರೂ ನೀನು ಸ್ವೀಕರಿಸು."

"ಅಬುಲ್ ವಲೀದ್! ಖಂಡಿತ ಹೇಳಿ. ನಾನು ಕೇಳುತ್ತೇನೆ."

ಉತ್ಬಾ: "ಸೋದರ ಪುತ್ರಾ! ನೀನು ಈ ಕಾರ್ಯ ಆರಂಭಿಸಿರುವುದು ಸಂಪತ್ತು ಗಳಿಸಲಿಕ್ಕಾದರೆ ಹೇಳು. ನೀನು ಮಕ್ಕಾದ ಅತಿ ದೊಡ್ಡ ಶ್ರೀಮಂತನಾಗಿ ಬಿಡುವಷ್ಟು ಸಂಪತ್ತನ್ನು ನಿನಗೆ ಕೊಡಿಸುವ ಹೊಣೆ ನನ್ನದು. ನೀನು ನಾಯಕತ್ವವನ್ನು ಬಯಸುವಿಯಾದರೆ ನಾವೆಲ್ಲರೂ ನಿನ್ನನ್ನು ಸಂತೋಷದಿಂದ ನಮ್ಮ ಸರದಾರರಾಗಿ ಮಾಡುತ್ತೇವೆ. ನಿನ್ನ ಅನುಮತಿಯಿಲ್ಲದೆ ಯಾವ ತೀರ್ಮಾನವನ್ನೂ ನಾವು ಮಾಡಲಾರೆವೆಂದು ನಿನಗೆ ಭರವಸೆ ನೀಡುತ್ತೇವೆ. ನೀನು ರಾಜನಾಗ ಬಯಸಿದರೆ ನಾವೆಲ್ಲರೂ ನಿನ್ನನ್ನು ನಮ್ಮ ರಾಜನೆಂದು ಅಂಗೀಕರಿಸುತ್ತೇವೆ. ನಿನಗೇನಾದರೂ ಯಕ್ಷ ಸೋಂಕು ತಗಲಿದ್ದರೆ ಹೇಳು. ಅದನ್ನು ನಮ್ಮಿಂದ ನಿವಾರಿಸಲು ಸಾಧ್ಯವಾಗದಿದ್ದರೆ ನಾವು ಮಂತ್ರವಾದಿ ಯೊಬ್ಬನನ್ನು ಕರೆಸಿ ಅದನ್ನು ತೊಲಗಿಸುತ್ತೇವೆ. ನಿನಗೆ ಮತಿಭ್ರಮಣೆಯಾಗಿದ್ದು ನಿದ್ದೆಯಲ್ಲಿ, ಎಚ್ಚರದಲ್ಲಿ ಏನೇನೋ ಕಂಡಂತಾಗುತ್ತಿದ್ದರೆ ಹೇಳು. ನಾವು ನಮ್ಮ ಖರ್ಚಿನಲ್ಲಿ ಅತ್ಯುತ್ತಮ ವೈದ್ಯರಿಂದ ಅದಕ್ಕೆ ಚಿಕಿತ್ಸೆ ಮಾಡಿಸುತ್ತೇವೆ. ನೀನು ಸುಂದರಿಯೊಬ್ಬಳನ್ನು ವಿವಾಹವಾಗ ಬಯಸುತ್ತೀಯಾದರೆ ಅದನ್ನೂ ಹೇಳು. ನೀನು ಹೇಳಿದ ಅತ್ಯಂತ ಸ್ಫುರದ್ರೂಪಿ ಮಹಿಳೆಯೊಂದಿಗೆ ನಿನ್ನ ವಿವಾಹ ಮಾಡಿಕೊಡುವುದು ನಮ್ಮ ಕೆಲಸ. ಆದರೆ ಅಲ್ಲಾಹನಿಗಾಗಿ ನೀನು ನಿನ್ನ ಈ ಕಾರ್ಯವನ್ನು ತೊರೆದುಬಿಡು."

ಇಷ್ಟು ಹೇಳಿ ಉತ್ಬಾ ಆಶೆಯ ಕಣ್ಣುಗಳಿಂದ ಮುಹಮ್ಮದ್‌ರತ್ತ(ಸ) ನೋಡಿದ. ಮುಹಮ್ಮದ್(ಸ) ಈ ರೀತಿ ಉತ್ತರಿಸಿದರು: "ಅಬುಲ್ ವಲೀದ್! ನಿಮಗೆ ಹೇಳಲಿಕ್ಕಿರುವುದನ್ನೆಲ್ಲಾ ಹೇಳಿ ಆಯಿತೇ ಅಥವಾ ಇನ್ನೇನಾದರೂ ಹೇಳಲಿಕ್ಕಿದೆಯೇ?"

ಉತ್ಬಾ: "ನನ್ನ ಮಾತು ಮುಗಿಯಿತು. ಈಗ ನನಗೆ ನಿನ್ನ ಉತ್ತರ ಬೇಕಾಗಿದೆ."

ಮುಹಮ್ಮದ್: "ಹಾಗಿದ್ದರೆ ನನ್ನ ಮಾತು ಕೇಳಿ" ಎನ್ನುತ್ತಾ ಪ್ರವಾದಿ(ಸ) "ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ" ಎಂದು ಆರಂಭಿಸಿ ಪವಿತ್ರ ಕುರ್‌ಆನಿನ 'ಹಾಮೀಮ್ ಅಸ್ಸಜದಃ' ಎಂಬ ಅಧ್ಯಾಯವನ್ನು ಪಠಿಸ ಲಾರಂಭಿಸಿದರು. ಆ ಪೈಕಿ ಕೆಲವು ಸೂಕ್ತಗಳ ಅನುವಾದ ಈ ರೀತಿಯಿದೆ:

"ಹಾಮೀಮ್. ಇದು ಪರಮ ದಯಾಮಯನೂ ಕರುಣಾನಿಧಿಯೂ ಆದವನ ಕಡೆಯಿಂದ ಅವತೀರ್ಣ ಗೊಳಿಸಲ್ಪಟ್ಟುದಾಗಿದೆ. ಸೂಕ್ತಗಳು ಸುಸ್ಪಷ್ಟವಾಗಿ ವಿವರಿಸಲ್ಪಟ್ಟಿರುವ ಗ್ರಂಥವಿದು. ಜ್ಞಾನವುಳ್ಳವರಿಗಾಗಿ ಅರಬೀ ಭಾಷೆಯ ಕುರ್‌ಆನ್. ಸುವಾರ್ತೆ ಹಾಗೂ ಎಚ್ಚರಿಕೆ ನೀಡುವಂತಹದು. ಆದರೆ ಇವರಲ್ಲಿ ಹೆಚ್ಚಿನವರು ಇದರಿಂದ ವಿಮುಖರಾದರು ಮತ್ತು ಅವರು ಕಿವಿ ಗೊಡುವುದಿಲ್ಲ. 'ನೀವು ಯಾವುದರ ಕಡೆಗೆ ನಮ್ಮನ್ನು ಕರೆಯುತ್ತಿರುವಿರೋ

ಅದರ ಬಗ್ಗೆ ನಮ್ಮ ಹೃದಯಗಳ ಮೇಲೆ ಹೊದಿಕೆಗಳು ಹೊದಿಸಲ್ಪಟ್ಟಿವೆ. ನಮ್ಮ ಕಿವಿಗಳು ಕಿವುಡಾಗಿ ಬಿಟ್ಟಿವೆ. ನಮ್ಮ ಮತ್ತು ನಿಮ್ಮ ನಡುವೆ ಒಂದು ತೆರೆ ಬಿದ್ದಿದೆ. ನೀವು ನಿಮ್ಮ ಕೆಲಸ ಮಾಡಿರಿ, ನಾವು ನಮ್ಮ ಕೆಲಸ ಮಾಡುತ್ತ ಹೋಗುವೆವು' ಎನ್ನುತ್ತಾರೆ. ಸಂದೇಶವಾಹಕರೇ, ಇವರೊಡನೆ ಹೇಳಿರಿ, ನಾನೂ ನಿಮ್ಮಂತೆಯೇ ಇರುವ ಒಬ್ಬ ಮನುಷ್ಯನೇ ಆಗಿದ್ದೇನೆ. ನಿಮ್ಮ ಆರಾಧ್ಯನು ಏಕಮಾತ್ರ ಆರಾಧ್ಯನಾಗಿರುವನೆಂದು ನನಗೆ 'ದಿವ್ಯವಾಣಿ' ಮೂಲಕ ತಿಳಿಸಲಾಗುತ್ತದೆ. ಆದುದರಿಂದ ನೀವು ನೇರವಾಗಿ ಅವನದೇ ದಿಕ್ಕನ್ನು ಅನುಸರಿಸಿರಿ ಮತ್ತು ಅವನೊಡನೆ ಕ್ಷಮೆ ಯಾಚಿಸಿರಿ. ಬಹುದೇವವಿಶ್ವಾಸಿಗಳಿಗೆ ವಿನಾಶವಿದೆ.'

ಅವರು ಝಕಾತ್ ಕೊಡದವರು ಹಾಗೂ ಪರಲೋಕ ಜೀವನವನ್ನು ನಿರಾಕರಿಸುವವರು. ಆದರೆ ಸತ್ಯವಿಶ್ವಾಸವನ್ನು ಸ್ವೀಕರಿಸಿ ಸತ್ಕರ್ಮವೆಸಗಿದವರಿಗಾಗಿ ಖಂಡಿತ ವಾಗಿಯೂ ಎಂದೂ ಕೊನೆಗೊಳ್ಳದಂತಹ ಸತ್ಫಲವಿದೆ. ಸಂದೇಶವಾಹಕರೇ, ಇವರೊಡನೆ ಹೇಳಿರಿ- ಭೂಮಿಯನ್ನು ಎರಡೇ ದಿನಗಳಲ್ಲಿ ಸೃಷ್ಟಿಸಿದಂತಹ ದೇವನನ್ನು ನೀವು ನಿರಾಕರಿಸುತ್ತೀರಾ? ಮತ್ತು ಇತರರನ್ನು ಅವನಿಗೆ ಸರಿಸಮಾನರಾಗಿ ಮಾಡುತ್ತೀರಾ? ಸಕಲ ಲೋಕಗಳ ಪಾಲಕ ಪ್ರಭು ಅವನೇ ತಾನೆ?

ಅವನು (ಭೂಮಿಯನ್ನು ಅಸ್ತಿತ್ವಕ್ಕೆ ತಂದ ಬಳಿಕ) ಅದರ ಮೇಲೆ ಪರ್ವತಗಳನ್ನು ನಾಟಿದನು. ಅದರಲ್ಲಿ ಸಮೃದ್ಧಿಗಳನ್ನಿರಿಸಿದನು ಮತ್ತು ಅದರಲ್ಲಿ ಎಲ್ಲ ಅಪೇಕ್ಷಕರಿಗಾಗಿ ಅವರವರ ಅಗತ್ಯಾನುಸಾರ, ಸರಿಯಾದ ಪ್ರಮಾಣದಲ್ಲಿ ಆಹಾರ ವಸ್ತುಗಳನ್ನು ಒದಗಿಸಿದನು. ಈ ಕಾರ್ಯಗಳೆಲ್ಲ ನಾಲ್ಕು ದಿನಗಳಲ್ಲಾದವು. ತರುವಾಯ ಅವನು ಆಕಾಶದ ಕಡೆಗೆ ಗಮನ ಹರಿಸಿದನು. ಆಗ ಅದು ಕೇವಲ ಹೊಗೆಯಾಗಿತ್ತು. ಅವನು ಆಕಾಶ-ಭೂಮಿಗಳೊಡನೆ, 'ನೀವು ಬಯಸಿದರೂ ಬಯಸದಿದ್ದರೂ ಅಸ್ತಿತ್ವಕ್ಕೆ ಬಂದು ಬಿಡಿರಿ' ಎಂದನು. ಅವೆರಡೂ, 'ನಾವು ಆಜ್ಞಾಪಾಲಕರಂತೆ ಬಂದು ಬಿಟ್ಟೆವು' ಎಂದವು. ಆಗ ಅವನು ಎರಡು ದಿನಗಳೊಳಗೆ ಸಪ್ತಗಗನಗಳನ್ನು ಉಂಟು ಮಾಡಿದನು ಮತ್ತು ಎಲ್ಲ ಆಕಾಶಗಳಲ್ಲೂ ಅದರ ಕಾನೂನನ್ನು 'ದಿವ್ಯವಾಣಿ' ಮಾಡಿಬಿಟ್ಟನು. ಭೂಲೋಕದ ಆಕಾಶವನ್ನು ನಾವು ದೀಪಗಳಿಂದ ಅಲಂಕರಿಸಿದೆವು ಮತ್ತು ಅದನ್ನು ಚೆನ್ನಾಗಿ ಸುರಕ್ಷಿತ ಗೊಳಿಸಿದೆವು. ಇವೆಲ್ಲವೂ ಓರ್ವ ಪ್ರಬಲನೂ, ಸರ್ವಜ್ಞನೂ ಆಗಿರುವಾತನ ಯೋಜನೆಯಾಗಿದೆ. ಇವರೀಗ ವಿಮುಖರಾಗುತ್ತಾರೆಂದಾದರೆ ಇವರೊಡನೆ ಹೇಳಿರಿ, ನಾನು ನಿಮ್ಮನ್ನು, ಆದ್ ಮತ್ತು ಸಮೂದರ ಮೇಲೆ ಎರಗಿದ್ದಂತಹ, ಹಠಾತ್ತನೆ ಸಿಡಿದು ಬೀಳುವ ಒಂದು ಯಾತನೆಯ ಬಗ್ಗೆ ಎಚ್ಚರಿಸುತ್ತೇನೆ."

ಇಲ್ಲಿಗೆ ತಲುಪಿದಾಗ ಉತ್ಬಾ ಭಯಭೀತನಾಗಿ ತಟ್ಟನೆ ಮುಹಮ್ಮದ್‌ರ(ಸ) ಬಾಯಿಯ ಮೇಲೆ ತಮ್ಮ ಕೈಯಿಟ್ಟು, ಹೀಗೆಂದನು, "ಸೋದರ ಪುತ್ರಾ! ನಮ್ಮ ಸಂಬಂಧವನ್ನು ಪರಿಗಣಿಸು. ಇಂತಹ ಮಾತು ಹೇಳದಿರು."

ಮುಹಮ್ಮದ್(ಸ) ಅವರ ಕೈಯನ್ನು ಸರಿಸುತ್ತಾ, 'ಅಬುಲ್ ವಲೀದರೇ ಕೇಳಿ' ಎನ್ನುತ್ತಾ ಈ ರೀತಿ ಮುಂದುವರಿಸಿದರು: "ದೇವ ಸಂದೇಶವಾಹಕರು ಅವರ ಮುಂದಿನಿಂದಲೂ

ಹಿಂದಿನಿಂದಲೂ ಎಲ್ಲ ದಿಕ್ಕುಗಳಿಂದಲೂ ಅವರ ಬಳಿ ಬಂದು, 'ನೀವು ಅಲ್ಲಾಹನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡಬೇಡಿರಿ' ಎಂದು ಹೇಳಿದಾಗ ಅವರು, 'ನಮ್ಮ ಪ್ರಭು ಇಚ್ಛಿಸು ತ್ತಿದ್ದರೆ ದೇವಚರರನ್ನು ಕಳುಹಿಸುತ್ತಿದ್ದನು. ಆದುದರಿಂದ ನೀವು ಯಾವುದಕ್ಕಾಗಿ ಕಳುಹಿಸಲ್ಪಟ್ಟಿ ರುವಿರೋ ಅದನ್ನು ನಾವು ನಿರಾಕರಿಸುತ್ತೇವೆ' ಎಂದರು. ಆದ್ (ಜನಾಂಗದವರು) ಯಾವ ಹಕ್ಕೂ ಇಲ್ಲದೆ ಭೂಮಿಯಲ್ಲಿ ಅಹಂಕಾರಪಡುತ್ತಿದ್ದರು. "ನಮಗಿಂತ ಶಕ್ತಿಶಾಲಿಗಳು ಯಾರಿದ್ದಾರೆ?" ಎನ್ನತೊಡಗಿದರು. ಅವರನ್ನು ಸೃಷ್ಟಿಸಿದ ಅಲ್ಲಾಹ್ ಅವರಿಗಿಂತ ಎಷ್ಟೋ ಅಧಿಕ ಶಕ್ತಿಶಾಲಿಯೆಂದು ಅವರಿಗೆ ಹೊಳೆಯಲಿಲ್ಲವೇ? ಅವರು ನಮ್ಮ ಸೂಕ್ತಗಳನ್ನು ನಿರಾಕರಿಸುತ್ತಲೇ ಇದ್ದರು.

ಕೊನೆಗೆ ನಾವು ಅವರಿಗೆ ಲೌಕಿಕ ಜೀವನದಲ್ಲೇ ಅಪಮಾನಕರ ಯಾತನೆಯ ಸವಿಯನ್ನು ಉಣಿಸಲಿಕ್ಕಾಗಿ ಕೆಲವು ಅಶುಭ ದಿನಗಳಲ್ಲಿ ಅವರ ಮೇಲೆ ತೀವ್ರವಾದ ಚಂಡಮಾರುತವನ್ನು ಕಳುಹಿಸಿಬಿಟ್ಟೆವು. ಪರಲೋಕದ ಯಾತನೆಯಂತು ಇದಕ್ಕಿಂತಲೂ ಹೆಚ್ಚು ಅಪಮಾನಕರ ವಾಗಿದೆ. ಅಲ್ಲಿ ಅವರಿಗೆ ಸಹಾಯ ಮಾಡುವವರು ಯಾರೂ ಇರಲಾರರು. ಇನ್ನು ಸಮೂದರು, ನಾವು ನೇರ ಮಾರ್ಗವನ್ನು ಅವರ ಮುಂದಿರಿಸಿದೆವು. ಆದರೆ ಅವರು ದಾರಿಗಾಣುವ ಬದಲು ಕುರುಡರಾಗಿರುವುದನ್ನೇ ಮೆಚ್ಚಿಕೊಂಡರು. ಕೊನೆಗೆ ಅವರ ದುಷ್ಕರ್ಮಗಳಿಂದಾಗಿ ಅವರ ಮೇಲೆ ಅಪಮಾನಕಾರಕ ಯಾತನೆ ಎರಗಿತು ಮತ್ತು ಸತ್ಯವಿಶ್ವಾಸವನ್ನು ಸ್ವೀಕರಿಸಿ ಕರ್ಮಭ್ರಷ್ಟತೆಯಿಂದ ದೂರವಿರುತ್ತಿದ್ದ ವರನ್ನು ನಾವು ರಕ್ಷಿಸಿಕೊಂಡೆವು. ಅಲ್ಲಾಹನ ಈ ಶತ್ರುಗಳು ನರಕಾಗ್ನಿಯ ಕಡೆಗೆ ಸುತ್ತುಗಟ್ಟಿ ತರಲ್ಪಡುವಂತಹ ದಿನದ ಬಗ್ಗೆ ಯೋಚಿಸಿರಿ. ಅಂದು, ಅವರ ಹಿಂದಿನ ಕಾಲದವರನ್ನು ಮುಂದಿನ ಕಾಲದವರು ಬರುವವರೆಗೆ ತಡೆದಿರಿಸಲಾಗುವುದು. ಅವರೆಲ್ಲರೂ ಅಲ್ಲಿಗೆ ತಲಪಿದಾಗ ಅವರ ಕಿವಿಗಳೂ, ಕಣ್ಣುಗಳೂ, ಅವರ ದೇಹದ ಚರ್ಮಗಳೂ ಅವರು ಭೂಲೋಕದಲ್ಲಿ ಏನು ಮಾಡುತ್ತಿದ್ದ ರೆಂಬ ಕುರಿತು ಸಾಕ್ಷಿ ಹೇಳುವುವು. ಅವರು ತಮ್ಮ ಚರ್ಮಗಳೊಡನೆ- ನೀವು ನಮ್ಮ ವಿರುದ್ಧ ಸಾಕ್ಷಿ ಹೇಳಿದುದೇಕೆಂದು ಕೇಳುವರು. ಆಗ ಅವುಗಳು ಹೇಳುವವು: "ಸಕಲ ವಸ್ತುಗಳಿಗೆ ವಾಕ್ಸಾಮರ್ಥ್ಯ ನೀಡಿ ರುವ ದೇವನೇ ನಮಗೂ ವಾಕ್ಸಾಮರ್ಥ್ಯವನ್ನು ನೀಡಿರುವನು. ಅವನೇ ನಿಮ್ಮನ್ನು ಪ್ರಥಮ ಬಾರಿ ಸೃಷ್ಟಿಸಿದ್ದನು ಮತ್ತು ಈಗ ಅವನ ಕಡೆಗೇ ನೀವು ಮರಳಿ ತರಲ್ಪಡುತ್ತಿರುವಿರಿ. ನೀವು ಭೂಲೋಕದಲ್ಲಿ ಅಡಗಿಕೊಂಡು ಅಪರಾಧಗಳನ್ನೆಸಗುತ್ತಿದ್ದಾಗ ನಿಮ್ಮ ಕಿವಿಗಳು, ಕಣ್ಣುಗಳು ಮತ್ತು ಚರ್ಮಗಳು ನಿಮ್ಮ ವಿರುದ್ಧ ಸಾಕ್ಷಿ ಹೇಳಲಿವೆ ಎಂಬ ಯೋಚನೆಯೇ ನಿಮಗಿರಲಿಲ್ಲ. ನೀವಂತು ನಿಮ್ಮ ಹಲವಾರು ಕರ್ಮಗಳ ಬಗ್ಗೆ ಅಲ್ಲಾಹನಿಗೂ ಅರಿವಿಲ್ಲ ಎಂದು ಭಾವಿಸಿಕೊಂಡಿದ್ದಿರಿ. ನೀವು ನಿಮ್ಮ ಪ್ರಭುವಿನ ಬಗ್ಗೆ ಇರಿಸಿಕೊಂಡಿದ್ದ ಈ ಭಾವನೆಯೇ ನಿಮ್ಮನ್ನು ಕೆಡಿಸಿಬಿಟ್ಟಿತು ಮತ್ತು ಇದರಿಂದಾಗಿಯೇ ನೀವು ನಷ್ಟಕ್ಕೊಳ ಗಾಗಿಬಿಟ್ಟಿರಿ." ಇಂತಹ ಸ್ಥಿತಿಯಲ್ಲಿ ಅವರು ತಾಳ್ಮೆ ವಹಿಸಿದರೂ (ವಹಿಸದಿದ್ದರೂ) ನರಕಾಗ್ನಿಯೇ ಅವರ ವಾಸಸ್ಥಾನವಾಗುವುದು. ಅವರು ಮರಳಲು ಬಯಸಿದರೂ ಅವರಿಗೆ ಅದಕ್ಕೆ ಅವಕಾಶ ಕೊಡಲಾಗದು. ಅವರಿಗೆ ಅವರ ಮುಂದೆ ಮತ್ತು ಹಿಂದೆ ಇರುವ

ವಸ್ತುಗಳನ್ನೆಲ್ಲ ಮನೋಹರಗೊಳಿಸಿ ತೋರಿಸುತ್ತಿದ್ದಂತಹ ಸಂಗಾತಿಗಳನ್ನು ನಾವು ಅವರ ಮೇಲೆ ಹೇರಿ ಬಿಟ್ಟಿದ್ದೆವು. ಕೊನೆಗೆ ಇವರಿಗಿಂತ ಮುಂಚೆ ಗತಿಸಿಹೋಗಿದ್ದ ಯಕ್ಷ ಮತ್ತು ಮಾನವ ಸಮುದಾಯಗಳಿಗೆ ಅನ್ವಯಗೊಂಡಿದ್ದ ಶಿಕ್ಷೆಯ ತೀರ್ಮಾನವೇ ಅವರಿಗೂ ಅನ್ವಯವಾಗಿ ಬಿಟ್ಟಿತು. ಖಂಡಿತವಾಗಿಯೂ ಅವರು ನಷ್ಟಹೊಂದುವವರಾಗಿದ್ದರು.

'ಈ ಕುರ್‌ಆನನ್ನು ಎಷ್ಟು ಮಾತ್ರಕ್ಕೂ ಆಲಿಸಬೇಡಿರಿ. ಇದನ್ನು ಕೇಳಿಸಲಾದಾಗ ಆತಂಕ ಗಳನ್ನೊಡ್ಡಿರಿ. ಈ ಮೂಲಕ ನೀವು ವಿಜಯಿಗಳಾಗಲೂಬಹುದು' ಎಂದು ಈ ಸತ್ಯನಿಷೇಧಿಗಳು ಹೇಳುತ್ತಾರೆ. ನಾವು ಸತ್ಯನಿಷೇಧಿಗಳಿಗೆ ಘೋರ ಯಾತನೆಯ ಸವಿಯನ್ನು ಉಣಿಸಿಯೇ ತೀರುವೆವು. ಇವರು ಮಾಡುತ್ತಿದ್ದ ಅತ್ಯಂತ ಕೆಟ್ಟ ಕೃತ್ಯಗಳ ಪ್ರತಿಫಲವನ್ನು ಇವರಿಗೆ ಸಂಪೂರ್ಣ ವಾಗಿ ಕೊಡುವೆವು. ಪ್ರತಿಫಲವಾಗಿ ಅಲ್ಲಾಹನ ಶತ್ರುಗಳಿಗೆ ಸಿಗಲಿರುವುದು ನರಕಾಗ್ನಿಯಾಗಿದೆ. ಇವರ ನೆಲೆಯು ಶಾಶ್ವತವಾಗಿ ಅದರಲ್ಲೇ ಇರುವುದು. ಅವರು ನಮ್ಮ ವಚನಗಳನ್ನು ತಿರಸ್ಕರಿಸುತ್ತಿದ್ದ ಅಪರಾಧಕ್ಕೆ ಶಿಕ್ಷೆಯಿದು. ಅಲ್ಲಿ ಈ ಸತ್ಯನಿಷೇಧಿಗಳು, 'ನಮ್ಮ ಪ್ರಭೂ, ನಮ್ಮನ್ನು ಪಥಭ್ರಷ್ಟಗೊಳಿಸಿದ್ದ ಯಕ್ಷ ಮತ್ತು ಮಾನವರನ್ನು ನಮಗೊಮ್ಮೆ ತೋರಿಸಿಬಿಡು. ಅವರು ಚೆನ್ನಾಗಿ ಅಪಮಾನಿತರಾಗುವಂತೆ ನಾವು ಅವರನ್ನು ತುಳಿದು ಬಿಡುವೆವು' ಎಂದು ಹೇಳುವರು. ನಮ್ಮ ಪ್ರಭು ಅಲ್ಲಾಹನು ಎಂದು ಹೇಳಿ ಆ ಬಳಿಕ ಅದರಲ್ಲೇ ಸ್ಥಿರವಾಗಿ ನಿಂತು ಬಿಟ್ಟವರ ಮೇಲೆ ಖಂಡಿತವಾಗಿಯೂ ದೇವಚರರು ಇಳಿಯುತ್ತಾರೆ ಮತ್ತು ಹೇಳುತ್ತಾರೆ; 'ಹೆದರ ಬೇಡಿರಿ, ಖೇದಿಸಬೇಡಿರಿ ನಿಮಗೆ ವಾಗ್ದಾನ ಮಾಡಲಾಗಿರುವ ಸ್ವರ್ಗದ ಸುವಾರ್ತೆಯಿಂದ ಸಂತಸ ಗೊಳ್ಳಿರಿ. ನಾವು ಈ ಲೋಕದ ಜೀವನದಲ್ಲೂ, ಪರಲೋಕದಲ್ಲೂ ನಿಮ್ಮ ಸಂಗಾತಿಗಳಾಗಿ ದ್ದೇವೆ. ಅಲ್ಲಿ ನೀವು ಬಯಸಿದ್ದೆಲ್ಲವೂ ನಿಮಗೆ ಸಿಗುವುದು. ನೀವು ಆಶಿಸಿದ ಪ್ರತಿಯೊಂದು ವಸ್ತುವೂ ನಿಮ್ಮದಾ ಗುವುದು. ಮಹಾ ಕ್ಷಮಾಶೀಲನೂ, ಕರುಣಾನಿಧಿಯೂ ಆಗಿರುವವನ ಕಡೆಯಿಂದ ನಿಮಗಿರುವ ಆತಿಥ್ಯವಿದು.' ಅಲ್ಲಾಹನ ಕಡೆಗೆ ಆಹ್ವಾನಿಸಿದ, ಸತ್ಕರ್ಮವೆಸಗಿದ ಮತ್ತು 'ನಾನು ಮುಸ್ಲಿಮ್' ಎಂದು ಹೇಳುತ್ತಿದ್ದ ವ್ಯಕ್ತಿಯ ಮಾತಿಗಿಂತ ಶ್ರೇಷ್ಠವಾದ ಮಾತು ಇನ್ನಾರ ದಾಗಿರಲು ಸಾಧ್ಯ! ಸಂದೇಶವಾಹಕರೇ, ಒಳಿತು ಮತ್ತು ಕೆಡುಕು ಸರಿಸಮಾನವಲ್ಲ. ನೀವು ಕೆಡುಕನ್ನು ಅತ್ಯುತ್ತಮ ಒಳಿತಿನ ಮೂಲಕ ದೂರೀಕರಿಸಿರಿ. ನಿಮ್ಮೊಂದಿಗೆ ಹಗೆತನ ಕಟ್ಟಿ ಕೊಂಡವನು ನಿಮ್ಮ ಆಪ್ತ ಮಿತ್ರನಾಗಿ ಬಿಡುವುದನ್ನು ನೀವು ಕಾಣುವಿರಿ. ಈ ಗುಣವಿಶೇಷವು ಸಹನಶೀಲರಿಗಲ್ಲದೆ ಇನ್ನಾರಿಗೂ ಲಭ್ಯವಾಗುವುದಿಲ್ಲ. ಈ ಸ್ಥಾನವು ಮಹಾ ಅದೃಷ್ಟಶಾಲಿಗಳ ಹೊರತು ಮತ್ತಾ ರಿಗೂ ಪ್ರಾಪ್ತವಾಗುವುದಿಲ್ಲ. ನಿಮಗೆ ಶೈತಾನನ ಕಡೆಯಿಂದೇನಾದರೂ ಪ್ರಚೋದನೆಯುಂಟಾದರೆ ನೀವು ಅಲ್ಲಾಹನ ಅಭಯವನ್ನು ಯಾಚಿಸಿರಿ. ನಿಶ್ಚಯವಾಗಿಯೂ ಅವನು ಸಕಲವನ್ನೂ ಆಲಿಸುತ್ತಾನೆ ಮತ್ತು ಸಕಲವನ್ನೂ ಅರಿತಿದ್ದಾನೆ. ಈ ಇರುಳೂ ಹಗಲೂ ಸೂರ್ಯ-ಚಂದ್ರರೂ ಅಲ್ಲಾಹನ ನಿದರ್ಶನಗಳಲ್ಲಾಗಿವೆ. ಸೂರ್ಯ-ಚಂದ್ರರಿಗೆ ಸಾಷ್ಟಾಂಗವೆರಗಬೇಡಿರಿ; ಅವುಗಳನ್ನು ಸೃಷ್ಟಿಸಿದ ಅಲ್ಲಾಹನಿಗೆ ಸಾಷ್ಟಾಂಗವೆರಗಿರಿ. ನೀವು ನಿಜಕ್ಕೂ ಅವನನ್ನೇ ಆರಾಧಿಸುವವರಾಗಿದ್ದರೆ (ಹೀಗೆ ಮಾಡಿರಿ). ಇವರು ದುರಹಂಕಾರದಿಂದ ತಮ್ಮ ಮಾತಿನಲ್ಲೇ

ಪಟ್ಟು ಹಿಡಿಯುವರೆಂದಾದರೆ ಏನೂ ಚಿಂತಿಲ್ಲ. ನಿಮ್ಮ ಪ್ರಭುವಿಗೆ ನಿಕಟವಾಗಿರುವ ದೇವ ಚರರು ಅಹೋರಾತ್ರಿ ಅವನನ್ನು ಸ್ತುತಿಸುತ್ತಿದ್ದಾರೆ ಮತ್ತು ಅವರು ಎಂದಿಗೂ ಬಳಲುವುದಿಲ್ಲ" ಎಂದು ಪಠಿಸುತ್ತಾ ಪ್ರವಾದಿ(ಸ) ಸಾಷ್ಟಾಂಗವೆರಗಿದರು. ತರುವಾಯ ಉತ್ಬಾರನ್ನುದ್ದೇಶಿಸಿ ಹೀಗೆ ಹೇಳಿದರು: "ಅಬುಲ್ ವಲೀದ್! ನೀವು ನನ್ನ ಉತ್ತರವನ್ನು ಕೇಳಿದಿರಲ್ಲವೇ? ಇನ್ನು ನಿಮಗೆ ಏನು ಮಾಡಲಿಕ್ಕಿದೆಯೋ ಮಾಡಿ."

ಈ ತನಕ ತನ್ನ ಎರಡೂ ಕೈಗಳನ್ನು ಹಿಂದೆ ನೆಲಕ್ಕೆ ಊರಿ ಗಮನವಿಟ್ಟು ಆಲಿಸುತ್ತಿದ್ದ ಉತ್ಬಾ ಬೆಚ್ಚಿ ಬಿದ್ದವನಂತೆ ಎದ್ದು ಏನೂ ಹೇಳದೆ ಗಂಭೀರವದನನಾಗಿ ತನ್ನ ಸಂಗಾತಿಗಳಾದ ಕುರೈಶ್ ಸರದಾರರು ಕುಳಿತಿರುವಲ್ಲಿಗೆ ನಡೆದೇ ಬಿಟ್ಟ. ದೂರದಿಂದಲೇ ಆತ ಬರುತ್ತಿರು ವುದನ್ನು ಕಂಡು ಅವರು ಹೇಳತೊಡಗಿದರು, "ದೇವರಾಣೆ! ಉತ್ಬಾನ ಮುಖ ಬದಲಾಗಿದೆ. ಇದು ಅವನು ಹೋಗುವಾಗ ಇದ್ದ ಮುಖವೇ ಅಲ್ಲ."

ಉತ್ಬಾ ಬಂದು ಕುಳಿತೊಡನೆ ಅವರು ಕೇಳಿದರು: "ಯಾವ ಉತ್ತರ ಸಿಕ್ಕಿತು?"

ಉತ್ಬಾ: "ದೇವರಾಣೆ! ನಾನು ಈ ಹಿಂದೆ ಎಂದೂ ಆಲಿಸಿರದಂತಹ ಒಂದು ವಾಣಿಯನ್ನು ಆಲಿಸಿದೆ. ಅಲ್ಲಾಹನಾಣೆ ಇದು ಕವಿವಾಣಿಯಲ್ಲ, ಮಂತ್ರವಲ್ಲ, ಇಂದ್ರ ಜಾಲವಲ್ಲ. ಕುರೈಶರೇ! ನನ್ನ ಮಾತು ಕೇಳಿ. ಆತನನ್ನು ಅವನ ಪಾಡಿಗೆ ಬಿಟ್ಟು ಬಿಡಿ. ಈ ವಾಣಿ ಖಂಡಿತ ಉತ್ತುಂಗವಾಗಲಿದೆ. ಒಂದು ವೇಳೆ ಅರಬರು ಅವನನ್ನು ಸೋಲಿಸಿದರೆ ನೀವು ಅವನ ವಿರುದ್ಧ ಕೈ ಎತ್ತುವ ಅಗತ್ಯವೇ ಉಳಿಯದು. ಇತರರೇ ಅವನನ್ನು ನೋಡಿ ಕೊಳ್ಳುವರು. ಒಂದು ವೇಳೆ ಅವನು ಅರಬರನ್ನು ಸೋಲಿಸಿದರೆ ಅವನ ಆಧಿಪತ್ಯವು ನಿಮ್ಮ ಆಧಿಪತ್ಯ ಮತ್ತು ಅವನ ಪ್ರತಾಪವು ನಿಮ್ಮ ಪ್ರತಾಪ ವಾಗುವುದು."

ಕುರೈಶ್ ಸರದಾರರು: "ಕೊನೆಗೂ ಆತನ ಜಾದೂಗಾರಿಕೆ ನಿಮ್ಮ ಮೇಲೂ ಪ್ರಭಾವ ಬೀರಿತು."

ಉತ್ಬಾ: "ನನ್ನ ಅಭಿಪ್ರಾಯವನ್ನು ನಾನು ಹೇಳಿಯಾಯಿತು. ಇನ್ನು ನಿಮಗಿಷ್ಟ ಬಂದಂತೆ ಮಾಡಿ."

ಕುರೈಶ್ ಸರದಾರರು: "ಹಾಗಾದರೆ ನೀವು ಮುಹಮ್ಮದ್‌ರ(ಸ) ಬಾಯಿಯ ಮೇಲೇಕೆ ಕೈ ಇಟ್ಟಿರಿ?"

ಉತ್ಬಾ: "ಆತ ಆದ್ ಮತ್ತು ಸಮೂದ್ ಜನಾಂಗಗಳಿಗೆ ಎರಗಿದ ಯಾತನೆಯನ್ನು ಪ್ರಸ್ತಾಪಿಸುತ್ತಾ ನಿಮ್ಮ ಮೇಲೂ ಅಂತಹುದೇ ಯಾತನೆ ಎರಗಲಿದೆ ಎಂದು ಹೇಳಿದ. ಮುಹಮ್ಮದ್(ಸ) ಒಂದು ಮಾತು ಹೇಳಿದರೆ ಅದೆಂದೂ ಸುಳ್ಳಾಗುವುದಿಲ್ಲವೆಂಬುದು ನಿಮಗೆ ತಿಳಿದೇ ಇದೆ. ಆದ್ದರಿಂದ ನನಗೆ ಭಯವಾಯಿತು. ಅದಕ್ಕೇ ನಾನು ಆತನ ಬಾಯಿಗೆ ಕೈ ಹಿಡಿದೆ."

ಈ ಸಭೆಯು ಯಾವ ಕಲಾಪವೂ ಇಲ್ಲದೆ ವಿಸರ್ಜಿಸಲ್ಪಟ್ಟಿತು. ಜನರು ತಂತಮ್ಮ ಮನೆಗಳಿಗೆ ತೆರಳಿದರು.

## ನಿಯೋಗಗಳ ವೈಫಲ್ಯ

ಅಬೂತಾಲಿಬ್ ತಮ್ಮ ಮನೆಯಲ್ಲಿದ್ದಾರೆ. ಕುರೈಶ್ ಸರದಾರರ ಪೈಕಿ ಉತ್ಬಾ ಬಿನ್ ರಬೀಅ, ಶೀಬಾ ಬಿನ್ ರಬೀಅ, ಅಬೂ ಸುಫ್‌ಯಾನ್, ಅಬುಲ್ ಬಖ್ತರಿ, ಆಸ್ ಬಿನ್ ಹಿಷಾಮ್, ಅಸ್ವದ್ ಬಿನ್ ಅಬ್ದುಲ್ ಮುತ್ತಲಿಬ್, ಅಬೂಜಹಲ್, ವಲೀದ್ ಬಿನ್ ಮುಗೀರಾ, ಬನಿಯ, ಮುನಬ್ಬ ಮತ್ತು ಆಸ್ ಬಿನ್ ವಾಯಿಲ್ ಅವರ ಬಳಿ ಕುಳಿತಿರುವರು. ಇಂದು ಅಪರೂಪವಾಗಿ ಕುರೈಶ್ ಸರದಾರರೆಲ್ಲರೂ ತನ್ನ ಬಳಿ ನೆರೆದಿರುವುದನ್ನು ಕಂಡು ಅಬೂತಾಲಿಬ್ ಚಿಂತಾಕ್ರಾಂತರಾಗಿರುವರು. ಇವರೆಲ್ಲರೂ ಹಗಲು ರಾತ್ರಿಯೆನ್ನದೆ ಮುಹಮ್ಮದ್‌ರ(ಸ) ವಿರುದ್ಧ ವ್ಯವಸ್ಥಿತ ಕಾರ್ಯಾಚರಣೆಗಳಲ್ಲಿ ನಿರತರಾಗಿದ್ದರೆಂಬುದು ಅವರಿಗೆ ತಿಳಿದೇ ಇತ್ತು. ಇಂದು ಅವರು ಇಲ್ಲಿಗೆ ಬಂದಿರುವುದೂ ಸುಮ್ಮನೆ ಅಲ್ಲ. ಆದರೂ ಅಬೂತಾಲಿಬ್ ಬಂದವರನ್ನೆಲ್ಲಾ ಆದರದಿಂದ ಬರಮಾಡಿಕೊಂಡು ಪ್ರೀತಿ ಪೂರ್ವಕ ತಮ್ಮ ಬಳಿ ಮಂಚದ ಮೇಲೆ ಕುಳ್ಳಿರಿಸುತ್ತಾರೆ. ಸ್ವಲ್ಪ ಹೊತ್ತು ಅದೂ ಇದೂ ಮಾತಾಡಿದ ಬಳಿಕ ಅಬೂತಾಲಿಬ್ ಅವರಲ್ಲಿ ಬಂದ ಉದ್ದೇಶವೇನೆಂದು ವಿಚಾರಿಸಿದಾಗ ಉತ್ಬಾ ಹೀಗೆ ಹೇಳಿದರು:

"ಈ ಕುರೈಶ್ ಸರದಾರರು ನಿಮ್ಮ ಬಳಿ ಅತ್ಯಂತ ಮಹತ್ವದ ಒಂದು ವಿಚಾರದ ಮೇಲೆ ಮಾತುಕತೆಗಾಗಿ ಬಂದಿರುವರು."

ಅಬೂತಾಲಿಬ್: "ಹೇಳಿ ಏನಾಗಬೇಕಿದೆ?"

ಉತ್ಬಾ: "ಅಬೂತಾಲಿಬರೇ, ನಿಮ್ಮ ಸೋದರ ಪುತ್ರ ನಮ್ಮ ಪೂರ್ವಜರನ್ನು ಮತ್ತು ದೇವರುಗಳನ್ನು ಆಕ್ಷೇಪಿಸುತ್ತಿದ್ದಾನೆ. ನಮ್ಮ ಧರ್ಮದಲ್ಲಿ ಹುಳುಕು ಹುಡುಕುತ್ತಿದ್ದಾನೆ. ನಮ್ಮ ಹಿರಿಯರನ್ನು ಮೂರ್ಖರೆನ್ನುತ್ತಾನೆ ಮತ್ತು ನಮ್ಮ ಪೂರ್ವಜರನ್ನು ಪಥಭ್ರಷ್ಟ ರೆನ್ನುತ್ತಾನೆ. ಒಂದೋ ನೀವು ಅವನನ್ನು ಇಂತಹ ಕೃತ್ಯಗಳಿಂದ ತಡೆಯಬೇಕು ಇಲ್ಲವೇ ನೀವು ನಮ್ಮ ಮತ್ತು ಅವನ ಮಧ್ಯದಿಂದ ದೂರ ಸರಿಯಬೇಕು. ಏಕೆಂದರೆ (ಧರ್ಮ ಮತ್ತು ವಿಶ್ವಾಸದ ದೃಷ್ಟಿಯಿಂದ) ನೀವೂ ನಮ್ಮಂತೆಯೇ ಅವನ ವಿರೋಧಿಯಾಗಿರುವಿರಿ. ಅವನ ಸ್ಥಾನದಲ್ಲಿ ನಾವೇ ನಿಮಗೆ ಸಾಕು."

ಅಬೂತಾಲಿಬ್: "ನನಗೆ ನಿಮ್ಮ ಮಾತು ಅರ್ಥವಾಗುತ್ತದೆ. ನಿಮ್ಮ ಬಗ್ಗೆ ನನಗೆ ಬಹಳ ಗೌರವಾದರಗಳಿವೆ. ನಾನು ನನ್ನ ಸೋದರ ಪುತ್ರನಿಗೆ ಬುದ್ಧಿ ಹೇಳುತ್ತೇನೆ. ಇನ್ನು ಮುಂದೆ ಅವನು ಇಂತಹ ಮಾತುಗಳನ್ನು ಆಡಲಾರ. ನೀವು ನಿಶ್ಚಿಂತರಾಗಿರಿ."

ಕುರೈಶ್ ಸರದಾರರು ತೃಪ್ತರಾಗಿ ಮರಳುತ್ತಾರೆ. ಅಬೂತಾಲಿಬ್ ದೀರ್ಘ ಯೋಚನೆಯಲ್ಲಿ ಮಗ್ನರಾಗುತ್ತಾರೆ.

ಇದಾಗಿ ಅನೇಕ ದಿನ ಕಳೆದಿವೆ. ಅಬೂತಾಲಿಬ್ ತಮ್ಮ ಸೋದರ ಪುತ್ರನನ್ನು ಅವರ ಧರ್ಮಪ್ರಚಾರ ಚಟುವಟಿಕೆಗಳಿಂದ ತಡೆದಿಲ್ಲ. ಮುಹಮ್ಮದ್‌ರೂ(ಸ) ತಮ್ಮ ಈ

ಚಟುವಟಿಕೆಗಳನ್ನು ತೊರೆದಿಲ್ಲ. ಅಬೂತಾಲಿಬ್ ಮುಹಮ್ಮದ್‌ರಿಗೆ(ಸ) ನೆರವಾಗುವುದನ್ನು ಕೈ ಬಿಟ್ಟಿಲ್ಲ. ಇದನ್ನು ಕಂಡು ಕುರೈಶ್ ಸರದಾರರು ಚಿಂತಿತರಾಗಿದ್ದಾರೆ. ಕ್ರಮೇಣ ಅವರ ಮನದಲ್ಲಿ ಕ್ರೋಧದ ಬಿರುಗಾಳಿ ಏಳಲಾರಂಭಿಸುತ್ತದೆ. ಅವರ ಸಹನೆಯ ಕಟ್ಟೆ ಒಡೆಯುತ್ತದೆ. ಅವರು ಪುನಃ ಒಂದು ನಿಯೋಗದ ರೂಪದಲ್ಲಿ ಹೋಗಿ ಅಬೂತಾಲಿಬರ ಮನೆಯ ಕದ ತಟ್ಟುತ್ತಾರೆ.

ಅವರ ಅಪೇಕ್ಷೆಯಂತೆ ಅಬೂತಾಲಿಬರು ಮುಹಮ್ಮದ್‌ರನ್ನೂ(ಸ) ಅಲ್ಲಿಗೆ ಕರೆಸಿಕೊಳ್ಳುತ್ತಾರೆ. ಕುರೈಶ್ ಸರದಾರರ ಓರ್ವ ಪ್ರತಿನಿಧಿ ಹೀಗೆನ್ನುತ್ತಾನೆ:

"ಅಬೂತಾಲಿಬರೇ, ನೀವು ನಮ್ಮ ಹಿರಿಯರೂ, ಸರದಾರರೂ ಆಗಿರುವಿರಿ. ನಾವು ನಿಮ್ಮ ಬಳಿ ಒಂದು ನ್ಯಾಯಪೂರ್ಣ ಸಂದೇಶವನ್ನು ತಂದಿದ್ದೇವೆ. ಅದನ್ನು ಪಾಲಿಸುವುದ ರಿಂದ ನಮ್ಮೊಳಗಿರುವ ಎಲ್ಲ ಕಹಿ ಭಾವನೆಗಳೂ ನಿವಾರಣೆಯಾಗುವುವು."

ಅಬೂತಾಲಿಬ್: "ಹೇಳಿರಿ, ನಾನು ಗಮನವಿಟ್ಟು ಆಲಿಸುತ್ತೇನೆ."

ಪ್ರತಿನಿಧಿ: "ನಮ್ಮ ಆರಾಧ್ಯರ ದೂಷಣೆಯನ್ನು ಬಿಟ್ಟು ಬಿಡುವಂತೆ ನಿಮ್ಮ ಸೋದರ ಪುತ್ರನಿಗೆ ಹೇಳಿರಿ. ನಾವು ಅವನನ್ನೂ, ಅವನ ಆರಾಧ್ಯನನ್ನೂ ಅವನ ಪಾಡಿಗೆ ಬಿಟ್ಟು ಬಿಡುತ್ತೇವೆ. ನಿಮಗೆ ನಮ್ಮ ಬಗ್ಗೆ ಯಾವ ದೂರೂ ಇರಲಾರದು."

ಅಬೂತಾಲಿಬ್: (ಮುಹಮ್ಮದರ ಕಡೆಗೆ ನೋಡುತ್ತಾ) "ಸೋದರ ಪುತ್ರಾ! ಇದೋ ನಿಮ್ಮ ಜನಾಂಗದ ಹಿರಿಯರೂ, ಸರದಾರರೂ ಬಂದಿರುವರು. ನಿಮ್ಮ ಜತೆ ಅವರೊಂದು ಒಪ್ಪಂದಕ್ಕೆ ಬರಲು ಬಯಸುತ್ತಿದ್ದಾರೆ."

ಮುಹಮ್ಮದ್(ಸ): "ದೊಡ್ಡಪ್ಪಾ! ನಾನು ಅದಕ್ಕಿಂತ ಉತ್ತಮವಾದ ಒಂದು ವಿಷಯದ ಕಡೆಗೆ ಅವರನ್ನು ಆಹ್ವಾನಿಸಲೇ!"

ಅಬೂತಾಲಿಬ್: "ಹೇಳು, ಅದಾವ ವಿಷಯ?"

ಮುಹಮ್ಮದ್(ಸ): "ನಾನು ಒಂದು ವಚನವನ್ನು ಅವರ ಮುಂದಿಡುತ್ತಿದ್ದೇನೆ. ಅದನ್ನು ಅವರು ಒಪ್ಪಿಕೊಂಡರೆ ಅವರು ಅರೇಬಿಯಾದ ಅಧಿಪತಿಗಳಾಗುವರು ಮತ್ತು ಅರಬೇತರರು ಅವರಿಗೆ ಅಧೀನರಾಗುವರು."

ಅಬೂಜಹಲ್: "ಇದಂತೂ ದೊಡ್ಡ ಲಾಭದ ವ್ಯವಹಾರ. ನಿನ್ನ ತಂದೆಯಾಣೆ! ನಾವು ಇಂತಹ ಒಂದಲ್ಲ ಹತ್ತು ವಚನಗಳನ್ನು ಹೇಳಲು ಸಿದ್ಧ."

ಮುಹಮ್ಮದ್(ಸ): "ಹಾಗಾದರೆ ಹೇಳಿ ಅಲ್ಲಾಹನಲ್ಲದೆ ಬೇರೆ ಆರಾಧ್ಯನಿಲ್ಲ."

ಅಬೂಜಹಲ್: "ಅದರ ವಿರುದ್ಧವೇ ನಾವು ಯುದ್ಧ ಘೋಷಿಸಿರುವುದು. ಅದನ್ನು ನಾವು ಒಪ್ಪುವುದಾದರೆ ನಮ್ಮ ಮಧ್ಯೆ ಜಗಳವೇ ಎಲ್ಲಿದೆ? ಅಲ್ಲಾಹನಾಣೆ, ಇದು ನಮ್ಮ ಆರಾಧ್ಯರುಗಳ ಅವಹೇಳನವಾಗಿದೆ. ನಾವು ಎಷ್ಟು ಮಾತ್ರಕ್ಕೂ ಅದನ್ನು ಅಂಗೀಕರಿಸಲು ಸಿದ್ಧರಿಲ್ಲ."

ಎಲ್ಲರ ಮುಖಗಳೂ ಕೋಪದಿಂದ ಕೆಂಪಾಗಿವೆ. ದ್ವೇಷಾಗ್ನಿಯು ಉರಿಯುತ್ತಿದೆ. ಅವರು ಬೊಬ್ಬಿಡುತ್ತಾ ಈ ರೀತಿ ಹೇಳುತ್ತಾರೆ: "ಇವನು ಜಾದೂಗಾರ. ಹಸಿ ಸುಳ್ಳು ಹೇಳುತ್ತಿದ್ದಾನೆ. ಎಲ್ಲ ದೇವರುಗಳ ಸ್ಥಾನದಲ್ಲಿ ಒಂದೇ ದೇವರನ್ನು ಮಾಡಿಕೊಂಡಿದ್ದಾನೆ. ಇದಂತೂ ಅತ್ಯಂತ ವಿಚಿತ್ರ ಮಾತಾಗಿದೆ."

ಇಷ್ಟು ಹೇಳಿ ಎಲ್ಲ ಸರದಾರರೂ ಅಲ್ಲಿಂದ ಹೊರಟು ಹೋದರು.

"ಹೊರಡಿರಿ ಇಲ್ಲಿಂದ. ನಿಮ್ಮ ಆರಾಧ್ಯರ ಪೂಜೆಯಲ್ಲಿ ಅಚಲವಾಗಿರಿ. ಈ ಮಾತಂತೂ ಬೇರೆಯೇ ಉದ್ದೇಶದಿಂದ ಹೇಳಲಾಗುತ್ತಿದೆ. ಗತ ಸಮುದಾಯಗಳಿಂದ ನಾವು ಇಂತಹ ಮಾತನ್ನು ಕೇಳಿಯೇ ಇಲ್ಲ. ಇದಂತೂ ಇವರ ಸ್ವಯಂ ಕಲ್ಪಿತ ಮಾತಾಗಿದೆ. ಅಲ್ಲಾಹನಿಗೆ ತನ್ನ ಬೋಧನೆಯನ್ನಿಳಿಸಲಿಕ್ಕೆ ನಮ್ಮ ಮಧ್ಯೆ ಸಿಕ್ಕಿದ ವ್ಯಕ್ತಿ ಇವನೇನಾ?"

ಅಲ್ಲಾಹನು ಇದೇ ಸಂದರ್ಭದಲ್ಲಿ ಅವರನ್ನುದ್ದೇಶಿಸಿ ಅವತೀರ್ಣಗೊಳಿಸಿದ ವಚನಗಳಿವು: "ಅಲ್ಲಾಹನ ಬೋಧನೆಯು ಅವತೀರ್ಣಗೊಳ್ಳುವುದಕ್ಕೆ ನಮ್ಮ ನಡುವೆ ಕೇವಲ ಈತನೊಬ್ಬನೇ ಉಳಿದು ಸಿಕ್ಕಿದನೇ? ವಾಸ್ತವದಲ್ಲಿ ನನ್ನ ಬೋಧನೆಯ ವಿಷಯದಲ್ಲಿ ಇವರು ಸಂಶಯಗ್ರಸ್ತರಾಗಿದ್ದಾರೆ. ಇವರು ಈ ತನಕ ನನ್ನ ಯಾತನೆಯ ರುಚಿಯನ್ನು ಸವಿಯದಿರುವುದರಿಂದ ಹೀಗೆಲ್ಲ ಹೇಳುತ್ತಿದ್ದಾರೆ. ಪ್ರಬಲನೂ, ಮಹಾದಾನಿಯೂ ಆಗಿರುವ ನಿಮ್ಮ ಪ್ರಭುವಿನ ಕೃಪೆಯ ಭಂಡಾರಗಳು ಇವರ ಕೈಯಲ್ಲಿವೆಯೇ? ಇವರು ಭೂಮಿ-ಆಕಾಶಗಳ ಹಾಗೂ ಅವುಗಳ ನಡುವೆ ಇರುವ ವಸ್ತುಗಳ ಮಾಲಕರೇ? ಹಾಗಿದ್ದರೆ ಇವರು ವಸ್ತು ಲೋಕದ ಉನ್ನತಿಗಳಿಗೆ ಏರಿ ನೋಡಲಿ. ಇದಂತು ಕೂಟಗಳ ಪೈಕಿ ಒಂದು ಸಣ್ಣ ಕೂಟವಾಗಿದ್ದು ಇಲ್ಲೇ ಸೋಲನ್ನು ಅನುಭವಿಸಲಿದೆ. ಇವರಿಗಿಂತ ಮುಂಚೆ ನೂಹರ ಜನಾಂಗ, ಆದ್, ಮೊಳೆಗಳವನಾದ ಫಿರ್‌ಔನ್, ಸಮೂದ್, ಲೂತ್ ಜನಾಂಗ ಮತ್ತು ಐಕದವರು ಸುಳ್ಳಾಗಿಸಿದ್ದಾರೆ. ಅವರು ಕೂಟಗಳಾಗಿದ್ದರು. ಅವರ ಪೈಕಿ ಪ್ರತಿಯೊಂದು ಕೂಟವೂ ಸಂದೇಶವಾಹಕರನ್ನು ಸುಳ್ಳಾಗಿಸಿತು ಮತ್ತು ನನ್ನ ಶಿಕ್ಷೆಯ ತೀರ್ಪು ಅವರ ಮೇಲೆ ಎರಗಿಯೇ ಬಿಟ್ಟಿತು. ಇವರೂ ಒಂದು ಆಸ್ಫೋಟದ ನಿರೀಕ್ಷೆಯಲ್ಲಿದ್ದಾರೆ. ಆ ಬಳಿಕ ಇನ್ನಾವುದೇ ಆಸ್ಫೋಟ ಇರಲಾರದು ಮತ್ತು ಇವರು, "ಓ ನಮ್ಮ ಪ್ರಭೂ, ಲೆಕ್ಕಾಚಾರ ಜರಗುವ ದಿನಕ್ಕಿಂತ ಮುಂಚೆಯೇ ನಮ್ಮ ಪಾಲು ನಮಗೆ ಬೇಗನೆ ಕೊಟ್ಟುಬಿಡು" ಎನ್ನುತ್ತಾರೆ.

**(ಪವಿತ್ರ ಕುರ್‌ಆನ್: 38: 8-16)**

## ಸಂಗಾತಿಗಳ ಮೇಲೆ ದೌರ್ಜನ್ಯ

ಮುಹಮ್ಮದ್(ಸ) ಅವರ ವಿರುದ್ಧ ಆಗಾಗ ತರತರದ ಅತಿರೇಕಗಳನ್ನು ಎಸಗಲಾಗುತ್ತಿತ್ತು. ಆದರೆ ಅವರ ಸಂಗಾತಿಗಳಿಗೆ ನೀಡಲಾಗುತ್ತಿದ್ದ ಹಿಂಸೆಯು ಪ್ರವಾದಿ ವರ್ಯರ(ಸ) ಮಟ್ಟಿಗೆ ಇನ್ನಷ್ಟು ಅಸಹ್ಯವಾಗಿತ್ತು.

ಬಿಲಾಲ್(ರ) ಅವರು ಉಮಯ್ಯ ಬಿನ್ ಖಲಫ್‌ನ ಗುಲಾಮರಾಗಿದ್ದರು. ಅವರು

ಇಸ್ಲಾಮ್ ಸ್ವೀಕರಿಸಿರುವ ವಿಷಯ ಆತನಿಗೆ ತಿಳಿದಾಗ ಅವರ ಕೊರಳಿಗೆ ಹಗ್ಗ ಹಾಕಿ ಪುಂಡರ ಗುಂಪೊಂದಕ್ಕೆ ಅವರನ್ನು ಒಪ್ಪಿಸುತ್ತಿದ್ದನು. ಆ ಪುಂಡರು ಅವರನ್ನು ಮಕ್ಕಾದ ಮರಳುಗಾಡಿನಲ್ಲಿ ಎಳೆಯುತ್ತಾ ಸಾಗುತ್ತಿದ್ದರು. ರಣ ಬಿಸಿಲಲ್ಲಿ ಸುಡುವ ಮರಳಲ್ಲಿ ಅವರನ್ನು ಮಲಗಿಸಿ ಅವರ ಎದೆಯ ಮೇಲೆ ಭಾರವಾದ ಕಲ್ಲನ್ನಿಟ್ಟು ಬಿಡುತ್ತಿದ್ದರು. ಆದರೆ ಈ ದೌರ್ಜನ್ಯಗಳ ಮಧ್ಯೆಯೂ ಅವರು "ಅಹದ್-ಅಹದ್" (ದೇವನು ಒಬ್ಬನೇ, ದೇವನು ಒಬ್ಬನೇ) ಎನ್ನುತ್ತಿದ್ದರು. ಅವರ ಸಂಕಷ್ಟಗಳನ್ನು ಕಂಡು ಸಹಿಸಲಾರದೆ ಅಬೂಬಕರ್(ರ) ಅವರನ್ನು ಖರೀದಿಸಿ ಮುಕ್ತಗೊಳಿಸಿದರು.

ಅಮ್ಮಾರ್ ಹಾಗೂ ಅವರ ತಂದೆ ತಾಯಿಗಳಾದ ಯಾಸಿರ್ ಮತ್ತು ಸುಮಯ್ಯ ಮುಸ್ಲಿಮರಾದರು. ಅಬೂಜಹಲ್ ಅವರಿಗೆ ತರತರದ ಹಿಂಸೆ ನೀಡಿದನು. ಅವರ ಈ ದಯನೀಯ ಸ್ಥಿತಿಯನ್ನು ಕಂಡು ಪ್ರವಾದಿ ಮುಹಮ್ಮದ್(ಸ) ಹೇಳಿದರು:

"ಯಾಸಿರ್ ಕುಟುಂಬದವರೇ! ಸಹನೆ ವಹಿಸಿರಿ. ಸ್ವರ್ಗವು ನಿಮ್ಮ ನೆಲೆಯಾಗಲಿದೆ."

ಹೀಗೆ ಹೇಳುತ್ತಿರುವಾಗ ಪ್ರವಾದಿ ಮುಹಮ್ಮದ್‌ರ(ಸ) ಕಣ್ಣುಗಳು ತೇವಗೊಂಡುವು.

ಅಬೂ ಫಕಿಯ್ಯ(ರ) ಅವರ ಕಾಲಿಗೆ ಹಗ್ಗ ಕಟ್ಟಿ ಅವರನ್ನು ಕಲ್ಲು ಮುಳ್ಳಿನ ನೆಲದಲ್ಲಿ ಎಳೆದಾಡಲಾಗುತ್ತಿತ್ತು.

ಖಬ್ಬಾಬ್ ಬಿನ್ ಅರತ್‌ರ(ರ) ತಲೆಯ ಕೂದಲು ಹಿಡಿದೆಳೆಯಲಾಗುತ್ತಿತ್ತು. ಅವರ ಕುತ್ತಿಗೆಯನ್ನು ಹಿಸುಕಲಾಗುತ್ತಿತ್ತು. ಬೆಂಕಿಯ ಕೆಂಡಗಳ ಮೇಲೆ ಅವರನ್ನು ಮಲಗಿಸಲಾಗುತ್ತಿತ್ತು.

ಲುಬೈನ, ಝುನೀರಾ, ನಹ್‌ದಿಯ ಮತ್ತು ಉಮ್ಮು ಅಬೀಸ್ ದಾಸಿಗಳಾಗಿದ್ದರು. ಅವರ ಯಜಮಾನರು ಅವರಿಗೆ ಮೃಗೀಯ ಶಿಕ್ಷೆಯನ್ನು ಕೊಡುತ್ತಿದ್ದರು.

ಉಸ್ಮಾನ್ ಬಿನ್ ಅಫ್ಫಾನ್‌ರ ಚಿಕ್ಕಪ್ಪ ಅವರನ್ನು ಖರ್ಜೂರದ ಸೋಗೆಯಲ್ಲಿ ಸುತ್ತಿ ಅವರಿಗೆ ಹೊಗೆ ಬಿಡುತ್ತಿದ್ದರು.

ಮುಸ್‌ಅಬ್ ಬಿನ್ ಉಮೈರ್‌ರನ್ನು(ರ) ಇಸ್ಲಾಮ್ ಸ್ವೀಕರಿಸಿದ್ದಕ್ಕಾಗಿ ಮನೆಯಿಂದ ಹೊರ ಹಾಕಲಾಯಿತು.

ಇನ್ನು ಕೆಲವು ಸಹಾಬಿ(ಪ್ರವಾದಿಯ ಸಂಗಾತಿ)ಗಳನ್ನು ಕುರೈಶ್ ಸರದಾರರು ದನ ಅಥವಾ ಒಂಟೆಯ ಚರ್ಮದಲ್ಲಿ ಸುತ್ತಿ ಸುಡುಬಿಸಿಲಲ್ಲಿ ಎಸೆದು ಬಿಡುತ್ತಿದ್ದರು. ಇನ್ನು ಕೆಲವರನ್ನು ಉಕ್ಕಿನ ಉಡುಪು ತೊಡಿಸಿ ಬಿಸಿ ಬಂಡೆಗಳ ಮೇಲೆ ಎಸೆದು ಬಿಡಲಾಗುತ್ತಿತ್ತು.

ಮುಹಮ್ಮದ್(ಸ) ಕಅಬಾದ ನೆರಳಲ್ಲಿ ಕುಳಿತಿದ್ದರು. ಖಬ್ಬಾಬ್ ಬಿನ್ ಅರತ್(ರ) ಬಂದು ಈ ರೀತಿ ಅರಿಕೆ ಮಾಡಿಕೊಳ್ಳುತ್ತಾರೆ: "ಯಾ ರಸೂಲಲ್ಲಾಹ್! (ಓ ದೇವ ಸಂದೇಶ ವಾಹಕರೇ!) ಈಗ ಹಿಂಸೆ ಮೇರೆ ಮೀರಿದೆ. ತಾವು ಅಲ್ಲಾಹನಲ್ಲಿ ಪ್ರಾರ್ಥಿಸುವುದಿಲ್ಲವೇ?"

ಇದನ್ನು ಕೇಳಿ ಪ್ರವಾದಿವರ್ಯರ(ಸ) ಮುಖವು ವಿವರ್ಣವಾಯಿತು. ಅವರು ಈ ರೀತಿ

ಹೇಳಿದರು: "ನಿಮಗಿಂತ ಮುಂಚೆ ಗತಿಸಿ ಹೋದ ಸತ್ಯವಿಶ್ವಾಸಿಗಳ ಮೇಲೆ ಇದಕ್ಕಿಂತ ಹೆಚ್ಚಿನ ದೌರ್ಜನ್ಯಗಳಾಗಿವೆ. ಅವರ ಚರ್ಮಗಳ ಮೇಲೆ ಕಬ್ಬಿಣದ ಬಾಚಣಿಕೆಯನ್ನು ಚುಚ್ಚಿ ಮಾಂಸವನ್ನು ಎಳೆಯಲಾಗುತ್ತಿತ್ತು. ಅವರ ತಲೆಯನ್ನು ಗರಗಸದಿಂದ ಸೀಳಲಾಗುತ್ತಿತ್ತು. ಆದರೂ ಅವರು ತಮ್ಮ ಧರ್ಮದಿಂದ ಹಿಂಜರಿಯುತ್ತಿರಲಿಲ್ಲ. ಖಂಡಿತವಾಗಿಯೂ ಅಲ್ಲಾಹನು ಈ ಕಾರ್ಯವನ್ನು ಪೂರ್ಣಗೊಳಿಸಿಯೇ ತೀರುವನು. ಒಂದು ದಿನ ಬರಲಿಕ್ಕಿದೆ. ಅಂದು ಸನ್‌ಆದಿಂದ ಹದರ್ ಮೂತ್ ತನಕ ಒಬ್ಬ ವ್ಯಕ್ತಿ ನಿರಾತಂಕವಾಗಿ ಪ್ರಯಾಣ ಮಾಡುವನು. ಅಲ್ಲಾಹನ ಹೊರತು ಇನ್ನಾರ ಭಯವೂ ಅವನಿಗೆ ಇರಲಾರದು. ಆದರೆ ನೀವು ಆತುರ ಪಡುತ್ತಿರುವಿರಿ."

ಸತ್ಯವಿಶ್ವಾಸಿಗಳ ವಿರುದ್ಧ ಕುರೈಶರ ಹಿಂಸೆ-ದೌರ್ಜನ್ಯಗಳು ಇದೇ ರೀತಿ ಮುಂದುವರಿದು ಪರಿಸ್ಥಿತಿಯು ಅಸಹನೀಯ ಮಟ್ಟಕ್ಕೆ ತಿರುಗಿದಾಗ ಪ್ರವಾದಿತ್ವದ ಐದನೇ ವರ್ಷ ಪ್ರವಾದಿ(ಸ) ತಮ್ಮ ಸಂಗಾತಿಗಳನ್ನುದ್ದೇಶಿಸಿ ಹೀಗೆ ಹೇಳಿದರು: "ನೀವು ಇಲ್ಲಿಂದ ಹೊರಟು ಇಥಿಯೋಪಿಯಾಕ್ಕೆ ಹೋಗುವುದು ಒಳ್ಳೆಯದು. ಅಲ್ಲಿ ಒಬ್ಬ ಕ್ರೈಸ್ತ ದೊರೆ ಇದ್ದಾರೆ. ಅವರ ಆಡಳಿತದಲ್ಲಿ ಯಾರ ಮೇಲೂ ಅನ್ಯಾಯವಾಗುವುದಿಲ್ಲ. ಅದು ಒಳಿತುಗಳ ದೇಶವಾಗಿದೆ. ನಿಮ್ಮ ಸಂಕಷ್ಟಗಳನ್ನು ನಿವಾರಿಸಲು ಅಲ್ಲಾಹನು ಏನಾದರೂ ಉಪಾಯ ಹೂಡುವ ತನಕ ನೀವು ಅಲ್ಲೇ ವಾಸಿಸುತ್ತಿರಿ."

ಅನೇಕ ಸಹಾಬಿಗಳು ಇಥಿಯೋಪಿಯಾಕ್ಕೆ ಹೊರಟರು.

## ಇಥಿಯೋಪಿಯಾಕ್ಕೆ ವಲಸೆ

ಪ್ರವಾದಿತ್ವದ 5ನೇ ವರ್ಷದ ರಜಬ್ ತಿಂಗಳು. ಪ್ರವಾದಿವರ್ಯರ(ಸ) ಆದೇಶದ ಮೇರೆಗೆ ಮೊದಲು ಹನ್ನೊಂದು ಮಂದಿ ಪುರುಷರು ಮತ್ತು ನಾಲ್ವರು ಸ್ತ್ರೀಯರನ್ನೊಳಗೊಂಡ ಒಂದು ತಂಡವು ಇಥಿಯೋಪಿಯಾದ ಕಡೆಗೆ ಹೊರಟಿದೆ. ಕುರೈಶರಿಗೆ ಸುಳಿವು ಸಿಕ್ಕಿದ ಕೂಡಲೇ ಅವರು ಈ ತಂಡವನ್ನು ಕರಾವಳಿಯ ತನಕವೂ ಬೆನ್ನಟ್ಟುತ್ತಾರೆ. ಅದೃಷ್ಟವಶಾತ್ 'ಶುಐಬಾ' ಬಂದರು ತಲುಪುತ್ತಲೇ ಅವರಿಗೆ ಸಕಾಲಕ್ಕೆ ಇಥಿಯೋಪಿಯಾದ ಕಡೆ ಹೊರಟು ನಿಂತಿರುವ ಒಂದು ನಾವೆ ಸಿಗುತ್ತದೆ. ಆದ್ದರಿಂದ ಅವರು ಕುರೈಶರಿಗೆ ಸೆರೆ ಸಿಕ್ಕದೆ ಪಾರಾಗಿ ಹೊರಟು ಹೋಗುತ್ತಾರೆ.

ಕೆಲವೇ ತಿಂಗಳೊಳಗೆ ಇನ್ನೂ ಅನೇಕ ಮಂದಿ ಪ್ರವಾದಿ ಸಂಗಾತಿಗಳು ಪ್ರವಾದಿ ವರ್ಯರ(ಸ) ಅನುಮತಿ ಪಡೆದು ಇಥಿಯೋಪಿಯಾದ ದಾರಿ ಹಿಡಿದರು. ಹೀಗೆ 83 ಮಂದಿ ಪುರುಷರು 11 ಮಂದಿ ಸ್ತ್ರೀಯರು ಮತ್ತು 7 ಮಂದಿ ಕುರೈಶಿಯೇತರ ಮುಸ್ಲಿಮರು ಇಥಿಯೋಪಿಯಾದಲ್ಲಿ ಒಟ್ಟು ಸೇರಿದರು. ಮಕ್ಕಾದಲ್ಲಿ ಪ್ರವಾದಿವರ್ಯರ(ಸ) ಜೊತೆ ಕೇವಲ 40 ಮಂದಿ ಸಹಾಬಿಗಳು ಉಳಿದಿದ್ದರು.

ಈ ವಲಸೆಯಿಂದಾಗಿ ಮಕ್ಕಾದ ಎಲ್ಲ ಮನೆಗಳಲ್ಲೂ ಕೋಲಾಹಲವೆದ್ದಿದೆ. ಏಕೆಂದರೆ

ಕುರೈಶರ ಪ್ರತಿಯೊಂದು ಮನೆತನದಿಂದಲೂ ಯಾರಾದರೊಬ್ಬ ಆ ವಲಸಿಗರಲ್ಲಿ ಸೇರಿದ್ದ. ಆದ್ದರಿಂದ ಈ ವಲಸೆಯಿಂದ ಪ್ರಭಾವಿತವಾಗದ ಯಾವ ಮನೆಯೂ ಮಕ್ಕಾದಲ್ಲಿ ಉಳಿದಿರಲಿಲ್ಲ. ಒಬ್ಬರ ಮಗ, ಇನ್ನೊಬ್ಬರ ಅಳಿಯ, ಮತ್ತೊಬ್ಬರ ಮಗಳು, ಒಬ್ಬರ ಸೋದರ, ಇನ್ನೊಬ್ಬರ ಸೋದರಿ ಇಥಿಯೋಪಿಯಾಕ್ಕೆ ಹೋಗಿದ್ದರು. ಅಬೂಜಹಲನ ಸೋದರ ಸಲಮ ಬಿನ್ ಹಿಶಾಮ್, ಚಿಕ್ಕಪ್ಪನ ಪುತ್ರರಾದ ಹಿಶಾಮ್ ಬಿನ್ ಅಬೀ ಹುದ್ಯೆಫ ಮತ್ತು ಐಯಾಶ್ ಬಿನ್ ಅಬೀ ರಬೀಅ, ಚಿಕ್ಕಪ್ಪನ ಮಗಳಾದ ಉಮ್ಮು ಸಲ್ಮ, ಅಬೂಸುಫ್‌ಯಾನ್‌ನ ಪುತ್ರಿ ಉಮ್ಮು ಹಬೀಬ, ಉತ್ಬಾನ ಪುತ್ರ ಅಬೂ ಹುದೈಫ, ಸುಹೈಲ್ ಬಿನ್ ಅಮ್ರ್‌ನ ಮಗಳು ಸಹಲ ಹಾಗೂ ಇತರ ಅನೇಕ ಕುರೈಶ್ ಸರದಾರರ ಮಕ್ಕಳು ತಮ್ಮ ಧರ್ಮಕ್ಕಾಗಿ ಮನೆಮಾರುಗಳನ್ನು ತೊರೆದು ಹೋಗಿದ್ದರು. ಇದರಿಂದಾಗಿ ಇಸ್ಲಾಮ್‌ನ ವಿರುದ್ಧ ಅವರಲ್ಲಿದ್ದ ದ್ವೇಷವು ಇನ್ನಷ್ಟು ಉಲ್ಬಣಗೊಂಡಿತು. ಕೆಲವರ ಮೇಲೆ ಈ ಘಟನೆಯಿಂದಾದ ಪ್ರಭಾವದಿಂದಾಗಿ ಅವರೂ ಮುಸ್ಲಿಮರಾದರು. ಉಮರ್ ಬಿನ್ ಖತ್ತಾಬ್(ರ) ಅವರ ಇಸ್ಲಾಮ್ ದ್ವೇಷದ ಮೇಲೆ ಬಿದ್ದ ಪ್ರಥಮ ಪ್ರಹಾರ ಇದೇ ಘಟನೆಯಾಗಿತ್ತು. ಅವರ ಓರ್ವ ನಿಕಟ ಬಂಧು ಲೈಲಾ ಬಿನ್ತಿ ಅಬೀ ಹಸ್ಮಾ(ರ) ತಮ್ಮ ವಲಸೆಯ ಘಟನೆಯ ಕುರಿತು ಹೀಗೆ ವಿವರಿಸಿದ್ದಾರೆ:

"ನಾನು ಇಥಿಯೋಪಿಯಾಕ್ಕೆ ಹೊರಡಲು ನನ್ನ ಸಾಮಾನುಗಳನ್ನು ಜೋಡಿಸುತ್ತಿದ್ದೆ. ನನ್ನ ಪತಿ ಆಮಿರ್ ಬಿನ್ ರಬೀಅ ಯಾವುದೋ ಕೆಲಸದಿಂದ ಹೊರಗೆ ಹೋಗಿದ್ದರು. ಅಷ್ಟರಲ್ಲಿ ಉಮರ್ ನಮ್ಮಲ್ಲಿಗೆ ಬಂದರು. ಅವರು ನಿಂತುಕೊಂಡೇ ನನ್ನ ಪ್ರಯಾಣ ಸಿದ್ಧತೆಯನ್ನು ನೋಡುತ್ತಿದ್ದರು. ಸ್ವಲ್ಪ ಹೊತ್ತಿನ ಬಳಿಕ ಅವರು ನನ್ನಲ್ಲಿ ಹೀಗೆ ಕೇಳಿದರು, 'ಅಬ್ದುಲ್ಲಾರ ತಾಯಿ! ನೀವು ಹೋಗುತ್ತಿರುವುದೇ?' 'ಹೌದು, ಅಲ್ಲಾಹನಾಣೆ! ನೀವು ನಮ್ಮನ್ನು ಬಹಳಷ್ಟು ಪೀಡಿಸಿದಿರಿ. ಅಲ್ಲಾಹನ ಭೂಮಿ ವಿಶಾಲವಿದೆ. ಅಲ್ಲಾಹನು ನಮಗೆ ಶಾಂತಿ ಸಮಾಧಾನವನ್ನು ನೀಡುವ ಸ್ಥಳವೊಂದಕ್ಕೆ ನಾವು ಹೋಗಿ ನೆಲೆಸುತ್ತೇವೆ' ಎಂದು ನಾನು ಉತ್ತರಿಸಿದೆ. ಇದನ್ನು ಕೇಳಿ ಅವರ ಮುಖದಲ್ಲಿ ದುಃಖದ ಛಾಯೆ ಮೂಡಿತು. ದುಃಖ ಉಮ್ಮಳಿಸತೊಡಗಿದಾಗ ಅವರು 'ಅಲ್ಲಾಹನು ನಿಮಗೆ ಒಳ್ಳೆಯದು ಮಾಡಲಿ' ಎನ್ನುತ್ತಾ ಹೊರಟು ಹೋದರು."

ಈ ವಲಸೆಯ ನಂತರ ಕುರೈಶ್ ಸರದಾರರು ಸಭೆ ಸೇರಿದರು. ಅವರು ಅಬ್ದುಲ್ಲಾ ಬಿನ್ ಅಬೀ ರಬೀಅ ಮತ್ತು ಅಮ್ರ್ ಬಿನ್ ಆಸ್ ಅವರನ್ನು ಅನೇಕ ಅಮೂಲ್ಯ ಉಡುಗೊರೆ ಗಳೊಂದಿಗೆ ಇಥಿಯೋಪಿಯಾದ ದೊರೆ ನಜ್ಜಾಶಿಯ ಬಳಿಗೆ ಕಳುಹಿಸಲು ತೀರ್ಮಾನಿಸಿದರು. ಅಲ್ಲಿಗೆ ಹೋಗಿ ದೊರೆ ನಜ್ಜಾಶಿಯ ಮನವೊಲಿಸಿ ಅವರಲ್ಲಿಗೆ ಪಲಾಯನ ಗೈದಿರುವ ನಮ್ಮ ಜನರನ್ನು ಮರಳಿ ಕಳುಹಿಸುವಂತೆ ಮಾಡಬೇಕೆಂದೂ ಅವರಿಬ್ಬರಿಗೂ ಆದೇಶಿಸಲಾಯಿತು. ಕುರೈಶರ ಈ ಇಬ್ಬರು ನುರಿತ ರಾಯಭಾರಿಗಳು ಮುಸ್ಲಿಮರನ್ನು ಹಿಂಬಾಲಿಸುತ್ತಾ ಇಥಿಯೋಪಿಯಾ ತಲುಪಿದರು. ಇಥಿಯೋಪಿಯಾಕ್ಕೆ ವಲಸೆ

ಹೋದವರ ಪೈಕಿ ಒಬ್ಬರಾಗಿದ್ದ ಹ. ಉಮ್ಮು ಸಲ್ಮಾ(ರ) ಆ ಘಟನೆಯನ್ನು ಹೀಗೆ ವಿವರಿಸಿರುವರು: "ಕುರೈಶರ ಆ ಇಬ್ಬರು ರಾಯಭಾರಿಗಳು ನಮ್ಮನ್ನು ಬೆನ್ನಟ್ಟುತ್ತಾ ಇಥಿಯೋಪಿಯಾ ತಲುಪಿದರು. ಮೊದಲು ಅವರು ದೊರೆ ನಜ್ಜಾಶಿಯ ಆಸ್ಥಾನಿಗರಿಗೆ ಸಾಕಷ್ಟು ಉಡುಗೊರೆ ಗಳನ್ನು ನೀಡಿ ಅವರನ್ನು ಒಲಿಸಿಕೊಂಡರು. ಅವರೆಲ್ಲರೂ ನಜ್ಜಾಶಿಯ ಮುಂದೆ ಆ ವಲಸಿಗರ ವಾಪಸಾತಿಗೆ ಶಿಫಾರಸು ಮಾಡಲು ಒಪ್ಪಿಕೊಂಡರು. ಅನಂತರ ಅವರು ನಜ್ಜಾಶಿ ದೊರೆಯನ್ನು ಭೇಟಿಯಾದರು. ಅವರಿಗೂ ಅನೇಕ ಅಮೂಲ್ಯ ಉಡು ಗೊರೆ ಮತ್ತು ಕಾಣಿಕೆಗಳನ್ನು ಅರ್ಪಿಸಿದರು. ತರುವಾಯ ಈ ರೀತಿ ಹೇಳಿದರು, "ನಮ್ಮ ಕೆಲವು ಅವಿವೇಕಿ ಯುವಕರು ತಮ್ಮಲ್ಲಿಗೆ ಓಡಿ ಬಂದಿರುವರು. ನಮ್ಮ ಸರದಾರರು ನಮ್ಮನ್ನು ತಮ್ಮ ಬಳಿಗೆ ಕಳುಹಿಸಿರುವರು. ಅವರನ್ನು ಮರಳಿಸುವುದಕ್ಕೆ ತಮ್ಮಲ್ಲಿ ವಿನಂತಿಸುವುದೇ ನಮ್ಮ ಆಗಮನದ ಉದ್ದೇಶ. ಆ ಯುವಕರು ನಮ್ಮ ಧರ್ಮವನ್ನು ತೊರೆದಿರುವರು. ಆದರೆ ಅವರು ತಮ್ಮ ಧರ್ಮವನ್ನೂ ಸ್ವೀಕರಿಸಿಲ್ಲ. ಬದಲಾಗಿ ಅವರು ಒಂದು ವಿಚಿತ್ರ ಧರ್ಮವನ್ನು ಆವಿಷ್ಕರಿಸಿರುವರು." ಅವರ ಮಾತು ಮುಗಿಯುತ್ತಲೇ ಆಸ್ಥಾನಿ ಗರು ಎಲ್ಲ ಮೂಲೆಗಳಿಂದಲೂ ಒಮ್ಮೆಲೇ ಈ ರೀತಿ ಹೇಳತೊಡಗಿದರು, "ಅಂಥವರನ್ನು ಕೂಡಲೇ ಮರಳಿಸಿ ಬಿಡಬೇಕು. ಅವರಲ್ಲಿ ಯಾವ ಕುಂದು ಕೊರತೆಯಿದೆಯೆಂಬುದನ್ನು ಅವರ ಜನಾಂಗದ ಜನರೇ ಹೆಚ್ಚು ತಿಳಿದವರಾಗಿದ್ದಾರೆ. ಅವರನ್ನು ನಮ್ಮಲ್ಲಿ ಇರಿಸಿಕೊಳ್ಳುವುದು ಸರಿಯಲ್ಲ." ಆದರೆ ನಜ್ಜಾಶಿ ಇದನ್ನು ಕೇಳಿ ಕೆರಳಿದನು. "ನಾನು ಹಾಗೆಲ್ಲ ಅವರನ್ನು ಈ ಜನರ ವಶಕ್ಕೆ ಒಪ್ಪಿಸಿ ಬಿಡಲಾರೆ. ತಮ್ಮ ದೇಶವನ್ನು ತೊರೆದು ನನ್ನ ಸಾಮ್ರಾಜ್ಯದ ಮೇಲೆ ನಂಬಿಕೆಯಿಟ್ಟು ಇಲ್ಲಿ ಆಶ್ರಯ ಕೋರಿ ಬಂದವರಿಗೆ ನಾನು ದ್ರೋಹ ಬಗೆಯಲಾರೆ. ಮೊದಲು ಅವರನ್ನು ಕರೆದು ಈ ಜನರು ಹೇಳುತ್ತಿರುವುದರ ನಿಜಾಂಶವೇನು ಎಂದು ಅವರಲ್ಲಿ ವಿಚಾರಿಸಿ ನೋಡುತ್ತೇನೆ" ಎಂದನು. ಆ ಪ್ರಕಾರ ನಜ್ಜಾಶಿ ದೊರೆಯು ಪ್ರವಾದಿವರ್ಯರ(ಸ) ಸಹಾಬಿಗಳನ್ನು(ರ) ತನ್ನ ಆಸ್ಥಾನಕ್ಕೆ ಕರೆಸಿದನು.

ನಜ್ಜಾಶಿ ರಾಜನ ಕರೆ ಸಿಕ್ಕಿದ ಕೂಡಲೇ ಎಲ್ಲ ವಲಸಿಗರು ಸಭೆ ಸೇರಿದರು. ರಾಜನ ಮುಂದೆ ಏನು ಹೇಳಬೇಕೆಂಬ ಬಗ್ಗೆ ಅವರು ಪರಸ್ಪರ ಸಮಾಲೋಚಿಸತೊಡಗಿದರು. ಕೊನೆಗೆ ಎಲ್ಲರೂ ಒಂದು ಒಮ್ಮತದ ತೀರ್ಮಾನಕ್ಕೆ ಬಂದರು. 'ನಜ್ಜಾಶಿಯು ನಮ್ಮನ್ನು ತನ್ನ ಸಾಮ್ರಾಜ್ಯದಲ್ಲಿ ಇರಿಸಿಕೊಂಡರೂ ಇಲ್ಲಿಂದ ಹೊರ ಹಾಕಿದರೂ ಸರಿಯೆ. ನಾವಂತೂ ಪ್ರವಾದಿವರ್ಯರು(ಸ) ನಮಗೆ ಕೊಟ್ಟ ಬೋಧನೆಯನ್ನು ಚಾಚೂ ತಪ್ಪದೆ ಅವರ ಮುಂದಿಟ್ಟು ಬಿಡುವೆವು' ಎಂಬುದೇ ಆಗಿತ್ತು ಆ ತೀರ್ಮಾನ.

ಆಸ್ಥಾನಕ್ಕೆ ತಲುಪಿದ ಕೂಡಲೇ ನಜ್ಜಾಶಿ ದೊರೆ ಅವರನ್ನುದ್ದೇಶಿಸಿ ಹೀಗೆ ಪ್ರಶ್ನಿಸಿದನು: "ನೀವು ನಿಮ್ಮ ಜನಾಂಗದ ಧರ್ಮವನ್ನು ತೊರೆದಿರುವಿರಿ. ನನ್ನ ಧರ್ಮದಲ್ಲೂ ಸೇರಲಿಲ್ಲ. ಜಗತ್ತಿನ ಇತರ ಯಾವ ಧರ್ಮವನ್ನೂ ಸ್ವೀಕರಿಸಲಿಲ್ಲ. ನೀವು ಇದೇನು ಮಾಡಿದಿರಿ? ನಿಮ್ಮ ಈ ಹೊಸ ಧರ್ಮ ಯಾವುದು?"

ಇದನ್ನು ಕೇಳಿ ಮುಹಾಜಿರ್ (ವಲಸಿಗರು)ಗಳ ಪರವಾಗಿ ಜಾಫರ್ ಬಿನ್ ಅಬೀತಾಲಿಬ್(ರ) ಎದ್ದು ನಿಂತು ನಜ್ಜಾಶಿಯ ಅನುಮತಿ ಪಡೆದು ಮಕ್ಕಾದ ರಾಯಭಾರಿಗಳಲ್ಲಿ ಈ ರೀತಿ ವಿಚಾರಿಸಿದರು: "ನಾವು ಒಡೆಯನಿಂದ ಓಡಿ ಬಂದಿರುವ ಗುಲಾಮರೇ? ಹಾಗಿದ್ದರೆ ಖಂಡಿತ ನಮ್ಮನ್ನು ಮರಳಿಸಬೇಕು."

ಅಮ್ರ್ ಬಿನ್ ಆಸ್: "ಅಲ್ಲ ಇವರು ಯಾರದೇ ಗುಲಾಮರಲ್ಲ. ಸ್ವತಂತ್ರ ಪ್ರಜೆಗಳು."

ಜಾಫರ್(ರ): "ನಾವು ಅನ್ಯಾಯವಾಗಿ ಯಾರನ್ನಾದರೂ ಕೊಲೆ ಮಾಡಿ ಬಂದಿರುವೆವೇ? ಹಾಗಾದರೆ ನಮ್ಮನ್ನು ಕೊಲೆಯಾದವರ ವಾರಸುದಾರರಿಗೆ ಒಪ್ಪಿಸಲೇಬೇಕು."

ಅಮ್ರ್ ಬಿನ್ ಆಸ್: "ಇಲ್ಲ, ಅವರು ಯಾರನ್ನೂ ವಧಿಸಿಲ್ಲ."

ಜಾಫರ್(ರ): "ನಾವು ಯಾರದಾದರೂ ಸೊತ್ತು ಕಬಳಿಸಿ ಓಡಿ ಬಂದಿರುವೆವೇ? ಹಾಗಿದ್ದರೆ ಅದನ್ನು ಮರಳಿಸಲು ನಾವು ಸಿದ್ಧರಿದ್ದೇವೆ."

ಅಮ್ರ್ ಬಿನ್ ಆಸ್: "ಇಲ್ಲ, ಇವರು ಯಾರ ಚಿಕ್ಕಾಸನ್ನೂ ಕಬಳಿಸಿಲ್ಲ."

ಈ ಸಂಭಾಷಣೆ ಮುಗಿದ ಬಳಿಕ ತಮ್ಮ ನೈತಿಕ ನಿಲುವು ಉತ್ತಮಗೊಂಡಿದೆ ಎಂಬ ಭರವಸೆಯೊಂದಿಗೆ ನಜ್ಜಾಶಿ ದೊರೆಯನ್ನುದ್ದೇಶಿಸಿ ಜಾಫರ್(ರ) ಹೀಗೆ ಹೇಳುತ್ತಾರೆ:

"ಮಹಾರಾಜರೇ! ನಾವೊಂದು ಅಜ್ಞಾನಿ ಜನಾಂಗವಾಗಿದ್ದೆವು. ಮೂರ್ತಿಗಳನ್ನು ಪೂಜಿಸುತ್ತಿದ್ದೆವು. ಶವಗಳನ್ನು ತಿನ್ನುತ್ತಿದ್ದೆವು. ವ್ಯಭಿಚಾರ ಎಸಗುತ್ತಿದ್ದೆವು. ನೆರೆಯವರನ್ನು ಹಿಂಸಿಸುತ್ತಿದ್ದೆವು. ಸೋದರರು ಪರಸ್ಪರರ ಮೇಲೆ ಅನ್ಯಾಯವೆಸಗುತ್ತಿದ್ದರು. ಬಲಶಾಲಿಗಳು ದುರ್ಬಲರನ್ನು ಕಬಳಿಸಿ ಬಿಡುತ್ತಿದ್ದರು. ಈ ಮಧ್ಯೆ ನಮ್ಮ ನಡುವೆ ಓರ್ವ ವ್ಯಕ್ತಿ ಹುಟ್ಟಿ ಬಂದರು. ಅವರ ಸತ್ಯಸಂಧತೆ, ಪ್ರಾಮಾಣಿಕತೆ ಮತ್ತು ಸಜ್ಜನಿಕೆಯ ಬಗ್ಗೆ ನಮಗೆ ಮೊದಲೇ ತಿಳಿದಿತ್ತು. ಅವರು ನಮಗೆ 'ಇಸ್ಲಾಮ್ ಧರ್ಮ'ವನ್ನು ಬೋಧಿಸಿದರು. ನಾವು ಮೂರ್ತಿ ಪೂಜೆಯನ್ನು ತೊರೆಯಬೇಕೆಂದರು. ಸತ್ಯ ಹೇಳಬೇಕು, ಕೊಲೆ, ರಕ್ತಪಾತಗಳನ್ನು ಬಿಡಬೇಕು. ಅನಾಥರ ಸೊತ್ತನ್ನು ಕಬಳಿಸಬಾರದು. ನೆರೆಯವರೊಂದಿಗೆ ಚೆನ್ನಾಗಿ ವರ್ತಿಸಬೇಕು. ಸುಶೀಲೆಯರಾದ ಮಹಿಳೆಯರ ಮೇಲೆ ಸುಳ್ಳಾರೋಪ ಹೊರಿಸಬಾರದು. ನಮಾಝ್ ಮಾಡಬೇಕು. ಉಪವಾಸ ವ್ರತ ಆಚರಿಸಬೇಕು. ದಾನ ಧರ್ಮಗಳನ್ನು ನೀಡಬೇಕು ಎಂದು ನಮಗೆ ಉಪದೇಶಿಸಿದರು. ನಾವು ಅವರ ಮೇಲೆ ವಿಶ್ವಾಸವಿರಿಸಿದೆವು. ಬಹುದೇವ ವಿಶ್ವಾಸ ಮತ್ತು ಮೂರ್ತಿ ಪೂಜೆಯನ್ನು ತೊರೆದೆವು. ಎಲ್ಲ ದುಷ್ಕೃತ್ಯಗಳನ್ನು ತೊರೆದೆವು. ಈ 'ಅಪರಾಧ'ಕ್ಕಾಗಿ ನಮ್ಮ ಜನಾಂಗ ನಮ್ಮ ಪ್ರಾಣ ಶತ್ರುವಾಯಿತು. ನಮ್ಮನ್ನು ಮತ್ತೆ ಅದೇ ಪಥಭ್ರಷ್ಟತೆಗೆ ಮರಳುವಂತೆ ಒತ್ತಾಯ ಪಡಿಸಿತು. ಆದರೆ ನಾವು ಮಣಿಯಲಿಲ್ಲ. ನಾವು ನಮ್ಮ ವಿಶ್ವಾಸ ಮತ್ತು ನಮ್ಮ ಪ್ರಾಣಗಳ ರಕ್ಷಣೆಗಾಗಿ ತಮ್ಮಲ್ಲಿಗೆ ವಲಸೆ ಬಂದಿರುವೆವು. ನಮ್ಮ ಜನಾಂಗವು ನಮ್ಮನ್ನು ಶಾಂತಿಯೊಂದಿಗೆ ನಮ್ಮ ದೇಶದಲ್ಲಿ ಇರಗೊಡುತ್ತಿದ್ದರೆ

ಖಂಡಿತ ನಾವಿಲ್ಲಿಗೆ ಬರುತ್ತಿರಲಿಲ್ಲ. ಇದುವೇ ನಮ್ಮ ವೃತ್ತಾಂತ."

ಈ ಭಾಷಣವನ್ನು ಕೇಳಿ ನಜ್ಜಾಶಿ "ನಿಮ್ಮ ಪ್ರವಾದಿಯವರ ಮೇಲೆ ದೇವನ ವತಿಯಿಂದ ಅವತೀರ್ಣವಾಗುತ್ತದೆಂದು ನೀವು ಹೇಳುತ್ತಿರುವ ಆ ವಾಣಿಯನ್ನೊಮ್ಮೆ ಓದಿ ಕೇಳಿಸಿ ನಾನೂ ಅದನ್ನು ಆಲಿಸುತ್ತೇನೆ" ಎಂದರು. ಜಾಫರ್(ರ) ಪವಿತ್ರ ಕುರ್‌ಆನಿನ ಸೂರಃ ಮರ್ಯಮ್‌ನ ಈ ಕೆಳಗಿನ ವಾಕ್ಯಗಳನ್ನು ಪಠಿಸಲಾರಂಭಿಸಿದರು:

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ.

"ಕಾಫ್-ಹಾ-ಯಾ-ಐನ್-ಸ್ವಾದ್. ಇದು ನಿಮ್ಮ ಪ್ರಭು ತನ್ನ ದಾಸ ಝಕರಿಯ್ಯಾರ ಮೇಲೆ ತೋರಿದ ಕರುಣೆಯ ಪ್ರಸ್ತಾಪ. ಅವರು ತಮ್ಮ ಪ್ರಭುವನ್ನು ಮೆಲುದನಿಯಿಂದ ಕೂಗಿ ಪ್ರಾರ್ಥಿಸುತ್ತಿದ್ದಾಗ. ಅವರು ಹೀಗೆ ಭಿನ್ನವಿಸಿಕೊಂಡರು- 'ಓ ನನ್ನ ಪ್ರಭೂ, ನನ್ನ ಎಲುಬುಗಳು ಕೂಡಾ ದುರ್ಬಲಗೊಂಡಿವೆ. ತಲೆಯು ವೃದ್ಧಾಪ್ಯದಿಂದಾಗಿ ಉರಿದೆದ್ದಿದೆ. ಓ ನನ್ನ ಪ್ರಭೂ, ನಿನ್ನನ್ನು ಪ್ರಾರ್ಥಿಸಿ ನಾನೆಂದೂ ನಿರಾಶನಾಗಲಿಲ್ಲ. ನಿಶ್ಚಯವಾಗಿಯೂ ನನಗೆ ನನ್ನ ಅನಂತರ ನನ್ನ ಬಂಧುಬಳಗದವರ ಕೇಡಿನ ಭಯವಿದೆ ಮತ್ತು ನನ್ನ ಪತ್ನಿ ಬಂಜೆಯಾಗಿರುತ್ತಾಳೆ. ನೀನು ನಿನ್ನ ವಿಶಿಷ್ಟ ಅನುಗ್ರಹದಿಂದ- ನನ್ನ ವಾರೀಸುದಾರನೂ ಯಾಕೂಬರ ವಂಶದ ವಾರೀಸುದಾರನೂ ಆಗತಕ್ಕ ಓರ್ವ ಉತ್ತರಾಧಿಕಾರಿಯನ್ನು ನನಗೆ ದಯಪಾಲಿಸು ಮತ್ತು ಓ ನನ್ನ ಪ್ರಭೂ, ಅವನನ್ನು ಪ್ರೀತಿ ಪಾತ್ರನಾಗಿ ಮಾಡು.' (ಉತ್ತರ ಹೀಗೆ ಬಂತು) 'ಓ ಝಕರಿಯ್ಯಾ, ನಾವು ನಿಮಗೆ ಓರ್ವ ಬಾಲಕನ ಸುವಾರ್ತೆ ನೀಡುತ್ತೇವೆ. ಅವನ ಹೆಸರು ಯಹ್ಯಾ ಆಗಿರುವುದು. ನಾವು ಇದಕ್ಕೆ ಮುಂಚೆ ಈ ಹೆಸರಿರುವ ಯಾರನ್ನೂ ಸೃಷ್ಟಿಸಿಲ್ಲ.' ಆಗ- 'ಓ ನನ್ನ ಪ್ರಭೂ ನನ್ನ ಪತ್ನಿಯು ಬಂಜೆಯಾಗಿದ್ದು ನಾನು ಅತಿ ವೃದ್ಧಾಪ್ಯದಿಂದ ಒಣಗಿ ಹೋಗಿರುವಾಗ ನನ್ನಲ್ಲಿ ಬಾಲಕನುಂಟಾಗುವುದು ಹೇಗೆ?' ಎಂದು ಕೇಳಿದರು. ಆಗ (ಹೀಗೆ) ಉತ್ತರ ಸಿಕ್ಕಿತು- 'ಹಾಗೆಯೇ ಆಗುವುದು. ಇದು ನಮಗೊಂದು ಅತಿ ಚಿಕ್ಕ ವಿಷಯವೆಂದು ನಿಮ್ಮ ಪ್ರಭು ಹೇಳುತ್ತಾನೆ. ಇದಕ್ಕೆ ಮುಂಚೆ ನೀನು ಏನೂ ಆಗಿಲ್ಲದಿದ್ದಾಗ ನಾನು ನಿನ್ನನ್ನು ಸೃಷ್ಟಿಸಿದ್ದೆ ತಾನೆ!' ಆಗ ಝಕರಿಯ್ಯಾ, 'ಓ ನನ್ನ ಪ್ರಭೂ, ನನಗೊಂದು ಸಂಕೇತವನ್ನು ನಿಶ್ಚಯಿಸಿ ಕೊಡು' ಎಂದಾಗ 'ನೀನು ಎಡೆಬಿಡದೆ ಮೂರು ದಿನ ಜನರೊಡನೆ ಮಾತನಾಡಲಾಗದಿರುವುದೇ ನಿನಗೆ ಸಂಕೇತ' ಎಂದು ಹೇಳಲಾಯಿತು. ಆ ಪ್ರಕಾರ ಅವರು ಕೊಠಡಿಯಿಂದ ಹೊರಟು ತನ್ನ ಜನಾಂಗದ ಮುಂದೆ ಬಂದರು ಮತ್ತು ಬೆಳಗು ಬೈಗುಗಳಲ್ಲಿ ಕೀರ್ತನೆ ಮಾಡಿರೆಂದು ಅವರಿಗೆ ಸಂಜ್ಞೆಯ ಮೂಲಕ ಆದೇಶಿಸಿದರು. 'ಓ ಯಹ್ಯಾ, ದಿವ್ಯ ಗ್ರಂಥವನ್ನು ಬಿಗಿಹಿಡಿದುಕೋ, ನಾವು ಅವರಿಗೆ ಬಾಲ್ಯದಲ್ಲೇ ಹುಕ್ಮ್ ಪ್ರದಾನ ಮಾಡಿದೆವು- ಮತ್ತು ನಮ್ಮ ಕಡೆಯಿಂದ ಅವರಿಗೆ ಕೋಮಲ ಹೃದಯ ಹಾಗೂ ಪಾವಿತ್ರ್ಯವನ್ನು ನೀಡಿದೆವು. ಅವರು ಮಹಾ ಧರ್ಮನಿಷ್ಠರಾಗಿದ್ದರು- ಮತ್ತು ಮಾತಾಪಿತರಿಗೆ ವಿಧೇಯರಾಗಿದ್ದರು. ಅವರು ಉದ್ಧಟ ಹಾಗೂ ಆಜ್ಞೋಲ್ಲಂಘಕರಾಗಿರಲಿಲ್ಲ. ಅವರ ಮೇಲೆ ಅವರು ಜನಿಸಿದ ದಿನವೂ ಅವರು ಮರಣ ಹೊಂದುವ ದಿನವೂ ಅವರು ಜೀವಂತಗೊಳಿಸಿ

ಎಬ್ಬಿಸಲ್ಪಡುವ ದಿನವೂ ಶಾಂತಿಯಿರಲಿ.

ಓ ಪೈಗಂಬರರೇ, ಈ ಗ್ರಂಥದಲ್ಲಿ ಮರ್ಯಮರ ವಿಷಯ ಪ್ರಸ್ತಾಪಿಸಿರಿ. ಅವರು ತನ್ನವರಿಂದ ಸರಿದು ಪೂರ್ವದಿಕ್ಕಿನಲ್ಲಿ ಏಕಾಂತ ವಾಸದಲ್ಲಿದ್ದಾಗ ಹಾಗೂ ತೆರೆಯನ್ನಿಳಿಸಿ ಅವರಿಂದ ಮರೆಯಾಗಿ ಕುಳಿತಿದ್ದ ಸ್ಥಿತಿಯಲ್ಲಿ ನಾವು ಅವರ ಬಳಿಗೆ ನಮ್ಮ ದೇವಚರನನ್ನು ಕಳುಹಿಸಿದೆವು. ಅವನು ಅವರ ಮುಂದೆ ಓರ್ವ ಪೂರ್ಣ ಮನುಷ್ಯ ರೂಪದಲ್ಲಿ ಪ್ರತ್ಯಕ್ಷನಾದನು. ಮರ್ಯಮ್- ಥಟ್ಟನೆ, 'ನೀನೊಬ್ಬ ದೇವಭಯವುಳ್ಳವನಾಗಿದ್ದರೆ ನಾನು ನಿನ್ನಿಂದ ದಯಾಮಯನಾದ ದೇವನ ಅಭಯ ಯಾಚಿಸುತ್ತೇನೆ' ಎಂದರು. ಆಗ ಅವನು, 'ನಾನು ನಿಮ್ಮ ಪ್ರಭುವಿನ ದೂತನಾಗಿರುತ್ತೇನೆ ಮತ್ತು ನಿಮಗೆ ಓರ್ವ ಪವಿತ್ರ ಬಾಲಕನನ್ನು ಕೊಡಲಿಕ್ಕಾಗಿ ಬಂದಿರುತ್ತೇನೆ' ಎಂದನು. ಆಗ ಮರ್ಯಮ್, 'ನನ್ನನ್ನು ಪುರುಷನಾರೂ ಮುಟ್ಟದೆ ಇರುವಾಗ ನನ್ನಲ್ಲಿ ಬಾಲಕನಾಗುವುದು ಹೇಗೆ? ಮತ್ತು ನಾನೇನೂ ದುರಾಚಾರಿ ಸ್ತ್ರೀಯಲ್ಲ' ಎಂದರು. ಆಗ ದೇವಚರರು, 'ಹಾಗೆಯೇ ಆಗುವುದು ಇದು ನನಗೆ ಬಹಳ ಸುಲಭವಾದುದೆಂದೂ ಆ ಬಾಲಕನನ್ನು ಜನರಿಗೆ ಒಂದು ನಿದರ್ಶನವನ್ನಾಗಿ ಮತ್ತು ನಮ್ಮ ಕಡೆಯಿಂದ ಒಂದು ಕರುಣೆಯನ್ನಾಗಿ ಮಾಡಲಿಕ್ಕೋಸ್ಕರ ನಾವು ಹಾಗೆ ಮಾಡುವೆವೆಂದೂ ನಿನ್ನ ಪ್ರಭು ಹೇಳುತ್ತಾನೆ. ಈ ಕಾರ್ಯ ಆಗಿಯೇ ತೀರಬೇಕಾಗಿದೆ' ಎಂದನು. ಮರ್ಯಮರಿಗೆ ಆ ಮಗುವಿನ ಗರ್ಭ ಉಂಟಾಯಿತು ಮತ್ತು ಅವರು ಆ ಗರ್ಭ ಸಹಿತ ದೂರದ ಒಂದು ಸ್ಥಳಕ್ಕೆ ಹೋದರು.

ತರುವಾಯ ಪ್ರಸವ ವೇದನೆಯು ಅವರನ್ನು ಒಂದು ಖರ್ಜೂರದ ಮರದೆಡೆಗೆ ತಲುಪಿಸಿತು. ಅವರು, 'ಅಕಟ! ನಾನು ಇದಕ್ಕಿಂತ ಮುಂಚೆ ಸತ್ತು ಹೋಗಿದ್ದರೆ! ಮತ್ತು ಹೇಳ ಹೆಸರಿಲ್ಲದಂತೆ ಅಳಿದು ಹೋಗಿದ್ದರೆ (ಚೆನ್ನಾಗಿತ್ತು)' ಎನ್ನತೊಡಗಿದರು. ದೇವಚರನು ಕಾಲಬಳಿಯಿಂದ ಅವರನ್ನು ಕೂಗಿ ಇಂತೆಂದನು- 'ಮರುಗಬೇಡಿರಿ, ನಿಮ್ಮ ಪ್ರಭು ನಿಮ್ಮ ತಳಭಾಗದಲ್ಲೊಂದು ಚಿಲುಮೆಯನ್ನು ಹರಿಸಿ ಬಿಟ್ಟಿದ್ದಾನೆ ಮತ್ತು ನೀವು ಆ ಮರದ ಕಾಂಡವನ್ನು ಹಿಡಿದು ಅಲುಗಾಡಿಸಿರಿ. ನಿಮ್ಮ ಮೇಲೆ ಹಸನಾದ ಖರ್ಜೂರದ ಹಣ್ಣುಗಳು ಉದುರಿ ಬೀಳುವುವು. ಈ ರೀತಿಯಲ್ಲಿ ನೀವು ತಿಂದು, ಕುಡಿದು ಕಣ್ಮನಗಳನ್ನು ತಣಿಸಿರಿ. ನೀವು ಮಾನವರಾರನ್ನಾದರೂ ಕಂಡರೆ -ನಾನು ಕರುಣಾನಿಧಿ (ಅಲ್ಲಾಹನ)ಗಾಗಿ ಉಪವಾಸ ವ್ರತದ ಹರಕೆ ಹೊತ್ತಿರುವುದರಿಂದ ಇಂದು ಯಾರೊಡನೆಯೂ ಮಾತನಾಡಲಾರೆನೆಂದು- ಹೇಳಿಬಿಡಿರಿ.

ಅನಂತರ ಅವರು ಆ ಮಗುವನ್ನೆತ್ತಿಕೊಂಡು ತನ್ನ ಜನಾಂಗದ ಬಳಿಗೆ ಹೋದರು. ಜನರು, 'ಓ ಮರ್ಯಮ್! ನೀನು ಘೋರ ಪಾತಕವನ್ನೆಸಗಿ ಬಿಟ್ಟೆ. ಓ ಹಾರೂನನ ಸಹೋದರಿ! ನಿನ್ನ ತಂದೆ ಕೆಟ್ಟವನಾಗಿರಲಿಲ್ಲ. ನಿನ್ನ ತಾಯಿಯೂ ದುಶ್ಶೀಲೆಯಾಗಿರಲಿಲ್ಲ' ಎನ್ನತೊಡಗಿದರು. ಆಗ ಮರ್ಯಮ್, ಮಗುವಿನ ಕಡೆಗೆ ಇಷಾರೆ ಮಾಡಿದರು. ಆಗ ಜನರು, 'ಇದು ತೊಟ್ಟಿಲಲ್ಲಿ ಬಿದ್ದಿರುವಂತಹ ಒಂದು ಶಿಶು, ಇದರೊಡನೆ ನಾವೇನು

ಮಾತನಾಡ ಬಹುದು?" ಎಂದರು. ಮಗು (ಹೀಗೆ) ಮಾತನಾಡತೊಡಗಿತು: 'ನಾನು ಅಲ್ಲಾಹನ ದಾಸ. ಅವನು ನನಗೆ ಗ್ರಂಥ ನೀಡಿದನು. ಪ್ರವಾದಿಯನ್ನಾಗಿ ಮಾಡಿದನು- ಮತ್ತು ನನ್ನನ್ನು ನಾನೆಲ್ಲಿದ್ದರೂ ಅನುಗ್ರಹೀತನಾಗಿರುವಂತೆ ಮಾಡಿದನು ಮತ್ತು ನನ್ನ ಬಾಳಿನುದ್ದಕ್ಕೂ ನಮಾಝ್ ಮತ್ತು ಝಕಾತ್ ಪಾಲಿಸುತ್ತಿರಲು ಆಜ್ಞೆಯಿತ್ತನು. ನನ್ನನ್ನು ನನ್ನ ಮಾತೆಯ ಋಣ ಸಂದಾಯ ಮಾಡುವವನಾಗಿಸಿದನು ಮತ್ತು ನನ್ನನ್ನು ಅಹಂಕಾರಿಯನ್ನಾಗಿಯೂ ದುಷ್ಟನನ್ನಾಗಿಯೂ ಮಾಡಿರುವುದಿಲ್ಲ. ನಾನು ಜನಿಸಿದಾಗಲೂ ಸಾಯುವಾಗಲೂ ಜೀವಂತಗೊಳಿಸಿ ಎಬ್ಬಿಸಲ್ಪಡು ವಾಗಲೂ ನನ್ನ ಮೇಲೆ ಶಾಂತಿ ಇದೆ.' ಇವರೇ ಮರ್ಯಮರ ಪುತ್ರ ಈಸಾ. ಇವರ ಬಗ್ಗೆ ಜನರು ಸಂಶಯ ಪಡುತ್ತಿರುವುದರ ಸತ್ಯಾಂಶವಿದು. ಯಾರನ್ನಾದರೂ ಮಗನಾಗಿ ಮಾಡಿ ಕೊಳ್ಳುವುದು ಅಲ್ಲಾಹನಿಗೆ ಭೂಷಣವಲ್ಲ. ಅವನು ಪರಿಶುದ್ಧನು. ಅವನು, ಏನಾದರೂ ಆಗಬೇಕೆಂದು ತೀರ್ಮಾನಿಸಿದರೆ 'ಆಗು' ಎಂದು ಬಿಡುತ್ತಾನೆ ಮತ್ತು ಅದು ಆಗಿಬಿಡುತ್ತದೆ.

(ಈಸಾ ಹೀಗೆ ಹೇಳಿದ್ದರು): 'ನಿಶ್ಚಯವಾಗಿಯೂ ಅಲ್ಲಾಹ್ ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿರುತ್ತಾನೆ. ಆದುದರಿಂದ ನೀವು ಅವನ ದಾಸ್ಯ-ಆರಾಧನೆಯನ್ನೇ ಮಾಡಿರಿ. ಇದೇ ನೇರ ಮಾರ್ಗ.' ಆದರೆ ಆ ಬಳಿಕ ವಿವಿಧ ಪಂಗಡಗಳು ಪರಸ್ಪರ ಭಿನ್ನಾಭಿಪ್ರಾಯ ತಾಳಲಾರಂಭಿಸಿದುವು. ಆದುದರಿಂದ ಸತ್ಯನಿಷೇಧಿಗಳಿಗೆ ಅವರು ಕಾಣಲಿರುವ ಒಂದು ಮಹಾದಿನವು ವಿನಾಶ ಕಾಲವಾಗಿರುವುದು. ಅವರು ನಮ್ಮ ಮುಂದೆ ಹಾಜರಾಗುವಂದು ಅವರ ಕಿವಿಗಳೂ ಚೆನ್ನಾಗಿ ಆಲಿಸುತ್ತಿರುವುವು ಮತ್ತು ಅವರ ಕಣ್ಣುಗಳೂ ಚೆನ್ನಾಗಿ ನೋಡುತ್ತಿರುವುವು. ಆದರೆ ಇಂದು ಈ ಅಕ್ರಮಿಗಳು ಸುವ್ಯಕ್ತ ಪಥಭ್ರಷ್ಟತೆಯಲ್ಲಿ ಬಿದ್ದಿರುತ್ತಾರೆ. ಓ ಪೈಗಂಬರರೇ, ಇವರು ಅಲಕ್ಷ್ಯರಾಗಿರುವ ಹಾಗೂ ವಿಶ್ವಾಸವಿರಿಸದಿರುವ ಈ ಸ್ಥಿತಿಯಲ್ಲಿ ತೀರ್ಪು ನೀಡಲಾಗುವ ಹಾಗೂ ವಿಷಾದಿಸುವ ಹೊರತು ಯಾವ ಅನ್ಯ ಮಾರ್ಗವೂ ಕಾಣದಿರುವಂತಹ ಆ ದಿನದ ಬಗ್ಗೆ ಇವರನ್ನು ಎಚ್ಚರಿಸಿರಿ. ಕಟ್ಟಕಡೆಗೆ ಈ ಭೂಮಿ ಹಾಗೂ ಇದರಲ್ಲಿರುವ ಸಕಲ ವಸ್ತುಗಳ ಉತ್ತರಾಧಿಕಾರಿಗಳು ನಾವೇ ಆಗಿರುವೆವು ಮತ್ತು ಎಲ್ಲರೂ ನಮ್ಮ ಕಡೆಗೇ ಮರಳಿಸಲ್ಪಡುವರು." **(ಪವಿತ್ರ ಕುರ್‌ಆನ್: 19: 1-40)**

ನಜ್ಜಾಶಿ ಇದನ್ನು ಆಲಿಸುತ್ತಿದ್ದಂತೆ ಅವರ ಕಣ್ಣುಗಳಿಂದ ಅಶ್ರುಧಾರೆ ಹರಿಯ ತೊಡಗಿತು. ಅವರ ಗಡ್ಡವೆಲ್ಲಾ ತೊಯ್ದು ಹೋಯಿತು. ಜಾಫರ್(ರ) ಕುರ್‌ಆನಿನ ಪಠನ ಮುಗಿಸಿದೊಡನೆ, ಅವರು ಹೀಗೆ ಹೇಳಿದರು, "ಖಂಡಿತವಾಗಿಯೂ ಈ ವಾಣಿ ಮತ್ತು ಈಸಾ(ಅ) ಅವರು ತಂದ ವಾಣಿ ಎರಡೂ ಒಂದೇ ಮೂಲದಿಂದ ಹೊರಟಿದೆ. ಅಲ್ಲಾಹ ನಾಣೆ! ನಾನು ನಿಮ್ಮನ್ನು ಇವರ ವಶಕ್ಕೆ ಒಪ್ಪಿಸಲಾರೆ."

ತಮ್ಮ ಕುತಂತ್ರ ವಿಫಲವಾದುದನ್ನು ಕಂಡು ಮರುದಿನ ಅಮ್ರ್ ಬಿನ್ ಆಸ್ ನಜ್ಜಾಶಿ ಯೊಡನೆ, "ತಾವೊಮ್ಮೆ ಅವರನ್ನು ಕರೆದು ಮರ್ಯಮರ ಪುತ್ರ ಈಸಾರ(ಅ) ಬಗ್ಗೆ ಅವರ ನಂಬಿಕೆ ಏನೆಂದು ಕೇಳಿರಿ. ಅವರ ಕುರಿತು ಈ ಜನರು ಕೆಟ್ಟ ವಿಷಯ ಹೇಳುತ್ತಾರೆ"

ಎನ್ನುತ್ತಾನೆ.

ಆಗ ನಜ್ಜಾಶೀ ಪುನಃ ಆ ವಲಸಿಗರನ್ನು ಕರೆಸುತ್ತಾನೆ. ಅಮ್ರ್ ಬಿನ್ ಆಸ್ ಅವರ ಮುಂದಿಟ್ಟು ಈ ಪ್ರಶ್ನೆಯನ್ನು ಅದೇ ರೀತಿ ಅವರ ಮುಂದಿರಿಸುತ್ತಾರೆ. ಆಗ ಸ್ವಲ್ಪವೂ ಅಳುಕಿಲ್ಲದೆ ಜಾಫರ್ ಬಿನ್ ಅಬೀತಾಲಿಬ್(ರ) ಎದ್ದು ನಿಂತು,

"ಈಸಾ(ಅ) ಅಲ್ಲಾಹನ ದಾಸರು, ಅವನ ಸಂದೇಶವಾಹಕರು, ಅವನ ಕಡೆಯಿಂದ ಒಂದು ರೂಹ್(ಆತ್ಮ) ಮತ್ತು ಕಲಿಮಃ(ವಚನ) ಆಗಿದ್ದು ಅದನ್ನು ಅಲ್ಲಾಹನು ಕುಮಾರಿಯಾಗಿದ್ದ ಮರ್ಯಮ್‌ರಿಗೆ ಇಳಿಸಿ ಬಿಟ್ಟಿದ್ದನು" ಎನ್ನುತ್ತಾರೆ. ಇದನ್ನಾಲಿಸಿದ ನಜ್ಜಾಶಿ ನೆಲದಿಂದ ಒಂದು ಹುಲ್ಲು ಕಡ್ಡಿಯನ್ನೆತ್ತಿ

"ದೇವನಾಣೆ! ಈಸಾ(ಅ) ನೀವು ಹೇಳಿದುದಕ್ಕಿಂತ ಈ ಹುಲ್ಲು ಕಡ್ಡಿಯಷ್ಟೂ ಹೆಚ್ಚಾಗಿರಲಿಲ್ಲ" ಎಂದು ಹೇಳಿದರು.

ಅನಂತರ ನಜ್ಜಾಶೀ ರಾಜನು,

"ನಾನು ಲಂಚ ಸ್ವೀಕರಿಸುವವನಲ್ಲ" ಎನ್ನುತ್ತಾ ಕುರೈಶರು ತನಗೆ ಕಳುಹಿಸಿದ್ದ ಬೆಲೆ ಬಾಳುವ ಕಾಣಿಕೆಗಳೆಲ್ಲವನ್ನೂ ಹಿಂದಿರುಗಿಸುತ್ತಾರೆ. "ನೀವು ನನ್ನ ಸಾಮ್ರಾಜ್ಯದಲ್ಲಿ ನೆಮ್ಮದಿಯಿಂದ ಬಾಳಬಹುದು" ಎಂದು ಮುಹಾಜಿರ್‌ಗಳನ್ನು ತನ್ನ ಆಸ್ಥಾನದಿಂದ ಬೀಳ್ಕೊಡುತ್ತಾನೆ.

## ಸಂಧಾನದ ಯತ್ನಗಳು

ಸೂರ್ಯಾಸ್ತಮಾನವಾಗಿ ಸ್ವಲ್ಪವೇ ಹೊತ್ತು ಕಳೆದಿದೆ. ಕುರೈಶ್ ಸರದಾರರು ಒಬ್ಬೊಬ್ಬರಾಗಿ ಕಅಬಾದ ಗೋಡೆಯ ಬಳಿ ಒಟ್ಟು ಸೇರುತ್ತಿದ್ದಾರೆ. ಅವರಲ್ಲಿ ಕೆಲವರು ಬಹಳ ಕುಪಿತರಾಗಿದ್ದರು. ಕೆಲವರ ಹಣೆಯ ಮೇಲೆ ಕ್ರೋಧದ ಲಕ್ಷಣಗಳು ಸ್ಪಷ್ಟವಾಗಿ ಗೋಚರಿಸುತ್ತಿದ್ದುವು. ಕೆಲವರು ಅತ್ಯಂತ ಮೌನಿಗಳೂ ಖಿನ್ನರೂ ಆಗಿದ್ದರು. ಎಲ್ಲರೂ ಸೇರಿಯಾದ ಬಳಿಕ ಅವರಲ್ಲೊಬ್ಬನು ಎದ್ದು ನಿಂತು ಹೀಗೆ ಹೇಳಿದನು:

"ದಿನನಿತ್ಯ ಈ ಮಾತು ಕೇಳಿ ಕೇಳಿ ನಾವು ಸುಸ್ತಾಗಿದ್ದೇವೆ. ಈಗ ಪರಿಸ್ಥಿತಿಯು ಮೇರೆ ಮೀರಿದೆ. ಇನ್ನು ಸಹಿಸುವುದು ಸಾಧ್ಯವಿಲ್ಲ. ಮುಹಮ್ಮದ್‌ರನ್ನು(ಸ) ಕರೆದು ಈಗಲೇ ಎರಡರಲ್ಲೊಂದು ತೀರ್ಮಾನ ಮಾಡಲೇಬೇಕು. ಒಂದೋ ಅವರು ತಮ್ಮ ಚಟುವಟಿಕೆಗಳನ್ನು ತೊರೆಯಬೇಕು. ಇಲ್ಲವೇ ಅವರ ವಿರುದ್ಧ ವ್ಯವಸ್ಥಿತ ಕಾರ್ಯಾಚರಣೆ ನಡೆಸಬೇಕು. ಈ ಬಗ್ಗೆ ಇನ್ನು ಯಾವ ಸಲುಗೆಯೂ ನೀಡಲಾಗದು."

"ಹೌದು ನೀನು ಹೇಳುತ್ತಿರುವುದು ಸತ್ಯ" ಎಂದನು ಸಭಿಕರಲ್ಲೊಬ್ಬನು.

"ಈಗಲೇ ಕರೆಸಿ ಮುಹಮ್ಮದ್‌ರನ್ನು(ಸ)" ಆತ ಬಹಳ ಒರಟಾಗಿ ಹೇಳಿದನು.

ಕುರೈಶ್ ಸರದಾರರ ಕರೆ ಸಿಗುತ್ತಲೇ ಮುಹಮ್ಮದ್(ಸ) ಹಾಜರಾಗುತ್ತಾರೆ. ಅವರಂತೂ ಈ ಜನರಿಗೆ ಸತ್ಯಸಂದೇಶವನ್ನು ಮುಟ್ಟಿಸುವ ಸಂದರ್ಭಕ್ಕಾಗಿ ಸದಾ ಕಾಯುತ್ತಿದ್ದರು.

ಅವರು ಬಂದು ಕುಳಿತ ಕೂಡಲೇ ಒಬ್ಬ ವ್ಯಕ್ತಿ ಹೀಗೆ ಹೇಳಿದ: "ಮುಹಮ್ಮದರೇ(ಸ)! ನಿಮ್ಮ ಬಗೆಗಿನ ನಮ್ಮ ಹೊಣೆಯನ್ನು ಪೂರ್ತಿಗೊಳಿಸು ವುದಕ್ಕಾಗಿ ನಿಮ್ಮನ್ನು ಈಗ ಕರೆಸಿರುತ್ತೇವೆ. ಅಲ್ಲಾಹ ನಾಣೆ! ನೀವು ನಿಮ್ಮ ಜನಾಂಗದಲ್ಲಿ ಎಬ್ಬಿಸಿರುವಂತಹ ಗೊಂದಲವನ್ನು ಇನ್ನಾರಾದರೂ ತನ್ನ ಜನಾಂಗದಲ್ಲಿ ಎಬ್ಬಿಸಿದ ಬಗ್ಗೆ ನಮಗರಿವಿಲ್ಲ. ನೀವು ನಮ್ಮ ಪೂರ್ವಜರನ್ನು ತೆಗಳಿ ದ್ದೀರಿ, ನಮ್ಮ ಧರ್ಮದಲ್ಲಿ ಹುಳುಕು ಹುಡುಕಿದ್ದೀರಿ, ಜನರನ್ನು ಮೂರ್ಖರೆಂದು ಸಾರಿ ದ್ದೀರಿ, ನಮ್ಮ ಆರಾಧ್ಯರನ್ನು ಅಲ್ಲಗಳೆದಿದ್ದೀರಿ, ನಮ್ಮ ಮಧ್ಯೆ ಒಡಕುಂಟು ಮಾಡಿದ್ದೀರಿ.

ಇದೆಲ್ಲವನ್ನೂ ನೀವು ಸಂಪತ್ತು ಗಳಿಸುವುದಕ್ಕಾಗಿ ಮಾಡಿದ್ದರೆ ಹೇಳಿ ನಾವು ನಿಮಗೆ ಮಕ್ಕಾದ ಅತಿ ದೊಡ್ಡ ಶ್ರೀಮಂತನಾಗಬಲ್ಲಷ್ಟು ಸಂಪತ್ತು ಸಂಗ್ರಹಿಸಿ ಕೊಡುವೆವು. ನೀವು ಬಯಸುವ ಸ್ತ್ರೀಯೊಂದಿಗೆ ನಿಮ್ಮ ವಿವಾಹ ಮಾಡಿಕೊಡುವೆವು. ನಾವು ನಿಮ್ಮನ್ನು ನಮ್ಮ ಅಧಿಪತಿಯಾಗಿ ಮಾಡಿ ನಿಮ್ಮನ್ನು ಅನುಸರಿಸಿ ನಡೆಯಲು ಸಿದ್ಧರಿದ್ದೇವೆ. ಆದರೆ ನಮ್ಮ ಒಂದು ಮಾತು ಕೇಳಿ ನಮ್ಮ ದೇವರುಗಳನ್ನು ಅಲ್ಲಗಳೆ ಯುವ ನಿಮ್ಮ ಧೋರಣೆಯನ್ನು ಬಿಟ್ಟು ಬಿಡಿ. ಇದು ನಿಮಗೆ ಸ್ವೀಕಾರಾರ್ಹವಲ್ಲದಿದ್ದರೆ ಇನ್ನೊಂದು ಸಲಹೆಯನ್ನೂ ನಾವು ನಿಮ್ಮ ಮುಂದಿರಿಸುತ್ತಿದ್ದೇವೆ. ಇದರಲ್ಲಿ ನಮ್ಮಿಬ್ಬರ ಒಳಿತೂ ಅಡಗಿದೆ."

ಮುಹಮ್ಮದ್(ಸ): "ಅದು ಯಾವ ಸಲಹೆ?"

ಕುರೈಶ್ ಸರದಾರ: "ಒಂದು ವರ್ಷ ನೀವು ನಮ್ಮ ದೇವರಾದ ಲಾತ್ ಮತ್ತು ಉಝ್ಝಾರ ಆರಾಧನೆ ಮಾಡಿರಿ. ಇನ್ನೊಂದು ವರ್ಷ ನಾವು ನಿಮ್ಮ ಆರಾಧ್ಯನನ್ನು ಪೂಜಿಸು ತ್ತೇವೆ."

ಇದೇ ಸಂದರ್ಭದಲ್ಲಿ ಮುಹಮ್ಮದ್(ಸ) ಅವರ ಮೇಲೆ ದಿವ್ಯವಾಣಿ ಅವತೀರ್ಣ ಗೊಳ್ಳುತ್ತದೆ. ಅವರು ಈ ರೀತಿ ಹೇಳುತ್ತಾರೆ: "ಹೇಳಿರಿ, ಓ ಸತ್ಯನಿಷೇಧಿಗಳೇ! ನೀವು ಆರಾಧಿಸುವವುಗಳನ್ನು ನಾನು ಆರಾಧಿಸುವುದಿಲ್ಲ ಮತ್ತು ನಾನು ಆರಾಧಿಸುವವನನ್ನು ನೀವು ಆರಾಧಿಸುವವರಲ್ಲ. ಮತ್ತು ನೀವು ಆರಾಧಿಸಿದವುಗಳ ಆರಾಧನೆಯನ್ನು ನಾನೂ ಮಾಡುವವನಲ್ಲ. ನಾನು ಆರಾಧಿಸುವವನನ್ನು ನೀವು ಆರಾಧಿಸು ವವರಲ್ಲ. ನಿಮಗೆ ನಿಮ್ಮ ಧರ್ಮ ಮತ್ತು ನನಗೆ ನನ್ನ ಧರ್ಮ." **(ಪವಿತ್ರ ಕುರ್‌ಆನ್: 109)**

ಇದನ್ನು ಕೇಳಿ ಕುರೈಶ್ ಸರದಾರರು ನಿರುತ್ತರರಾದರು. ಅವರು ಮುಹಮ್ಮದ್‌ರನ್ನು(ಸ) ದಿಟ್ಟಿಸಿ ನೋಡ ತೊಡಗಿದರು. ದೃಷ್ಟಿಯಲ್ಲಿ ದ್ವೇಷ ಮತ್ತು ಮನದಲ್ಲಿ ಕ್ರೋಧವಿತ್ತು. ಆದರೂ ಅವರಿಗೆ ಸಂಧಾನದ ಆಶೆ ಇತ್ತು. ಅವರ ಇಂಗಿತವನ್ನು ಅರಿತ ಮುಹಮ್ಮದ್(ಸ) ಹೀಗೆ ಹೇಳಿದರು: "ನನ್ನ ವಿಷಯ ನೀವು ಹೇಳುತ್ತಿರುವುದಕ್ಕಿಂತ ಭಿನ್ನವಾಗಿದೆ. ನಾನು ಈ ಸಂದೇಶವನ್ನು ನಿಮ್ಮ ಮುಂದಿಡುತ್ತಿರುವುದು ಧನ ಕನಕಗಳನ್ನು ಗಳಿಸಲಿಕ್ಕಲ್ಲ. ನಾಯಕತ್ವವನ್ನು ನಾನು ಬಯಸುವುದಿಲ್ಲ. ನಿಮ್ಮ ಮೇಲೆ ನನ್ನ ಆಧಿಪತ್ಯವನ್ನು ಸ್ಥಾಪಿಸಬೇಕೆಂಬ ಬಯಕೆಯೂ ನನಗಿಲ್ಲ. ನನ್ನನ್ನು ಅಲ್ಲಾಹನು ನಿಮ್ಮ ಕಡೆಗೆ ತನ್ನ ಪ್ರವಾದಿಯಾಗಿ ನೇಮಿಸಿರುವನು. ಅವನು

ನನ್ನ ಮೇಲೆ ತನ್ನ ಗ್ರಂಥವನ್ನು ಇಳಿಸಿರುವನು. ನಿಮಗೆ ಸುವಾರ್ತೆಯನ್ನೂ ಎಚ್ಚರಿಕೆಯನ್ನೂ ನೀಡಬೇಕೆಂದು ಅಲ್ಲಾಹನು ನನಗೆ ಆಜ್ಞಾಪಿಸಿರುತ್ತಾನೆ. ಆದ್ದರಿಂದ ನಾನು ಅಲ್ಲಾಹನ ಸಂದೇಶವನ್ನು ನಿಮಗೆ ಮುಟ್ಟಿಸಿರುವೆನು. ನಿಮ್ಮ ಹಿತಾಕಾಂಕ್ಷೆಯ ಋಣವನ್ನು ನಾನು ತೀರಿಸಿರುವೆನು. ನಾನೀಗ ತಂದಿರುವುದನ್ನು ನೀವು ಒಪ್ಪಿಕೊಂಡರೆ ಅದು ನಿಮ್ಮ ಮಟ್ಟಿಗೆ ಇಹಲೋಕ ಮತ್ತು ಪರಲೋಕದ ಒಳಿತಿನ ಹೇತುವಾಗುವುದು. ಅದನ್ನು ನೀವು ನನ್ನ ಕಡೆಗೆ ಎಸೆದು ಬಿಟ್ಟರೆ ನಾನಂತು ಅಲ್ಲಾಹನ ವಿಧಿಯ ನಿರೀಕ್ಷೆಯಲ್ಲಿ ಸಹನೆ ವಹಿಸುವೆನು. ಅಲ್ಲಾಹನೇ ನನ್ನ ಮತ್ತು ನಿಮ್ಮ ಮಧ್ಯೆ ತನ್ನ ತೀರ್ಮಾನವನ್ನೂ ಜಾರಿಗೊಳಿಸುವನು."

ಈ ಉತ್ತರವನ್ನು ಕೇಳಿದ ಬಳಿಕ ತಮ್ಮ ವಾದವನ್ನು ಮುಂದುವರಿಸಲು ಅವರ ಬಳಿ ಯಾವ ಉಪಾಯವೂ ಇರಲಿಲ್ಲ. ಆದರೂ ಅವರು ತರತರದ ಮೊಂಡು ವಾದಗಳನ್ನು ಮಂಡಿಸತೊಡಗಿದರು, "ನಮ್ಮ ನಾಡು ಬಹಳ ಇಕ್ಕಟ್ಟಾಗಿದೆಯೆಂಬುದು ನಿಮಗೆ ತಿಳಿದೇ ಇದೆ. ಅದರಲ್ಲಿ ನೀರಿಗೂ ಕೊರತೆಯಿದೆ. ಇಲ್ಲಿ ಜೀವನವು ಬಹಳ ಕಷ್ಟಕರವಾಗಿದೆ. ಈ ಪರ್ವತಗಳನ್ನು ಇಲ್ಲಿಂದ ಸರಿಸಿ ನಮ್ಮ ನೆಲವನ್ನು ವಿಶಾಲಗೊಳಿಸುವಂತೆ ಹಾಗೂ ಇದರಲ್ಲಿ ಸಿರಿಯಾ ಮತ್ತು ಇರಾಕ್‌ಗಳಲ್ಲಿರುವಂತಹ ನದಿಗಳನ್ನು ಹೊರಡಿಸುವಂತೆ ನೀವು ನಿಮ್ಮ ದೇವನಲ್ಲಿ ಹೇಳಿ. ಅವನು ನಮ್ಮ ಪೂರ್ವಜರನ್ನು ಎದ್ದೇಳಿಸಲಿ. ಅವರ ಪೈಕಿ ಕುಸೈ ಬಿನ್ ಕಿಲಾಬ್ ಇರಲೇ ಬೇಕು. ಏಕೆಂದರೆ ಆ ಮಹಾನುಭಾವರು ಬಹಳ ಸತ್ಯವಂತರಾಗಿದ್ದರು. ನಿಮ್ಮ ಸಂದೇಶವು ಸತ್ಯವೋ-ಸುಳ್ಳೋ ಎಂಬುದನ್ನು ನಾವು ಅವರಲ್ಲಿ ವಿಚಾರಿಸಿ ತಿಳಿದುಕೊಳ್ಳುವೆವು. ನಮ್ಮ ಪೂರ್ವಜರು ಜೀವಂತರಾಗಿ ಬಂದು ನಿಮ್ಮ ಪ್ರವಾದಿತ್ವವನ್ನು ದೃಢೀಕರಿಸಿದರೆ ಹಾಗೂ ನೀವು ನಮ್ಮ ಬೇಡಿಕೆಯಂತೆ ಎಲ್ಲವನ್ನೂ ಮಾಡಿ ತೋರಿಸಿದರೆ ನಾವು ನಿಮ್ಮ ಪ್ರವಾದಿತ್ವವನ್ನು ಅಂಗೀಕರಿಸುವೆವು. ಆಗ ಅಲ್ಲಾಹನ ಬಳಿ ನಿಮಗಿರುವ ಸ್ಥಾನಮಾನವು ನಮಗೆ ಮನವರಿಕೆಯಾಗುವುದು ಮತ್ತು ನಿಮ್ಮನ್ನು ಅವನು ತನ್ನ ಪ್ರವಾದಿಯಾಗಿ ಕಳುಹಿಸಿದ್ದಾನೆ ಎಂಬುದು ಕೂಡಾ ರುಜುವಾಗುವುದು. ಇದೂ ನಿಮ್ಮಿಂದ ಸಾಧ್ಯವಿಲ್ಲ ವೆಂದಾದರೆ ನಮ್ಮ ಮೇಲೆ ಯಾತನೆಯನ್ನಾದರೂ ಎರಗಿಸಿ."

ಅವರ ಈ ಅಸಂಬದ್ಧ ಬೇಡಿಕೆಗಳನ್ನು ಕೇಳಿ ಪ್ರವಾದಿ(ಸ) ತಮ್ಮ ಅದೇ ಉತ್ತರವನ್ನು ಪುನರಾವರ್ತಿಸುತ್ತಿದ್ದರು, "ನನ್ನನ್ನು ಈ ಕಾರ್ಯಗಳಿಗಾಗಿ ನಿಯೋಗಿಸಲಾಗಿಲ್ಲ."

ಇದಾದ ಬಳಿಕ ಪ್ರವಾದಿ(ಸ) ಅತ್ಯಂತ ಭಾರವಾದ ಹೃದಯದೊಂದಿಗೆ ತಮ್ಮ ಮನೆಗೆ ಮರಳುತ್ತಾರೆ.

## ಮುಂದುವರಿದ ಬೆಂಬಲ

ಅಬೂತಾಲಿಬ್‌ರ ಮನೆಯಲ್ಲಿ ಕುರೈಶ್ ಸರದಾರರ ಒಂದು ಬಲಿಷ್ಠ ತಂಡ ಬಂದು ಸೇರಿದೆ. ಇಂದು ಅವರ ಮಾತು ಇನ್ನಷ್ಟು ಕಹಿಯಾಗಿದೆ. ಕಣ್ಣುಗಳು ಕೆಂಡ ಕಾರುತ್ತಿವೆ. ಪ್ರತಿಯೊಬ್ಬನೂ ಗಡುಸಾದ ಸ್ವರದಲ್ಲೇ ಮಾತನಾಡುತ್ತಿದ್ದಾನೆ. ಅಬೂತಾಲಿಬ್ ಅತ್ಯಂತ ಮೃದು ಸ್ವಭಾವದವರು. ಅವರ ಮುಖದಲ್ಲಿ ಕೋಪವಾಗಲೀ ಬೇಸರವಾಗಲೀ

ಗೋಚರಿಸುವುದಿಲ್ಲ. ಅವರು ಅತ್ಯಂತ ಶಾಂತ ಸ್ವರದಲ್ಲಿ ಹೀಗೆ ಕೇಳುತ್ತಾರೆ:

"ನೀವು ಬಯಸುವುದಾದರೂ ಏನು?"

ಕುರೈಶ್ ಸರದಾರ: "ಅಬೂತಾಲಿಬರೇ! ನೀವು ನಮಗೆಲ್ಲರಿಗೂ ಹಿರಿಯರು. ಕುಲ-ಮಹಿಮೆಗಳೆರಡರ ದೃಷ್ಟಿಯಿಂದಲೂ ನೀವು ನಮ್ಮ ಹಿರಿಯರು. ನಮ್ಮ ಮನದಲ್ಲಿ ನಿಮ್ಮ ಬಗ್ಗೆ ಅತಿಯಾದ ಗೌರವಾದರಗಳಿವೆ. ನಿಮ್ಮ ಸೋದರ ಪುತ್ರನನ್ನು ನಮ್ಮ ಆರಾಧ್ಯರ ದೂಷಣೆಯಿಂದ ತಡೆಯಬೇಕೆಂದು ನಾವು ಬಹಳ ಹಿಂದೆಯೇ ನಿಮ್ಮನ್ನು ವಿನಂತಿಸಿದ್ದೆವು. ಅವನಿಗೆ ನೆರವಾಗುವುದನ್ನು ಬಿಟ್ಟು ಬಿಡಬೇಕೆಂದೂ ಹೇಳಿದ್ದೆವು. ಆದರೆ ಆತ ತನ್ನ ಕೃತ್ಯವನ್ನೂ ಬಿಡಲಿಲ್ಲ. ನೀವು ನಿಮ್ಮ ನೆರವನ್ನೂ ನಿಲ್ಲಿಸಲಿಲ್ಲ. ನಮ್ಮ ತಾಳ್ಮೆಗೂ ಒಂದು ಮಿತಿಯಿದೆ. ಎಷ್ಟರ ತನಕ ನಾವು ನಮ್ಮ ಪೂರ್ವಜರ ಅವಹೇಳನ, ನಮ್ಮ ವಿವೇಕದ ಅಪಮಾನ ಮತ್ತು ನಮ್ಮ ಆರಾಧ್ಯರ ದೂಷಣೆಯನ್ನು ಸಹಿಸಬಲ್ಲೆವು? ಈಗ ನಾವು ಒಂದು ನಿರ್ಧಾರಕ್ಕೆ ಬಂದಿದ್ದೇವೆ. ಒಂದೋ ನೀವು ಅವನನ್ನು ತಡೆಯಬೇಕು ಇಲ್ಲವೇ ನಮ್ಮ ವಿರುದ್ಧ ಹೋರಾಟಕ್ಕೆ ಸಿದ್ಧವಾಗಬೇಕು. ನಮ್ಮ ಪೈಕಿ ಒಂದು ಪಂಗಡ ನಾಶವಾಗುವ ತನಕ ಈ ಹೋರಾಟ ಜಾರಿಯಲ್ಲಿರುವುದು."

ಕುರೈಶ್ ತಂಡದ ರಣ ಘೋಷಣೆಯನ್ನು ಕೇಳಿ ಅಬೂತಾಲಿಬರಿಗೆ ಪರಿಸ್ಥಿತಿಯ ಗಂಭೀರತೆ ಮತ್ತು ತೀವ್ರತೆಯ ಅರಿವಾಯಿತು. ಅವರು ತನ್ನ ಪುತ್ರ ಅಕೀಲ್‌ನನ್ನು ಕಳುಹಿಸಿ ಮುಹಮ್ಮದ್‌ರನ್ನು(ಸ) ಕರೆಸಿದರು. ಅವರು ಅಲ್ಲಿಗೆ ತಲುಪಿದಾಗ ಅವರನ್ನು ತನ್ನ ಪಕ್ಕದಲ್ಲೇ ಕುಳ್ಳಿರಿಸಿ ಹೀಗೆ ಹೇಳಿದರು: "ಸೋದರ ಪುತ್ರಾ! ನಿನ್ನ ಈ ಸೋದರರು ನನ್ನ ಬಳಿ ನಿನ್ನ ದೂರು ಹೇಳಲಿಕ್ಕೆ ಬಂದಿರುವರು. ನೀನು ಅವರ ಸಭೆಗಳಲ್ಲಿ ಮತ್ತು ಮಸ್ಜಿದುಲ್ ಹರಾಮ್‌ನಲ್ಲಿ ಅವರಿಗೆ ತೊಂದರೆ ಕೊಡುತ್ತಿರುವಿಯಂತೆ. ಅವರಿಗೆ ಅಸಹ್ಯವಾಗುವಂತಹ ಮಾತುಗಳನ್ನು ನೀನು ಹೇಳುತ್ತಿರುವಿಯಂತೆ. ಅವರ ಗೌರವಕ್ಕೆ ಬೆಲೆ ನೀಡು. ಅವರು ದ್ವಿತೀಯ ಬಾರಿಗೆ ಇಲ್ಲಿ ಬಂದಿರುವರು. ಆದ್ದರಿಂದ ಇನ್ನು ಮುಂದೆ ಅವರಿಗೆ ತೊಂದರೆ ಕೊಡುವುದನ್ನು ನಿಲ್ಲಿಸು."

ಮುಹಮ್ಮದ್(ಸ) ತಲೆ ಎತ್ತಿ ಆಕಾಶದತ್ತ ನೋಡುತ್ತಾ ಕುರೈಶ್ ಸರದಾರರಲ್ಲಿ ಕೇಳಿದರು: "ನೀವು ಈ ಸೂರ್ಯನನ್ನು ನೋಡುತ್ತೀರಾ?"

ಕುರೈಶ್ ಸರದಾರರು: "ಹೌದು."

ಮುಹಮ್ಮದ್(ಸ): "ಈ ಸೂರ್ಯನಿಗೆ ಯಾವ ರೀತಿ ತನ್ನ ಕಿರಣಗಳನ್ನು ನಿಮ್ಮಿಂದ ತಡೆಯಲು ಸಾಧ್ಯವಿಲ್ಲವೋ ಅದೇ ರೀತಿ ನನಗೂ ಈ ಕೆಲಸವನ್ನು ತೊರೆಯಲು ಸಾಧ್ಯವಿಲ್ಲ."

ಈ ಉತ್ತರ ಕೇಳಿ ಕುರೈಶ್ ಸರದಾರರು ನಿರಾಶರಾದರು. ಆದರೆ ಅವರಿಗೆ ಏನೇನೂ ಹೇಳುವ ಅವಕಾಶ ನೀಡದೆ ಪ್ರವಾದಿ ಮುಹಮ್ಮದ್(ಸ) ಅಲ್ಲಿಂದೆದ್ದು ಹೋದರು.

ಕೆಲವು ಹೊತ್ತು ಮೌನವಾಗಿ ಕುಳಿತ ಬಳಿಕ ಕುರೈಶ್ ಸರದಾರರು ಬಡಬಡಿಸುತ್ತಾ

ತಂತಮ್ಮ ಮನೆಗಳಿಗೆ ತೆರಳಿದರು. ಅವರೆಲ್ಲರೂ ಹೋದ ಬಳಿಕ ಅಬೂತಾಲಿಬರು ಮತ್ತೊಮ್ಮೆ ಅಕೀಲ್‌ನನ್ನು ಕಳುಹಿಸಿ ಮುಹಮ್ಮದ್‌ರನ್ನು(ಸ) ಕರೆಸಿದರು. ಮೃದು ಸ್ವರದಲ್ಲಿ ವಾತ್ಸಲ್ಯ ಪೂರ್ಣವಾಗಿ ಈ ರೀತಿ ಹೇಳಿದರು: "ಸೋದರ ಪುತ್ರಾ! ನಿನ್ನ ಜನಾಂಗದವರು ಬಂದು ನನ್ನಲ್ಲಿ ಇಂತಿಂತಹ ಮಾತುಗಳನ್ನು ಹೇಳಿರುವರು. ನೀನು ನನಗೂ ನಿನಗೂ ಜೀವಿಸುವ ಸಂದರ್ಭವನ್ನು ಉಳಿಸಬೇಕು. ನನಗಾಗಲೀ ನಿನಗಾಗಲೀ ಹೊರಲು ಸಾಧ್ಯವಿಲ್ಲದಷ್ಟು ಭಾರವನ್ನು ನನ್ನ ಮೇಲೆ ಹೇರಬೇಡ. ಆದ್ದರಿಂದ ನಿನ್ನ ಜನಾಂಗಕ್ಕೆ ಹಿಡಿಸದಂತಹ ಮಾತು ಅವರಿಗೆ ಹೇಳುವುದನ್ನು ಬಿಟ್ಟು ಬಿಡು."

ಅಬೂತಾಲಿಬರ ಮಾತು ಕೇಳಿ, ದೊಡ್ಡಪ್ಪನವರಿಗೆ ಇನ್ನು ತನ್ನ ಬೆಂಬಲಕ್ಕೆ ನಿಲ್ಲಲು ಸಾಧ್ಯವಾಗದು. ಅವರು ಅದನ್ನು ಹಿಂತೆಗೆದು ತನ್ನನ್ನು ತನ್ನ ಪಾಡಿಗೆ ಬಿಟ್ಟು ಬಿಡುವರೆಂಬುದನ್ನು ಮುಹಮ್ಮದ್(ಸ) ಮನಗಂಡರು. ಮುಹಮ್ಮದ್(ಸ) ಅವರಿಗೆ ತಮ್ಮ ಪ್ರೀತಿಯ ದೊಡ್ಡಪ್ಪನಿಂದ ಈ ಮಾತು ಕೇಳಿ ಬಹಳ ನೋವಾಗಿದೆ. ನೋವು ತಾಳಲಾರದೆ ಕಣ್ಣು ಗಳಿಂದ ಕಣ್ಣೀರು ಹರಿಯತೊಡಗಿತು. ಆಗ ಅವರು ಹೇಳಿದರು:

"ದೊಡ್ಡಪ್ಪಾ! ನನ್ನ ಒಂದು ಕೈಯಲ್ಲಿ ಸೂರ್ಯ ಹಾಗೂ ಇನ್ನೊಂದು ಕೈಯಲ್ಲಿ ಚಂದ್ರನನ್ನಿರಿಸಿದರೂ ನಾನು ಈ ಕೆಲಸವನ್ನು ತೊರೆಯಲಾರೆ. ಒಂದೋ ಅಲ್ಲಾಹನು ನನ್ನನ್ನು ಈ ಕಾರ್ಯದಲ್ಲಿ ಯಶಸ್ವಿಗೊಳಿಸಬೇಕು ಅಥವಾ ನಾನೇ ಈ ಮಾರ್ಗದಲ್ಲಿ ಬಲಿಯಾಗಬೇಕು."

ಬಹಳ ದುಃಖದಿಂದ ಅವರು ಅಲ್ಲಿಂದ ಎದ್ದು ಹೊರಟು ನಿಲ್ಲುತ್ತಾರೆ. ತನ್ನ ಸೋದರ ಪುತ್ರನ ಕಣ್ಣೀರು ನೋಡಿ ಅಬೂತಾಲಿಬ್ ಕೂಡಾ ಚಿಂತಿತರಾದರು. ಅವರು ಅತ್ಯಂತ ಪ್ರೀತಿಯಿಂದ ಮುಹಮ್ಮದ್‌ರನ್ನು(ಸ) ಸಾಕಿ ಸಲಹಿದ್ದರು. ಜೀವನದ ಎಲ್ಲ ಘಟ್ಟಗಳಲ್ಲೂ ಅವರಿಗೆ ಬೆಂಬಲವಾಗಿ ನಿಂತಿದ್ದರು. ಈಗ ತನ್ನ ಬೆಂಬಲವನ್ನು ಹಿಂತೆಗೆಯುವ ಮಾತು ಹೇಳಿ ಅವರನ್ನು ಎತ್ತರದಿಂದ ಕೆಳಕ್ಕೆ ತಳ್ಳಿದಂತಾಗಿತ್ತು.

ಮುಹಮ್ಮದ್‌ರ(ಸ) ಕಣ್ಣೀರು ಕಂಡು ಅಬೂತಾಲಿಬ್ ವ್ಯಾಕುಲ ಚಿತ್ತರಾದರು.

"ಅಯ್ಯೋ! ನನ್ನ ಸೋದರ ಪುತ್ರಾ! ಅವನು ಸದಾ ಸತ್ಯವನ್ನೇ ನುಡಿದವನು. ಇಂದು ತನ್ನ ಹೊಣೆಗಾರಿಕೆಯನ್ನು ನಿರ್ವಹಿಸಲು ಪ್ರಾಣತ್ಯಾಗಕ್ಕೂ ಸಿದ್ಧನಾಗಿರುವನು. ನಾನು ಈ ಸ್ಥಿತಿಯಲ್ಲಿ ಅವನನ್ನು ಬೆಂಬಲಿಸದಿದ್ದರೆ ಹೇಗೆ?" ಎಂದು ಅಬೂತಾಲಿಬ್ ಮನದಲ್ಲೇ ಅಂದುಕೊಳ್ಳುತ್ತಾ ಮುಹಮ್ಮದ್‌ರನ್ನು(ಸ) ಕೂಗಿ ಹಿಂದಕ್ಕೆ ಕರೆಸುತ್ತಾರೆ. ಮುಹಮ್ಮದ್(ಸ) ಮರಳಿದಾಗ ಅವರನ್ನು ಹತ್ತಿರ ಕರೆದು:

"ಸೋದರ ಪುತ್ರಾ! ನೀನು ನಿನ್ನ ಕೆಲಸ ಮುಂದುವರಿಸು. ನೀನು ಮಾಡ ಬಯಸುವುದನ್ನು ನಿರಾತಂಕವಾಗಿ ಮಾಡುತ್ತಿರು. ಅಲ್ಲಾಹನಾಣೆ ಯಾವ ಸಂದರ್ಭದಲ್ಲೂ ನಾನು ನಿನ್ನನ್ನು ವೈರಿಗಳ ವಶಕ್ಕೆ ಒಪ್ಪಿಸಲಾರೆ."

ಕುರೈಶ್ ಸರದಾರರ ಎಲ್ಲ ಯತ್ನಗಳೂ ವಿಫಲವಾದುವು. ಮುಹಮ್ಮದ್‌ರಿಗೆ(ಸ)

ಹಾಶಿಮ್ ಮನೆತನದ ನಾಯಕನ ಬೆಂಬಲ ಮರಳಿ ಪ್ರಾಪ್ತವಾಗಿದೆ.

## ದಮ್ಮಾದ್ ಮಂತ್ರ ಮುಗ್ಧನಾದ

ಕುರೈಶರ ಒಂದು ಸಭೆಯಲ್ಲಿ ಅಝ್ದ್ ಗೋತ್ರದ ಓರ್ವ ಧನಿಕ ಕುಳಿತಿದ್ದಾರೆ. ಅವರು ಈಗಷ್ಟೇ ಮಕ್ಕಾ ತಲುಪಿದ್ದರು. ಈ ಹಿಂದೆ ಅನೇಕ ಸಲ ಅವರು ಮಕ್ಕಾ ಪಟ್ಟಣಕ್ಕೆ ಬಂದಿದ್ದರು. ಈ ಸಲ ಮಾತ್ರ ಅನೇಕ ವರ್ಷಗಳ ನಂತರ ಬಂದಿದ್ದಾರೆ. ಇಲ್ಲಿ ಬಂದು ಅವರು ಅನೇಕ ಹೊಸ ವಿಷಯಗಳನ್ನು ಕೇಳಿದರು. ಅವರ ಮಿತ್ರರಾದ ಮುಹಮ್ಮದ್‌ರಿಗೆ(ಸ) ಹುಚ್ಚು ಹಿಡಿದಿದೆ ಎಂದು ಕೇಳಿ ಅವರಿಗೆ ಬಹಳ ದುಃಖವಾಯಿತು. ಒಬ್ಬ ಕುರೈಶ್ ಹೀಗೆ ಹೇಳಿದ: "ಪ್ರಾಯಶಃ ನೀವು ನಂಬಲಿಕ್ಕಿಲ್ಲ. ಆದರೆ ಇದೊಂದು ವಾಸ್ತವಿಕತೆ. ಮುಹಮ್ಮದ್‌ರಿಗೆ(ಸ) ಹುಚ್ಚು ಹಿಡಿದಿದೆ. ನಮಗೂ ಅವರಲ್ಲಿ ಬಹಳ ನಿರೀಕ್ಷೆಗಳಿದ್ದುವು. ಆದರೆ ಮಾಡುವುದೇನು? ಮನುಷ್ಯನೇ ತಾನೆ? ಬುದ್ಧಿ ಕೆಟ್ಟು ಹೋಯಿತು. ಏನೇನೋ ಮಾತನಾಡುತ್ತಾರೆ. ಒಮ್ಮೆ ನಾವು ಸತ್ತ ಮೇಲೆ ಪುನಃ ಜೀವಂತಗೊಳ್ಳಲಿದ್ದೇವೆನ್ನುತ್ತಾರೆ. ಇನ್ನೊಮ್ಮೆ ತನ್ನ ಮೇಲೆ ದೇವಚರರು ಇಳಿಯುತ್ತಾರೆನ್ನುತ್ತಾರೆ. ಮತ್ತೊಮ್ಮೆ ತಾನು ಪರಲೋಕವನ್ನು ನೋಡುತ್ತಿದ್ದೇನೆನ್ನುತ್ತಾರೆ."

ದಮ್ಮಾದ್: "ನೀವು ಅವರಿಗೇನೂ ಚಿಕಿತ್ಸೆ ಮಾಡಿಸಲಿಲ್ಲವೆ? ಇಷ್ಟೊಂದು ಸಭ್ಯ ಮತ್ತು ಪ್ರಾಮಾಣಿಕ ವ್ಯಕ್ತಿ ಈ ರೀತಿ ನಾಶವಾಗುವುದನ್ನು ಕಂಡು ಕೂಡಾ ನೀವು ಏನೂ ಮಾಡಲಿಲ್ಲವೇ?"

ಕುರೈಶ್ ಸರದಾರ: "ನಾವು ನಮ್ಮಿಂದಾದಷ್ಟು ಪ್ರಯತ್ನಿಸಿದ್ದೇವೆ. ಆದರೆ ಅವರು ಯಾರ ಮಾತನ್ನೂ ಕೇಳುವುದಿಲ್ಲ."

ದಮ್ಮಾದ್: "ನಾನು ಈಗಲೇ ಅವರ ಬಳಿಗೆ ಹೋಗುತ್ತೇನೆ. ನನ್ನ ಮಂತ್ರ ಶಕ್ತಿಯನ್ನು ಪ್ರಯೋಗಿಸಿ ನೋಡುತ್ತೇನೆ."

ಕುರೈಶ್ ಸರದಾರ (ಮುಗುಳ್ನಗುತ್ತಾ): "ನೀವೂ ಅವರ ಇಂದ್ರಜಾಲಕ್ಕೆ ಬಲಿಯಾಗುವಿರಿ ಜೋಕೆ. ನಿಮ್ಮ ಎಲ್ಲ ಮಂತ್ರಶಕ್ತಿಯೂ ನಿರರ್ಥಕವಾಗುವುದು."

ದಮ್ಮಾದ್: "ನಾನು ದೊಡ್ಡ ದೊಡ್ಡವರ ತಲೆ ಸರಿಮಾಡಿರುವೆನು. ನಿಮಗೇನು ಗೊತ್ತು?"

ದಮ್ಮಾದ್ ಅಲ್ಲಿಂದ ಎದ್ದು ನೇರವಾಗಿ ಮುಹಮ್ಮದ್‌ರ(ಸ) ಮನೆಗೆ ಹೋದರು. ಅವರನ್ನು ಕಂಡು ಮುಹಮ್ಮದ್‌ರಿಗೆ(ಸ) ಬಹಳ ಸಂತೋಷ ವಾಯಿತು. ದಮ್ಮಾದ್ ಅವರ ಹಳೆಯ ಸ್ನೇಹಿತರಲ್ಲೊಬ್ಬರಾಗಿದ್ದರು. ಆದ್ದರಿಂದ ಪ್ರವಾದಿತ್ವದ ಬಳಿಕ ಪ್ರಥಮ ಬಾರಿ ಅವರನ್ನು ಭೇಟಿಯಾಗಿ ಅವರಿಗೆ ಎಲ್ಲಿಲ್ಲದ ಸಂತೋಷವಾಗಿತ್ತು. ದಮ್ಮಾದ್ ಸ್ವಲ್ಪ ಹೊತ್ತು ಮಾತನಾಡಿದ ಬಳಿಕ ವಿಷಯಕ್ಕೆ ಬರುತ್ತಾ "ನಿಮಗೆ ಮತಿಭ್ರಾಂತಿ ಯಾಗಿದೆಯೆಂದು ನಾನು ಕೇಳಿದ್ದೇನೆ. ಇರಲಿ ಪರವಾಗಿಲ್ಲ. ನಿಜವಾಗಿ ಹಾಗೆ ಆಗಿದ್ದರೆ ನಾನು ನನ್ನ ಮಂತ್ರ

ಬಲದಿಂದ ಅದನ್ನು ನಿವಾರಿಸಬಲ್ಲೆ. ನೀವು ಕೂಡಲೇ ಸರಿಯಾಗಿ ಬಿಡುವಿರಿ."

ಮುಹಮ್ಮದ್(ಸ) ಹೀಗೆ ಹೇಳಿದರು: "ಸರ್ವಸ್ತುತಿಯೂ ಅಲ್ಲಾಹನಿಗೆ ಮೀಸಲು. ನಾವು ಅವನನ್ನೇ ಸ್ತುತಿಸುತ್ತೇವೆ. ಅವನಿಂದಲೇ ಸಹಾಯ ಯಾಚಿಸುತ್ತೇವೆ. ಯಾರಿಗೆ ಅಲ್ಲಾಹನು ಮಾರ್ಗದರ್ಶನ ನೀಡಿದನೋ ಅವನನ್ನು ಯಾರೂ ಪಥಭ್ರಷ್ಟಗೊಳಿಸಲಾರರು. ಯಾರನ್ನು ಅಲ್ಲಾಹನು ಪಥಭ್ರಷ್ಟ ಗೊಳಿಸಿದನೋ ಅವನನ್ನು ಯಾರೂ ಸನ್ಮಾರ್ಗದಲ್ಲಿ ಮಾಡಲಾರರು. ಅಲ್ಲಾಹನ ಹೊರತು ಬೇರೆ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯವಹಿಸುತ್ತೇನೆ. ಅವನು ಏಕೈಕನು. ಅವನಿಗಾರೂ ಭಾಗೀದಾರರಿಲ್ಲ. ಮುಹಮ್ಮದ್(ಸ) ಅಲ್ಲಾಹನ ದಾಸರೂ ಸಂದೇಶವಾಹಕರೂ ಆಗಿರುವರೆಂದು ನಾನು ಸಾಕ್ಷ್ಯವಹಿಸುತ್ತೇನೆ."

ದಮ್ಮಾದ್ ಈ ವಾಣಿಯನ್ನು ಕೇಳಿ ಮಂತ್ರ ಮುಗ್ಧರಾದರು. ಅವರಿಗೆ ತನ್ನ ಮಂತ್ರ ವಿದ್ಯೆಯೇ ಮರೆತು ಹೋಗಿದೆ. ಅವರು ಪುನಃ ಪುನಃ ಈ ವಚನಗಳನ್ನು ಕೇಳಿಸುವಂತೆ ಮುಹಮ್ಮದ್‌ರಲ್ಲಿ(ಸ) ವಿನಂತಿಸಿ ಮೂರು ಸಲ ಅದನ್ನು ಆಲಿಸಿದರು. ಕೊನೆಗೆ ಹೀಗೆ ಹೇಳಿದರು: "ಅಲ್ಲಾಹನಾಣೆ ಇಂತಹ ವಾಣಿಯನ್ನು ನಾನೆಂದೂ ಕೇಳಿಲ್ಲ. ನಾನು ಮಂತ್ರವಾದಿಗಳ ವಾಣಿಯನ್ನು ಕೇಳಿದ್ದೇನೆ. ಕವಿಗಳ ವಾಣಿಯನ್ನು ಕೇಳಿದ್ದೇನೆ. ಜಾದೂಗಾರರ ವಾಣಿಯನ್ನು ಕೇಳಿದ್ದೇನೆ. ಆದರೆ ಇಂತಹ ವಾಣಿಯನ್ನು ಎಂದೂ ಕೇಳಿಲ್ಲ. ಇದು ಸಮುದ್ರದ ಆಳಕ್ಕೆ ತಲುಪುತ್ತದೆ."

ಅನಂತರ ಅವರು ಇಸ್ಲಾಮ್ ಸ್ವೀಕರಿಸಿದರು. ಮಾತ್ರವಲ್ಲ ತನ್ನ ಮತ್ತು ತನ್ನ ಜನಾಂಗದ ಪರವಾಗಿ ಪ್ರವಾದಿ(ಸ) ಅವರ ಅನುಸರಣೆಯ ಕರಾರು ಮಾಡಿದರು.

## ಉಮ್ಮು ಜಮೀಲ್

ಬೆಳಗಾಗಿ ಬಹಳ ಹೊತ್ತಾಯಿತು. ಮಕ್ಕಾದ ಸಾಹುಕಾರ ಅಬೂಲಹಬ್ ಒಂದು ಆಡಿನ ಕರುಳನ್ನೆತ್ತಿ ತನ್ನ ಮನೆಯೊಳಗೆ ಪ್ರವೇಶಿಸುತ್ತಾನೆ. ಇದು ಮಕ್ಕಾ ಪಟ್ಟಣದ ಶ್ರೀಮಂತ ಕುಟುಂಬಗಳ ಕೇರಿ. ಇಲ್ಲಿ ವಾಸಿಸುವವರೆಲ್ಲಾ ಮಕ್ಕಾದ ದೊಡ್ಡ ದೊಡ್ಡ ವರ್ತಕರು, ಬಡ್ಡಿ ಸಾಹುಕಾರರು ಮತ್ತು ಶ್ರೀಮಂತರು. ಮಕ್ಕಾದ ಪಾವನ ಮಹಿಳೆ ಖದೀಜಾರ ಮನೆಯೂ ಇಲ್ಲೇ ಇದೆ. ಅದರ ಅಕ್ಕಪಕ್ಕ ಅಬೂಲಹಬ್ ಮತ್ತು ಉಕ್ಬಾನ ಮನೆಗಳಿವೆ. ಮುಹಮ್ಮದ್(ಸ) ಇದೇ ಮನೆಯಲ್ಲಿ ವಾಸಿಸುತ್ತಿದ್ದಾರೆ. ಅವರು ಮದುವೆಯ ನಂತರ ಖದೀಜಾರ ಒತ್ತಾಯದ ಮೇರೆಗೆ ತಮ್ಮ ಮನೆಯನ್ನು ತೊರೆದು ಇಲ್ಲಿ ಬಂದು ನೆಲೆಸಿದ್ದಾರೆ.

ಅಬೂಲಹಬ್ ಮನೆಗೆ ಪ್ರವೇಶಿಸುತ್ತಲೇ ಆತನ ಮಡದಿ ಉಮ್ಮುಜಮೀಲ್ ಅವನ ನಿರೀಕ್ಷೆಯಲ್ಲಿ ನಿಂತಿರುವುದನ್ನು ಕಂಡನು.

ಅವನನ್ನು ಕಂಡೊಡನೆ ಉಮ್ಮು ಜಮೀಲ್: "ನೀವೆಲ್ಲಿಗೆ ಹೋಗಿದ್ದಿರಿ. ನಾನು ಬಹಳ ಹೊತ್ತಿನಿಂದ ನಿಮಗಾಗಿ ಕಾಯುತ್ತಿದ್ದೆ" ಎಂದಳು.

ಅಬೂಲಹಬ್ (ಮುಗುಳ್ನಗುತ್ತಾ ಆಡಿನ ಕರುಳನ್ನು ತೋರಿಸಿ): "ನೋಡಿಲ್ಲಿ, ನಾನು

ನಿನಗಾಗಿ ಏನು ತಂದಿರುವೆನು."

ಉಮ್ಮುಜಮೀಲ್: "ಇದೇನು ಆಡಿನ ಕರುಳು."

ಅಬೂಲಹಬ್: "ಹೌದು, ನೋಡುತ್ತಿರು ತಮಾಷೆ. ಒಳ್ಳೆಯ ಮೋಜು!" ಎನ್ನುತ್ತಾ ತುಂಟ ನಗುಬೀರಿ ಅದನ್ನು ಅವಳ ಕೈಗೆ ಕೊಟ್ಟು ಮನೆಯೊಳಗೆ ನಡೆದ.

ಉಮ್ಮು ಜಮೀಲ್ ಕರುಳನ್ನು ನೋಡಿ ನಗುತ್ತಾಳೆ. ಅದನ್ನು ಮುಹಮ್ಮದ್‌ರ(ಸ) ಮನೆಯ ಗೋಡೆಯ ಮೇಲಿಟ್ಟು ಆಚೆ ಕಡೆ ಇಣುಕಿ ನೋಡುತ್ತಾಳೆ. ಅವಳ ಮುಖ ಅರಳುತ್ತದೆ. ಕಣ್ಣುಗಳಿಂದ ತುಂಟತನ ಸೂಸುತ್ತದೆ.

ಮುಹಮ್ಮದ್(ಸ) ನಮಾಝ್ ಮಾಡುತ್ತಿದ್ದಾರೆ. ಅವರ ಸಮೀಪ ಯಾರೂ ಇಲ್ಲ. ಅವರು ಅಂಗಳದಲ್ಲಿ ಏಕಾಂತರಾಗಿ ಧ್ಯಾನಮಗ್ನರಾಗಿದ್ದಾರೆ. ಮುಹಮ್ಮದ್(ಸ) ಸಾಷ್ಟಾಂಗವೆರಗಿದಾಗ ಉಮ್ಮುಜಮೀಲ್ ಆ ಕರುಳನ್ನೆತ್ತಿ ಅವರ ಮೇಲೆ ಎಸೆದಳು. ಅವರ ಮೈಯೆಲ್ಲಾ ಕೊಳೆಯಾಯಿತು. ಅವರ ಶುಭ್ರವಾದ ಬಿಳಿ ಬಟ್ಟೆ ಮಲಿನವಾಯಿತು. ಆದರೆ ಅವರು ಸಾಷ್ಟಾಂಗದಿಂದ ತಲೆ ಎತ್ತಲಿಲ್ಲ. ಉಮ್ಮುಜಮೀಲ್ ಇದನ್ನು ಕಂಡು ಹೊಟ್ಟೆ ಹುಣ್ಣಾಗುವ ತನಕ ನಕ್ಕಳು. ಅಬೂಲಹಬ್ ಕೂಡಾ ನಗುತ್ತಾ ಆಗಾಗ ಇಣುಕಿ ನೋಡುತ್ತಿದ್ದ. ಇಬ್ಬರ ಸಂತೋಷಕ್ಕೂ ಪಾರವೇ ಇಲ್ಲ. ಅವರು ತಮ್ಮ ಆರಾಧ್ಯರ ನಿಂದನೆಗೆ ಪ್ರತೀಕಾರ ಮಾಡಿ ತೃಪ್ತರಾಗಿದ್ದಾರೆ.

ಉಮ್ಮುಜಮೀಲ್‌ರ ದೃಷ್ಟಿಯು ಮುಹಮ್ಮದ್‌ರ(ಸ) ಮನೆಯಾಚೆಯಿರುವ ಉಕ್ಬಾರ ಕಡೆಗೆ ಹರಿಯುತ್ತದೆ. ಆಕೆ ಮೌನವಾಗಿ ದಿಟ್ಟಿಸುವುದನ್ನು ನೋಡಿ ಅಬೂಲಹಬನೂ ಆ ಕಡೆ ನೋಡುತ್ತಾನೆ. ಅವರು ನೋಡುತ್ತಿದ್ದಂತೆಯೇ ಉಕ್ಬಾ ಮುಹಮ್ಮದ್‌ರ(ಸ) ಮನೆಯ ಒಲೆಯ ಮೇಲೆ ಇರುವ ಪಾತ್ರೆಗೆ ಹೊಲಸನ್ನು ಎಸೆದು ಬಿಡುತ್ತಾನೆ. ಅನಂತರ ಮುಹಮ್ಮದ್‌ರ(ಸ) ಮನೆಯ ಇಕ್ಕೆಲಗಳಿಂದಲೂ ಅಟ್ಟಹಾಸವು ಮುಗಿಲು ಮುಟ್ಟುತ್ತದೆ.

ಈ ಬೊಬ್ಬೆ ಕೇಳಿ ಖದೀಜಾ ಕೋಣೆಯಿಂದ ಅಂಗಳಕ್ಕೆ ಬರುತ್ತಾರೆ. ತನ್ನ ಪತಿಯ ಮೈಮೇಲೆ ಆಡಿನ ಕರುಳು ಬಿದ್ದಿರುವುದನ್ನು ಕಂಡು ದಂಗಾಗುತ್ತಾರೆ. ಕೂಡಲೇ ಕರುಳನ್ನು ಮುಹಮ್ಮದ್‌ರ(ಸ) ಮೈ ಮೇಲಿಂದ ಎತ್ತಿ ಆಚೆಗೆ ಹಾಕುತ್ತಾರೆ. ಮುಹಮ್ಮದ್(ಸ) ಸಾಷ್ಟಾಂಗದಿಂದ ತಲೆ ಎತ್ತುತ್ತಾರೆ. ನಮಾಝ್ ಮುಗಿಯುತ್ತದೆ. ಅವರ ಮುಖದಲ್ಲಿ ಕಳವಳ ವ್ಯಕ್ತವಾಗುತ್ತದೆ. ನೀರು ತರಲೆಂದು ಆಚೆ ಸರಿದು ನೋಡಿದಾಗ ಪಾತ್ರೆಯು ಮಗುಚಿ ಬಿದ್ದಿದ್ದು, ಅಲ್ಲಲ್ಲಿ ಹೊಲಸು ಹರಡಿರುವುದನ್ನು ಕಾಣುತ್ತಾರೆ. ಅವರಿಗೆ ತೀವ್ರ ನೋವಾಗುತ್ತದೆ.

ಇದು ಮುಹಮ್ಮದ್‌ರ(ಸ) ನೆರೆಯವರು ಅವರೊಂದಿಗೆ ವರ್ತಿಸುತ್ತಿದ್ದ ರೀತಿಯಾಗಿತ್ತು. ಹಗಲಲ್ಲಿ ಸಂದರ್ಭ ಸಾಧಿಸಿ ಮನೆಯೊಳಗೆ ಹೊಲಸು ಎಸೆದರೆ ರಾತ್ರಿ ಉಮ್ಮುಜಮೀಲ್ ಮುಹಮ್ಮದ್‌ರ(ಸ) ಬಾಗಿಲ ಬಳಿ ಮುಳ್ಳುಕಂಟಿಗಳನ್ನು ತಂದು ಹಾಕುತ್ತಿದ್ದಳು. ಮುಹಮ್ಮದ್(ಸ) ಅವರಾಗಲೀ ಅವರ ಮನೆಯವರಾಗಲಿ ಬೆಳಿಗ್ಗೆ ಹೊರಟಾಗ ಈ ಮುಳ್ಳುಗಳಲ್ಲಿ ಸಿಲುಕಿ ಕಾಲಿಗೆ ಗಾಯವಾಗಬೇಕು ಅಥವಾ ಬಟ್ಟೆ ಹರಿಯಬೇಕೆಂಬುದೇ

ಅವಳ ಉದ್ದೇಶವಾಗಿತ್ತು.

ಆದರೆ ಮುಹಮ್ಮದ್‌ರು(ಸ) ಅವರನ್ನು ಎಂದೂ ಬೈದಿರಲಿಲ್ಲ. ಹೆಚ್ಚು ಕಿರುಕುಳವಾದಾಗ ಮನೆಯಿಂದ ಹೊರ ಬಂದು ಅತ್ಯಂತ ಕಳಕಳಿಯಿಂದ ಹೇಳುತ್ತಿದ್ದರು: "ಅಬ್ದ್ ಮನಾಫ್ ಗೋತ್ರದವರೇ! ನೀವು ನೆರೆಕರೆಯವರ ಹಕ್ಕು ತೀರಿಸುವ ವಿಧಾನ ಇದುವೇ?"

ಹೀಗೆ ಏಕಾಯಿತು? ಕೆಲವು ವರ್ಷ ಹಿಂದಿನ ತನಕ ಮುಹಮ್ಮದ್‌ರು(ಸ) ಅವರ ಕಣ್ಮಣಿಯಾಗಿದ್ದರು. ಮುಹಮ್ಮದ್‌ರಿಂದ(ಸ) ಅವರಿಗೆ ಬಹಳಷ್ಟು ನಿರೀಕ್ಷೆಗಳಿದ್ದುವು. ಮುಹಮ್ಮದ್‌ರ(ಸ) ಸದ್ಗುಣ ಮತ್ತು ಸಚ್ಚಾರಿತ್ರ್ಯವು ಅವರನ್ನು ಬಹಳವಾಗಿ ಆಕರ್ಷಿಸಿತ್ತು. ಖದೀಜಾರನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದರು. ಈಗ ಏಕಾಏಕಿ ಈ ಮಾರ್ಪಾಟು ಏಕಾಯಿತು?

ಅಸಂಖ್ಯ ದೇವರುಗಳನ್ನು ಪೂಜಿಸುತ್ತಿದ್ದವರು ಏಕದೇವನ ಪ್ರಸ್ತಾಪ ಕೇಳಿ ಕೆರಳಿ ಕೆಂಡವಾದರು. ಒಬ್ಬ ದೇವನು ಇಷ್ಟು ದೊಡ್ಡ ವಿಶ್ವದ ವ್ಯವಸ್ಥೆಯನ್ನು ಒಬ್ಬಂಟಿಗನಾಗಿ ಮಾಡುವುದು ಹೇಗೆ ಸಾಧ್ಯವೆಂಬುದು ಅವರಿಗೆ ಹೊಳೆಯುತ್ತಿರಲಿಲ್ಲ. ಅಸಂಖ್ಯ ದೇವರುಗಳ ಆಸ್ಥಾನಗಳಿಂದಲೂ ತಮ್ಮ ಬಯಕೆಗಳು ಈಡೇರದಿದ್ದಾಗ ಅವರು ಮರ ಮತ್ತು ಕಲ್ಲುಗಳಿಂದ ನಿತ್ಯನೂತನ ದೇವರುಗಳನ್ನು ಕೆತ್ತಿ ನಿರ್ಮಿಸುತ್ತಿದ್ದರು. ಅವುಗಳ ಮುಂದೆ ಬಾಗುತ್ತಿದ್ದರು. ಯಾವ ವಿಗ್ರಹವು ದೊಡ್ಡದಾಗಿರುತ್ತಿತ್ತೋ ಅದಕ್ಕೆ ಅಷ್ಟೇ ಅಧಿಕ ಮಹಿಮೆಯಿದೆ ಎಂದು ನಂಬಲಾಗುತ್ತಿತ್ತು. ಈ ರೀತಿ ತಮ್ಮ ದೇವರುಗಳನ್ನು ತಾವೇ ನಿರ್ಮಿಸುತ್ತಿದ್ದ, ಅವರ ಮುಂದೆ ಶಿರಬಾಗಿ ಅವರಲ್ಲಿ ನಿರೀಕ್ಷೆಗಳನ್ನಿಡುತ್ತಿದ್ದ ಜನರು ಅಗೋಚರನಾದ ಏಕಮೇವಾದ್ವಿತೀಯ ದೇವನನ್ನು ಅಂಗೀಕರಿಸುವುದಾದರೂ ಹೇಗೆ?

ಮುಹಮ್ಮದ್‌ರಲ್ಲಿ(ಸ) ಅವರಿಗಿದ್ದ ದ್ವೇಷಕ್ಕೆ ಕಾರಣ ಇಷ್ಟೇ. ಅವರು ಏಕದೇವನನ್ನು ಆರಾಧಿಸುತ್ತಿದ್ದರು. ಇತರರಿಗೂ ಅದನ್ನೇ ಬೋಧಿಸುತ್ತಿದ್ದರು. ಪ್ರಾಯಶಃ ಅವರು ಅದನ್ನೂ ಸಹಿಸಿ ಕೊಳ್ಳುತ್ತಿದ್ದರೇನೋ ಆದರೆ ಈ ನಿರ್ಜೀವ ಮೂರ್ತಿಗಳ ಬಳಿ ಏನಿದೆ? ನೀವು ಅವುಗಳನ್ನೇಕೆ ಪೂಜಿಸುತ್ತೀರಿ? ಎಂದು ಮುಹಮ್ಮದ್(ಸ) ಕೇಳುವಾಗ ಅವರ ಕೋಪ ನೆತ್ತಿಗೇರುತ್ತಿತ್ತು. ಏಕೆಂದರೆ ಅವರಿಗೆ ತಮ್ಮ ದೇವರುಗಳ ಅಸಹಾಯಕತೆಯನ್ನು ನೋಡಲಾಗುತ್ತಿರಲಿಲ್ಲ. ಮುಹಮ್ಮದ್‌ರಿಂದ(ಸ) ಇಂತಹ ಮಾತುಗಳನ್ನು ಕೇಳಿದಾಗ ಅವರ ತಾಳ್ಮೆ ಕೈ ಕೊಡುತ್ತಿತ್ತು. ಅವರನ್ನು ವಿಧವಿಧವಾಗಿ ಪೀಡಿಸುವ ಮೂಲಕ ತಮ್ಮ ಮನದ ತೀಟೆಯನ್ನು ತೀರಿಸಿಕೊಳ್ಳುತ್ತಿದ್ದರು.

## ಹಮ್‌ಝಾ ಇಸ್ಲಾಮ್‌ನ ತೆಕ್ಕೆಯಲ್ಲಿ

ಅಪರಾಹ್ನದ ಸಮಯ. ಅಬ್ದುಲ್ಲಾ ಬಿನ್ ಜುದ್‌ಆನ್‌ನ ದಾಸಿ ನಡೆಯುತ್ತಿದ್ದವಳು ನಿಂತು ಬಿಡುತ್ತಾಳೆ. ಆಕೆ ಇಂತಹ ಹೃದಯ ವಿದ್ರಾವಕ ದೃಶ್ಯಗಳನ್ನು ಈ ಹಿಂದೆಯೂ ಅನೇಕ ಸಲ ನೋಡಿದ್ದಳು. ಆದರೆ ಇಂದು ಅದು ಎಲ್ಲ ಮೇರೆಗಳನ್ನೂ ಮೀರಿತ್ತು.

"ಈ ಅಕ್ರಮಿಗಳಿಗೆ ನಾಚಿಕೆಯಾಗುವುದಿಲ್ಲವೇ? ಅಯ್ಯೋ! ನನ್ನಲ್ಲಿ ಪುರುಷರಂತೆ ಶಕ್ತಿ ಇರುತ್ತಿದ್ದರೆ ನಾನೂ ಏನಾದರೂ ಮಾಡುತ್ತಿದ್ದೆ" ಎಂದು ಆಕೆ ತನ್ನಲ್ಲೇ ಗೊಣಗುತ್ತಾಳೆ.

ಮುಹಮ್ಮದ್(ಸ) ಸಫಾ ಬೆಟ್ಟದ ಮೇಲೆ ಕುಳಿತು ಧ್ಯಾನ ಮಗ್ನರಾಗಿದ್ದರು. ಅವರನ್ನು ಒಂಟಿಯಾಗಿ ಕಂಡ ಅಬೂಜಹಲನಲ್ಲಿ ಪೈಶಾಚಿಕತೆ ಉಕ್ಕಿ ಏರುತ್ತದೆ. ಆತ ಪ್ರವಾದಿವರ್ಯರ(ಸ) ಬಳಿ ಬಂದು, "ಓ ಮುಹಮ್ಮದ್! ನೀನು ನಮ್ಮ ದೇವತೆಗಳನ್ನು ತೆಗಳುವುದನ್ನು ಬಿಟ್ಟು ಬಿಡು. ಇಲ್ಲದಿದ್ದರೆ ನಾನು ನಿನ್ನ ನಾಲಗೆ ಹಿಡಿದೆಳೆಯುವೆನು" ಎಂದು ಹೇಳಿದನು.

ಮುಹಮ್ಮದ್(ಸ) ಆತನ ಕಡೆಗೆ ಗಮನವನ್ನೇ ಹರಿಸಲಿಲ್ಲ. ತಮ್ಮ ಧ್ಯಾನದಲ್ಲೇ ಮಗ್ನರಾಗಿದ್ದರು. ಅಬೂಜಹಲನಿಗೆ ಅದು ತನ್ನ ಅಪಮಾನವೆಂದು ಭಾಸವಾಯಿತು. ಅವನು ಕೆರಳಿ ಕೆಂಡವಾದನು.

"ಹೂಂ! ನಿನಗೆಷ್ಟು ಸೊಕ್ಕು. ಈಗ ನನ್ನ ಮಾತಿಗೆ ಉತ್ತರವನ್ನೂ ನೀಡುವುದಿಲ್ಲ. ನಾನು ಹೇಳುವುದು ನಿನಗೆ ಕೇಳಿಸುತ್ತಿಲ್ಲವೆ?" ಎನ್ನುತ್ತಾನೆ.

ಮುಹಮ್ಮದ್(ಸ) ಈಗಲೂ ಮೌನ ಮುರಿಯಲಿಲ್ಲ. ಸಹನೆಯ ಸಾಕಾರಮೂರ್ತಿಯಾಗಿದ್ದಾರೆ. ಇಂತಹ ಅಸಂಬದ್ಧ ಮಾತುಗಳಿಗೆ ಈ ಹಿಂದೆ ಅವರು ಅನೇಕ ಸಲ ಉತ್ತರಿಸಿದ್ದರು. ಈಗ ಏನಾದರೂ ಹೇಳುವ ಅಗತ್ಯವೇ ಉಳಿದಿರಲಿಲ್ಲ.

ಆದರೆ ಅಬೂಜಹಲನ ಕೋಪ ನೆತ್ತಿಗೇರುತ್ತದೆ. ಅವನು ಕೈ ತುಂಬ ಮರಳು ಕಲ್ಲುಗಳನ್ನೆತ್ತಿ ಮುಹಮ್ಮದ್‌ರತ್ತ(ಸ) ಎಸೆಯುತ್ತಾನೆ. ಈ ದೃಶ್ಯವನ್ನು ಕಂಡೇ ಅಬ್ದುಲ್ಲಾ ಬಿನ್ ಜುದ್ಆನ್‌ನ ದಾಸಿ ನೊಂದು ನಿಂತಿದ್ದಳು.

ಮುಹಮ್ಮದ್‌ರು(ಸ) ಈಗಲೂ ಮೌನವಾಗಿದ್ದಾರೆ. ಅವರು ಅಬೂಜಹಲನನ್ನು ಕಣ್ಣೆತ್ತಿಯೂ ನೋಡಲಿಲ್ಲ.

ಅಬೂಜಹಲನಿಗೆ ಕೋಪ ತಡೆಯಲಿಕ್ಕಾಗದೆ ಮತ್ತೊಮ್ಮೆ ಮರಳು ಕಲ್ಲುಗಳನ್ನೆತ್ತಿ ಎಸೆಯುತ್ತಾ ಮನ ಬಂದಂತೆ ಪ್ರವಾದಿವರ್ಯರನ್ನು(ಸ) ಬೈಯುತ್ತಾನೆ. ಆದರೆ ಮುಹಮ್ಮದ್(ಸ) ಅಚಲವಾಗಿ ತಮ್ಮ ಕಾರ್ಯದಲ್ಲೇ ಮಗ್ನರಾಗಿದ್ದರು.

"ಅಯ್ಯೋ! ಅನ್ಯಾಯ ಮಿತಿ ಮೀರಿದೆ. ಈ ದುಷ್ಟನು ಎಷ್ಟರ ತನಕ ಮುಹಮ್ಮದ್‌ರನ್ನು(ಸ) ಪೀಡಿಸುತ್ತಿರುವನು" ಎಂದು ಆ ದಾಸಿ ಮನದಲ್ಲೇ ಚಡಪಡಿಸುತ್ತಾಳೆ. ಆಕೆಯ ಕಣ್ಣುಗಳಿಂದ ಕಣ್ಣೀರು ಹರಿಯ ತೊಡಗುತ್ತದೆ.

ಪ್ರವಾದಿ ಮುಹಮ್ಮದ್(ಸ) ಅಬೂಜಹಲ್‌ನಿಗಾಗಿ ಅನೇಕ ಸಲ ಪ್ರಾರ್ಥಿಸಿದ್ದರು: "ದೇವಾ! ಅಬುಲ್ ಹಕಮ್ ಬಿನ್ ಹಿಷಾಮ್ (ಅಬೂಜಹಲ್) ಅಥವಾ ಉಮರ್ ಬಿನ್ ಖತ್ತಾಬ್‌ರ ಮೂಲಕ ಇಸ್ಲಾಮ್‌ಗೆ ಬೆಂಬಲ ನೀಡು."

ಆದರೆ ಆ ದಯಾಸಾಗರವನ್ನು ಅಬೂಜಹಲ್ ಅರ್ಥ ಮಾಡಿರಲಿಲ್ಲ. ಅವರಿಗೆ ಕಿರುಕುಳ ಕೊಡುವಲ್ಲಿ ಯಾವ ಕೊರತೆಯನ್ನೂ ಆತ ಮಾಡಿರಲಿಲ್ಲ. ಮರಳ ಕಲ್ಲುಗಳ ಏಟಿಗೆ

ಮುಹಮ್ಮದ್(ಸ) ಮಣಿಯುವುದಿಲ್ಲವೆಂದರಿತು ಅಬೂಜಹಲ್ ಬಾಗಿ ಒಂದು ಕಲ್ಲನ್ನೆತ್ತಿ ಮುಹಮ್ಮದ್‌ರತ್ತ(ಸ) ಬೀಸಿ ಎಸೆದನು. ಅವರ ತಲೆಯಲ್ಲಿ ಗಾಯವಾಗಿ ರಕ್ತ ಚಿಮ್ಮಿ ಹರಿಯಿತು. ಅದನ್ನು ಕಂಡು ಅಬೂಜಹಲ್‌ನಿಗೆ ಸ್ವಲ್ಪ ನೆಮ್ಮದಿ ಎನಿಸಿತು. ಆತ ಬಡಬಡಿಸುತ್ತಾ ಅಲ್ಲಿಂದ ಹಿಂತೆರಳಿದ.

ದಾಸಿ ಅಲ್ಲೇ ನಿಂತು ಯಾರನ್ನೋ ಕಾಯುತ್ತಿದ್ದಾಳೆ. ಆಕೆಗೆ ತನ್ನ ಮನೆ ಕೆಲಸವೆಲ್ಲಾ ಮರೆತಿದೆ. ಆಕೆ ಸ್ವಲ್ಪ ಹಿಂದೆ ಸರಿದು ರಸ್ತೆಯ ಬದಿ ಒಂದು ಬಂಡೆಯಲ್ಲಿ ಕುಳಿತು "ಈಗ ಬರುತ್ತಿರಬಹುದೇನೋ" ಎಂದು ಮನದಲ್ಲೇ ಅಂದು ಕೊಳ್ಳುತ್ತಾಳೆ. ಅಷ್ಟರಲ್ಲಿ ಓರ್ವ ದೃಢಕಾಯದ ವ್ಯಕ್ತಿ ತಲೆಯ ಮೇಲೆ ಕಪ್ಪು ಶಿರವಸ್ತ್ರ ಧರಿಸಿ, ಸೊಂಟದಲ್ಲಿ ಖಡ್ಗವನ್ನು ನೇತಾಡಿಸಿ, ಹೆಗಲ ಮೇಲೆ ಬತ್ತಳಿಕೆಯನ್ನೇರಿಸಿ, ಕೈಯಲ್ಲೊಂದು ಬಿಲ್ಲು ಹಿಡಿದು ಬರುತ್ತಿರುವುದು ಕಂಡಿತು. ದಾಸಿಯ ಕಣ್ಣುಗಳಲ್ಲಿ ಹೊಳಪು ಕಾಣಿಸಿತು. ಆಕೆಯಲ್ಲಿ ಆಶಾಕಿರಣ ಮೂಡಿತು. ಆಕೆ ಅವಸರದಲ್ಲಿ ಎದ್ದು ಆ ವ್ಯಕ್ತಿಯತ್ತ ಧಾವಿಸಿದಳು.

"ಬಂದಿರಾ ನೀವು?"

"ಹೌದು."

"ನೀವಂತೂ ದಿನವಿಡೀ ಬೇಟೆಯಾಡುವುದರಲ್ಲೇ ಕಳೆಯುತ್ತೀರಿ. ಮುಂಜಾನೆ ಹೊರಟರೆ ಸಂಜೆಗೆ ಮರಳುತ್ತೀರಿ. ನಿಮಗೆ ಯಾರು ಸತ್ತರೇನು ಯಾರು ಬದುಕಿದರೇನು? ನಿಮ್ಮ ಮಟ್ಟಿಗೆ ಬೇಟೆಯಾಡುವುದೊಂದೇ ಜೀವನದ ಉದ್ದೇಶ."

ದಾಸಿಯ ಬಾಯಿಯಿಂದ ಇಂತಹ ಮಾತು ಕೇಳಿ ಕೆರಳಿದ ವ್ಯಕ್ತಿ: "ಏನು ಬೊಗಳುತ್ತಿ! ತಲೆ ಕೆಟ್ಟಿದೆಯೇ?"

"ಹೌದು, ನಾನು ಬೊಗಳುತ್ತಿದ್ದೇನೆ. ದಾಸಿ ತಾನೆ?"

"ನಿನಗೆ ಆದದ್ದಾದರೂ ಏನು?"

"ನಿಮ್ಮ ಸೋದರ ಪುತ್ರ ಅನಾಥ. ಆದ್ದರಿಂದ ಏನೂ ಮಾಡುವಂತಿಲ್ಲ. ಆದರೆ ನಿಮ್ಮ ಸ್ವಾಭಿಮಾನಕ್ಕೇನಾಯಿತು? ಅಬೂಜಹಲ್ ಮುಹಮ್ಮದ್‌ರನ್ನು(ಸ) ಕಲ್ಲು ಹೊಡೆದು ಗಾಯಗೊಳಿಸಿರುವನು. ಮನಬಂದಂತೆ ಬೈದಿರುವನು. ಪಾಪ ಅವರು ಒಬ್ಬರೇ ಸಫಾದ ಮೇಲೆ ಕುಳಿತಿದ್ದರು. ಅವರು ಅಬೂಜಹಲನ ಯಾವ ಮಾತಿಗೂ ಉತ್ತರಿಸಲೇ ಇಲ್ಲ."

"ನನ್ನ ಸೋದರ ಪುತ್ರನನ್ನು ಅಬೂಜಹಲ್ ಗಾಯಗೊಳಿಸಿದನೇ?" ಹಮ್‌ಝಾ ಅವರ ಅಭಿಮಾನ ಕೆರಳಿ ಅಗ್ನಿ ಪರ್ವತವಾಯಿತು.

"ಮುಹಮ್ಮದ್‌ರ(ಸ) ಮೇಲೆ ಕೈ ಎತ್ತುವಷ್ಟು ಹಾಶಿಮ್ ಮನೆತನವನ್ನು ಬಲ ಹೀನವೆಂದು ಬಗೆಯಲಾಯಿತೇ?" ಎನ್ನುತ್ತಾ ಮುಹಮ್ಮದ್(ಸ) ಅವರ ಚಿಕ್ಕಪ್ಪನೂ ಮೊಲೆ ಹಾಲು ಸಂಬಂಧದ ಸೋದರನೂ ಆದ ಹಮ್‌ಝಾ ಅಬೂಜಹಲನನ್ನು ಹುಡುಕುತ್ತಾ ಹೊರಟರು. ಮುಹಮ್ಮದ್‌ರಿಗಿಂತ(ಸ) ಕೇವಲ ಎರಡು ವರ್ಷಕ್ಕೆ ದೊಡ್ಡವರಾಗಿದ್ದ ಹಮ್‌ಝಾ ಪ್ರವಾದಿವರ್ಯರ(ಸ) ಬಾಲ್ಯದ ಸ್ನೇಹಿತರಾಗಿದ್ದರು.

ಅಬೂಜಹಲ್ ಕಅಬಾ ಭವನದ ಬಳಿ ಕುರೈಶರೊಂದಿಗೆ ಹರಟೆ ಕೊಚ್ಚುತ್ತಿದ್ದಾನೆ. ಅಷ್ಟರಲ್ಲಿ ಹಮ್‌ಝಾ ವೇಗವಾಗಿ ನಡೆಯುತ್ತಾ ಬರುತ್ತಿರುವುದನ್ನು ಕಂಡು ಎಲ್ಲರ ಗಮನವೂ ಆ ಕಡೆ ಹರಿಯಿತು. ರೋಷಾಕುಲರಾದ ಹಮ್‌ಝಾ ನೇರವಾಗಿ ಅಬೂಜಹಲನ ಬಳಿ ಬಂದು "ನೀನೇಕೆ ನನ್ನ ಸೋದರ ಪುತ್ರನಿಗೆ ಬೈದೆ? ಕಲ್ಲೇಕೆ ಹೊಡೆದೆ? ನಿನ್ನ ಯಾವ ಬೈಗುಳಕ್ಕೂ ಉತ್ತರಿಸದ ಅವರನ್ನು ಏಕೆ ಹೊಡೆದು ಗಾಯಗೊಳಿಸಿದೆ? ಅವರಿಗೆ ಕೇಳುವವರಿಲ್ಲವೆಂದು ತಿಳಿದೆಯಾ?"

ಹಮ್‌ಝಾರ ಕೋಪದ ಬಗ್ಗೆ ಎಲ್ಲರಿಗೂ ತಿಳಿದಿತ್ತು. ಅಬೂಜಹಲ್ ಕೂಡಲೇ ಹೇಳಿದನು: "ಅಬೂ ಅಮ್ಮಾರಃ! ನೀವೇ ಯೋಚಿಸಿ. ಆತ ನಮ್ಮ ದೇವತೆಗಳನ್ನು ಹಳಿಯುತ್ತಿದ್ದ. ನಾವೆಷ್ಟೆಂದು ಸಹಿಸಬಹುದು. ನೀನು ನಿನ್ನ ದೇವನನ್ನು ಪೂಜಿಸುತ್ತಿರು. ಆದರೆ ನಮ್ಮ ದೇವತೆಗಳ ಸುದ್ದಿಗೆ ಬರಬೇಡ ಎಂದು ನಾನು ಅನೇಕ ಸಲ ಆತನಿಗೆ ಹೇಳಿದೆ. ಆದರೆ ಅವನು ಕೇಳುವುದೇ ಇಲ್ಲ."

"ಆದರೆ ನೀನು ಹೊಡೆದುದೇಕೆ? ಆತ ಒಬ್ಬಂಟಿಯೆಂದು ಭಾವಿಸಿದೆಯಾ?"

"ನೀವಂತೂ ಸುಮ್ಮನೆ ಕೆರಳುತ್ತೀರಿ. ಇನ್ನು ಮುಂದೆ ಹಾಗೆ ಮಾಡದಿರಲು ನಿಮ್ಮ ಸೋದರ ಪುತ್ರನಿಗೆ ಹೇಳಿ. ಇಲ್ಲವಾದರೆ...."

"ಇಲ್ಲವಾದರೆ ಏನು ಮಾಡುವೆ?" ಎನ್ನುತ್ತಾ ಹಮ್‌ಝಾ ತಮ್ಮ ಕೈಯಲ್ಲಿರುವ ಬಿಲ್ಲಿನಿಂದ ಅಬೂಜಹಲನ ತಲೆಗೆ ಒಂದು ಏಟು ಬಲವಾಗಿ ಬಾರಿಸಿದರು. ಅವನ ತಲೆಯಿಂದ ರಕ್ತದ ಧಾರೆಯೇ ಹರಿಯಿತು. ಆತ ಗಾಬರಿಗೊಂಡು: "ಹಮ್‌ಝಾ! ನೀನೂ ಮುಸ್ಲಿಮ್ ಆಗಿ ಬಿಟ್ಟೆಯಾ?"

"ಹೌದೌದು! ನಾನೂ ಮುಸ್ಲಿಮನಾಗಿದ್ದೇನೆ. ನೀವೇನು ಮಾಡುತ್ತೀರಿ?" ಎಂದು ಹಮ್‌ಝಾ ಆವೇಶ ಭರಿತರಾಗಿ ಹೇಳಿದರು.

ಕುರೈಶ್ ಸರದಾರರ ಮಧ್ಯೆ ಗಂಭೀರ ಮೌನ ಆವರಿಸಿತು. ಹಮ್‌ಝಾರ ಕೋಪ ಕಂಡು ಅಬೂಜಹಲ್ ಅಲ್ಲಿಂದ ಓಡಿ ಹೋಗುತ್ತಾನೆ. ಯಾರಿಗೂ ಹಮ್‌ಝಾರನ್ನು ಪ್ರತಿಭಟಿಸುವ ಧೈರ್ಯವಿರಲಿಲ್ಲ. ಅವರು ಅಲ್ಲಿಂದ ಸಫಾ ಬೆಟ್ಟದೆಡೆಗೆ ನಡೆದು ಬಿಡುತ್ತಾರೆ.

ಮುಹಮ್ಮದ್(ಸ) ಸಫಾ ಬೆಟ್ಟದಲ್ಲಿ ಕುಳಿತಿದ್ದಾರೆ. ತಲೆಯಿಂದ ಹರಿದ ರಕ್ತವು ಕಪಾಳದ ವರೆಗೆ ಬಂದಿದೆ. ಅಕ್ಕಪಕ್ಕ ಹರಳು ಕಲ್ಲುಗಳು ಹರಡಿಕೊಂಡಿವೆ. ಪ್ರವಾದಿ(ಸ) ಧ್ಯಾನ ಮಗ್ನರಾಗಿ ಕುಳಿತಿದ್ದಾರೆ. ಸುತ್ತಲೂ ಮೌನ ಆವರಿಸಿದೆ. ಹಮ್‌ಝಾ ಮುಹಮ್ಮದ್‌ರ(ಸ) ಹೆಗಲ ಮೇಲೆ ಕೈಯಾಡಿಸುತ್ತಾ ಹೀಗೆ ಹೇಳುತ್ತಾರೆ:

"ಸೋದರ ಪುತ್ರಾ, ಸಂತುಷ್ಟನಾಗು. ನಾನು ನಿನ್ನ ಪರವಾಗಿ ಪ್ರತೀಕಾರ ತೀರಿಸಿರುವೆನು. ನಾನು ಬಿಲ್ಲಿನಿಂದ ಅಬೂಜಹಲನ ತಲೆ ಒಡೆದಿರುವೆನು."

ತಮ್ಮ ಪ್ರೀತಿಯ ಚಿಕ್ಕಪ್ಪರನ್ನು ಒಲವಿನೊಂದಿಗೆ ನೋಡುತ್ತಾ, "ಚಿಕ್ಕಪ್ಪಾ! ನನಗೆ ಇಂತಹ ವಿಷಯಗಳಿಂದ ಸಂತೋಷವಾಗುವುದಿಲ್ಲ."

ಹಮ್‌ಝಾ ಕಳವಳಗೊಂಡು ಕೇಳುತ್ತಾರೆ: "ಇಂತಹ ವಿಷಯಗಳಿಂದ ನಿನಗೆ ಸಂತೋಷವಾಗದಿದ್ದರೆ ನೀನು ಸಂತೋಷಗೊಳ್ಳುವ ವಿಷಯವಾದರೂ ಏನು?"

"ಚಿಕ್ಕಪ್ಪಾ! ನೀವು ಮುಸ್ಲಿಮರಾದರೆ ನನಗೆ ಅತ್ಯಂತ ಸಂತೋಷವಾಗುವುದು."

ಹಮ್‌ಝಾ ಮುಹಮ್ಮದ್‌ರ(ಸ) ಕಣ್ಣುಗಳನ್ನು ದಿಟ್ಟಿಸಿ ನೋಡಿದರು. ಶಾಂತ ಚಿತ್ತರಾಗಿ ಹೀಗೆ ಹೇಳಿದರು: "ಸೋದರ ಪುತ್ರಾ! ನಾನು ಮುಸ್ಲಿಮನಾಗುವುದರಲ್ಲೇ ನಿನಗೆ ಸಂತೋಷವಾದರೆ ಇದೋ ನಾನು ಮುಸ್ಲಿಮ್ ಆಗುತ್ತೇನೆ. "ಅಶ್‌ಹದು ಅಲ್ಲಾ ಇಲಾಹ ಇಲ್ಲಲ್ಲಾಹು ವಹ್‌ದಹೂ ಲಾ ಶರೀಕಲಹೂ ವ ಅಶ್‌ಹದು ಅನ್ನ ಮುಹಮ್ಮದನ್ ಅಬ್ದುಹೂ ವ ರಸೂಲುಹೂ." (ನಾನು ಸಾಕ್ಷ್ಯವಹಿಸುತ್ತೇನೆ. ಅಲ್ಲಾಹನ ಹೊರತು ಅನ್ಯ ಆರಾಧ್ಯನಿಲ್ಲ. ಆತನು ಏಕೈಕನು. ಆತನಿಗಾರೂ ಪಾಲುದಾರರಿಲ್ಲ. ನಾನು ಸಾಕ್ಷ್ಯವಹಿಸುತ್ತೇನೆ. ಮುಹಮ್ಮದ್(ಸ) ಅಲ್ಲಾಹನ ದಾಸರೂ, ಅವನ ಸಂದೇಶ ವಾಹಕರೂ ಆಗಿರುವರು)

ಮುಹಮ್ಮದ್‌ರ(ಸ) ಮುಖವು ಸಂತೋಷದಿಂದ ಅರಳಿತು. ಅವರು ಈ ರೀತಿ ಪ್ರಾರ್ಥಿಸಿದರು: "ಓ ಅಲ್ಲಾಹ್! ಹಮ್‌ಝಾರನ್ನು ಸ್ಥಿರಚಿತ್ತರಾಗಿ ಮಾಡು."

## ಉಮರ್ ಬಿನ್ ಖತ್ತಾಬ್(ರ)

ಉಮರ್ ಬಿನ್ ಖತ್ತಾಬ್(ರ) ಅದ್ದೀ ಮನೆತನದ 27 ವರ್ಷದ ಯುವಕ. ತೀಕ್ಷ್ಣ ಬುದ್ಧಿಯ ದೃಢಕಾಯದ ಧೈರ್ಯಶಾಲಿ ವ್ಯಕ್ತಿ. ಕುರೈಶ್ ಗೋತ್ರದ ಅತ್ಯಂತ ಯಶಸ್ವೀ ರಾಯಭಾರಿ.

ಇಂದು ಅವರು ತಮ್ಮ ಮನೆಯಿಂದ ಹೊರಟಾಗ ಅತ್ಯಂತ ಕುಪಿತರಾಗಿದ್ದರು. "ಮಕ್ಕಾದ ಕೆಲವು ಮತಿಗೆಟ್ಟ ಯುವಕರು ಮತ್ತು ದೂರದೃಷ್ಟಿಯಿಲ್ಲದ ಜನರು ತಮ್ಮದೇ ಗೋತ್ರದಿಂದ ಕಡಿದು ಹೋಗಿರುವರು. ಅವರು ತಮ್ಮ ಪೂರ್ವಜರ ಧರ್ಮವನ್ನು ತೊರೆದು ಒಂದೇ ದೇವನಲ್ಲಿ ವಿಶ್ವಾಸವಿಡುವ ಹೊಸ ಧರ್ಮಕ್ಕೆ ಸೇರಿದ್ದಾರೆ. ಆ ಧರ್ಮವು ದೇವತೆಗಳನ್ನು ನಿರಾಕರಿಸುತ್ತದೆ. ಆ ಧರ್ಮವನ್ನು ಸ್ವೀಕರಿಸದವರ ವಿರುದ್ಧ ದ್ವೇಷ ಹರಡುತ್ತದೆ. ಈ ಹೊಸ ಧರ್ಮವನ್ನು ಸ್ಥಾಪಿಸಿದ ಮುಹಮ್ಮದ್(ಸ) ತಮ್ಮ ವ್ಯಾಪಾರವನ್ನು ಹಾಳುಮಾಡಿಕೊಂಡಿದ್ದಾರೆ. ತಮ್ಮ ಘನತೆ, ಗೌರವ ಮತ್ತು ಖ್ಯಾತಿಗೆ ಕುಂದುಂಟು ಮಾಡಿದ್ದಾರೆ. ಕೆಲವು ಸಮಯದ ಹಿಂದೆ ಅವರು ಜನರ ಕಣ್ಮಣಿಯಾಗಿದ್ದರು. ಆದರೆ ಈ ಹೊಸ ಧರ್ಮದಿಂದಾಗಿ ಪ್ರತಿಯೊಬ್ಬರೂ ಅವರ ರಕ್ತದಾಹಿಗಳಾಗುತ್ತಿದ್ದಾರೆ. ಅವರು ಅತ್ಯಂತ ಸಫಲ ಜಾದೂಗಾರ. ಅವರ ಮೇಲೆ ವಿಶ್ವಾಸ ತಂದು ಅವರು ಹೇಳುವ ವಚನವನ್ನು ಪಠಿಸುವವರು ಕೂಡಲೇ ತಮ್ಮ ಬಂಧು ಬಳಗದಿಂದ ಬೇರ್ಪಡುತ್ತಾರೆ. ಮುಹಮ್ಮದ್‌ರಂತೂ(ಸ) ಸೋದರರ ಮಧ್ಯೆ, ತಂದೆ-ಮಕ್ಕಳ ಮಧ್ಯೆ ಹಾಗೂ ಪತಿ-ಪತ್ನಿಯರ ಮಧ್ಯೆ ದ್ವೇಷದ ಗೋಡೆಯನ್ನು ನಿರ್ಮಿಸಿರುವರು."

ಉಮರ್ ಈ ರೀತಿ ಯೋಚಿಸುತ್ತಾ "ನಾನು ಇಂದು ಮುಹಮ್ಮದ್‌ರ(ಸ) ಕಥೆಯನ್ನೇ

ಮುಗಿಸಿ ಬಿಡುವೆನು. ಈ ಕ್ಷೋಭೆಯು ಶಾಶ್ವತವಾಗಿ ಕೊನೆಗೊಳ್ಳಬೇಕು" ಎಂದು ದೃಢ ನಿರ್ಧಾರ ಮಾಡಿಕೊಳ್ಳುತ್ತಾರೆ. ಉಮರ್ ಮುಂಜಾನೆ ತಮ್ಮ ಮನೆಯಿಂದ ಹೊರಟು ಅರ್ಕಮ್‌ರ ಮನೆಯತ್ತ ಹೋಗುತ್ತಿದ್ದಾರೆ. ದಾರಿಯ ಮಧ್ಯೆ ಅದ್ವೀ ಗೋತ್ರದ ನಈಮ್‌ರನ್ನು ಭೇಟಿಯಾಗುತ್ತಾರೆ. ಅವರು ತಮ್ಮ ಇಸ್ಲಾಮ್ ಧರ್ಮ ಸ್ವೀಕಾರವನ್ನು ಇನ್ನೂ ರಹಸ್ಯ ವಾಗಿಟ್ಟಿದ್ದರು. ಉಮರ್‌ರ ಸಿಡುಕು ಮೋರೆಯನ್ನು ಕಂಡು ಯಾವುದೋ ದುರುದ್ದೇಶದಿಂದ ಹೊರಟಿರಬಹುದೆಂದು ಭಾವಿಸಿ ಈ ರೀತಿ ವಿಚಾರಿಸುತ್ತಾರೆ:

"ಬಹಳ ತುರ್ತಾಗಿ ಹೊರಟಂತಿದೆ. ಏನು ಸಮಾಚಾರ?"

ಉಮರ್: (ಕೋಪದಿಂದ) ಮುಹಮ್ಮದ್‌ರ(ಸ) ಕಥೆ ಮುಗಿಸಲು ಹೋಗುತ್ತಿದ್ದೇನೆ."

ನಈಮ್: (ನಸು ನಗುತ್ತಾ) "ಮೊದಲು ನಿಮ್ಮ ಮನೆಯ ಸಮಾಚಾರವೇನೆಂದು ತಿಳಿಯಿರಿ. ಆಮೇಲೆ ಮುಹಮ್ಮದ್‌ರ(ಸ) ಕಥೆ ಮುಗಿಸುವಿರಂತೆ."

ಉಮರ್: (ಬೆಚ್ಚಿ ಬಿದ್ದು) "ಏಕೆ?"

ನಈಮ್: "ಪ್ರಾಯಶಃ ಮೊದಲು ಮನೆಯವರ ಕಥೆಯನ್ನೇ ಮುಗಿಸಬೇಕಾದೀತೇನೋ"

ಉಮರ್: (ಅವಸರದಲ್ಲಿ) "ಏಕೆ? ಏನಾಯಿತು?"

ನಈಮ್: "ಉಮರ್! ಅಲ್ಲಾಹನಾಣೆ ನಿಮ್ಮ ಭ್ರಷ್ಟಚಿತ್ತ ನಿಮ್ಮನ್ನು ವಂಚಿಸಿದೆ. ಮುಹಮ್ಮದ್‌ರನ್ನು(ಸ) ಕೊಂದ ಬಳಿಕ ಅಬ್ದ್ ಮನಾಫ್ ಗೋತ್ರ ನಿಮ್ಮನ್ನು ಜೀವ ಸಹಿತ ಬಿಟ್ಟೀತೆಂದು ಭಾವಿಸಿದ್ದೀರಾ? ಮೊದಲು ನಿಮ್ಮ ಮನೆಯವರ ಸಮಾಚಾರವನ್ನೇ ತಿಳಿಯಿರಿ. ನಿಮ್ಮ ತಂಗಿ ಫಾತಿಮಾ ಮತ್ತು ಭಾವ ಸಈದ್ ಇಬ್ಬರೂ ಮುಸ್ಲಿಮ ರಾಗಿರುವರು."

ಈ ಸುದ್ದಿ ಕೇಳುತ್ತಲೇ ಉಮರ್‌ರಿಗೆ ಸಿಡಿಲೆರಗಿದಂತಾಯಿತು. ಅವರು ಅರ್ಕಮ್‌ರ ಮನೆಯ ಕಡೆಗೆ ಹೋಗುವ ಬದಲು ತಮ್ಮ ತಂಗಿಯ ಮನೆಯ ಕಡೆಗೆ ಹೊರಟರು.

ಮನೆ ತಲುಪುತ್ತಲೇ ಒಳಗಿನಿಂದ ಏನೋ ಓದುವ ಶಬ್ದ ಕೇಳಿಸಿತು. ಅದರಿಂದ ಅವರ ಕೋಪ ಇನ್ನಷ್ಟು ಕೆರಳಿತು. ಜೋರಾಗಿ ಕದ ತಟ್ಟುತ್ತಾ "ಬಾಗಿಲು ತೆಗೆಯಿರಿ" ಎಂದರು. ಅವರ ಸ್ವರ ಕೇಳುತ್ತಲೇ ಮನೆಯಲ್ಲಿ ಮೌನ ಆವರಿಸಿತು. ಫಾತಿಮಾ, ಖಬ್ಬಾಬ್ ಬಿನ್ ಅಲ್ ಅರತ್‌ರಿಂದ ಓದುತ್ತಿದ್ದುದನ್ನು ಬೇಗನೇ ಒಂದೆಡೆ ಅಡಗಿಸಿಟ್ಟರು. ಖಬ್ಬಾಬ್ ಮನೆಯ ಸಾಮಾನುಗಳ ಹಿಂದೆ ಅಡಗಿ ಕುಳಿತರು. ಸಈದ್ ಬಂದು ಬಾಗಿಲು ತೆರೆದರು. ಉಮರ್ ಕೆರಳಿದ ಸಿಂಹದಂತೆ ಮನೆಯೊಳಗೆ ನುಗ್ಗಿದವರೇ ಒರಟಾಗಿ ಕೇಳಿದರು:

"ನೀವೇನು ಓದುತ್ತಿದ್ದಿರಿ?"

"ಏನೂ ಇಲ್ಲ."

"ನಾನೆಲ್ಲವನ್ನೂ ಆಲಿಸಿದ್ದೇನೆ. ನೀವು ಧರ್ಮ ಭ್ರಷ್ಟರಾಗಿರುವಿರಿ" ಎನ್ನುತ್ತಾ ಉಮರ್ ತಮ್ಮ ಭಾವನ ಮೇಲೆ ಮುಗಿಬಿದ್ದರು. ತಂಗಿ ತನ್ನ ಪತಿಯ ಮೇಲೆ ಆಗುತ್ತಿರುವ

ಅನ್ಯಾಯವನ್ನು ಕಂಡು ಮುಂದೆ ಬಂದು ಉಮರ್‌ರನ್ನು ತಡೆಯಲು ಯತ್ನಿಸಿದರು. ಉಮರ್ ಆಕೆಯನ್ನು ಚೆನ್ನಾಗಿ ಥಳಿಸಿದರು. ಅವರ ತಲೆಯಲ್ಲಿ ಗಾಯವಾಗಿ ರಕ್ತ ಹರಿಯತೊಡಗಿತು. ಅಬಲೆಯಾದ ಸ್ತ್ರೀ ದೃಢಕಾಯದ ವ್ಯಕ್ತಿಯ ಏಟು ತಾಳಲಾರದೆ ಚಡಪಡಿಸಿದಳು. ಆದರೆ ಸತ್ಯವಿಶ್ವಾಸದ ಆವೇಶವು ಅವರನ್ನು ಸಿಂಹಿಣಿಯಂತೆ ಘರ್ಜಿಸುವಂತೆ ಮಾಡಿತು:

"ಉಮರ್! ನೀವು ಏನು ಮಾಡುತ್ತೀರೋ ಮಾಡಿ, ನಾವಂತೂ ಮುಸ್ಲಿಮ ರಾಗಿರುವೆವು."

ಈ ಮಾತು ಉಮರ್‌ರ ಮನದಲ್ಲಿ ಬಾಣದಂತೆ ನಾಟಿತು. ಅವರು ಕೈ ಹಿಂದೆಳೆದರು. ತಮ್ಮ ತಂಗಿಯ ಕಡೆಗೊಮ್ಮೆ ನೋಡಿದರು. ಮುಗ್ಧ ಮುಖ, ತಲೆಯಿಂದ ಹರಿಯುತ್ತಿರುವ ರಕ್ತ ಉಮರ್‌ಗೆ ಹೆಚ್ಚು ಹೊತ್ತು ನೋಡಲಾಗಲಿಲ್ಲ. ದೃಷ್ಟಿ ಕೆಳಗೆ ಮಾಡಿ ಸ್ವಲ್ಪ ಹೊತ್ತು ಮೌನವಾಗಿ ನಿಂತರು. ತರುವಾಯ ಹೇಳಿದರು:

"ನೀವು ಓದುತ್ತಿದ್ದುದನ್ನು ನನಗೊಮ್ಮೆ ತೋರಿಸಿ."

ಫಾತಿಮಾರ ಹೃದಯದಲ್ಲಿ ಆಶೆಯ ಕಿರಣವೊಂದು ಮೂಡಿತು. ನಡುಗುವ ಕೈಗಳಿಂದ ಅವರು ಕುರ್‌ಆನ್ ವಾಕ್ಯಗಳನ್ನು ಬರೆದ ಹಾಳೆಯನ್ನು ಅಣ್ಣನ ಮುಂದಿಡುತ್ತಾರೆ. ಅದರಲ್ಲಿ ಸೂರಃ ತಾಹಾದ ಆರಂಭದ ಕೆಲವು ಸೂಕ್ತಗಳಿದ್ದುವು:

"ತಾಹಾ. ನಾವು ಈ ಕುರ್‌ಆನನ್ನು ನಿಮ್ಮ ಮೇಲೆ ಅವತೀರ್ಣಗೊಳಿಸಿರುವುದು ನಿಮ್ಮನ್ನು ಸಂಕಷ್ಟಕ್ಕೀಡು ಮಾಡಲಿಕ್ಕಲ್ಲ. ಇದು ಭಯವಿರಿಸುವ ಪ್ರತಿಯೊಬ್ಬನಿಗೆ ನೆನಪಿಸುವ ಒಂದು ಸಾಧನವಾಗಿದೆ. ಭೂಮಿಯನ್ನೂ ಉನ್ನತ ಆಕಾಶಗಳನ್ನೂ ಸೃಷ್ಟಿಸಿದವನ ಕಡೆಯಿಂದ ಇದು ಅವತೀರ್ಣಗೊಂಡಿದೆ. ಆ ದಯಾಮಯನು (ವಿಶ್ವ) ಸಿಂಹಾಸನದ ಮೇಲೆ ವಿರಾಜಿಸುತ್ತಿದ್ದಾನೆ. ಅವನು, ಆಕಾಶಗಳಲ್ಲೂ ಭೂಮಿಯಲ್ಲೂ ಅವೆರಡರ ನಡುವೆಯೂ ಹಾಗೂ ಮಣ್ಣಿನಡಿಯಲ್ಲಿಯೂ ಇರುವ ಸಕಲ ವಸ್ತುಗಳ ಮಾಲಿಕನಾಗಿರುತ್ತಾನೆ. ನೀವು ನಿಮ್ಮ ಮಾತನ್ನು ಉಚ್ಚ ಸ್ವರದಲ್ಲೇ ಹೇಳಿದರೂ ಅವನಂತು ಮೆಲುದನಿಯ ಮಾತನ್ನು ಮಾತ್ರವಲ್ಲ ಅದಕ್ಕಿಂತಲೂ ರಹಸ್ಯವಾದ ಮಾತನ್ನೂ ಅರಿಯುತ್ತಾನೆ. ಅವನು ಅಲ್ಲಾಹ್. ಅವನ ಹೊರತು ಅನ್ಯ ದೇವನಿಲ್ಲ. ಅವನಿಗೆ ಅತ್ಯುತ್ತಮ ನಾಮಗಳಿವೆ."

**(ಪವಿತ್ರ ಕುರ್‌ಆನ್, 20:1-8)**

"ಅಲ್ಲಾಹನಾಣೆ ಎಷ್ಟೊಂದು ಪರಿಶುದ್ಧ ವಚನವಿದು" ಎಂದು ಉಮರ್ ತಮಗರಿ ವಿಲ್ಲದೆಯೇ ಉದ್ಗರಿಸುತ್ತಾರೆ.

ಅಲ್ಲಾಹನ ವಾಣಿಯು ಉಮರ್‌ರ ಮನದಲ್ಲಿ ಬಾಣದಂತೆ ನಾಟಿದೆ. ಸತ್ಯನಿಷೇಧ ಮತ್ತು ಬಹುದೇವ ವಿಶ್ವಾಸದ ಕೊಳಕು ತೊಳೆದಿದೆ. ಸತ್ಯವಿಶ್ವಾಸದ ಶುಭ್ರ ಬೆಳಕಿನಿಂದ ಹೃದಯ ಪ್ರಕಾಶಮಾನವಾಗಿದೆ.

"ಅಲ್ಲಾಹನಾಣೆ! ಎಷ್ಟೊಂದು ಉತ್ತಮ ಹಾಗೂ ಪರಿಶುದ್ಧ ವಾಣಿಯಿದು."

ಈಗ ಖಬ್ಬಾಬ್ ಮುಂದೆ ಬರುತ್ತಾರೆ. ಅವರ ಹೆದರಿಕೆ ಮಾಯವಾಗಿದೆ. ಉಮರ್ ಆಶ್ಚರ್ಯ ಚಕಿತರಾಗಿ ಅವರೆಡೆಗೆ ನೋಡಿದರು. ಆದರೆ ಅವರಿಗೆ ಏನನ್ನೂ ಹೇಳಲು ಅವಕಾಶ ಕೊಡದೆ ಖಬ್ಬಾಬ್(ರ) ಹೀಗೆ ಹೇಳಿದರು:

"ಉಮರ್! ಮುಹಮ್ಮದ್‌ರ(ಸ) ಬಳಿಗೆ ಧಾವಿಸಿರಿ. ಅವರು ಹೀಗೆ ಪ್ರಾರ್ಥಿಸಿದ್ದರು. 'ಓ ಅಲ್ಲಾಹ್! ಅಮ್ರ್ ಬಿನ್ ಹಿಶಾಮ್ ಅಥವಾ ಉಮರ್ ಬಿನ್ ಖತ್ತಾಬ್‌ರ ಮೂಲಕ ಇಸ್ಲಾಮ್‌ಗೆ ನೆರವಾಗು' ಈ ಪ್ರಾರ್ಥನೆಯನ್ನು ಅಲ್ಲಾಹನು ನಿಮ್ಮ ಪರವಾಗಿ ಸ್ವೀಕರಿಸಿರುವನೆಂದು ನಾನು ಭಾವಿಸುತ್ತೇನೆ. ಆದ್ದರಿಂದ ಓ ಉಮರ್! ಅಲ್ಲಾಹನೆಡೆಗೆ ಬನ್ನಿರಿ. ಅಲ್ಲಾಹನೆಡೆಗೆ ಬನ್ನಿರಿ."

ಉಮರ್(ರ) ನಿಟ್ಟುಸಿರು ಬಿಡುತ್ತಾ "ನಾನು ಮುಹಮ್ಮದ್‌ರನ್ನು(ಸ) ಕೊಲ್ಲಲು ಹೊರಟಿರುವೆ ಆದರೆ ಅವರು ನನಗಾಗಿ ಪ್ರಾರ್ಥಿಸುತ್ತಾರೆ!"

ಅವರು ಪ್ರೀತಿ ಮತ್ತು ವಾತ್ಸಲ್ಯದೊಂದಿಗೆ ಅವರೆಲ್ಲರನ್ನೂ ಒಮ್ಮೆ ನೋಡಿದರು. ಏನೂ ಮಾತಾಡದೆ ವೇಗವಾಗಿ ಮನೆಯಿಂದ ಹೊರಟು ಹೋದರು.

ಅರ್ಕಮ್‌ರ ಮನೆಯಲ್ಲಿ ಪ್ರವಾದಿ(ಸ) ತಮ್ಮ ಸಂಗಾತಿಗಳೊಡನೆ ಕುಳಿತಿರುವರು. ಉಮರ್ ದ್ವಾರದ ಬಳಿ ತಲೆಬಾಗಿಸಿ ನಿಂತಿರುವರು. ಬಿಲಾಲ್(ರ) ಒಳಗೆ ಹೋಗಿ ಉಮರ್ ಬಂದಿರುವ ಸಮಾಚಾರವನ್ನು ತಿಳಿಸುತ್ತಾರೆ. ಉಮರ್‌ರ(ರ) ಹೆಸರು ಕೇಳಿ ಎಲ್ಲರೂ ಬೆಚ್ಚಿ ಬಿದ್ದರು. ಉಮರ್ ಇಸ್ಲಾಮಿನ ಕಡು ವೈರಿಯಾಗಿರುವರೆಂಬುದು ಎಲ್ಲರಿಗೂ ತಿಳಿದಿತ್ತು. ಈ ದೃಢಕಾಯದ ಧೈರ್ಯಶಾಲಿ ವ್ಯಕ್ತಿಯನ್ನು ಒಮ್ಮೆಲೇ ಇಲ್ಲಿ ಕಂಡು ಎಲ್ಲರಿಗೂ ಆಶ್ಚರ್ಯವಾಗಿತ್ತು. ಅವರ ಗಾಬರಿಯು ತೀರಾ ಸಹಜವಾಗಿತ್ತು. ಉಮರ್‌ರಿಂದ ಅವರಿಗೆ ಯಾವುದೇ ಒಳಿತಿನ ನಿರೀಕ್ಷೆ ಇರಲಿಲ್ಲ. ಈ ವೇಳೆ ಅವರು ಇಲ್ಲಿಗೆ ಯಾಕೆ ಬಂದಿರಬಹುದೆಂಬುದು ಯಾರಿಗೂ ತಿಳಿದಿರಲಿಲ್ಲ. ಹಮ್‌ಝಾ(ರ) ಹೇಳುತ್ತಾರೆ: "ಬರಲಿ ಬಿಡಿ. ಒಳ್ಳೆಯ ಇರಾದೆಯಿಂದ ಬಂದಿದ್ದರೆ ಸರಿ. ಇಲ್ಲವಾದರೆ ಅವನ ಖಡ್ಗದಿಂದಲೇ ಅವನ ರುಂಡವನ್ನು ಕತ್ತರಿಸಲಾಗುವುದು."

ಮುಹಮ್ಮದ್(ಸ) ಅವರ ಮಾತು ಕೇಳಿ ಮುಗುಳ್ನಗುತ್ತಾರೆ ಮತ್ತು ಅವರನ್ನು ಒಳಗೆ ಕರೆಯಲು ಆಜ್ಞಾಪಿಸುತ್ತಾರೆ. ಬಾಗಿಲು ತೆರೆಯಿತು. ಉಮರ್(ರ) ಒಳಗೆ ಪ್ರವೇಶಿಸುತ್ತಾರೆ. ಮುಹಮ್ಮದ್(ಸ) ಎದ್ದು ಅವರೆಡೆಗೆ ನಡೆಯುತ್ತಾರೆ. ಅವರ ಶಾಲನ್ನು ಹಿಡಿದು ಜೋರಾಗಿ ಎಳೆಯುತ್ತಾರೆ.

"ಖತ್ತಾಬ್‌ರ ಪುತ್ರರೇ! ಇಲ್ಲಿಗೇಕೆ ಬಂದಿರುವಿರಿ? ಅಲ್ಲಾಹನು ನಿಮ್ಮ ಮೇಲೆ ಒಂದು ದೊಡ್ಡ ವಿಪತ್ತನ್ನು ಎರಗಿಸುವ ತನಕ ನೀವು ಸುಮ್ಮನಿರಲಾರಿರಾ?"

ಪ್ರವಾದಿವರ್ಯರ(ಸ) ವರ್ಚಸ್ಸಿನಿಂದ ಉಮರ್(ರ) ಅಡಿಯಿಂದ ಮುಡಿ ತನಕ

ಕಂಪಿಸಿದರು. ಅವರ ದೃಷ್ಟಿ ನೆಲದ ಮೇಲಿದೆ. ಮೆಲು ದನಿಯಲ್ಲಿ ಹೇಳುತ್ತಾರೆ: "ಓ ಸಂದೇಶವಾಹಕರೇ! ಮುಸ್ಲಿಮ್ ಆಗಲು ಬಂದಿರುವೆನು."

ಮುಸ್ಲಿಮರ ಮುಖಗಳು ಅರಳುತ್ತವೆ. ಆವೇಶಭರಿತರಾಗಿ 'ಅಲ್ಲಾಹು ಅಕ್ಬರ್' ಎಂದು ಘೋಷಿಸುತ್ತಾರೆ. ಸಫಾ ಬೆಟ್ಟವು 'ಅಲ್ಲಾಹು ಅಕ್ಬರ್'ನ ಪ್ರತಿಧ್ವನಿಯಿಂದ ಕಂಪಿಸುತ್ತದೆ.

ಮುಹಮ್ಮದ್(ಸ) ಉಮರ್‌ರ(ರ) ಎದೆಯ ಮೇಲೆ ಕೈಯಿಟ್ಟು ಪ್ರಾರ್ಥಿಸುತ್ತಾರೆ. "ಓ ಅಲ್ಲಾಹ್! ಉಮರ್‌ಗೆ ಸನ್ಮಾರ್ಗದರ್ಶನ ನೀಡು. ಓ ಅಲ್ಲಾಹ್! ಉಮರ್‌ರಿಗೆ ಸ್ಥಿರಚಿತ್ತತೆಯನ್ನು ದಯಪಾಲಿಸು."

ಇದು ಮುಹಮ್ಮದ್(ಸ) ಅವರ ಪ್ರವಾದಿತ್ವದ ಆರನೆಯ ವರ್ಷವಾಗಿತ್ತು. ದುಲ್ ಹಜ್ಜ್ ತಿಂಗಳು. ಹಮ್‌ಝಾ(ರ) ಮುಸ್ಲಿಮರಾಗಿ ಕೇವಲ ಮೂರು ದಿನಗಳು ಕಳೆದಿದ್ದುವು.

## ಅಬೂತಾಲಿಬ್ ಕಣಿವೆ

ಕುರೈಶರ ಒಂದು ರಹಸ್ಯ ಸಭೆ ನಡೆಯುತ್ತಿದೆ. ಅವರ ಎಲ್ಲ ನಾಯಕರೂ ಇದ್ದಾರೆ. ಎಲ್ಲರೂ ಗಂಭೀರ ಸಮಾಲೋಚನೆಯಲ್ಲಿ ಮಗ್ನರಾಗಿದ್ದಾರೆ. ಕೆಲವೊಮ್ಮೆ ಚರ್ಚೆ ಬಿಸಿಯೇರುತ್ತದೆ. ಎಲ್ಲರೂ ಮುಹಮ್ಮದ್‌ರ(ಸ) ವಿರುದ್ಧ ಕಠಿಣ ಕ್ರಮ ಕೈಗೊಳ್ಳುವ ಬಗ್ಗೆ ಒಮ್ಮತ ಹೊಂದಿದ್ದಾರೆ. ಆದರೆ ಅದರ ಕಾರ್ಯ ವಿಧಾನದ ಬಗ್ಗೆ ಅವರಲ್ಲಿ ಭಿನ್ನಾಭಿಪ್ರಾಯವಿದೆ. ದೀರ್ಘ ಚರ್ಚೆಯ ಬಳಿಕ ಓರ್ವ ವ್ಯಕ್ತಿ ಎದ್ದು ನಿಂತು ಹೇಳುತ್ತಾನೆ: "ಸೋದರರೇ! ಈ ವ್ಯಕ್ತಿಯ ಚಟುವಟಿಕೆಗಳು ದಿನದಿಂದ ದಿನಕ್ಕೆ ಹೆಚ್ಚುತ್ತಿವೆ. ಅವನ ಅನುಯಾಯಿಗಳು ನಿರಂತರ ಹೆಚ್ಚುತ್ತಿದ್ದಾರೆ. ನಮ್ಮೆಲ್ಲ ಪ್ರಯತ್ನಗಳ ಹೊರತಾಗಿಯೂ ಅವನ ಧರ್ಮವು ಮಕ್ಕಾದಿಂದ ಹೊರಟು ದೂರ ದೂರ ತಲುಪಿದೆ. ಸುತ್ತಮುತ್ತಲಿನ ಗೋತ್ರಗಳಲ್ಲಿ ಅವನ ಪ್ರಭಾವ ಹೆಚ್ಚುತ್ತಿದೆ. ಅವನ ಧರ್ಮವನ್ನು ಜನರು ಸ್ವೀಕರಿಸ ತೊಡಗಿದ್ದಾರೆ. ಈಗಂತೂ ಅರೇಬಿಯಾದಿಂದ ಹೊರಟು ಇಥಿಯೋಪಿಯಾ ದಲ್ಲಿಯೂ ಅವರ ಪ್ರಭಾವ ಬೆಳೆಯುತ್ತಿದೆ. ಅಲ್ಲಿನ ರಾಜ ನಜ್ಜಾಶೀ ಕೂಡಾ ಅವರ ಹಿತೈಷಿಯಾಗಿದ್ದಾರೆ."

ಇದನ್ನು ಕೇಳಿ ಇನ್ನೊಬ್ಬ ವ್ಯಕ್ತಿ ಎದ್ದು:

"ಸ್ವಯಂ ನಮ್ಮ ಸ್ಥಿತಿಯೇನು? ಮಕ್ಕಾದ ಇಬ್ಬರು ಪರಾಕ್ರಮಿಗಳಾದ ಉಮರ್ ಮತ್ತು ಹಮ್‌ಝಾ ಕೂಡಾ ತಮ್ಮ ಪೂರ್ವಜರ ಧರ್ಮವನ್ನು ತೊರೆದು ಮುಸ್ಲಿಮರಾಗಿದ್ದಾರೆ. ಈ ಪ್ರಭಾವಶಾಲಿ ವ್ಯಕ್ತಿಗಳು ನಮ್ಮ ಪಾಳಯವನ್ನು ತೊರೆದು ಶತ್ರುಗಳ ಜೊತೆ ಸೇರಿರುವುದು ಇನ್ನಷ್ಟು ಚಿಂತೆಯ ವಿಷಯವಾಗಿದೆ. ಈ ಮೊದಲು ಅವರಿಗೆ ಅಲ್ಲಾಹನ ಭವನವನ್ನು ಅಪವಿತ್ರಗೊಳಿಸುವ ಧೈರ್ಯವಿರಲಿಲ್ಲ. ಆದರೆ ಈ ಇಬ್ಬರ ಪ್ರೇರಣೆಯಿಂದ ಅವರು ಧೈರ್ಯವಾಗಿ ಅಲ್ಲಾಹನ ಭವನಕ್ಕೆ ನುಗ್ಗಿ ನಮಾಝ್ ಮಾಡುತ್ತಾರೆ. ಈಗ ನಾವು ಅವರನ್ನು ತಡೆಯದಿದ್ದರೆ ನಮಗೇ ಅಲ್ಲಾಹನ ಭವನವನ್ನು ಪ್ರವೇಶಿಸುವುದು ಕಷ್ಟವಾಗಬಹುದು."

"ಹಾಗಾದರೆ ಏನು ಮಾಡೋಣ" ಎಂದು ಕೆಲವರು ಒಮ್ಮೆಲೇ ಪ್ರಶ್ನಿಸಿದರು.

"ನನ್ನ ಅಭಿಪ್ರಾಯದಲ್ಲಿ ಅಬ್ದ್ ಮನಾಫ್ ಗೋತ್ರವನ್ನು ಬಹಿಷ್ಕರಿಸಬೇಕು. ಈ ಜನರು ತಮ್ಮ ಪೂರ್ವಜರ ಧರ್ಮಕ್ಕೆ ಮರಳುವ ಅಥವಾ ಸತ್ತು ಹೋಗುವ ತನಕ ಈ ಬಹಿಷ್ಕಾರ ಮುಂದುವರಿಯಬೇಕು."

"ಬಹಳ ಒಳ್ಳೆಯದು. ನಮಗೆ ಅದರಲ್ಲಿ ಸಹಮತವಿದೆ." ಹಲವು ಸ್ವರಗಳು ಏಕ ಕಾಲದಲ್ಲಿ ಮೊಳಗಿದುವು. ಬಹಿಷ್ಕಾರದ ಪತ್ರವನ್ನು ಬರೆಯಲಾಯಿತು. ಕುರೈಶರ ಎಲ್ಲ ಸರದಾರರನ್ನು ಕರೆಸಿ ಈ ಕೆಳಗಿನ ಅಂಶಗಳನ್ನು ನಿರ್ಣಯಿಸಲಾಯಿತು:

1. ಹಾಶಿಮ್ ಮನೆತನದೊಂದಿಗೆ ಯಾರೂ ಸಂಬಂಧ ಬೆಳೆಸಬಾರದು.
2. ಅವರಿಂದ ಯಾವ ವಸ್ತುವನ್ನೂ ಖರೀದಿಸಬಾರದು.
3. ಅವರಿಗೆ ಯಾವ ವಸ್ತುವನ್ನೂ ಮಾರಾಟ ಮಾಡಬಾರದು.
4. ಅವರಿಗೆ ಯಾವುದೇ ಆಹಾರ ಪದಾರ್ಥಗಳನ್ನೂ ನೀಡಬಾರದು.
5. ಅವರೊಂದಿಗೆ ಯಾವ ಸಂಪರ್ಕವನ್ನೂ ಇರಿಸಬಾರದು.
6. ಅವರೊಂದಿಗೆ ಎಂದೂ ಸಂಧಾನ ಮಾಡಬಾರದು.
7. ಅವರೊಂದಿಗೆ ಅನುಕಂಪ ಮತ್ತು ಕರುಣೆ ಇರಿಸಬಾರದು.

ಮನ್‌ಸೂರ್ ಬಿನ್ ಇಕ್ರಿಮಃ ಒಪ್ಪಂದವನ್ನು ಬರೆದರು. ಕುರೈಶರ ಎಲ್ಲ ಸರದಾರರೂ ಅದನ್ನು ಅನುಮೋದಿಸಿದರು. ಹಾಶಿಮ್ ಮನೆತನಕ್ಕೆ ಸೇರಿದ ಅಬೂಲಹಬ್ ಕೂಡಾ ತನ್ನ ಮನೆತನದ ವಿರುದ್ಧ ಏರ್ಪಟ್ಟ ಈ ಒಪ್ಪಂದವನ್ನು ಅನುಮೋದಿಸಿದನು.

ಪ್ರವಾದಿತ್ವದ 7ನೇ ವರ್ಷ ಮುಹರ್ರಮ್ ಒಂದರಂದು (ಕ್ರಿ.ಶ. 617) ಈ ಒಪ್ಪಂದ ಬರೆಯಲ್ಪಟ್ಟು ಅಂದಿನಿಂದಲೇ ಅದು ಜಾರಿಗೆ ಬಂತು.

ಅಬೂತಾಲಿಬ್ ಕಣಿವೆಯಿಂದ ಹಸಿದ ಮಕ್ಕಳ ರೋದನ ಕೇಳಿಸುತ್ತಿದೆ. ಅದನ್ನು ಕೇಳಿ ಅಕ್ಕಪಕ್ಕದ ಕುರೈಶ್ ಸ್ತ್ರೀ-ಪುರುಷರು ಸಂತೋಷದಿಂದ ನಲಿಯುತ್ತಾರೆ.

"ಅವರಿಗೆ ಹೀಗೆಯೇ ಆಗಬೇಕು. ಅವರು ನಮ್ಮ ದೇವಿ-ದೇವತೆಗಳನ್ನು ನಿಂದಿಸುತ್ತಾರೆ. ಈಗ ಅವರಿಗೆ ತಕ್ಕ ಶಾಸ್ತಿಯಾಗುತ್ತಿದೆ."

ಇದು ಅವರ ಮನದಾಳದ ಕರೆಯಾಗಿತ್ತು. ಹಾಶಿಮ್ ಮನೆತನದ ಮಕ್ಕಳ ರೋದನ ಮುಗಿಲು ಮುಟ್ಟುತ್ತಿದ್ದಂತೆ ಕುರೈಶ್ ಅಕ್ರಮಿಗಳು, "ನೀವು ಇದೇ ರೀತಿ ಚಡಪಡಿಸಿ ಸಾಯಬೇಕು. ನಿಮ್ಮ ಗೋಳನ್ನು ಆಲಿಸುವವರು ಯಾರೂ ಇರಲಾರರು."

ಅತ್ಯಂತ ವಾತ್ಸಲ್ಯಮಯಿಯಾದ ಪ್ರವಾದಿ(ಸ) ಹಸುಗೂಸುಗಳ ಹಸಿವು-ನರಳಾಟದಿಂದ ಅತ್ಯಧಿಕ ಬೇಸತ್ತಿರುವರು.

ಯಾವುದೇ ವ್ಯಾಪಾರಿ ತಂಡ ಮಕ್ಕಾಕ್ಕೆ ಬಂದಿಳಿದರೆ ಕೂಡಲೇ ಕುರೈಶರು ಹೋಗಿ ಅವರಿಂದ ಎಲ್ಲ ಸರಕುಗಳನ್ನು ಖರೀದಿಸಿ ಬಿಡುತ್ತಿದ್ದರು. ದಿಗ್ಬಂಧನಕ್ಕೊಳಗಾದವರಿಗೆ

ಯಾವ ವಸ್ತುವೂ ಸಿಗಬಾರದೆಂಬುದೇ ಅವರ ಉದ್ದೇಶವಾಗಿತ್ತು. ಹಾಶಿಮ್ ಮನೆತನದ ಯಾವನೇ ವ್ಯಕ್ತಿ ಅವರಿಂದ ಏನಾದರೂ ಖರೀದಿಸುತ್ತಿರುವುದನ್ನು ಕಂಡರೆ ಅಬೂಲಹಬ್ ಕೂಗಿ ಹೇಳುತ್ತಿದ್ದ: "ಇವರಿಂದ ಪಾವತಿಸಲಾಗದಷ್ಟು ಅಧಿಕ ಬೆಲೆ ಹೇಳಿರಿ. ಬಳಿಕ ನಾನು ನಿಮ್ಮಿಂದ ಆ ವಸ್ತುವನ್ನು ಅದೇ ಬೆಲೆಗೆ ಖರೀದಿಸುವೆನು. ನಿಮಗೆ ನಷ್ಟವಾಗದಂತೆ ನೋಡಿಕೊಳ್ಳುವೆನು."

ಇವನು ಮಕ್ಕಾದ ಅತಿ ದೊಡ್ಡ ಬಡ್ಡಿ ಸಾಹುಕಾರ. ಏಕ ದೇವಾರಾಧನೆಯ ತಪ್ಪಿಗೆ ಶಿಕ್ಷೆಯ ರೂಪದಲ್ಲಿ ಹಸಿದು ಸಾಯಬೇಕೆಂಬ ಉದ್ದೇಶದಿಂದ ಆತ ತನ್ನ ಸಂಪತ್ತನ್ನು ಹೀಗೆ ಪೋಲು ಮಾಡುತ್ತಿದ್ದಾನೆ.

ವ್ಯಾಪಾರ-ವಹಿವಾಟು, ಭೇಟಿ-ಸಂಪರ್ಕದ ಎಲ್ಲ ದಾರಿಗಳೂ ಮುಚ್ಚಲ್ಪಟ್ಟಿವೆ. ಕೇವಲ ಹಜ್ಜ್‌ನ ವೇಳೆ ಮತ್ತು ಯುದ್ಧ ನಿಷಿದ್ಧ ತಿಂಗಳುಗಳಲ್ಲಿ ಅವರಿಗೆ ಅಲ್ಲಿಂದ ಹೊರಬರುವ ಮತ್ತು ಏನನ್ನಾದರೂ ಖರೀದಿಸುವ ಸಂದರ್ಭ ಸಿಗುತ್ತದೆ. ಆದಾಯದ ಎಲ್ಲ ಮೂಲಗಳೂ ನಿಂತು ಹೋಗಿವೆ. ಮುಹಮ್ಮದ್(ಸ) ಮತ್ತವರ ಪತ್ನಿ ಖದೀಜಾ(ರ) ತಮ್ಮೆಲ್ಲ ಸಂಪತ್ತನ್ನೂ ಅಪೇಕ್ಷಿತರ ನೆರವಿಗಾಗಿ ವಿನಿಯೋಗಿಸುತ್ತಾರೆ. ಬರಬರುತ್ತಾ ಅದು ಕೂಡಾ ಮುಗಿದು ಹೋಗುತ್ತದೆ.

ಮುಹಮ್ಮದ್(ಸ) ಎಂದಿನಂತೆ ಹಜ್ಜ್‌ನ ವೇಳೆ ಎಲ್ಲ ಗೋತ್ರಗಳ ಬಿಡಾರಗಳಿಗೆ ಹೋಗುತ್ತಿದ್ದರು. ಹಾಜಿಗಳನ್ನು ಭೇಟಿಯಾಗಿ ಅವರಿಗೆ ಇಸ್ಲಾಮ್‌ನ ಸಂದೇಶ ನೀಡುತ್ತಿದ್ದರು. ಆ ಪವಿತ್ರ ದಿನಗಳಲ್ಲಿ ಯಾರಿಗೂ ಅವರ ಮೇಲೆ ಕೈ ಎತ್ತುವ ಧೈರ್ಯ ವಿರಲಿಲ್ಲ. ಆದರೂ ಅಬೂಲಹಬ್ ಅವರ ಬೆನ್ನ ಹಿಂದೆಯೇ ಹೋಗಿ ಹೀಗೆ ಹೇಳುತ್ತಿದ್ದ:

"ಈತ ಹುಚ್ಚ. ಇವನ ಮಾತು ಕೇಳಬೇಡಿ. ಇಲ್ಲದಿದ್ದರೆ ನೀವೂ ನಾಶವಾಗಿ ಬಿಡುವಿರಿ."

## ಬಹಿಷ್ಕಾರದ ದಿನಗಳು

ರಾತ್ರಿಯ ಸಮಯ. ಮಕ್ಕಾದ ಜನರು ಮಲಗುವ ಸಿದ್ಧತೆಯಲ್ಲಿದ್ದಾರೆ. ಒಬ್ಬನು ಒಂಟೆಯ ಮೇಲೆ ಧಾನ್ಯಗಳನ್ನು ಹೇರಿಕೊಂಡು ಅಬೂತಾಲಿಬ್ ಕಣಿವೆಯ ಕಡೆಗೆ ಧಾವಿಸುತ್ತಾನೆ. ಒಂಟೆಯನ್ನು ಕಣಿವೆಯೊಳಗೆ ಅಟ್ಟಿ ತಾನು ಒಂದು ಬಂಡೆಯ ಕೆಳಗೆ ಕುಳಿತು ಬಿಡುತ್ತಾನೆ. ಇದು ಅವನ ವಾಡಿಕೆ. ಕೆಲವು ನಿರ್ದಿಷ್ಟ ರಾತ್ರಿಗಳಲ್ಲಿ ಅವನು ಕಣಿವೆಯಲ್ಲಿ ದಿಗ್ಬಂಧನಕ್ಕೀಡಾದವರಿಗೆ ಧಾನ್ಯಗಳನ್ನು ತಲುಪಿಸುತ್ತಿರುತ್ತಾನೆ. ಕಣಿವೆಯಲ್ಲಿ ಅವನ ನಿರೀಕ್ಷೆಯಲ್ಲಿದ್ದ ಕೆಲವು ಮಂದಿ ಒಂಟೆಯಿಂದ ಧಾನ್ಯದ ಮೂಟೆಗಳನ್ನು ಇಳಿಸುತ್ತಾರೆ. ತರುವಾಯ ಒಂಟೆಯನ್ನು ಹೊರಗೆ ಅಟ್ಟಿ ಬಿಡುತ್ತಾರೆ. ಆ ವ್ಯಕ್ತಿ ಒಂಟೆಯ ಲಗಾಮು ಹಿಡಿದು ನಗರದೊಳಗೆ ಪ್ರವೇಶಿಸುವಾಗ ಇಬ್ಬರು ವ್ಯಕ್ತಿಗಳು ಅವನನ್ನು ಸುತ್ತುವರಿದು ಬಂಧಿಸುತ್ತಾರೆ. ನೇರವಾಗಿ ಅಬೂಸುಫ್‌ಯಾನ್‌ನ ಬಳಿಗೆ ಅವನನ್ನು ಕೊಂಡು ಹೋಗುತ್ತಾರೆ.

ಆದರೆ ಅಬೂಸುಫ್‌ಯಾನ್ "ಹೋಗಲಿ ಬಿಡಿ. ಅವನೊಬ್ಬನಾದರೂ ಬಂಧುತ್ವದ ಗೌರವವನ್ನು ಕಾಪಾಡುತ್ತಿದ್ದಾನಲ್ಲ" ಎನ್ನುತ್ತಾ ಆತನನ್ನು ಬಿಟ್ಟು ಬಿಡಲು ಆಜ್ಞಾಪಿಸುತ್ತಾನೆ. ಆ ವ್ಯಕ್ತಿ ಹಿಶಾಮ್ ಬಿನ್ ಅಮ್ರ್ ಅಲ್ ಆಮಿರಿ ಆಗಿದ್ದರು.

ಹಕೀಮ್ ಬಿನ್ ಹಿಝಾಮ್ ತನ್ನ ಗುಲಾಮನ ಜೊತೆ ಅಬೂತಾಲಿಬ್ ಕಣಿವೆಯ ಕಡೆಗೆ ಹೋಗುತ್ತಿದ್ದಾನೆ. ಮಧ್ಯಾಹ್ನದ ಸಮಯ. ಸಾಮಾನ್ಯವಾಗಿ ಆ ವೇಳೆಗೆ ಆ ದಾರಿ ನಿರ್ಜನವಾಗಿರುತ್ತದೆ. ಗುಲಾಮನು ಧಾನ್ಯದ ಮೂಟೆಯೊಂದನ್ನು ಹೊತ್ತುಕೊಂಡಿದ್ದಾನೆ. ಅಬೂಜಹಲ್ ಅವರನ್ನು ಕಂಡು ತಡೆದು ನಿಲ್ಲಿಸುತ್ತಾನೆ:

"ಕುರೈಶರ ಒಮ್ಮತದ ತೀರ್ಮಾನದ ವಿರುದ್ಧ ನೀವು ಹಾಶಿಮ್ ಮನೆತನದವರಿಗೆ ಧಾನ್ಯವನ್ನು ಒದಗಿಸುತ್ತಿರುವಿರಾ? ನೀವು ಇಡೀ ಜನಾಂಗವನ್ನೇ ವಂಚಿಸುತ್ತಿರುವಿರಿ. ನಿಮ್ಮನ್ನು ಇಡೀ ಮಕ್ಕಾ ಪಟ್ಟಣದಲ್ಲಿ ನಿಂದನೆಗೆ ಗುರಿಪಡಿಸದೆ ನಾನು ಬಿಡಲಾರೆ" ಎನ್ನುತ್ತಾನೆ.

ಹಕೀಮ್ ಬಿನ್ ಹಿಝಾಮ್: "ನಾನು ನನ್ನ ಅತ್ತೆ ಖದೀಜಾರಿಗೆ ಧಾನ್ಯ ಒಯ್ಯುತ್ತಿದ್ದೇನೆ. ನನ್ನ ಬಂಧುಗಳ ಸೇವೆಯಿಂದ ಯಾರೂ ನನ್ನನ್ನು ತಡೆಯಲಾರರು."

ಅಷ್ಟರಲ್ಲಿ ಖದೀಜಾರ ಇನ್ನೋರ್ವ ಸಂಬಂಧಿಕ ಅಬುಲ್ ಬಖ್ತರಿ ಬಿನ್ ಹಿಶಾಮ್ ಅಲ್ಲಿಗೆ ತಲುಪುತ್ತಾನೆ. ಆತ ಹಕೀಮ್ ಬಿನ್ ಹಿಝಾಮ್‌ನ ನೆರವಿಗೆ ಧಾವಿಸುತ್ತಾನೆ. ಅಬೂಜಹಲ್ ಮತ್ತು ಅಬುಲ್ ಬಖ್ತರಿಯ ಮಧ್ಯೆ ಮಾತಿನ ಚಕಮಕಿ ಹೊಡೆದಾಟದಲ್ಲಿ ಪರ್ಯವಸಾನಗೊಳ್ಳುತ್ತದೆ. ಅವರು ಪರಸ್ಪರ ಹೊಡೆದಾಡುತ್ತಿರುವುದನ್ನು ಹಮ್‌ಝಾ(ರ) ದೂರದಿಂದ ನೋಡುತ್ತಿರುತ್ತಾರೆ. ಹಮ್‌ಝಾರನ್ನು(ರ) ಕಂಡೊಡನೆ ಇಬ್ಬರೂ ತಮ್ಮ ಜಗಳವನ್ನು ಕೊನೆಗೊಳಿಸುತ್ತಾರೆ.

"ಅಯ್ಯೋ! ಆ ಮುಸ್ಲಿಮನು ನಮ್ಮನ್ನು ನೋಡಿ ಬಿಟ್ಟನು. ಹಾಶಿಮ್ ಮನೆತನದವರಿಗೆ ನಮ್ಮ ಜಗಳವನ್ನು ಕಂಡು ನಗುವ ಸಂದರ್ಭ ಒದಗಿತು" ಎನ್ನುತ್ತಾ ಅಬುಲ್ ಬಖ್ತರಿ ನಡೆದು ಬಿಡುತ್ತಾನೆ. ಅಬೂಜಹಲನೂ ಅವನ ಜೊತೆಗೇ ಹೊರಡುತ್ತಾನೆ.

ಹಾಶಿಮ್ ಮನೆತನ ಅಬೂತಾಲಿಬ್ ಕಣಿವೆಯಲ್ಲಿ ಬಂಧನಕ್ಕೊಳಗಾಗಿ ಮೂರು ವರ್ಷಗಳು ಸಂದಿವೆ. ಅವರು ಉಳಿದೆಲ್ಲ ಅರಬರಿಂದ ಕಡಿದು ಹೋಗಿರುವರು. ಎಲ್ಲ ರೀತಿಯ ಕಷ್ಟ-ನಷ್ಟಗಳನ್ನು ಸಹಿಸಿ ಸೋತು ಹೋಗಿದ್ದಾರೆ. ಆದರೂ ಅವರು ಮುಹಮ್ಮದ್‌ರನ್ನು(ಸ) ತೊರೆಯಲು ಸಿದ್ಧರಿಲ್ಲ. ಅವರು ತಮ್ಮೆಲ್ಲ ಆಶೆ-ಆಕಾಂಕ್ಷೆಗಳನ್ನು ಬಲಿ ನೀಡಿದರೂ ಮುಹಮ್ಮದ್‌ರ(ಸ) ರಕ್ತ ಹರಿಸಲು ಕುರೈಶರಿಗೆ ಅವಕಾಶ ಕೊಡಲು ಸಿದ್ಧರಾಗಲಿಲ್ಲ. ಖದೀಜಾ(ರ) ತಮ್ಮೆಲ್ಲ ಸಂಪತ್ತನ್ನೂ ಹಾಶಿಮ್ ಮನೆತನದವರಿಗೆ ಖರ್ಚು ಮಾಡಿ ಆಗಿದೆ. ಅಬೂತಾಲಿಬರ ಎಲ್ಲ ಉಳಿತಾಯವೂ ಕರಗಿ ಹೋಗಿದೆ. ಅತ್ಯಂತ ದಾರಿದ್ರ್ಯದಲ್ಲಿ ದಿನ ಕಳೆಯುತ್ತಿದೆ. ಆದರೆ ಈಗ ಆ ದಿನಗಳು ಕೊನೆಗೊಳ್ಳುವ ಸಮಯ

ಬಂದಿದೆ. ಬಹಿಷ್ಕಾರದ ಕುರಿತು ಬರೆದು ಕಅಬಾದ ಗೋಡೆಯ ಮೇಲೆ ತೂಗು ಹಾಕಲಾಗಿದ್ದ ದಸ್ತಾವೇಜನ್ನು ಗೆದ್ದಲು ತಿಂದಿದೆಯೆಂದೂ ಅಲ್ಲಾಹನ ಹೆಸರಿನ ಹೊರತು ಅದರಲ್ಲಿ ಏನೂ ಉಳಿದಿಲ್ಲವೆಂದೂ ಅಲ್ಲಾಹನು ಮುಹಮ್ಮದ್‌ರಿಗೆ(ಸ) ತಿಳಿಸುತ್ತಾನೆ. ಆ ದಸ್ತಾವೇಜು ಕೂಡಾ ಅಳಿದು ಹೋಗಿರುವಾಗ ಇನ್ನು ಬಹಿಷ್ಕಾರ ಉಳಿಯುವುದಾದರೂ ಹೇಗೆ?

ಮುಹಮ್ಮದ್(ಸ) ಈ ವಿಷಯವನ್ನು ಅಬೂತಾಲಿಬರಿಗೆ ತಿಳಿಸಿದಾಗ ಅವರು ಅಚ್ಚರಿ ವ್ಯಕ್ತಪಡಿಸಿದರು. ಮುಹಮ್ಮದ್‌ರ(ಸ) ಬಾಯಿಯಿಂದ ಹೊರಟ ಯಾವ ಮಾತೂ ಎಂದೂ ಸುಳ್ಳಾಗುವುದಿಲ್ಲವೆಂಬುದು ಅವರಿಗೆ ತಿಳಿದಿತ್ತು. ಆದ್ದರಿಂದ ಅವರು ತಮ್ಮ ಕೆಲವು ಸಂಬಂಧಿಕರ ಜೊತೆ ಕಅಬಾ ಭವನಕ್ಕೆ ಹೊರಟರು.

ಕುರೈಶರ ಗಣ್ಯ ನಾಯಕರು ಅಲ್ಲಿ ಉಪಸ್ಥಿತರಿದ್ದರು. ಅಬೂತಾಲಿಬ್ ಮತ್ತು ಸಂಗಡಿಗರು ಕಅಬಾ ಭವನಕ್ಕೆ ಅನಿರೀಕ್ಷಿತವಾಗಿ ಬಂದುದನ್ನು ಕಂಡು ಅವರು ಆಶ್ಚರ್ಯಚಕಿತರಾದರು. ಅಲ್ಲಿ ತಲುಪುತ್ತಲೇ ಕುರೈಶ್ ಸರದಾರರನ್ನುದ್ದೇಶಿಸಿ ಅಬೂತಾಲಿಬ್ ಹೀಗೆ ಹೇಳಿದರು:

"ನಾವು ಒಂದು ವಿಷಯ ತೆಗೆದುಕೊಂಡು ಬಂದಿದ್ದೇವೆ. ಅದಕ್ಕೆ ನಿಮ್ಮ ಬಳಿ ಸೂಕ್ತವೆನಿಸುವಂತಹ ಉತ್ತರ ಹೇಳಿ."

ಅವರನ್ನು ಸ್ವಾಗತಿಸುತ್ತಾ ಕುರೈಶ್ ಸರದಾರರು:

"ನಮ್ಮಲ್ಲಿ ನಿಮ್ಮನ್ನು ಸಂತುಷ್ಟಗೊಳಿಸುವಂತಹ ವಿಷಯವಿದೆ. ನಿಮಗೇನು ಬೇಕು ಹೇಳಿ?"

ಅಬೂತಾಲಿಬ್: "ನನಗೆ ನನ್ನ ಸೋದರ ಪುತ್ರ ಒಂದು ವಿಷಯ ತಿಳಿಸಿರುವನು. ಅಲ್ಲಾಹನಾಣೆ ಅವನೆಂದೂ ಸುಳ್ಳು ಹೇಳಿದವನಲ್ಲ. ಈಗ ನೀವು ಆ ದಸ್ತಾವೇಜನ್ನು ತರಿಸಿ ನೋಡಿ. ಅದಕ್ಕೆ ಗೆದ್ದಲು ಹಿಡಿದಿದ್ದು ಕೇವಲ ಅಲ್ಲಾಹನ ಹೆಸರು ಉಳಿದಿದೆ. ನನ್ನ ಸೋದರ ಪುತ್ರನ ಮಾತು ಸರಿಯಾಗಿದ್ದರೆ ನಮ್ಮ ಬಹಿಷ್ಕಾರವನ್ನು ಕೊನೆಗೊಳಿಸಿ, ಆ ದಸ್ತಾವೇಜಿನಲ್ಲಿ ಬರೆದುದನ್ನು ರದ್ದು ಪಡಿಸಿ. ಅವನೊಂದು ವೇಳೆ ಸುಳ್ಳು ಹೇಳಿದ್ದರೆ ನಾನು ಅವನನ್ನು ನಿಮ್ಮ ವಶಕ್ಕೊಪ್ಪಿಸುವೆನು. ಅವನೊಂದಿಗೆ ನಿಮಗೆ ಇಷ್ಟ ಬಂದಂತೆ ವ್ಯವಹರಿಸಬಹುದು."

ಕುರೈಶ್ ಸರದಾರರಿಗೆ ಎಲ್ಲಿಲ್ಲದ ಖುಷಿಯಾಯಿತು:

"ಇದು ಅಪ್ಪಟ ಸುಳ್ಳು. ಕಅಬಾ ಭವನದೊಳಗೆ ಅದಕ್ಕೆ ಗೆದ್ದಲು ಹಿಡಿದದ್ದು ಅಬೂತಾಲಿಬ್ ಕಣಿವೆಯಲ್ಲಿರುವ ಮುಹಮ್ಮದರಿಗೆ ತಿಳಿಯುವುದಾದರೂ ಹೇಗೆ? ಅಲ್ಲಾಹನಾಣೆ! ನೀವು ಅತ್ಯಂತ ನ್ಯಾಯಪೂರ್ಣ ಮಾತನ್ನೇ ಆಡಿರುವಿರಿ."

ತರುವಾಯ ಕಅಬಾದಿಂದ ದಸ್ತಾವೇಜನ್ನು ತರಿಸಿ ನೋಡಿದಾಗ ಕುರೈಶ್ ಸರದಾರರು ದಿಗ್ಭ್ರಾಂತರಾದರು. "ಬಿಸ್ಮಿಕ ಅಲ್ಲಾಹುಮ್ಮ" (ಓ ಅಲ್ಲಾಹ್ ನಿನ್ನ ನಾಮದಿಂದ) ಎಂಬ ಪದಗಳು ಮಾತ್ರ ಉಳಿದಿದ್ದುವು. ಉಳಿದುದೆಲ್ಲವನ್ನೂ ಗೆದ್ದಲು ತಿಂದಿತ್ತು.

ಅಬೂತಾಲಿಬ್ ಏರಿದ ಧ್ವನಿಯಲ್ಲಿ ಹೇಳಿದರು: "ಅನ್ಯಾಯ ಸಂಬಂಧ ಬಹಿಷ್ಕಾರ ಮತ್ತು ದುರ್ವ್ಯವಹಾರ ಮಾಡಿದವರು ನೀವೇ ಎಂಬುದು ಈಗಲಾದರೂ ನಿಮಗೆ ಮನವರಿಕೆಯಾಗಿರಬಹುದಲ್ಲವೇ. ಇನ್ನಾದರೂ ಈ ಅನ್ಯಾಯದ ಬಹಿಷ್ಕಾರವನ್ನು ಕೊನೆಗೊಳಿಸಿ."

ಕುರೈಶರ ಬಳಿ ಈ ಮಾತಿಗೆ ಯಾವ ಉತ್ತರವೂ ಇರಲಿಲ್ಲ. ಅವರು ಮೂಕರಾಗಿ ನಿಂತಿದ್ದರು. ಅಬೂತಾಲಿಬ್ ತಮ್ಮ ಸಂಗಾತಿಗಳೊಂದಿಗೆ ಕಅಬಾದ ಪರದೆ ಸರಿಸಿ ಕಅಬಾದ ಗೋಡೆಗೆ ತಾಗಿ ನಿಂತು ಹೀಗೆ ಪ್ರಾರ್ಥಿಸಿದರು:

"ಓ ಅಲ್ಲಾಹ್! ಇವರೆದುರು ನಮಗೆ ನೆರವಾಗು. ಇವರು ನಮ್ಮ ಮೇಲೆ ಅನ್ಯಾಯವೆಸಗಿದರು. ನಮ್ಮೊಂದಿಗಿನ ಸಂಬಂಧವನ್ನು ಕಡಿದು ಹಾಕಿದರು. ನಮ್ಮ ಬಗ್ಗೆ ಅವರಿಗೆ ನಿಷಿದ್ಧವಾಗಿದ್ದುದೆಲ್ಲವನ್ನೂ ಅವರು ಧರ್ಮಬದ್ಧ ಮಾಡಿಕೊಂಡಿದ್ದರು."

ಆ ಬಳಿಕ ಪೂರ್ಣ ಶಾಂತಚಿತ್ತರೂ ಸಂತೃಪ್ತರೂ ಆಗಿ ತಮ್ಮ ಕಣಿವೆಯತ್ತ ಮರಳಿದರು.

ಈ ಘಟನೆಯಿಂದ ಕೆಲವರ ಮೇಲೆ ಬಹಳ ಗಾಢ ಪ್ರಭಾವವಾಯಿತು. ಅವರು ಇಸ್ಲಾಮ್ ಧರ್ಮ ಸ್ವೀಕರಿಸದಿದ್ದರೂ ಬಹಿಷ್ಕಾರಕ್ಕೆ ಒಳಗಾಗಿರುವವರ ಕುರಿತು ಅವರ ಮನದಲ್ಲಿ ಅನುಕಂಪ ಮೂಡಿತು. ಆ ಪೈಕಿ ಹಿಶಾಮ್ ಬಿನ್ ಅಮ್ರ್ ಆಮಿರಿ, ಝುಬೈರ್ ಬಿನ್ ಉಮಯ್ಯ, ಮುತ್‌ಯಿಮ್ ಬಿನ್ ಅದೀ, ಝಮ್‌ಆ ಬಿನ್ ಅಸ್ವದ್ ಎಂಬವರು ಬಹಿಷ್ಕಾರದ ವಿರುದ್ಧ ಪರಸ್ಪರ ಸಮಾಲೋಚನೆ ನಡೆಸಿ ಅದನ್ನು ಕೊನೆಗೊಳಿಸುವ ಉಪಾಯ ಹೂಡಿದರು.

ಕಅಬಾ ಭವನದಲ್ಲಿ ಕುರೈಶ್ ಸರದಾರರು ಸೇರಿರುವಾಗ ಹಿಶಾಮ್ ಅವರನ್ನುದ್ದೇಶಿಸಿ ಹೀಗೆ ಹೇಳಿದ:

"ಮಕ್ಕಾವಾಸಿಗಳೇ! ನಾವು ತಿನ್ನುಣ್ಣುತ್ತಿರುವಾಗ ಮತ್ತು ಬಟ್ಟೆಬರೆಗಳನ್ನು ಧರಿಸುತ್ತಿರುವಾಗ ಹಾಶಿಮ್ ಮನೆತನದವರು ಹಸಿವಿನಿಂದ ನರಳುತ್ತಿರುವುದು ನಮಗೆ ಶೋಭಿಸುವುದೇ? ಅವರಿಗೂ ನಮ್ಮಂತೆ, ಕೊಳ್ಳುವ, ಮಾರುವ ಮತ್ತು ತಿರುಗಾಡುವ ಸ್ವಾತಂತ್ರ್ಯ ಬೇಡವೆ? ಅಲ್ಲಾಹನಾಣೆ! ನಾನು ನಮ್ಮ ಸಂಬಂಧವನ್ನು ಅನ್ಯಾಯವಾಗಿ ಕಡಿದಿರುವ ಆ ದಸ್ತಾವೇಜನ್ನು ಹರಿದು ಹಾಕುವ ತನಕ ಸುಮ್ಮನಿರಲಾರೆ."

ಇದನ್ನು ಕೇಳಿ ಅಬೂಜಹಲ್ ಕ್ರುದ್ಧನಾಗಿ "ನೀನು ಸುಳ್ಳುಗಾರ. ನಿನ್ನಿಂದ ಅದನ್ನು ಹರಿದು ಹಾಕಲು ಖಂಡಿತ ಸಾಧ್ಯವಿಲ್ಲ" ಎನ್ನುತ್ತಾನೆ.

ಆಗ ಸಭೆಯಲ್ಲಿ ಕುಳಿತಿದ್ದ ಹಿಶಾಮ್‌ನ ನಾಲ್ಕು ಮಂದಿ ಸಂಗಾತಿಗಳ ಪೈಕಿ ಒಬ್ಬನಾದ ಝಮ್‌ಆ ಬಿನ್ ಅಸ್ವದ್ ಎದ್ದು ನಿಂತು: "ಅಲ್ಲಾಹನಾಣೆ! ಅತಿ ದೊಡ್ಡ ಸುಳ್ಳುಗಾರ

ನೀನು. ಆ ಒಪ್ಪಂದವನ್ನು ಹೇಗೆ ಬರೆಯಲಾಗಿದೆ ಎಂಬುದೆಲ್ಲಾ ನಮಗೆ ತಿಳಿದಿದೆ. ನಾವು ಅದನ್ನು ಖಂಡಿತ ಮೆಚ್ಚುವುದಿಲ್ಲ."

ಅಬುಲ್ ಬಖ್ತರಿ ಅವರೊಂದಿಗೆ ಧ್ವನಿಗೂಡಿಸಿದನು: "ಝುಮ್ಅ ಹೇಳುತ್ತಿರುವುದು ಸತ್ಯ. ನಾವು ಈ ಒಪ್ಪಂದವನ್ನು ಮೆಚ್ಚುವುದಿಲ್ಲ. ಅದಕ್ಕೆ ನಾವು ಬದ್ಧರೂ ಅಲ್ಲ."

ಮುತ್ಇಮ್ ಎದ್ದು ಈ ಮೂವರನ್ನು ಬಲವಾಗಿ ಸಮರ್ಥಿಸುತ್ತಾ: "ನೀವು ಹೇಳುತ್ತಿರುವುದು ನಿಜ. ಈ ಒಪ್ಪಂದಕ್ಕೆ ಈಗ ಯಾವ ಬೆಲೆಯೂ ಇಲ್ಲ."

ಅನೇಕ ಮಂದಿ ಒಪ್ಪಂದಕ್ಕೆ ವಿರುದ್ಧವಿರುವುದನ್ನು ಕಂಡು ಅಬೂಜಹಲ್ ಸುಮ್ಮನಾದ.

ಒಂದು ದಿನ ಮುತ್ಇಮ್ ಬಿನ್ ಅದಿ, ಅದಿ ಬಿನ್ ಕೈಸ್, ಝುಮ್ಅ ಬಿನ್ ಅಸ್ವದ್, ಅಬುಲ್ ಬಖ್ತರಿ ಮತ್ತು ಝುಬೈರ್ ಬಿನ್ ಉಮಯ್ಯ ಶಸ್ತ್ರಧಾರಿಗಳಾಗಿ ಅಬೂ ತಾಲಿಬ್ ಕಣಿವೆಗೆ ಹೋಗಿ ಅವರೆಲ್ಲರನ್ನೂ ತಮ್ಮ ತಮ್ಮ ಮನೆಗಳಿಗೆ ಹೋಗುವಂತೆ ವಿನಂತಿಸಿದರು. ಅವರು ಶಸ್ತ್ರಧಾರಿಗಳಾಗಿದ್ದುದರಿಂದ ಅವರನ್ನು ತಡೆಯುವ ಸಾಮರ್ಥ್ಯ ಯಾರಿಗೂ ಇರಲಿಲ್ಲ. ಹೀಗೆ ಈ ಬಹಿಷ್ಕಾರವು ಪ್ರವಾದಿತ್ವದ 10ನೇ ವರ್ಷ ಕೊನೆಗೊಂಡಿತು.

## ಅಬೂತಾಲಿಬರ ಅಂತಿಮ ಕ್ಷಣಗಳು

ಕುರೈಶರ ಸರದಾರರು ಮತ್ತು ಪ್ರಭಾವೀ ವ್ಯಕ್ತಿಗಳು ಇಂದು ಮತ್ತೊಮ್ಮೆ ಕಅಬಾದ ಬಳಿ ದಾರುನ್ನದ್ವಾದಲ್ಲಿ ಸಭೆ ಸೇರಿರುವರು. ಅತ್ಯಂತ ಗಂಭೀರವಾದ ಚರ್ಚೆ ನಡೆಯುತ್ತಿದೆ. ಅವರ ಮುಖಗಳಿಂದ ಕಳವಳ ವ್ಯಕ್ತವಾಗುತ್ತಿದೆ. ಒಮ್ಮೊಮ್ಮೆ ಅವರು ಮೌನವಾಗಿ ಪರಸ್ಪರರ ಮುಖ ನೋಡುತ್ತಿರುತ್ತಾರೆ. ಎಷ್ಟು ಹೊತ್ತಾದರೂ ಅವರಿಗೆ ಯಾವುದೇ ಇತ್ಯರ್ಥಕ್ಕೆ ತಲುಪಲಾಗಲಿಲ್ಲ. ಕೊನೆಗೆ ಒಬ್ಬನು ಎದ್ದು ಅತ್ಯಂತ ಆವೇಶಭರಿತನಾಗಿ ಹೇಳುತ್ತಾನೆ:

"ಅಬೂತಾಲಿಬರ ಕೊನೆಯ ಘಳಿಗೆ ಸಮೀಪಿಸಿದೆ. ಈಗಲಾದರೂ ನೀವು ಅವರಲ್ಲಿ ಮುಹಮ್ಮದ್‌ರ(ಸ) ಕುರಿತು ನಿರ್ಣಾಯಕ ಮಾತುಕತೆ ಮಾಡದಿದ್ದರೆ ನಮ್ಮ ಎಲ್ಲ ಪ್ರಯತ್ನಗಳೂ ನಿಷ್ಫಲಗೊಳ್ಳುವುವು. ನನ್ನ ಅಭಿಪ್ರಾಯದಂತೆ ನಾವು ಇಂದೇ ಹೋಗಿ ಅವರೊಂದಿಗೆ ಮಾತಾಡಬೇಕು. ಅವರು ನಮ್ಮ ಮತ್ತು ಅವರ ಭ್ರಾತೃಜನ ಮಧ್ಯೆ ಇರುವ ವಿವಾದವನ್ನು ಇತ್ಯರ್ಥಗೊಳಿಸಬಹುದು. ಈ ಸಮಸ್ಯೆ ಹೀಗೇ ನೆನೆಗುದಿಗೆ ಬಿದ್ದಿರುವಾಗ ಅವರು ನಿಧನ ಹೊಂದಿದರೆ ಆ ಬಳಿಕ ನಾವು ಮುಹಮ್ಮದ್‌ರ(ಸ) ಮೇಲೆ ಯಾವ ಕ್ರಮವನ್ನೂ ಕೈಗೊಳ್ಳುವಂತಿಲ್ಲ. ಹಾಗೆ ಮಾಡಿದರೆ 'ಅಬೂತಾಲಿಬ್ ಇರುವ ತನಕ ಏನೂ ಮಾಡದೆ ಅವರು ತೀರಿಕೊಂಡ ಕೂಡಲೇ ಅವರ ಸೋದರ ಪುತ್ರನ ಮೇಲೆ ಕೈ ಮಾಡಿದರು' ಎಂದು ಅರಬರು ನಮ್ಮನ್ನು ಅಣಕಿಸುವರು. ಅನಂತರ ನಾವು ಇಂತಹ ಎಲ್ಲ ರೀತಿಯ ವ್ಯಂಗ್ಯ-ಅಣಕಗಳನ್ನೂ ಸಹಿಸಬೇಕಾದೀತು. ನಿಮಗೆ ಈ ವಿಷಯದ ಗಂಭೀರತೆಯ ಅರಿವಿದ್ದರೆ

ಇಂದೇ ಹೋಗಿ ಅಬೂತಾಲಿಬರಲ್ಲಿ ಮಾತಾಡುವುದು ಒಳ್ಳೆಯದು."

ಸಭಿಕರು ಎಚ್ಚರಗೊಂಡು ಒಕ್ಕೊರಳಿನಿಂದ ಹೀಗೆ ಹೇಳಿದರು: "ನಮಗೆ ಈ ಅಭಿಪ್ರಾಯದೊಂದಿಗೆ ಪೂರ್ಣ ಸಹಮತವಿದೆ. ಈ ದಿನವೇ ಇದು ಕಾರ್ಯಗತ ವಾಗಬೇಕು."

ಇಪ್ಪತ್ತೈದು ಜನರ ತಂಡವೊಂದು ಮುಹಮ್ಮದ್‌ರ(ಸ) ಬಗ್ಗೆ ಮಾತುಕತೆ ನಡೆಸಲಿಕ್ಕಾಗಿ ಅಬೂತಾಲಿಬರ ಮನೆಗೆ ಹೊರಟಿತು. ಅಬೂಜಹಲ್, ಅಬೂಸುಫ್ಯಾನ್, ಉಮಯ್ಯ ಬಿನ್ ಖಲಫ್, ಆಸ್ ಬಿನ್ ವಾಯಿಲ್, ಅಸ್ವದ್ ಬಿನ್ ಅಬ್ದುಲ್ ಮುತ್ತಲಿಬ್, ಉಕ್‌ಬಾ ಬಿನ್ ಅಬೂ ಮುಐತ್, ಉತ್ಬಾ ಮತ್ತು ಶೀಬಾ ಇದರಲ್ಲಿ ಸೇರಿದ್ದರು.

ಅಬೂತಾಲಿಬ್ ರೋಗಗ್ರಸ್ತರಾಗಿ ಹಾಸಿಗೆ ಹಿಡಿದಿದ್ದರು. ಯಾವ ಮದ್ದೂ ಫಲಿಸುತ್ತಿರಲಿಲ್ಲ. ಮುಹಮ್ಮದ್‌ರ(ಸ) ಪ್ರೀತಿಯ ದೊಡ್ಡಪ್ಪ ಜೀವನದ ಅಂತಿಮ ಕ್ಷಣಗಳಲ್ಲಿ ಜೀವನ್ಮರಣ ಹೋರಾಟದಲ್ಲಿ ನಿರತರಾಗಿದ್ದರು. ಆದ್ದರಿಂದಲೇ ಮುಹಮ್ಮದ್(ಸ) ಬಹಳ ಖಿನ್ನರಾಗಿದ್ದರು. ಹೆಚ್ಚಿನ ವೇಳೆಯನ್ನು ಅವರ ಉಪಚಾರದಲ್ಲಿ ಮತ್ತು ಅವರಿಗಾಗಿ ಪ್ರಾರ್ಥಿಸುವುದರಲ್ಲಿ ಕಳೆಯುತ್ತಿದ್ದರು.

ಅಬೂತಾಲಿಬರ ದೇಹ ಸ್ಥಿತಿಯು ದಿನದಿಂದ ದಿನಕ್ಕೆ ಕೆಡುತ್ತಿದೆ. ಕುರೈಶ್ ಸರದಾರರ ತಂಡವು ಅವರನ್ನು ಕಾಣಲು ಬಂದಿದೆ. ಅಬೂತಾಲಿಬ್ ಅವರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ಕುರೈಶ್ ಸರದಾರರೇ! ಗೌರವಾದರಗಳಲ್ಲಿ ನಿಮಗಿಂತ ಮಿಗಿಲಾದ ವರು ಅರಬರಲ್ಲಿ ಯಾರೂ ಇಲ್ಲ. ನೀವು ಬಹಳ ಪ್ರತಾಪಶಾಲಿಗಳು. ಕಅಬಾ ಭವನದ ಧರ್ಮದರ್ಶಿಗಳು. ಇಬ್ರಾಹೀಮ್‌ರ(ಅ) ಸಂತತಿಗಳು. ವಂಶ ಪಾರಂಪರ್ಯದಲ್ಲಿ ನಿಮಗೆ ಸರಿಸಾಟಿಯಾಗಬಲ್ಲವರು ಯಾರೂ ಇಲ್ಲ. ನಾನು ನಿಮಗೆ ಅಂತಿಮ ಉಪದೇಶ ಮಾಡುತ್ತಿದ್ದೇನೆ. ಕಅಬಾ ಭವನದ ಗೌರವವನ್ನು ರಕ್ಷಿಸಬೇಕು. ಅದರಲ್ಲೇ ನಿಮ್ಮ ಪ್ರಭುವಿನ ಸಂಪ್ರೀತಿ ಅಡಗಿದೆ. ಬಂಧುತ್ವವನ್ನು ಕಾಪಾಡಬೇಕು. ಪರಸ್ಪರ ಅತಿಕ್ರಮ ಎಸಗಬಾರದು. ಇತರರ ಹಕ್ಕುಚ್ಯುತಿ ಮಾಡಬಾರದು. ಆಮಂತ್ರಿಸುವವರ ಆಮಂತ್ರಣವನ್ನು ಸ್ವೀಕರಿಸಬೇಕು. ಯಾಚಕರ ಬೇಡಿಕೆಗಳನ್ನು ಪೂರೈಸಬೇಕು. ಸತ್ಯ ಮತ್ತು ಪ್ರಾಮಾಣಿಕತೆಯನ್ನು ಪಾಲಿಸಬೇಕು."

ಆ ಬಳಿಕ ಸ್ವಲ್ಪ ಹೊತ್ತು ಮೌನವಾಗಿದ್ದು ಮತ್ತೆ ಹೀಗೆ ಹೇಳುತ್ತಾರೆ:

"ಮುಹಮ್ಮದ್‌ರ(ಸ) ಕುರಿತು ನಾನು ನಿಮಗೆ ಉಪದೇಶಿಸುವುದೇನೆಂದರೆ ಅವನೊಂದಿಗೆ ಉತ್ತಮ ರೀತಿಯಲ್ಲಿ ವ್ಯವಹರಿಸಬೇಕು. ಏಕೆಂದರೆ ಆತನು ಕುರೈಶರಲ್ಲಿ ಅತ್ಯಂತ ಪ್ರಾಮಾಣಿಕ ಮತ್ತು ಸಮಸ್ತ ಅರಬರಲ್ಲಿ ಅತ್ಯಂತ ಸತ್ಯಸಂಧನಾಗಿದ್ದಾನೆ. ನಾನು ಈ ತನಕ ನಿಮ್ಮ ಮುಂದೆ ವಿವರಿಸಿರುವ ಎಲ್ಲ ಗುಣಗಳೂ ಅವನಲ್ಲಿವೆ. ಅವನು ತಂದಿರುವ ಸಂದೇಶವನ್ನು ಮನಸ್ಸು ಅಂಗೀಕರಿಸುತ್ತದೆ. ಆದರೆ ಜನರ ಶತ್ರುತ್ವದ ಭಯದಿಂದ ಮಾತ್ರ ನಾಲಗೆಯು ಅದನ್ನು ನಿರಾಕರಿಸುತ್ತದೆ. ಆದರೆ ಅಲ್ಲಾಹನಾಣೆ! ಅರೇಬಿಯಾದ ದೀನ

ದಲಿತರು ಹಾಗೂ ಅಕ್ಕ ಪಕ್ಕದ ಜನರು ಮತ್ತು ದುರ್ಬಲ ವರ್ಗದವರು ಮುಂದೆ ಬಂದು ಅವನ ಸಂದೇಶವನ್ನು ಸ್ವೀಕರಿಸುವುದನ್ನು ನನ್ನ ಕಣ್ಣುಗಳಿಂದ ನೋಡುತ್ತಿರುವಂತೆ ನನಗೆ ಭಾಸವಾಗುತ್ತಿದೆ. ಅವರು ಅವನ ವಚನವನ್ನು ಅಂಗೀಕರಿಸುವರು. ಅವನ ಕಾರ್ಯದಲ್ಲಿ ತಮ್ಮನ್ನು ತೊಡಗಿಸುವರು ಮತ್ತು ಆತನು ಅವರನ್ನು ಸೇರಿಸಿಕೊಂಡು ಅಪಾಯಗಳ ಬಯಲಿಗೆ ಧುಮುಕುವನು. ಕುರೈಶ್ ಸರದಾರರು ಮತ್ತು ಹಿರಿಯರು ಬಾಲಂಗೋಚಿಗಳಾಗಿ ಬಿಡುವರು."

ಅನಂತರ ಅವರು ತಮ್ಮ ಮಕ್ಕಳನ್ನುದ್ದೇಶಿಸಿ ಹೀಗೆ ಹೇಳುತ್ತಾರೆ:

"ನೀವು ಮುಹಮ್ಮದ್‌ರ(ಸ) ಮಾತು ಕೇಳುತ್ತಿರುವ ಮತ್ತು ಅವನ ವಚನವನ್ನು ಹಿಂಬಾಲಿಸುತ್ತಿರುವ ತನಕ ಕ್ಷೇಮವಾಗಿರುವಿರಿ. ಆದ್ದರಿಂದ ಅವನನ್ನು ಹಿಂಬಾಲಿಸಿರಿ. ಅವನಿಗೆ ನೆರವಾಗಿರಿ. ನೀವು ಸನ್ಮಾರ್ಗದಲ್ಲಿರುವಿರಿ."

ಮುಹಮ್ಮದ್‌ರ(ಸ) ಸ್ಮೃತಿ ಪಟಲದಲ್ಲಿ ದೊಡ್ಡಪ್ಪನ ವಾತ್ಸಲ್ಯಮಯ ವ್ಯವಹಾರದ ಪುಟಗಳು ಒಂದೊಂದಾಗಿ ಮೂಡತೊಡಗಿದವು. ಇಂದು ಅವರನ್ನು ಮರಣ ಶಯ್ಯೆಯಲ್ಲಿ ಕಂಡು ಮುಹಮ್ಮದ್‌ರ(ಸ) ಮನದಲ್ಲಿ ಅವರ ಬಗ್ಗೆ ಪ್ರೀತಿ ಮತ್ತು ಕರುಣೆಯ ಸಾಗರವೇ ಉಕ್ಕಿ ಹರಿಯತೊಡಗಿದೆ. ಆದ್ದರಿಂದ ಅವರನ್ನು ಪರಲೋಕದ ಶಿಕ್ಷೆಯಿಂದ ರಕ್ಷಿಸುವ ಅದಮ್ಯ ಬಯಕೆಯಿಂದ ಹೇಳುತ್ತಾರೆ: "ದೊಡ್ಡಪ್ಪಾ! ನೀವು ಅವರಿಗೆ ಉಪದೇಶಿಸಿ ನಿಮ್ಮನ್ನು ಮರೆತು ಬಿಡುತ್ತೀರಾ. ನೀವು ಈಗ ಸತ್ಯವಚನವನ್ನು ಪಠಿಸಿದರೆ ಪರಲೋಕದಲ್ಲಿ ನನಗೆ ನಿಮ್ಮ ಬಗ್ಗೆ ಶಿಫಾರಸು ಮಾಡುವ ಸಂದರ್ಭ ಒದಗಬಹುದು."

ಅಬೂತಾಲಿಬ್ ಮುಹಮ್ಮದ್‌ರತ್ತ(ಸ) ವಾತ್ಸಲ್ಯಭರಿತ ದೃಷ್ಟಿ ಬೀರುತ್ತಾ ಏನೋ ಹೇಳಬೇಕೆಂದಿರುವಾಗ ಕುರೈಶ್ ಸರದಾರರ ಪೈಕಿ ಅಬೂಜಹಲ್ ಮತ್ತು ಅಬ್ದುಲ್ಲಾ ಬಿನ್ ಉಮಯ್ಯ ಬೆಚ್ಚಿ ಬೀಳುತ್ತಾರೆ. ಅಬೂಜಹಲ್ ಹೇಳುತ್ತಾನೆ: "ಓ ಸರದಾರರೇ! ತಾವು ತಮ್ಮ ತಂದೆ ಅಬ್ದುಲ್ ಮುತ್ತಲಿಬರ ಧರ್ಮವನ್ನು ತೊರೆದು ಬಿಡುತ್ತೀರಾ?"

ಅಬೂತಾಲಿಬ್ ಮತ್ತೆ ಏನೋ ಹೇಳಬಯಸಿದರು. ಆದರೆ ಮುಹಮ್ಮದ್(ಸ) ಹೇಳಿದರು: "ದೊಡ್ಡಪ್ಪಾ! ಸತ್ಯ ವಚನವನ್ನು ಹೇಳಿರಿ."

ಅಬೂಜಹಲ್ ಮತ್ತು ಅಬ್ದುಲ್ಲಾ ಬಿನ್ ಉಮಯ್ಯ ಅವರನ್ನು ಮತ್ತೆ ಮತ್ತೆ ಅದರಿಂದ ತಡೆಯುತ್ತಿದ್ದರು. ಕೊನೆಗೆ ಮುಹಮ್ಮದ್‌ರನ್ನುದ್ದೇಶಿಸಿ(ಸ) ಅಬೂತಾಲಿಬ್ ಹೇಳಿದರು: "ಸೋದರ ಪುತ್ರಾ! ಜನರು ನನ್ನ ಕುರಿತು ಕೆಟ್ಟ ಮಾತುಗಳನ್ನಾಡುವರು ಮತ್ತು ಕುರೈಶರು ನಾನು ಮರಣದ ಭಯದಿಂದ 'ಕಲಿಮ' ಪಠಿಸಿರುವೆನೆಂದು ಹೇಳುವ ಭಯವಿಲ್ಲದಿರುತ್ತಿದ್ದರೆ ಖಂಡಿತ ನಾನು 'ಕಲಿಮ' ಪಠಿಸುತ್ತಿದ್ದೆ."

ತರುವಾಯ ಸ್ವಲ್ಪ ಹೊತ್ತಿನ ಮೌನದ ಬಳಿಕ ಅವರ ದೇಹಸ್ಥಿತಿ ಮತ್ತೆ ಕೆಟ್ಟಿತು.

ಉಸಿರಾಟ ಸ್ಥಗಿತಗೊಂಡಿತು. ಕಣ್ಣುಗಳು ಸ್ತಬ್ಧವಾದುವು. ತಮ್ಮ ಪ್ರೀತಿಯ ಸೋದರ ಪುತ್ರರನ್ನು ದುಃಖದಲ್ಲಿ ಮುಳುಗಿಸಿ ಅವರು ಇಹಲೋಕ ಜೀವನಕ್ಕೆ ವಿದಾಯ ಕೋರಿದರು. ಮುಹಮ್ಮದ್‌ರ(ಸ) ಪರಮ ಮಿತ್ರ, ಸಹಾಯಕ, ಆಶ್ರಯದಾತ ಎಲ್ಲವೂ ಆಗಿದ್ದ ಅಬೂತಾಲಿಬ್ ಬೀಳ್ಕೊಂಡರು. ಈಗ ಮುಹಮ್ಮದ್‌ರು(ಸ) ಕುರೈಶರ ಅಕ್ರಮ ಅತ್ಯಾಚಾರ ಗಳನ್ನು ಒಂಟಿಯಾಗಿಯೇ ಸಹಿಸಬೇಕು. ಇದು ಪ್ರವಾದಿತ್ವದ 10ನೇ ವರ್ಷ. ಇಸ್ಲಾಮಿನ ಅತ್ಯಂತ ಕಠಿಣ ವರ್ಷ. ಈ ವರ್ಷ ಮುಹಮ್ಮದ್‌ರು(ಸ) ಬಹಳ ದುಃಖಿತರಾಗಿದ್ದರು. ಅಬೂತಾಲಿಬರ ಪರಲೋಕ ಮೋಕ್ಷದ ಬಗ್ಗೆ ಅವರು ಬಹಳ ಚಿಂತಿತರಾಗಿದ್ದರು. ಅದಕ್ಕಾಗಿ ಆಗಾಗ ಅಲ್ಲಾಹನಲ್ಲಿ ಪ್ರಾರ್ಥಿಸುತ್ತಿದ್ದರು. ಕೊನೆಗೆ ಅಲ್ಲಾಹನು ಅವರನ್ನು ಅದರಿಂದ ತಡೆದನು: "ಪ್ರವಾದಿವರ್ಯರೇ! ನೀವು ಬಯಸಿದವರಿಗೆ ಸನ್ಮಾರ್ಗದರ್ಶನ ಮಾಡಿಸುವುದು ನಿಮ್ಮಿಂದ ಸಾಧ್ಯವಿಲ್ಲ. ಅಲ್ಲಾಹನೇ ತಾನಿಚ್ಛಿಸಿದವರಿಗೆ ಸನ್ಮಾರ್ಗದರ್ಶನ ಮಾಡಿಸುತ್ತಾನೆ. ಯಾರು ಸನ್ಮಾರ್ಗದರ್ಶನವನ್ನು ಸ್ವೀಕರಿಸುತ್ತಾರೆಂಬುದು ಅವನಿಗೆ ಚೆನ್ನಾಗಿ ತಿಳಿದಿದೆ."

ಅಬೂತಾಲಿಬರ ನಿಧನದ ಕೆಲವೇ ದಿನಗಳ ಬಳಿಕ ಖದೀಜಾರೂ ಅಲ್ಪ ಕಾಲದ ಅನಾರೋಗ್ಯದಿಂದ ಇಹಲೋಕ ಜೀವನ ತ್ಯಾಗ ಮಾಡಿದರು. ಮುಹಮ್ಮದ್‌ರ(ಸ) ದುಃಖವು ಇಮ್ಮಡಿಯಾಯಿತು. ಈ ವರ್ಷವನ್ನು ಅವರು 'ದುಃಖದ ವರ್ಷ'ವೆಂದು ಬಣ್ಣಿಸಿದ್ದಾರೆ.

## ಮರು ವಿವಾಹ

ಧರ್ಮಪ್ರಚಾರ ಕಾರ್ಯದ ಜೊತೆ ಪ್ರವಾದಿವರ್ಯರ(ಸ) ಮೇಲೆ ಇಬ್ಬರು ಮಕ್ಕಳಾದ ಉಮ್ಮು ಕುಲ್ಸೂಮ್ ಮತ್ತು ಫಾತಿಮಾರ ಪಾಲನೆ ಪೋಷಣೆಯ ಭಾರವೂ ಬಿತ್ತು. ಖದೀಜಾರ ವಿರಹದ ನಂತರ ಆ ಹೊಣೆಯನ್ನು ವಹಿಸಬಲ್ಲವರು ಯಾರೂ ಇರಲಿಲ್ಲ. ಪ್ರವಾದಿ(ಸ) ಧರ್ಮಪ್ರಚಾರ ಕಾರ್ಯಗಳಿಗಾಗಿ ಹೊರಗೆ ಹೋಗಬೇಕಾಗಿ ಬಂದಾಗ ಆ ಮಕ್ಕಳು ಒಂಟಿಯಾಗಿ ಬಿಡುತ್ತಿದ್ದರು. ಅವರಿಗೆ ಬೇರೆ ಯಾರ ಆಸರೆಯೂ ಇರಲಿಲ್ಲ. ಈ ಪರಿಸ್ಥಿತಿಯು ಮುಹಮ್ಮದ್‌ರನ್ನು(ಸ) ಬಹಳವಾಗಿ ಚಿಂತೆಗೀಡು ಮಾಡಿತ್ತು. ಅವರ ಚಿಂತೆಯನ್ನರಿತು ಉಸ್ಮಾನ್ ಬಿನ್ ಮಝ್‌ಊನ್‌ರ ಪತ್ನಿ ಖೌಲ ಬಿನ್ತಿ ಹಕೀಮ್ ಒಮ್ಮೆ ಅವರ ಬಳಿ ಬಂದು ಹೀಗೆ ಹೇಳಿದರು: "ಪ್ರವಾದಿವರ್ಯರೇ! ತಾವು ಈ ಹೆಣ್ಣು ಮಕ್ಕಳ ಪೋಷಣೆಯ ಬಗ್ಗೆ ಬಹಳ ಚಿಂತಿತರಾಗಿರುವುದನ್ನು ನಾನು ಕಾಣುತ್ತಿದ್ದೇನೆ. ತಮ್ಮ ಭಾರವನ್ನು ಕಡಿಮೆ ಮಾಡಿ ಕೊಳ್ಳಲಿಕ್ಕಾಗಿ ತಾವೇಕೆ ಇನ್ನೊಂದು ಮದುವೆ ಮಾಡಿಕೊಳ್ಳಬಾರದು?"

ಮುಹಮ್ಮದ್(ಸ): "ನೀವು ಹೇಳುತ್ತಿರುವುದು ಸರಿ. ಆದರೆ ಯಾರನ್ನು ಮದುವೆಯಾಗಲಿ?"

ಖೌಲ: "ನನ್ನ ದೃಷ್ಟಿಯಲ್ಲಿ ಓರ್ವ ವಿಧವೆ ಮತ್ತು ಓರ್ವ ಕುಮಾರಿ ಇದ್ದಾರೆ."

ಮುಹಮ್ಮದ್(ಸ): "ಯಾರವರು?"

ಖೌಲ: "ನಿಮ್ಮ ಮೇಲೆ ವಿಶ್ವಾಸವಿರಿಸಿರುವ ಸೌದಃ ಬಿನ್ತಿ ಝುಮ್‌ಆ ಮತ್ತು ನಿಮ್ಮ

ಆಪ್ತ ಮಿತ್ರರ ಪುತ್ರಿ ಆಯಿಶಾ."

ಮುಹಮ್ಮದ್(ಸ) ತಮ್ಮ ಸಮ್ಮತಿ ಸೂಚಿಸಿದಾಗ ಖೌಲ ಸೌದಾರ ಅನುಮತಿ ಪಡೆದು ಅವರ ತಂದೆ ಝಮ್‌ಆರನ್ನು ಭೇಟಿಯಾಗಿ ವಿಷಯ ತಿಳಿಸುತ್ತಾರೆ. ಝಮ್‌ಆ ಮುಸ್ಲಿಮ್ ಆಗಿರದಿದ್ದರೂ ಈ ಸಂಬಂಧವನ್ನು ಮೆಚ್ಚುತ್ತಾರೆ ಮತ್ತು ಮರುದಿನವೇ ತಮ್ಮ ಮಗಳನ್ನು ಮುಹಮ್ಮದ್‌ರಿಗೆ(ಸ) ವಿವಾಹ ಮಾಡಿಕೊಡುತ್ತಾರೆ. ಈ ಮದುವೆ ಪ್ರವಾದಿತ್ವದ 10ನೇ ವರ್ಷ ರಮಝಾನ್ ತಿಂಗಳಲ್ಲಿ ನಡೆಯಿತು. ಹ. ಸೌದಃ(ರ) 50 ವರ್ಷ ಪ್ರಾಯದವರಾಗಿದ್ದರು.

ಮುಹಮ್ಮದ್‌ರಿಗೆ(ಸ) ಈಗ ಮಕ್ಕಳ ಪಾಲನೆಯ ಚಿಂತೆಯಿಂದ ಮುಕ್ತಿ ದೊರೆಯಿತು. ಏಕಾಗ್ರತೆಯಿಂದ ಹಿಂದಿನಂತೆ ಅವರು ತಮ್ಮ ಧರ್ಮಪ್ರಚಾರ ಕಾರ್ಯಗಳಲ್ಲಿ ನಿರತರಾದರು.

ಝಮ್‌ಆರಲ್ಲಿ ಮಾತಾಡಿದ ಬಳಿಕ ಖೌಲ ಅಬೂಬಕರ್‌ರ(ರ) ಮನೆಗೆ ಹೋಗಿ ಅವರ ಪತ್ನಿಯಲ್ಲಿ ಆಯಿಶಾರ ಬಗ್ಗೆಯೂ ಮಾತಾಡುತ್ತಾರೆ. ಅಬೂಬಕರ್(ರ) ಮತ್ತು ಅವರ ಪತ್ನಿ ಈ ಪ್ರಸ್ತಾಪವನ್ನು ಮನಸಾರೆ ಸ್ವೀಕರಿಸಿ ಪ್ರವಾದಿತ್ವದ 10ನೇ ವರ್ಷ ಶವ್ವಾಲ್ ತಿಂಗಳಲ್ಲಿ ಅವರ ವಿವಾಹ ನಡೆಸಿಕೊಡುತ್ತಾರೆ. ನಿಕಾಹ್ ಆಗ ನಡೆದರೂ ಅವರ ದಾಂಪತ್ಯ ಜೀವನ ಹಿ. ಶ. 1ರ ಶವ್ವಾಲ್ ತಿಂಗಳಲ್ಲಿ ಆರಂಭವಾಗುತ್ತದೆ.

## ತಾಯಿಫ್‌ನ ಪೇಟೆಯಲ್ಲಿ

ಮಕ್ಕಾದಿಂದ 75 ಮೈಲಿ ಆಗ್ನೇಯ ದಿಕ್ಕಿನಲ್ಲಿ ತಾಯಿಫ್ ಎಂಬ ಪಟ್ಟಣವಿದೆ. ಗಿರಿ ಶಿಖರಗಳಿಂದ ಆವೃತವಾಗಿರುವ ಈ ಪಟ್ಟಣವು ಮಕ್ಕಾದ ಜನರಿಗೆ ಊಟಿ ಮತ್ತು ಶಿಮ್ಲಾಗಳಂತಿತ್ತು. ಮಕ್ಕಾದ ಜನರು ಬೇಸಿಗೆ ಕಾಲದಲ್ಲಿ ಈ ಗಿರಿಧಾಮಕ್ಕೆ ತಂಪನ್ನರಸಿ ಹೋಗುತ್ತಿದ್ದರು.

ತಾಯಿಫ್‌ನ ಮುಖ್ಯ ಪೇಟೆಯಲ್ಲಿ ಭಾರೀ ಜನಸಂದಣಿ. ಜನರ ಬೊಬ್ಬೆಯಲ್ಲಿ ಏನೇನೂ ಕೇಳಿಸುವುದಿಲ್ಲ. ಚಪ್ಪಾಳೆ ತಟ್ಟುವ ಮತ್ತು ಸಿಳ್ಳು ಹೊಡೆಯುವ ಶಬ್ದ ಮಾತ್ರ ದೂರದವರೆಗೂ ಕೇಳಿಸುತ್ತಿತ್ತು. ರಸ್ತೆಯ ಎರಡೂ ಕಡೆಗಳಲ್ಲಿ ಜನರು ದಟ್ಟವಾಗಿ ನೆರೆದಿದ್ದರು. ಅವರಲ್ಲನೇಕರು ಕಲ್ಲು ತುಂಡುಗಳನ್ನು ಹಿಡಿದಿದ್ದರು. ಜನರು ಉದ್ರಿಕ್ತ ರಾಗಿದ್ದರು. ಸ್ವಲ್ಪ ಹೊತ್ತಿನ ಬಳಿಕ ಒಂದು ಕಡೆಯಿಂದ ಜನರು ಸರಿಯುತ್ತಿರುವುದಾಗಿ ಗೋಚರಿಸುತ್ತದೆ. ಅವರು ಯಾರಿಗೋ ದಾರಿ ಮಾಡಿ ಕೊಡುವಂತಿತ್ತು. ಒಬ್ಬ ಕಾಂತಿಯುತ ಮುಖದ ಸುಂದರ ವ್ಯಕ್ತಿ ಶುಭ್ರವಾದ ಬಿಳಿ ಬಟ್ಟೆಯನ್ನು ಧರಿಸಿ ಬರುತ್ತಿದ್ದಾರೆ. ಅವರ ಬಟ್ಟೆಯಲ್ಲಿ ಅಲ್ಲಲ್ಲಿ ರಕ್ತದ ಕಲೆ ಕಾಣಿಸುತ್ತದೆ. ಜೊತೆಗೆ ಓರ್ವ ಅನುಯಾಯಿಯೂ ಇದ್ದಾರೆ. ಜನರು ಅವರೆಡೆಗೆ ಕಲ್ಲೆಸೆಯುತ್ತಿದ್ದಾರೆ. ಕೇಕೆ ಹಾಕುತ್ತಿದ್ದಾರೆ, ಸಿಳ್ಳು ಹೊಡೆಯುತ್ತಿದ್ದಾರೆ ಮತ್ತು ಅವಾಚ್ಯ ಶಬ್ದಗಳಿಂದ ಬಯ್ಯುತ್ತಿದ್ದಾರೆ. ಆದರೆ ಅವರಿಬ್ಬರೂ ಶಾಂತ ಚಿತ್ತರಾಗಿ ಅವರ ಮಧ್ಯದಿಂದ ಹೊರ ಬರುತ್ತಾರೆ. ಭಾರವಾದ ಹೆಜ್ಜೆಯೊಂದಿಗೆ ಉಸಿರು ಬಿಗಿ ಹಿಡಿದು ಅವರಿಂದ ಪಾರಾಗಲು ಯತ್ನಿಸುತ್ತಾರೆ.

ತಾಯಿಫ್‌ನ ಪುಂಡರು, ಪೋಕರಿಗಳು, ಲಫಂಗರು ಮತ್ತು ಗೂಂಡಾಗಳು ತಮ್ಮ ಸರದಾರರ ಮತ್ತು ನಾಯಕರ ಆಜ್ಞೆಯ ಮೇರೆಗೆ ಅವರನ್ನು ಪಟ್ಟಣದಿಂದ ಹೊಡೆದೋಡಿಸುತ್ತಿದ್ದಾರೆ. ಅವರಿಬ್ಬರೂ ಜನರ ವಿಶ್ವಾಸ ಶ್ರದ್ಧೆಗಳನ್ನು ಕೆಡಿಸುತ್ತಿರುವವರು. ತಮ್ಮ ಪೂರ್ವಜರ ತತ್ವ ಸಿದ್ಧಾಂತಗಳ ವಿರುದ್ಧ ಪ್ರಚಾರ ಮಾಡುತ್ತಿರುವವರು. ಅವರ ರೀತಿ-ರಿವಾಜುಗಳು ಮತ್ತು ಆಚಾರ ಸಂಪ್ರದಾಯಗಳಿಗೆ ಅಪಾಯ ಒಡ್ಡುತ್ತಿದ್ದಾರೆ ಎಂದು ಈ ಮಂದಿಯನ್ನು ನಂಬಿಸಲಾಗಿತ್ತು.

ಆ ಇಬ್ಬರೂ ತಾಯಿಫ್ ನಗರಕ್ಕೆ ಆಗಂತುಕರಾಗಿದ್ದಾರೆ. ಇಲ್ಲಿ ಯಾರೂ ಅವರಿಗೆ ಪರಿಚಿತರಿಲ್ಲ. ಅವರ ನೆರವಿಗೆ ಅಲ್ಲಿ ಯಾರೂ ಇರಲಿಲ್ಲ.

ಮುಹಮ್ಮದ್(ಸ) ಮತ್ತು ಝೈದ್ ಬಿನ್ ಹಾರಿಸ್(ರ) ಅವರೇ ಆ ಆಗಂತುಕರು. ಅವರು ಮಕ್ಕಾದಿಂದ ಇಲ್ಲಿಗೆ ಧರ್ಮಪ್ರಚಾರಕ್ಕಾಗಿ ಬಂದಿರುವವರು. ಮಕ್ಕಾ ನಗರದ ಜನತೆಯಿಂದ ನಿರಾಶರಾದ ಬಳಿಕ ಹತ್ತು ಹಲವು ಶುಭ ನಿರೀಕ್ಷೆಗಳೊಂದಿಗೆ ಅವರು ಇಲ್ಲಿಗೆ ಬಂದಿದ್ದರು. ಆದರೆ ಅವರ ಎಲ್ಲ ನಿರೀಕ್ಷೆಗಳೂ ಹುಸಿಯಾದುವು.

ತಾಯಿಫ್ ಕುರೈಶರ ಸೆಕೆಗಾಲದ ತಾಣವಾಗಿತ್ತು. ಆ ನಗರವು ದ್ರಾಕ್ಷೆಯ ತೋಟಗಳಿಂದ ಕಂಗೊಳಿಸುತ್ತಿತ್ತು. ಫಲವತ್ತಾದ ನೆಲ ಮತ್ತು ಸೂಕ್ತ ನೀರಾವರಿಯ ವ್ಯವಸ್ಥೆಯಿತ್ತು. ದೊಡ್ಡ ದೊಡ್ಡ ಜಮೀನ್ದಾರರು, ವರ್ತಕರು ಮತ್ತು ಶ್ರೀಮಂತರು ಇಲ್ಲಿ ಬಹಳ ವೈಭವದ ಬಾಳು ನಡೆಸುತ್ತಿದ್ದರು. ನಗರದ ಜನಸಂಖ್ಯೆಯೂ ಸಾಕಷ್ಟಿತ್ತು.

ಪ್ರವಾದಿತ್ವದ 10ನೇ ವರ್ಷದ ಒಂದು ಮುಂಜಾನೆ ಮುಹಮ್ಮದ್(ಸ) ತಮ್ಮ ದತ್ತು ಪುತ್ರ ಝೈದ್ ಬಿನ್ ಹಾರಿಸ್‌ರ ಜೊತೆ ತಾಯಿಫ್‌ಗೆ ಹೊರಟಿದ್ದರು. ಶ್ರೀಮಂತ ಮಡದಿ ಖದೀಜಾ ತಮ್ಮೆಲ್ಲ ಸಂಪತ್ತನ್ನು ಇಸ್ಲಾಮಿನ ಮಾರ್ಗದಲ್ಲಿ ವ್ಯಯಿಸಿ ಇಹಲೋಕ ತ್ಯಾಗ ಮಾಡಿದ್ದರು. ಪ್ರವಾದಿವರ್ಯರ(ಸ) ಆಶ್ರಯದಾತರಾಗಿದ್ದ ಸರದಾರ ಅಬೂತಾಲಿಬ್ ಕೂಡಾ ತೀರಿಕೊಂಡಿದ್ದರು. ಈಗ ಮುಹಮ್ಮದ್‌ರ(ಸ) ಬಳಿ ಲೌಕಿಕ ಸಂಪತ್ತಾಗಲೀ ಆಶ್ರಯಗಳಾಗಲೀ ಉಳಿದಿರಲಿಲ್ಲ. ತಾಯಿಫ್‌ಗೆ ಹೊರಡಲು ಪ್ರವಾದಿವರ್ಯರ(ಸ) ಬಳಿ ಒಂಟೆಯಂತಿರಲಿ ಒಂದು ಕತ್ತೆಯನ್ನು ಬಾಡಿಗೆಗೆ ಪಡೆಯುವ ಸಾಮರ್ಥ್ಯವೂ ಇರಲಿಲ್ಲ. ಒಂದು ಜೊತೆ ಚಪ್ಪಲಿಗಳ ಹೊರತು 75 ಮೈಲಿಗಳ ಈ ಮರುಭೂಮಿ ಯಾತ್ರೆಯನ್ನು ಅವರಿಗೆ ಸುಲಭಗೊಳಿಸುವ ಯಾವ ಸಾಧನವೂ ಇರಲಿಲ್ಲ. ಆದ್ದರಿಂದ ಅವರಿಬ್ಬರೂ ಕಾಲ್ನಡಿಗೆಯಲ್ಲೇ ತಾಯಿಫ್ ತಲುಪಿದ್ದರು.

ತಾಯಿಫ್ ಸಕೀಫ್ ಗೋತ್ರದ ಕೇಂದ್ರವಾಗಿತ್ತು. ಅಮ್ರ್ ಬಿನ್ ಉಮೈರ್‌ರ ಪುತ್ರರಾದ ಅಬ್ದ್ ಯಾಲೈಲ್, ಮಸ್‌ಊದ್ ಮತ್ತು ಹಬೀಬ್ ಎಂಬ ಮೂವರು ನಗರದ ಸರದಾರರಾಗಿದ್ದರು. ಮುಹಮ್ಮದ್(ಸ) ತಾಯಿಫ್‌ಗೆ ತಲುಪಿ ನೇರವಾಗಿ ಅವರ ಬಳಿಗೆ ಹೋಗಿ ಹೀಗೆಂದರು: "ನೀವು ಇಸ್ಲಾಮ್ ಧರ್ಮದ ಪ್ರಚಾರ ಕಾರ್ಯದಲ್ಲಿ ನನಗೆ-

ನೆರವಾಗಬೇಕೆಂದೂ ನನ್ನ ಜನಾಂಗದಲ್ಲಿ ನನ್ನನ್ನು ವಿರೋಧಿಸುತ್ತಿರುವವರ ವಿರುದ್ಧ ನನಗೆ ಸಹಾಯ ಮಾಡಬೇಕೆಂದೂ ಕೋರಲು ನಾನು ನಿಮ್ಮ ಬಳಿ ಬಂದಿರುವೆನು."

ತಮ್ಮ ನಾಯಕತ್ವದ ಮದ, ಶ್ರೀಮಂತಿಕೆಯ ಅಹಂಕಾರ ಮತ್ತು ಸತ್ಯನಿಷೇಧದ ಕರಾಳತೆಯು ಸೇರಿ ಅವರನ್ನು ಶೈತಾನನ ಪ್ರತಿರೂಪವಾಗಿ ಮಾರ್ಪಡಿಸಿದ್ದುವು. ಮುಹಮ್ಮದ್‌ರ(ಸ) ಮಾತು ಕೇಳಿದ ಕೂಡಲೇ ಅವರಲ್ಲಿ ಒಬ್ಬನು ಹೀಗೆಂದನು:

"ಅಲ್ಲಾಹನು ನಿಮ್ಮನ್ನು ತನ್ನ ಪ್ರವಾದಿಯನ್ನಾಗಿ ಮಾಡಿ ಕಳುಹಿಸಿದ್ದರೆ ನಾನು ಕಅಬಾ ಭವನದ ಪರದೆಯನ್ನು ಪರಚಿ ಬಿಡುವೆನು."

ಇನ್ನೊಬ್ಬನು ಹೀಗೆಂದನು: "ಸವಾರಿಗೆ ಒಂದು ಕತ್ತೆಯೂ ಸಿಗದ ನಿಮ್ಮ ಹೊರತು ಅಲ್ಲಾಹನಿಗೆ ತನ್ನ ಪ್ರವಾದಿತ್ವಕ್ಕೆ ಬೇರೆ ಯಾರೂ ಸಿಗಲಿಲ್ಲವೇ?"

ಮತ್ತೊಬ್ಬನು ಹೀಗೆ ಹೇಳಿದನು: "ನಾನು ನಿಮ್ಮಲ್ಲಿ ಮಾತನಾಡಲಾರೆ. ನೀವು ಒಂದು ವೇಳೆ ಅಲ್ಲಾಹನ ಪ್ರವಾದಿಯಾಗಿದ್ದರೆ ನೀವು ನಿಮ್ಮ ಮಾತಿಗೆ ಉತ್ತರ ನೀಡ ಬಾರದಷ್ಟು ದೊಡ್ಡ ಮಹಾತ್ಮರಾಗಿರುತ್ತೀರಿ. ಒಂದು ವೇಳೆ ನೀವು ಅಲ್ಲಾಹನ ಹೆಸರೆತ್ತಿ ಸುಳ್ಳು ಹೇಳುತ್ತಿರುವುದಾದರೆ ಓರ್ವ ಸುಳ್ಳುಗಾರನಲ್ಲಿ ನಾನು ಮಾತಾಡ ಬಯಸುವುದಿಲ್ಲ."

ಈ ಉತ್ತರಗಳನ್ನು ಕೇಳಿದ ಬಳಿಕ ಪ್ರವಾದಿವರ್ಯರಿಗೆ(ಸ) ಅವರಲ್ಲಿ ಯಾವುದೇ ಒಳಿತಿನ ನಿರೀಕ್ಷೆ ಬಾಕಿ ಉಳಿಯಲಿಲ್ಲ. ಅವರಿಗೆ ಈ ಮಾತುಗಳಿಂದ ಬಹಳ ನೋವಾಗುತ್ತದೆ. ಅವರು ಮೌನವಾಗಿ ಎದ್ದು ಹೊರಡಲನುವಾಗುತ್ತಾ ಹೀಗೆ ಹೇಳಿದರು: "ನೀವು ನನ್ನೊಂದಿಗೆ ವರ್ತಿಸಬಾರದ ರೀತಿಯಲ್ಲಿ ವರ್ತಿಸಿದಿರಿ. ಆದರೆ ಕನಿಷ್ಠ ಈ ವಿಷಯವನ್ನು ನಿಮ್ಮ ಮಟ್ಟಿಗೇ ಸೀಮಿತವಾಗಿರಿಸಿರಿ. ಅದು ರಹಸ್ಯವಾಗಿಯೇ ಇರಲಿ."

ಕುರೈಶರಿಗೆ ಈ ವಿಷಯ ತಿಳಿಯದಿರಲಿ ಎಂಬುದೇ ಮುಹಮ್ಮದ್(ಸ) ಅವರ ಇಂಗಿತವಾಗಿತ್ತು. ಅವರಿಗೆ ಇದು ತಿಳಿದು ಬಿಟ್ಟರೆ ಅವರು ಪ್ರವಾದಿವರ್ಯರ(ಸ) ವಿರುದ್ಧ ಇನ್ನಷ್ಟು ದೌರ್ಜನ್ಯಗಳನ್ನೆಸಗುವ ಸಾಧ್ಯತೆ ಇತ್ತು. ಆದರೆ ಮಕ್ಕಾದಲ್ಲಿರುವಂತಹ ಜನರೇ ತಾಯಿಫ್‌ನಲ್ಲಿಯೂ ವಾಸಿಸುತ್ತಿದ್ದರು.

ಮುಹಮ್ಮದ್(ಸ) ಹೊರಟು ಹೋದ ಬಳಿಕ ಅವರು ಪರಸ್ಪರ ಸಮಾಲೋಚಿಸಿದರು. ಈಗ ಮುಹಮ್ಮದ್‌ರನ್ನು(ಸ) ತಡೆಯದಿದ್ದರೆ ಹಾಗೂ ಕೂಡಲೇ ನಗರದಿಂದ ಹೊರ ಹಾಕದಿದ್ದರೆ ಇವರು ನಮ್ಮ ಯುವಕರನ್ನು ತನ್ನ ಅನುಯಾಯಿಗಳಾಗಿ ಮಾರ್ಪಡಿಸುವುದು ಖಂಡಿತ ಎಂದು ಅವರಿಗೆ ಭಾಸವಾಯಿತು. ಹಾಗಾದರೆ ಜನರು ತಮ್ಮನ್ನು ಬಿಟ್ಟು ಮುಹಮ್ಮದ್‌ರನ್ನು(ಸ) ಅನುಸರಿಸ ತೊಡಗುವರೆಂದು ಅವರಿಗೆ ಭಯವಾಯಿತು. ಆದ್ದರಿಂದ ಅವರು ನಗರದ ಪುಂಡ ಪೋಕರಿಗಳನ್ನು ಸೇರಿಸಿ ಕೂಡಲೇ ಮುಹಮ್ಮದ್‌ರನ್ನು(ಸ) ಹೊಡೆದೋಡಿಸುವಂತೆ ಕೇಳಿಕೊಂಡರು.

ಅಬ್ದ್ ಯಾಲೈಲ್‌ನ ಮಕ್ಕಳನ್ನು ಭೇಟಿಯಾದ ಬಳಿಕ ಮುಹಮ್ಮದ್(ಸ) ಸಖೀಫ್

ಗೋತ್ರದ ಇನ್ನೂ ಅನೇಕ ಸರದಾರರನ್ನು ಕಂಡು ತಮ್ಮ ಸಂದೇಶವನ್ನು ಅವರ ಮುಂದಿರಿಸಿದರು. ಆದರೆ ಯಾರೂ ಅವರ ಮಾತನ್ನು ಒಪ್ಪಲಿಲ್ಲ. ಅವರೆಲ್ಲರೂ ಪ್ರವಾದಿ(ಸ) ಅವರಿಗೆ ಕೂಡಲೇ ನಗರಬಿಟ್ಟು ಹೋಗುವಂತೆ ಆದೇಶಿಸಿದರು.

ಅವರು ನಿರಾಕರಣೆಯ ಎಲ್ಲ ಮೇರೆಗಳನ್ನು ಮೀರಿದ್ದರು. ತಾಯಿಫ್‌ನ ಕಣ ಕಣವೂ ಮುಹಮ್ಮದ್‌ರನ್ನು(ಸ) ನಿರಾಕರಿಸುತ್ತಿರುವಂತೆ ಭಾಸವಾಗುತ್ತಿತ್ತು. ಪ್ರತಿಯೊಬ್ಬನೂ ಅವರ ಬಗ್ಗೆ ತಾತ್ಸಾರ ಮತ್ತು ಜಿಗುಪ್ಸೆ ವ್ಯಕ್ತಪಡಿಸುತ್ತಾನೆ.

## ಶಾಪವಲ್ಲ, ಪ್ರಾರ್ಥನೆ

ತಾಯಿಫ್‌ನ ಪುಂಡ ಪೋಕರಿಗಳು ಮುಹಮ್ಮದ್‌ರ(ಸ) ಬೆನ್ನು ಹತ್ತಿದ್ದಾರೆ. ಹಿಂದಿನಿಂದ ಅವರ ಮೇಲೆ ಕಲ್ಲಿನ ಮಳೆಗೆರೆಯಲಾಗುತ್ತಿದೆ. ಮುಹಮ್ಮದ್(ಸ) ಹೆಜ್ಜೆ ಹಾಕುತ್ತಿರುವಂತೆ ಅವರ ಕಾಲುಗಳಿಗೆ ಬಲವಾದ ಕಲ್ಲೇಟುಗಳು ಬೀಳುತ್ತಿರುತ್ತವೆ. ಕಾಲಿನಿಂದ ರಕ್ತ ಹರಿದು ಅವರ ಪಾದುಕೆಗಳಲ್ಲಿ ಸೇರುತ್ತದೆ. ನೋವು ತಡೆಯಲಾಗದೆ ಮುಹಮ್ಮದ್(ಸ) ಕುಳಿತು ಬಿಟ್ಟಾಗ ಅವರು ಹಿಡಿದೆಬ್ಬಿಸುತ್ತಾರೆ ಮತ್ತು ಪುನಃ ಕಲ್ಲೇಟು ಆರಂಭಿಸುತ್ತಾರೆ. ಬೇರೆ ದಾರಿಯಿಲ್ಲದೆ ಪ್ರವಾದಿ(ಸ) ಅಸಹ್ಯ ನೋವಿನ ಜತೆಗೆ ನಡೆಯುತ್ತಿರುತ್ತಾರೆ. ಪುಂಡರು ಕೇಕೆ ಹಾಕುತ್ತಾ ಕಲ್ಲು ಹೊಡೆಯುತ್ತಾ ಎರಡು ಮೈಲಿಗಳಷ್ಟು ದೂರದ ತನಕವೂ ಅವರನ್ನು ಬೆನ್ನಟ್ಟುತ್ತಾರೆ.

ಮುಹಮ್ಮದ್‌ರನ್ನು(ಸ) ಕಲ್ಲೇಟಿನಿಂದ ತಡೆಯಲು ಹೋಗಿ ಝೈದ್ ಬಿನ್ ಹಾರಿಸ್ ಸ್ವಯಂ ಕಲ್ಲೇಟಿನಿಂದ ಗಾಯಗೊಳ್ಳುತ್ತಾರೆ. ಅವರ ತಲೆಗೆ ಏಟಾಗಿ ರಕ್ತ ಹರಿಯ ಲಾರಂಭಿಸುತ್ತದೆ.

ಮುಹಮ್ಮದ್(ಸ) ರಕ್ತಸಿಕ್ತವಾಗಿ ಗಾಯಗಳಿಂದ ಜರ್ಝರಿತರಾಗಿ ತಾಯಿಫ್ ಪಟ್ಟಣದಿಂದ ಹೊರ ಬೀಳುತ್ತಾರೆ. ಪುಂಡರು ಈಗ ಬೆನ್ನಟ್ಟುವುದನ್ನು ಬಿಟ್ಟು ಬಿಟ್ಟಿರುವರು. ಮುಹಮ್ಮದ್‌ರನ್ನು(ಸ) ತಮ್ಮ ನಗರದಿಂದ ಹೊಡೆದೋಡಿಸಿದ ಬಗ್ಗೆ ಅವರಿಗೆ ಬಹಳ ಸಂತೋಷವಾಗಿತ್ತು.

ತಾಯಿಫ್‌ನಿಂದ ಮೂರು ಮೈಲಿಗಳ ದೂರದಲ್ಲಿ ರಬೀಅರ ಮಕ್ಕಳಾದ ಉತ್ಬಾ ಮತ್ತು ಶೀಬಾರಿಗೆ ಸೇರಿದ ಒಂದು ದ್ರಾಕ್ಷಿಯ ತೋಟವಿದೆ. ಅಲ್ಲಿ ಅವರ ಕ್ರೈಸ್ತ ಗುಲಾಮ ಅದ್ದಾಸ್ ಗಿಡಗಳ ಸುತ್ತಲಿರುವ ಕಳೆಗಳನ್ನು ಕೀಳುವ ಕೆಲಸ ಮಾಡುತ್ತಿದ್ದಾನೆ. ತೋಟದ ಸುತ್ತಲೂ ಆಳೆತ್ತರದ ಗೋಡೆಯಿದ್ದು ಹೆದ್ದಾರಿಯ ಕಡೆಗೆ ಒಂದು ದೊಡ್ಡ ಬಾಗಿಲಿದೆ. ಮುಹಮ್ಮದ್(ಸ) ಅಲ್ಲಿಗೆ ತಲುಪುತ್ತಲೇ ಒಂದು ಪಕ್ಕದಲ್ಲಿ ಝೈದ್ ಬಿನ್ ಹಾರಿಸ್‌ರನ್ನೂ ಇನ್ನೊಂದು ಪಕ್ಕದಲ್ಲಿ ಗೋಡೆಯನ್ನೂ ಆಶ್ರಯಿಸಿ ಮುಂದೆ ಸಾಗುತ್ತಾ ಬಾಗಿಲ ಮೂಲಕ ತೋಟದಲ್ಲಿ ಪ್ರವೇಶಿಸುತ್ತಾರೆ. ಅಲ್ಲಿ ಒಂದು ಕಡೆ ನೆರಳಲ್ಲಿ ಕುಳಿತು ಪ್ರವಾದಿ ಮುಹಮ್ಮದ್(ಸ) ಪ್ರಾರ್ಥನೆಯಲ್ಲಿ ನಿರತರಾಗುತ್ತಾರೆ. ಅವರ ಅನೇಕ ವರ್ಷಗಳ ಧರ್ಮ ಪ್ರಚಾರ ಕಾರ್ಯದಲ್ಲಿ

ಇಷ್ಟು ಕಠಿಣವಾದ ಘಳಿಗೆ ಅವರ ಪಾಲಿಗೆ ಬಂದಿರಲಿಲ್ಲ. ಈ ಸಂದರ್ಭದಲ್ಲಿ ಅವರ ಬಾಯಿಯಿಂದ ಹೊರಟ ಪ್ರಾರ್ಥನೆಯು ಅವರ ಈ ಸ್ಥಿತಿಯನ್ನು ಅತ್ಯಂತ ಪ್ರಭಾವಶಾಲಿ ರೂಪದಲ್ಲಿ ಪ್ರತಿಬಿಂಬಿಸುತ್ತದೆ:

"ಓ ಅಲ್ಲಾಹ್! ನಾನು ನನ್ನ ಅಸಹಾಯಕತೆ, ಬಲಹೀನತೆ ಮತ್ತು ಜನರ ದೃಷ್ಟಿಯಲ್ಲಿ ನನ್ನ ಅಗೌರವದ ಬಗ್ಗೆ ನಿನ್ನಲ್ಲೇ ಮೊರೆಯಿಡುತ್ತೇನೆ. ಓ ದಯಾಮಯರಲ್ಲಿ ದಯಾಮಯನಾದವನೇ! ನೀನು ಎಲ್ಲ ಬಲಹೀನರ ಪ್ರಭುವಾಗಿರುವೆ. ನನ್ನ ಪ್ರಭುವೂ ನೀನೇ ಆಗಿರುವೆ. ನನ್ನನ್ನು ನೀನು ಯಾರ ವಶಕ್ಕೆ ಒಪ್ಪಿಸಿರುವೆ? ನನ್ನೊಂದಿಗೆ ಕಠಿಣವಾಗಿ ವರ್ತಿಸುವ ಅಪರಿಚಿತರ ವಶಕ್ಕೆ ನನ್ನನ್ನು ಒಪ್ಪಿಸುವೆಯಾ? ಅಥವಾ ನನ್ನ ಮೇಲೆ ಪ್ರಾಬಲ್ಯ ಹೊಂದಿದ ಶತ್ರುವಿನ ವಶಕ್ಕೆ ನನ್ನನ್ನು ಒಪ್ಪಿಸುವೆಯಾ? ನೀನು ನನ್ನಲ್ಲಿ ಕುಪಿತನಾಗಿರದಿದ್ದರೆ ನನಗೆ ಯಾವ ಸಂಕಷ್ಟದ ಪರಿವೆಯೂ ಇಲ್ಲ. ನಿನ್ನ ಕಡೆಯಿಂದ ನನಗೆ ಕ್ಷೇಮವು ಲಭಿಸಿದರೆ ಅದರಲ್ಲಿ ನನ್ನ ಪಾಲಿಗೆ ಹೆಚ್ಚು ಶ್ರೇಯಸ್ಸು ಇದೆ. ನಾನು ಅಂಧಕಾರದಲ್ಲಿ ಬೆಳಕಾಗಿರುವ ಮತ್ತು ಇಹ-ಪರಲೋಕಗಳ ವ್ಯವಹಾರ ಗಳನ್ನು ಸುಗಮಗೊಳಿಸುವ ನಿನ್ನ ಜ್ಯೋತಿಯ ಆಶ್ರಯ ಯಾಚಿಸುತ್ತೇನೆ.

ನಿನ್ನ ಕ್ರೋಧವು ನನ್ನ ಮೇಲೆ ಎರಗುವುದರಿಂದ ನನ್ನನ್ನು ರಕ್ಷಿಸು. ನಿನ್ನ ಶಾಪಕ್ಕೆ ಗುರಿಯಾಗುವುದರಿಂದ ನನ್ನನ್ನು ಕಾಪಾಡು. ನಾನು ನಿನ್ನ ಇಚ್ಛೆಯಲ್ಲಿ ಸಂತೃಪ್ತ ನಾಗಿರುವಂತೆ ಮಾಡು. ನೀನೂ ನನ್ನಿಂದ ಸಂತೃಪ್ತನಾಗು. ನಿನ್ನ ಹೊರತು ಯಾರಲ್ಲಿಯೂ ಯಾವುದೇ ಶಕ್ತಿ ಮತ್ತು ಸಾಮರ್ಥ್ಯಗಳಿಲ್ಲ."

ಝೈದ್ ಮೌನವಾಗಿ ಕುಳಿತು ಈ ಪ್ರಾರ್ಥನೆಯನ್ನು ಆಲಿಸುತ್ತಿದ್ದರು. ಅವರಿಗೆ ತಮಗಾದ ನೋವಿನ ಪರಿವೆಯೇ ಇರಲಿಲ್ಲ. ತಮ್ಮೊಡೆಯನಿಗಾದ ನೋವನ್ನು ಅವರಿಂದ ಸಹಿಸಲಾಗಲಿಲ್ಲ. ಅವರಿಂದ ಸಾಧ್ಯವಿದ್ದರೆ ಇಡೀ ತಾಯಿಫ್ ಪಟ್ಟಣವನ್ನೇ ನಾಶ ಮಾಡಿ ಬಿಡುತ್ತಿದ್ದರು. ಅವರು ಪ್ರವಾದಿವರ್ಯರಲ್ಲಿ(ಸ) ಹೀಗೆ ಅರಿಕೆ ಮಾಡಿ ಕೊಳ್ಳುತ್ತಾರೆ: "ಪ್ರವಾದಿವರ್ಯರೇ! ಈ ಅಕ್ರಮಿಗಳನ್ನು ಶಪಿಸಿರಿ"

ದಯೆ-ಕರುಣೆಗಳ ಸಾಕಾರ ಮೂರ್ತಿಯಾಗಿರುವ ಮುಹಮ್ಮದ್(ಸ) ಅತ್ಯಂತ ಶಾಂತ ಚಿತ್ತರಾಗಿ ಈ ರೀತಿ ಉತ್ತರಿಸಿದರು: "ನಾನೇಕೆ ಈ ಜನರನ್ನು ಶಪಿಸಲಿ. ಇವರು ಒಂದು ವೇಳೆ ವಿಶ್ವಾಸವಿರಿಸದಿದ್ದರೆ ಇವರ ಮುಂದಿನ ಪೀಳಿಗೆಗಳಂತೂ ಖಂಡಿತ ಏಕದೇವನಲ್ಲಿ ವಿಶ್ವಾಸವಿರಿಸುವರು."

ಇದನ್ನು ಕೇಳಿ ಝೈದ್ ಸುಮ್ಮನಾಗುತ್ತಾರೆ.

## ಲೋಕಾನುಗ್ರಹಿ!

ಮುಹಮ್ಮದ್‌ರನ್ನು(ಸ) ತನ್ನ ತೋಟದಲ್ಲಿ ಕಂಡ ಉತ್ಬಾ ತನ್ನ ದಾಸ ಅದ್ದಾಸ್‌ನನ್ನು ಕರೆದು ಅವರಿಗಾಗಿ ಒಂದು ದ್ರಾಕ್ಷೆಯ ಗೊಂಚಲನ್ನು ಕೊಟ್ಟು ಕಳುಹಿಸುತ್ತಾನೆ.

ಮುಹಮ್ಮದ್(ಸ) 'ಬಿಸ್ಮಿಲ್ಲಾಹ್' ಎನ್ನುತ್ತಾ ಅದನ್ನು ತಿನ್ನತೊಡಗಿದರು. ಈ ಪದವನ್ನು ಕೇಳಿ ಅದ್ದಾಸ್ ಆಶ್ಚರ್ಯ ಚಕಿತನಾದ. ಆತ ಈ ತನಕ ಅಂತಹ ಮಾತನ್ನು ಯಾರಿಂದಲೂ ಕೇಳಿರಲಿಲ್ಲ. ಆತ ಹೇಳಿದ: "ಅಲ್ಲಾಹನಾಣೆ! ಈ ನಾಡಿನಲ್ಲಿ ಈ ವಚನವನ್ನು ಹೇಳುವವರು ಯಾರೂ ಇಲ್ಲ."

ಮುಹಮ್ಮದ್(ಸ) ವಿಚಾರಿಸುತ್ತಾರೆ: "ನೀವು ಯಾವ ಊರಿನವರು. ನಿಮ್ಮ ಧರ್ಮ ಯಾವುದು?"

ಅದ್ದಾಸ್: "ನಾನು ಕ್ರೈಸ್ತ. ನನ್ನ ಊರು ನೈನವಾ."

ಮುಹಮ್ಮದ್: "ನೀವು ಪ್ರವಾದಿ ಯೂನುಸ್ ಬಿನ್ ಮತಾ ಅವರ ಊರಿನವರೇ?"

ಅದ್ದಾಸ್: (ಚಕಿತನಾಗಿ) "ಅವರ ಬಗ್ಗೆ ನಿಮಗೆ ಹೇಗೆ ಗೊತ್ತು. ಅಲ್ಲಾಹನಾಣೆ! ನಾನು ನೈನವಾವನ್ನು ಬಿಟ್ಟು ಬರುವಾಗ ಅಲ್ಲಿ ಮತಾ ಏನೆಂದು ತಿಳಿದವರು ಹತ್ತು ಮಂದಿಯೂ ಇರಲಿಲ್ಲ. ಹಾಗಿರುವಾಗ ನಿಮಗೆ ಅವರ ಬಗ್ಗೆ ಹೇಗೆ ತಿಳಿಯಿತು?"

ಮುಹಮ್ಮದ್(ಸ): "ಅವರು ನನ್ನ ಸೋದರರಾಗಿದ್ದರು. ಅವರೂ ಅಲ್ಲಾಹನ ಪ್ರವಾದಿಯಾಗಿದ್ದರು. ನಾನೂ ಪ್ರವಾದಿಯಾಗಿದ್ದೇನೆ."

ಅದ್ದಾಸ್: "ತಾವು ಅಲ್ಲಾಹನ ದಾಸರು ಮತ್ತು ಪ್ರವಾದಿಯಾಗಿರುವಿರೆಂದು ನಾನು ಸಾಕ್ಷ್ಯ ವಹಿಸುತ್ತೇನೆ."

ಅದ್ದಾಸ್‌ರಿಗೆ ಅಂತಿಮ ಪ್ರವಾದಿಯ ದರ್ಶನವಾಯಿತು. ಪ್ರೀತಿ, ನಿಷ್ಠೆ, ಶ್ರದ್ಧೆ ಮತ್ತು ಸಂತೋಷಾತಿರೇಕದಿಂದ ಅವರು ಪ್ರವಾದಿ ಮುಹಮ್ಮದ್‌ರ(ಸ) ಹಣೆ, ಕೈ ಮತ್ತು ಕಾಲನ್ನು ಚುಂಬಿಸುತ್ತಾರೆ.

ರಬೀಅನ ಪುತ್ರರು ಅದ್ದಾಸ್‌ರ(ರ) ಈ ಅವಸ್ಥೆಯನ್ನು ಕಂಡು ಕೋಪದಲ್ಲಿ ಕೆಂಡವಾದರು. ಶೀಬಾ ಉತ್ಬಾನನ್ನು ಉದ್ದೇಶಿಸಿ ವ್ಯಂಗ್ಯವಾಗಿ ಹೇಳಿದ: "ಇನ್ನೂ ಅವರಿಗೆ ಉಡುಗೊರೆಯನ್ನು ಕಳುಹಿಸು! ನಿನ್ನ ಗುಲಾಮನನ್ನೂ ಆತ ಕೆಡಿಸಿಬಿಟ್ಟಿದ್ದಾನೆ."

ಉತ್ಬಾ ಅದ್ದಾಸ್‌ರನ್ನು ಬಳಿ ಕರೆದನು. ಅದ್ದಾಸ್ ಗುಲಾಮರಾಗಿದ್ದರು. ದಾಸ್ಯದ ಸಂಕೋಲೆಗಳು ಅವರ ಕಾಲುಗಳಲ್ಲಿದ್ದುವು. ಅವರು ಉತ್ಬಾನ ಕರೆಗೆ ಓಗೊಟ್ಟು ಬರುವುದು ಅವರಿಗೆ ಅನಿವಾರ್ಯವಾಗಿತ್ತು. ಅವರು ಮುಹಮ್ಮದ್‌ರನ್ನು(ಸ) ಒಮ್ಮೆ ಆಸೆಯ ಕಣ್ಣುಗಳಿಂದ ಅಡಿಯಿಂದ ಮುಡಿ ತನಕ ನೋಡಿದರು. ಭಾರವಾದ ಹೆಜ್ಜೆ ಮತ್ತು ಒಲ್ಲದ ಮನಸ್ಸಿನೊಂದಿಗೆ ಉತ್ಬಾರ ಕಡೆಗೆ ಮರಳಿದರು.

ಉತ್ಬಾ ಕುಪಿತನಾಗಿ ಕೇಳುತ್ತಾನೆ: "ನಿನಗೇನಾಗಿ ಬಿಟ್ಟಿತು. ನೀನು ಆತನ ಕೈಕಾಲುಗಳನ್ನೇಕೆ ಚುಂಬಿಸಿದೆ?"

ಅದ್ದಾಸ್: "ಒಡೆಯಾ! ಇಂದು ಭೂಮುಖದ ಮೇಲೆ ಅವರಿಗಿಂತ ಉತ್ತಮರಾದವರು

ಯಾರೂ ಇಲ್ಲ. ಅವರು ನನಗೊಂದು ವಿಷಯ ತಿಳಿಸಿರುವರು. ಅದನ್ನು ಓರ್ವ ಪ್ರವಾದಿಯ ಹೊರತು ಯಾರೂ ಬಲ್ಲವರಿಲ್ಲ."

ಉತ್ಬಾ: "ಇದೇನು ಮಾಡಿದೆ. ನಿನ್ನ ಧರ್ಮದ ಕಡೆಗೆ ಮರಳು. ನಿನ್ನ ಧರ್ಮವು ಆತನ ಧರ್ಮಕ್ಕಿಂತ ಮಿಗಿಲಾಗಿದೆ."

ಉತ್ಬಾನ ಧರ್ಮವು ಕೇವಲ ಕೆಲವು ಕಂದಾಚಾರಗಳ ಕಂತೆಯಾಗಿತ್ತು. ಆದರೆ ತನ್ನ ಸರದಾರ ಪಟ್ಟವನ್ನು ಉಳಿಸಲು ಅದು ಅವನಿಗೆ ಬೇಕಾಗಿತ್ತು. ಆತ ಕ್ರೈಸ್ತ ಧರ್ಮವನ್ನು ಮುಹಮ್ಮದ್‌ರ(ಸ) ಧರ್ಮಕ್ಕಿಂತ ಮಿಗಿಲೆಂದು ಹೇಳುವ ಮೂಲಕ ತನ್ನ ಧರ್ಮವನ್ನೇ ಗೇಲಿ ಮಾಡಿದಂತಾಗಿತ್ತು.

ಆ ದಿನವು ಮುಹಮ್ಮದ್‌ರ(ಸ) ಜೀವನದ ಅತ್ಯಂತ ಕಠಿಣ ದಿನವಾಗಿತ್ತು. ಕೆಲವು ದ್ರಾಕ್ಷೆಗಳನ್ನು ತಿಂದು ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದ ಬಳಿಕ ದುಃಖದೊಂದಿಗೆ ಹೊರಟು ನಿಂತರು. ಹೇಗೂ 'ಕರ್ನುಲ್ ಸಅಲಿಬ್' ಎಂಬಲ್ಲಿಗೆ ತಲುಪಿದಾಗ ಆಕಾಶದಲ್ಲಿ ಒಂದು ಮೋಡದಂತಹ ವಸ್ತು ಕಾಣಿಸಿಕೊಂಡಿತ್ತು. ಅದು ಅವರನ್ನು ಆಚ್ಛಾದಿಸಿತ್ತು. ಸ್ವಲ್ಪ ಗಮನವಿಟ್ಟು ನೋಡಿದಾಗ ಅದರಲ್ಲಿ ಜಿಬ್ರೀಲ್(ಅ) ಗೋಚರಿಸಿದರು.

ಅವರು ಕೂಗಿ ಹೇಳಿದರು: "ನಿಮ್ಮ ಜನಾಂಗವು ನಿಮ್ಮಲ್ಲಿ ಹೇಳಿದ ಎಲ್ಲ ವಿಷಯ ಮತ್ತು ಅವರು ನಿಮ್ಮ ಕರೆಗೆ ನೀಡಿದ ಉತ್ತರವನ್ನು ಅಲ್ಲಾಹನು ಆಲಿಸಿರುವನು."

ಸ್ವಲ್ಪ ಹೊತ್ತಿನ ಹಿಂದೆ ಮುಹಮ್ಮದ್‌ರನ್ನು(ಸ) ತಾಯಿಫ್‌ನ ಜನರು ಅಪಮಾನ ಮಾಡಿ ಹೊರ ಹಾಕಿದ್ದರು. ಆ ದುಃಖವನ್ನು ಪ್ರವಾದಿ(ಸ) ತಮ್ಮ ಒಡೆಯನಲ್ಲಿ ತೋಡಿ ಕೊಂಡಿದ್ದರು. ಈಗ ಅವರ ಬಳಿ ಅಲ್ಲಾಹನ ದೂತರಾದ ಜಿಬ್ರೀಲ್(ಅ) ಬಂದು ಹೇಳಿದರು: "ಮುಹಮ್ಮದರೇ! ಅಲ್ಲಾಹನು ತಮ್ಮ ಬಳಿಗೆ ಪರ್ವತಗಳ ಈ ದೇವಚರರನ್ನು ಕಳುಹಿಸಿದ್ದಾನೆ. ನಿಮಗೇನು ಬೇಕು ಅವರಲ್ಲಿ ಆಜ್ಞಾಪಿಸಿರಿ."

ಪರ್ವತಗಳ ದೇವಚರ ಮುಹಮ್ಮದ್‌ರನ್ನು(ಸ) ಅಭಿವಂದಿಸಿ ಅವರ ಅಜ್ಞೆಯನ್ನು ಅಪೇಕ್ಷಿಸುತ್ತಾರೆ, "ಮುಹಮ್ಮದರೇ! ತಮಗೆ ಎಲ್ಲ ಅಧಿಕಾರವಿದೆ. ತಾವು ಆಜ್ಞಾಪಿಸಿದರೆ ತಾಯಿಫ್ ಪಟ್ಟಣದ ಇಕ್ಕೆಲಗಳಲ್ಲಿರುವ ಪರ್ವತಗಳನ್ನು ಎತ್ತಿ ಆ ಪಟ್ಟಣವನ್ನು ಪುಡಿ ಪುಡಿ ಮಾಡಿಬಿಡುವೆನು."

ಆದರೆ ಮುಹಮ್ಮದ್(ಸ) ಲೋಕಾನುಗ್ರಹಿಯಾಗಿದ್ದಾರೆ. ಅವರ ಸಂದೇಶವು ಅಲ್ಲಾಹನ ಅಂತಿಮ ಸಂದೇಶವಾಗಿದೆ. ಅದನ್ನು ನಿರಾಕರಿಸಿದವನಿಗೆ ಯಾವ ನೆಲೆಯೂ ಆಶ್ರಯವೂ ಸಿಗಲಾರದು. ನಮ್ಮಿಂದ ಊಹಿಸಲೂ ಸಾಧ್ಯವಿಲ್ಲದಷ್ಟು ಪ್ರವಾದಿ ಮುಹಮ್ಮದ್(ಸ) ಜನರನ್ನು ಪ್ರೀತಿಸುತ್ತಿದ್ದರು. ಆದ್ದರಿಂದಲೇ ಅವರು ದಾರಿತಪ್ಪಿದವರನ್ನು ಹೇಗಾದರೂ ಮಾಡಿ ನರಕಾಗ್ನಿಯಿಂದ ರಕ್ಷಿಸಲು ಪ್ರಯತ್ನಿಸುತ್ತಿದ್ದರು. ಅದಕ್ಕಾಗಿ ಇಂದು ಅವರು ಮೈ ತುಂಬ ಗಾಯಗಳನ್ನು ಹೊತ್ತು ರಕ್ತಸಿಕ್ತವಾಗಿ ಮರಳುತ್ತಿದ್ದಾರೆ. ಪರ್ವತಗಳ ದೇವಚರರ

ಪ್ರಸ್ತಾಪಕ್ಕೆ ಅತ್ಯಂತ ತಾಳ್ಮೆಯಿಂದ ಹೀಗೆ ಉತ್ತರಿಸುತ್ತಾರೆ: "ನಾನು ನಿರಾಶನಾಗಿಲ್ಲ. ಇವರ ಸಂತತಿಗಳಲ್ಲಾದರೂ ಅಲ್ಲಾಹನು ಕೇವಲ ತನ್ನ ದಾಸ್ಯ ಮತ್ತು ಆರಾಧನೆ ಮಾಡುವ ಜನರನ್ನು ಸೃಷ್ಟಿಸುವನೆಂಬ ಭರವಸೆ ನನಗಿದೆ."

## ಪುನಃ ಮಕ್ಕಾದಲ್ಲಿ

ಮುಹಮ್ಮದ್(ಸ) ಮತ್ತು ಅವರ ಸಂಗಾತಿ ಝೈದ್ ಬಿನ್ ಹಾರಿಸ್(ರ) ನಖ್‌ಲದಿಂದ ಮಕ್ಕಾದ ಕಡೆಗೆ ಹೊರಡುತ್ತಾರೆ. ಝೈದ್(ರ) ಹೀಗೆ ಹೇಳುತ್ತಾರೆ:

"ಪ್ರವಾದಿವರ್ಯರೇ! ಕುರೈಶರು ತಮ್ಮನ್ನು ಮಕ್ಕಾದಿಂದ ಹೊರಹಾಕಿರುವಾಗ ತಾವು ಹೇಗೆ ಅಲ್ಲಿಗೆ ಮರಳುವಿರಿ?"

ಮುಹಮ್ಮದ್(ಸ) ಪೂರ್ಣ ಭರವಸೆಯೊಂದಿಗೆ ಹೀಗೆ ಹೇಳಿದರು: "ಓ ಝೈದ್! ನೀವೀಗ ಕಾಣುತ್ತಿರುವ ಪರಿಸ್ಥಿತಿಯಿಂದ ಹೊರಬರಲು ಅಲ್ಲಾಹನು ಯಾವುದಾದರೂ ಮಾರ್ಗವನ್ನು ಖಂಡಿತ ಉಂಟು ಮಾಡುವನು. ಅವನು ತನ್ನ ಧರ್ಮಕ್ಕೆ ನೆರವಾಗುವವ ನಾಗಿದ್ದಾನೆ. ತನ್ನ ಪ್ರವಾದಿಯನ್ನು ಅವನು ಖಂಡಿತ ಗೆಲ್ಲಿಸುವನು."

ಅನಂತರ ಅವರು ಮಕ್ಕಾದ ಕಡೆಗೆ ಯಾತ್ರೆ ಮುಂದುವರಿಸುತ್ತಾರೆ. ಹಿರಾ ತಲುಪಿದಾಗ ಕೆಲವು ಮಂದಿ ಕುರೈಶರ ಭೇಟಿಯಾಗುತ್ತದೆ. ಆ ಪೈಕಿ ಅಬ್ದುಲ್ಲಾ ಬಿನ್ ಅಲ್ ಅರೀಕತ್ ಕೂಡಾ ಇದ್ದರು. ತಾಯಿಫ್ ಯಾತ್ರೆಯ ವೈಫಲ್ಯದ ಬಳಿಕ ಮಕ್ಕಾದ ಜನರು ಮಾಡಿಕೊಂಡಿರುವ ಸಂಚುಗಳ ಕುರಿತು ಅವರ ಮಾತುಕತೆಯಿಂದ ತಿಳಿಯಿತು.

ಅವರ ದುಷ್ಟ ಸಂಚಿನ ಕುರಿತು ತಿಳಿದಾಗ ಪ್ರವಾದಿ(ಸ) ಅಬ್ದುಲ್ಲಾರಮ್ನುದ್ದೇಶಿಸಿ ಹೀಗೆ ಹೇಳಿದರು: "ನೀವು ಅಬ್ದ್ ಮನಾಫ್ ಗೋತ್ರದ ಶಾಖೆಯಾದ ನೌಫಲ್ ಗೋತ್ರದ ಮುತ್‌ಇಮ್ ಬಿನ್ ಅದೀಯರ ಬಳಿಗೆ ಹೋಗಿ ತಮ್ಮ ಪ್ರಭುವಿನ ಸಂದೇಶವನ್ನು ಮುಕ್ತವಾಗಿ ಪ್ರಚಾರ ಮಾಡಲು ಅವಕಾಶವಾಗುವಂತೆ ಮುಹಮ್ಮದ್(ಸ) ರಿಗೆ ಅಭಯಾಶ್ರಯ ನೀಡಬೇಕೆಂದು ಕೇಳಿರಿ."

ಅಬ್ದುಲ್ಲಾ ಮುತ್‌ಇಮ್‌ನ ಬಳಿ ಹೋಗಿ ಈ ವಿಚಾರ ಪ್ರಸ್ತಾಪಿಸಿದ ಕೂಡಲೇ ಅವನು ಪ್ರವಾದಿವರ್ಯರಿಗೆ(ಸ) ಆಶ್ರಯ ನೀಡುತ್ತಾ ಅವರನ್ನು ನಿಸ್ಸಂಕೋಚವಾಗಿ ಮಕ್ಕಾಕ್ಕೆ ಬರುವಂತೆ ಹೇಳಿ ಕಳುಹಿಸಿದನು.

ಮರುದಿನ ಮುಂಜಾನೆ ಪ್ರವಾದಿ ಮುಹಮ್ಮದ್(ಸ) ಮತ್ತೆ ಮಕ್ಕಾ ನಗರವನ್ನು ಪ್ರವೇಶಿಸುತ್ತಾರೆ. ಮುತ್‌ಇಮ್ ಒಂಟೆಯ ಮೇಲೇರಿ ತಾನು ಮುಹಮ್ಮದ್‌ರಿಗೆ(ಸ) ಆಶ್ರಯ ನೀಡಿರುವುದಾಗಿ ಘೋಷಿಸುತ್ತಾ ಸಾಗುತ್ತಿರುವನು. ಸುತ್ತಮುತ್ತಲೂ ಮುತ್‌ಇಮ್‌ನ ಪುತ್ರರು ಮತ್ತು ಸೋದರ ಪುತ್ರರು ಸೊಂಟದಲ್ಲಿ ಖಡ್ಗವನ್ನು ತೂಗು ಹಾಕಿ ಕೈಯಲ್ಲಿ ಈಟಿ ಹಿಡಿದು ಕಅಬಾದ ಕಡೆಗೆ ಧಾವಿಸುತ್ತಿದ್ದರು.

ಆ ವೇಳೆ ಸಾಮಾನ್ಯವಾಗಿ ಕುರೈಶ್ ಸರದಾರರು ಕಅಬಾದಲ್ಲಿರುತ್ತಾರೆ. ಇಸ್ಲಾಮ್‌ನ ಕಡು ವೈರಿ ಅಬೂಜಹಲ್ ಕೂಡಾ ಅಲ್ಲೇ ಇದ್ದ. ಮುಹಮ್ಮದ್‌ರನ್ನು(ಸ) ಕಂಡು ಅವನು ಕೆರಳಿ ಕೆಂಡವಾದನು. ಆತ ಮುತ್‌ಇಮ್‌ರ ನ್ನುದ್ದೇಶಿಸಿ ಹೀಗೆ ಹೇಳಿದ: "ಮುತ್‌ಇಮರೇ! ನೀವು ಅವರಿಗೆ ಅಭಯ ನೀಡಿರುವಿರಾ ಅಥವಾ ಅವರಲ್ಲಿ ವಿಶ್ವಾಸ ವಿರಿಸಿದಿರಾ?"

ಮುತ್‌ಇಮ್: "ಅಭಯ ನೀಡಿರುವೆನು."

ಅಬೂಜಹಲ್: "ನೀವು ಅಭಯ ನೀಡಿದವನಿಗೆ ನಾವೂ ಅಭಯ ನೀಡಿದೆವು."

ಮುಹಮ್ಮದ್(ಸ) ಕಅಬಾ ಭವನಕ್ಕೆ ತಲುಪಿದವರೇ ಕಅಬಾದ ಪ್ರದಕ್ಷಿಣೆ ಬರಲಾರಂಭಿಸಿದರು. ಇದನ್ನು ಕಂಡು ಅಬೂಜಹಲ್ ಓರ್ವ ಹಾಶಿಮಿಯೊಡನೆ ಈ ರೀತಿ ವ್ಯಂಗ್ಯವಾಗಿ ಹೇಳುತ್ತಾನೆ: "ಮನಾಫ್ ಗೋತ್ರದವರೇ! ನೋಡಿ ನಿಮ್ಮ ಪ್ರವಾದಿ ಇವರು."

ಉತ್ಬಾ ಬಿನ್ ರಬೀಅ ಹಾಶಿಮಿ ಅಲ್ಲಿದ್ದರು. ಆದರೆ ಮುಸ್ಲಿಮ್ ಆಗಿರಲಿಲ್ಲ. ಆತ ಅಬೂಜಹಲನ ಮಾತು ಕೇಳಿ ಹೀಗೆಂದನು: "ನಮ್ಮ ಪೈಕಿ ಯಾರಾದರೂ ಪ್ರವಾದಿಯಾದರೆ ಅಥವಾ ಯಾರಿಗಾದರೂ ದೊರೆತನ ಪ್ರಾಪ್ತವಾದರೆ ಅದರಲ್ಲಿ ನಿಮಗೇಕೆ ಹೊಟ್ಟೆಕಿಚ್ಚು?"

ಮುಹಮ್ಮದ್‌ರು(ಸ) ಈ ಮಾತು ಕೇಳಿ ಉತ್ಬಾನ ಬಳಿಗೆ ಬಂದು ಹೀಗೆಂದರು: "ಆಶ್ಚರ್ಯ! ಅಲ್ಲಾಹ್ ಮತ್ತು ಆತನ ಪ್ರವಾದಿಯ ಬಗ್ಗೆ ಇಲ್ಲದ ಅಭಿಮಾನ ನಿಮ್ಮ ಗೋತ್ರದ ವಿಷಯ ಬಂದಾಗ ಉಕ್ಕಿ ಬಂತಲ್ಲವೇ?"

ತರುವಾಯ ಅಬೂಜಹಲನನ್ನುದ್ದೇಶಿಸಿ ಹೀಗೆ ಹೇಳಿದರು: "ನೀವು ಕಡಿಮೆ ನಗುವ ಮತ್ತು ಹೆಚ್ಚು ಅಳುವ ಕಾಲ ಸನ್ನಿಹಿತವಾಗಿದೆ." ಬಳಿಕ ಇತರ ಕುರೈಶ್ ಸರದಾರರನ್ನುದ್ದೇಶಿಸಿ ಹೇಳಿದರು: "ನೀವೊಂದು ಭಯಾನಕ ಪರಿಣಾಮವನ್ನು ಶೀಘ್ರವೇ ಎದುರಿಸಲಿರುವಿರಿ."

ಕುರೈಶರು ಇದನ್ನು ಕೇಳಿ ತಳಮಳಗೊಂಡರು. ಆದರೆ ಮುತ್‌ಇಮ್‌ರು ಮುಹಮ್ಮದ್‌ರಿಗೆ(ಸ) ಅಭಯಾಶ್ರಯ ನೀಡಿದ್ದುದರಿಂದ ಅವರೇನೂ ಮಾಡುವಂತಿರಲಿಲ್ಲ.

ಈಗ ಪ್ರವಾದಿ ಮುಹಮ್ಮದ್‌ರ(ಸ) ಗಮನವು ಕುರೈಶರಿಂದ ಸರಿದು ಮಕ್ಕಾದ ಇತರ ಗೋತ್ರಗಳೆಡೆಗೆ ಹರಿಯಿತು. ಅವರ ಮನೆಗಳಿಗೆ, ಚಾವಡಿಗಳಿಗೆ, ಕೇರಿಗಳಿಗೆ ಮತ್ತು ಪೇಟೆಗಳಿಗೆ ಭೇಟಿಯಿತ್ತು ಅವರನ್ನು ಅಲ್ಲಾಹನ ದಾಸ್ಯದೆಡೆಗೆ ಆಹ್ವಾನಿಸುತ್ತಿದ್ದರು. ತಾವು ಪ್ರವಾದಿಯಾಗಿರುವ ಬಗ್ಗೆ ಅವರಲ್ಲಿ ನಂಬಿಕೆ ಮೂಡಿಸಲು ಪ್ರಯತ್ನಿಸಿದರು. ತಮ್ಮ ಮೇಲೆ ವಿಶ್ವಾಸವಿರಿಸಿ ತಮ್ಮನ್ನು ಅನುಸರಿಸುವಂತೆ ಪ್ರೇರೇಪಿಸಿದರು. ತನ್ನ ಜೊತೆ ಸೇರಲು ಮತ್ತು ಎಲ್ಲ ಮನುಷ್ಯರಿಗೆ ಈ ಸಂದೇಶವನ್ನು ತಲುಪಿಸುವಲ್ಲಿ ತನಗೆ ನೆರವಾಗಲು ಕರೆ ನೀಡಿದರು.

## ಮಸ್ಜಿದುಲ್ ಹರಾಮ್‌ನಿಂದ ಅಕ್ಸಾದವರೆಗೆ

ಮಕ್ಕಾನಗರವು ಇಸ್ಲಾಮ್‌ನ ಮಟ್ಟಿಗೆ ಬಂಜರಾದಾಗ ಪ್ರವಾದಿವರ್ಯರು(ಸ) ತಾಯಿಫ್‌ನ ಕಡೆಗೆ ಹೊರಟಿದ್ದರು. ಅಲ್ಲಿ ತಲಪಿದಾಗ ಇಸ್ಲಾಮ್ ಅಲ್ಲಿ ಜೀವಂತ ಉಳಿಯುವ

ಸಾಧ್ಯತೆಯೂ ಇರಲಿಲ್ಲ ಎಂಬುದು ವ್ಯಕ್ತವಾಯಿತು. ಮಕ್ಕಾದಲ್ಲಿ ಕೆಲವು ಮಂದಿಯಾದರೂ ಅದಕ್ಕೆ ಸಿಕ್ಕಿದ್ದರು. ಆದರೆ ತಾಯಿಫ್ ಕೆಲವು ಕ್ಷಣಗಳ ಮಟ್ಟಿಗೂ ಆ ಧರ್ಮಪ್ರಚಾರ ಕಾರ್ಯವನ್ನು ಸಹಿಸಲು ಸಿದ್ಧವಾಗಲಿಲ್ಲ. ಈ ನಿರಾಶಾದಾಯಕ ಮತ್ತು ಮನನೋಯಿಸುವ ವರ್ತನೆಯಿಂದ ಮುಹಮ್ಮದ್(ಸ) ಅತ್ಯಧಿಕ ದುಃಖಿತ ರಾಗಿದ್ದರು. ತಾಯಿಫ್‌ನಿಂದ ಮರಳಿದ ಘಟನೆಯಂತೂ ಸೋಲು ಮತ್ತು ಚಿಂತೆಯ ಪರಾಕಾಷ್ಠೆ ಯಾಗಿತ್ತು. ಸತ್ಯ-ಮಿಥ್ಯಗಳ ಈ ಸಂಘರ್ಷದಲ್ಲಿ ಮಿಥ್ಯದ ಶಕ್ತಿಯು ಮುಗಿಲುಮುಟ್ಟಿತು. ಮಿಥ್ಯದ ಬತ್ತಳಿಕೆಯಲ್ಲಿದ್ದ ಹಿಂಸೆ ದೌರ್ಜನ್ಯಗಳ ಎಲ್ಲ ಬಾಣಗಳನ್ನೂ ಪ್ರವಾದಿ ವರ್ಯರು(ಸ) ಸಹಿಸಿಯಾಗಿತ್ತು. ಆದ್ದರಿಂದ ಈಗ ಅಲ್ಲಾಹನ ಸಹಾಯ ಬರುವ ದ್ವಾರವು ತೆರೆಯಲ್ಪಡುವುದರಲ್ಲಿತ್ತು. ಇಂತಹ ಪರಿಸ್ಥಿತಿಗಾಗಿಯೇ ಅಲ್ಲಾಹನ ವತಿಯಿಂದ ಈ ಸುವಾರ್ತೆ ಅವತೀರ್ಣಗೊಂಡಿತ್ತು,

"ಅಲ್ಲಾಹನ ಸಹಾಯ ಎಂದು ಬಂದೀತು?" ಎಂದು ಕಿರುಚಿ ಬಿಡುವಷ್ಟು ಕಷ್ಟಗಳೂ ವಿಪತ್ತುಗಳೂ ಅವರ ಮೇಲೆ ಎರಗಿದುವು ಮತ್ತು ಅವರನ್ನು ನಡುಗಿಸಿ ಬಿಡಲಾಯಿತು. 'ಇದೋ, ಅಲ್ಲಾಹನ ಸಹಾಯ ಸಮೀಪಿಸಿದೆ' (ಎಂದು ಆಗ ಅವರನ್ನು ಸಂತೈಸಲಾಯಿತು.)"

**(ಪವಿತ್ರ ಕುರ್‌ಆನ್, 2: 214)**

ಈಗ ಅಲ್ಲಾಹನ ಸಹಾಯ ಮತ್ತು ವಿಜಯದ ಬಾಗಿಲು ತೆರೆಯುವ ಸುವಾರ್ತೆ ಲಭಿಸುವ ಸಮಯ ಬಂದೊದಗಿದೆ. ಈ ಶುಭ ಸಮಾರಂಭಕ್ಕಾಗಿ ಪ್ರವಾದಿತ್ವದ 12ನೇ ವರ್ಷದ ರಜಬ್ 27ರ ರಾತ್ರಿಯನ್ನು ಆರಿಸಲಾಯಿತು. ಸೃಷ್ಟಿಕರ್ತನ ಸಂದೇಶವಾಹಕರೂ ಪ್ರತಿನಿಧಿಯೂ ಆಗಿ ಮುಹಮ್ಮದ್(ಸ) 12 ವರ್ಷಗಳಿಂದ ಅನುಭವಿಸಿದ ಸಂಕಷ್ಟಗಳ ನಂತರ ಈಗ ಆತನು ಅವರನ್ನು ತನ್ನ ಆಸ್ಥಾನದಲ್ಲಿ ಕರೆಸಿ ಸನ್ಮಾನಿಸಲಿದ್ದಾನೆ.

ಅಬೂತಾಲಿಬ್ ಕಣಿವೆಯಲ್ಲಿ ರಾತ್ರಿಯ ಅಂಧಕಾರ ವ್ಯಾಪಿಸಿದೆ. ಇಲ್ಲಿಯೇ ಮುಹಮ್ಮದ್(ಸ) ಮತ್ತು ಹಾಶಿಮ್ ಮನೆತನದವರು ಅನೇಕ ವರ್ಷಗಳ ತನಕ ಸಾಮಾಜಿಕ ಬಹಿಷ್ಕಾರ ಮತ್ತು ಸಂಕಷ್ಟಗಳ ಸರಮಾಲೆಯನ್ನು ಅನುಭವಿಸಿದ್ದರು. ಇಂದು ಕೂಡಾ ಮುಹಮ್ಮದ್(ಸ) ಇಲ್ಲಿಯೇ ಇದ್ದಾರೆ. ತಮ್ಮ ದೊಡ್ಡಪ್ಪನ ಮಗಳಾದ ಉಮ್ಮು ಹಾನಿ ಬಿನ್ತಿ ಅಬೀತಾಲಿಬ್‌ರ ಮನೆಯಲ್ಲಿ ಮಲಗಿ ನಿದ್ರೆ ಹೋಗಿದ್ದಾರೆ. ರಾತ್ರಿಯ ಸ್ವಲ್ಪ ಅಂಶವು ಕಳೆದಿದೆ. ಎಲ್ಲರೂ ನಿದ್ರೆಯ ವಶವಾಗಿದ್ದಾರೆ. ಅಷ್ಟರಲ್ಲಿ ಛಾವಣಿಯು ತೆರೆಯುತ್ತದೆ. ಜಿಬ್ರೀಲ್(ಅ) ಒಳಗೆ ಪ್ರವೇಶಿಸುತ್ತಾರೆ. ಮುಹಮ್ಮದ್(ಸ) ನಿದ್ರೆಯಲ್ಲಿರುವ ಸ್ಥಿತಿಯಲ್ಲೇ ಅವರನ್ನೆತ್ತಿಕೊಂಡು ಮಸ್ಜಿದುಲ್ ಹರಾಮ್‌ಗೆ ಒಯ್ಯುತ್ತಾರೆ. ಮುಹಮ್ಮದ್(ಸ) ಅರೆನಿದ್ರೆ ಅರೆಎಚ್ಚರದ ಅವಸ್ಥೆಯಲ್ಲಿ ಝಮ್ ಝಮ್ ಬಾವಿಯ ಸಮೀಪ ಇದ್ದಾರೆ. ಜಿಬ್ರೀಲ್(ಅ) ಅವರ ಎದೆಯನ್ನು ಸೀಳುತ್ತಾರೆ. ಹೃದಯವನ್ನು ಹೊರತೆಗೆದು ಜ್ಞಾನ, ಸಂಯಮ, ಬುದ್ಧಿವಂತಿಕೆ, ವಿಶ್ವಾಸ-ಶ್ರದ್ಧೆಗಳಿಂದ ತುಂಬುತ್ತಾರೆ. ಮತ್ತೆ ಅದನ್ನು ಪೂರ್ವಸ್ಥಿತಿಯಲ್ಲಿ

ಇರಿಸುತ್ತಾರೆ. ಅನಂತರ ಕತ್ತೆ ಮತ್ತು ಕುದುರೆಯ ಮಧ್ಯಗಾತ್ರದ ಒಂದು ಬಿಳಿ ಪ್ರಾಣಿಯನ್ನು ಸವಾರಿಗಾಗಿ ಮುಹಮ್ಮದ್‌ರ(ಸ) ಮುಂದೆ ನಿಲ್ಲಿಸಿ ಅದರ ಮೇಲೆ ಏರುವಂತೆ ವಿನಂತಿಸುತ್ತಾರೆ. 'ಬುರಾಕ್' ಎಂಬ ಈ ಪ್ರಾಣಿಯು ಅತ್ಯಂತ ವೇಗವಾಗಿ ಚಲಿಸುತ್ತಿತ್ತು. ಅದರ ಒಂದೊಂದು ಹೆಜ್ಜೆಯೂ ದಿಗಂತದವರೆಗೆ ತಲುಪುತ್ತಿತ್ತು. ಮಿಂಚಿನ ವೇಗದಿಂದ ಚಲಿಸುವುದರಿಂದಲೇ ಅದಕ್ಕೆ 'ಬುರಾಕ್' ಎಂಬ ಹೆಸರಿಡಲಾಯಿತು.

ಮುಹಮ್ಮದ್(ಸ) ಮತ್ತು ಜಿಬ್ರೀಲ್(ಅ) ಹೊರಡುತ್ತಾರೆ. ಕ್ಷಣಾರ್ಧದಲ್ಲಿ ಅವರು ಮದೀನಾ ತಲುಪುತ್ತಾರೆ. ಅಲ್ಲಿಳಿದು ನಮಾಝ್ ಮಾಡಿ ಮುಂದುವರಿಯುತ್ತಾರೆ. ಮುಹಮ್ಮದ್‌ರಿಗೆ(ಸ) 'ತಾವು ಹಿಜ್ರತ್ ಮಾಡಿ ಇಲ್ಲಿಗೆ ಬರಲಿದ್ದೀರಿ' ಎಂದು ಜಿಬ್ರೀಲ್(ಅ) ಸೂಚನೆ ನೀಡುತ್ತಾರೆ. ಅಲ್ಲಿಂದ ಅವರು ಸೀನಾಯ್ ಪರ್ವತಕ್ಕೆ ಹೋಗುತ್ತಾರೆ. ಅದು ಅಲ್ಲಾಹನು ಮೂಸಾರೊಂದಿಗೆ(ಅ) ಸಂಭಾಷಣೆ ನಡೆಸಿದ ಸ್ಥಳವಾಗಿತ್ತು. ಇಲ್ಲಿಯೂ ತೂರ್ ವೃಕ್ಷದ ಬಳಿ ಮುಹಮ್ಮದ್(ಸ) ಎರಡು ರಕಅತ್ ನಮಾಝ್ ಮಾಡುತ್ತಾರೆ. ಅಲ್ಲಿಂದ ಅವರು ಬೈತುಲ್ಲಹಮ್(Bethlehem)ಗೆ ಹೋಗುತ್ತಾರೆ. ಇದು ಹ.ಈಸಾ(ಅ) ಜನಿಸಿದ ಸ್ಥಳವಾಗಿದೆ. ಪ್ರವಾದಿ(ಸ) ಅಲ್ಲಿಯೂ ಎರಡು ರಕಅತ್ ನಮಾಝ್ ಮಾಡುತ್ತಾರೆ.

ಇದೇ ಯಾತ್ರೆಯ ವೇಳೆ ಒಂದೆಡೆಯಿಂದ 'ಇಲ್ಲಿ ಬನ್ನಿ' ಎಂಬ ಶಬ್ದ ಕೇಳಿಸು ತ್ತದೆ. ಆದರೆ ಮುಹಮ್ಮದ್(ಸ) ಸ್ವಲ್ಪವೂ ಆ ಕಡೆ ಗಮನ ಹರಿಸದೆ ಮುಂದುವರಿಯು ತ್ತಾರೆ. ಇದು ಯಹೂದಿತ್ವದ ಕಡೆಗೆ ಕರೆದುದೆಂದು ಜಿಬ್ರೀಲ್(ಅ) ತಿಳಿಸುತ್ತಾರೆ. ಇನ್ನೊಂದು ಕಡೆ 'ಇಲ್ಲಿ ಬನ್ನಿ' ಎಂಬ ಸ್ವರ ಕೇಳಿಬಂದಾಗಲೂ ಪ್ರವಾದಿ(ಸ) ನಿರ್ಲಕ್ಷ್ಯ ಸುತ್ತಾರೆ. ಇದು ಕ್ರೈಸ್ತ ಮತದೆಡೆಗೆ ಕರೆದುದೆಂದು ಜಿಬ್ರೀಲ್(ಅ) ತಿಳಿಸುತ್ತಾರೆ. ತರು ವಾಯ ಒಂದು ಸರ್ವಾಭರಣಭೂಷಿತ ಸುಂದರ ಮಹಿಳೆ ಪ್ರವಾದಿವರ್ಯರನ್ನು(ಸ) ತನ್ನೆಡೆಗೆ ಕರೆಯುತ್ತಾಳೆ. ಮುಹಮ್ಮದ್(ಸ) ಆ ಕಡೆಯಿಂದ ಮುಖ ತಿರುಗಿಸಿಕೊಳ್ಳುತ್ತಾರೆ. ಅದು 'ಇಹಲೋಕ'ವೆಂದು ಅನಂತರ ಜಿಬ್ರೀಲ್(ಅ) ತಿಳಿಸುತ್ತಾರೆ. ಅನಂತರ ಓರ್ವ ಮುದುಕಿ ಎದುರಾಗುತ್ತಾಳೆ. ಲೋಕದ ಉಳಿದ ಆಯುಷ್ಯವನ್ನು ಈ ಮುದುಕಿಯ ಉಳಿದ ಜೀವನಾವಧಿಯಿಂದ ಅಂದಾಜಿಸಬಹುದೆಂದು ಜಿಬ್ರೀಲ್(ಅ) ತಿಳಿಸುತ್ತಾರೆ. ಆ ಬಳಿಕ ಒಬ್ಬ ವ್ಯಕ್ತಿ ಎದುರಾಗಿ ಪ್ರವಾದಿವರ್ಯರ(ಸ) ಗಮನವನ್ನು ತನ್ನೆಡೆಗೆ ಸೆಳೆಯಬಯಸಿದ. ಆದರೆ ಮುಹಮ್ಮದ್(ಸ) ಅವನನ್ನು ಬಿಟ್ಟು ಮುಂದುವರಿದರು. ಇದು ಶೈತಾನನಾಗಿದ್ದು ತಮ್ಮನ್ನು ದಾರಿ ತಪ್ಪಿಸಲು ಬಂದಿದ್ದನೆಂದು ಅನಂತರ ಜಿಬ್ರೀಲ್(ಅ) ತಿಳಿಸಿದರು.

ಈ ಪ್ರವಾಸದಲ್ಲಿ ಅಪರಾಧ, ಪಾಪ ಮತ್ತು ಅದರ ಶಿಕ್ಷೆಯ ಕೆಲವು ವಾಸ್ತವಿಕತೆಗಳನ್ನು ದೃಷ್ಟಾಂತಗಳ ರೂಪದಲ್ಲಿ ತೋರಿಸಿ ಕೊಟ್ಟು ಅವುಗಳನ್ನು ವಿವರವಾಗಿ ತಿಳಿಯುವ ಅವಕಾಶವನ್ನು ಒದಗಿಸಲಾಯಿತು. ಪ್ರವಾದಿ(ಸ) ಈ ಕೆಳಗಿನ ವೃತ್ತಾಂತಗಳನ್ನು ಕಂಡರು:

1. ಕೆಲವರು ಬೆಳೆ ಕೊಯ್ಯುತ್ತಿದ್ದಾರೆ. ಆದರೆ ಕೊಯ್ಯುತ್ತಿದ್ದಂತೆ ಅದು ಬೆಳೆಯುತ್ತಾ

ಹೋಗುತ್ತಿತ್ತು. ಇವರು ಯಾರು ಎಂದು ಕೇಳಿದಾಗ ಅಲ್ಲಾಹನ ಮಾರ್ಗದಲ್ಲಿ ಹೋರಾಟ ಮಾಡಿದವರೆಂದು ತಿಳಿಸಲಾಯಿತು.

2. ಕೆಲವರ ತಲೆಗಳನ್ನು ಕಲ್ಲುಗಳಿಂದ ಜಜ್ಜಲಾಗುತ್ತಿತ್ತು. ಇವರು ಯಾರೆಂದು ಕೇಳಿದಾಗ ತಮ್ಮ ತಲೆಯ ಭಾರದಿಂದಾಗಿ ನಮಾಝ್‌ಗಾಗಿ ಏಳದವರೆಂಬ ಉತ್ತರ ಸಿಗುತ್ತದೆ.

3. ಕೆಲವರ ಬಟ್ಟೆಗಳಲ್ಲಿ ಹಿಂದೆ-ಮುಂದೆ ತೇಪೆ ಹಚ್ಚಲ್ಪಟ್ಟಿತ್ತು. ಜಾನುವಾರು ಗಳಂತೆ ಅವರು ಮೇಯುತ್ತಿದ್ದರು. ಇವರು ಯಾರೆಂದು ವಿಚಾರಿಸಿದಾಗ ತಮ್ಮ ಸೊತ್ತಿ ನಿಂದ ಝಕಾತ್ ಮತ್ತು ದಾನ-ಧರ್ಮಗಳನ್ನು ಕೊಡದವರೆಂದು ತಿಳಿದು ಬಂತು.

4. ಒಬ್ಬನು ಕಟ್ಟಿಗೆಯ ಕಟ್ಟೊಂದನ್ನು ಎತ್ತಿ ತಲೆಯಲ್ಲಿಡಲು ಪ್ರಯತ್ನಿಸುತ್ತಾನೆ. ಅದು ಅವನಿಗೆ ಎತ್ತಲಾಗುವುದಿಲ್ಲ. ಆಗ ಅವನು ಅದಕ್ಕೆ ಇನ್ನಷ್ಟು ಕಟ್ಟಿಗೆಯನ್ನು ಸೇರಿಸಿ ಎತ್ತಲು ಯತ್ನಿಸುತ್ತಾನೆ. ಪ್ರತಿಸಲ ಹೀಗೆಯೇ ಮಾಡುತ್ತಿರುತ್ತಾನೆ. ಇದು ಯಾವ ಮೂರ್ಖನೆಂದು ಪ್ರಶ್ನಿಸಿದಾಗ ತನ್ನ ಮೇಲೆ ಹೊರಲಾರದಷ್ಟು ಹೊಣೆಗಾರಿಕೆಗಳ ಭಾರವಿದ್ದಾಗಲೂ ಅದನ್ನು ಕಡಿಮೆ ಮಾಡುವ ಬದಲು ಇನ್ನಷ್ಟು ಹೊಣೆಗಾರಿಕೆಗಳ ಭಾರವನ್ನು ತನ್ನ ಮೇಲೆ ಹೇರುತ್ತಲೇ ಇರುವವನು ಎಂದು ತಿಳಿಸಲಾಯಿತು.

5. ಕೆಲವರ ನಾಲಗೆ ಮತ್ತು ತುಟಿಗಳನ್ನು ಕತ್ತರಿಯಿಂದ ಕತ್ತರಿಸಲಾಗುತ್ತಿರುವುದಾಗಿ ಕಂಡಿತು. ಇವರು ಯಾರೆಂದು ಕೇಳಿದಾಗ ಇವರು ಹೊಣೆಗೇಡಿ ಭಾಷಣಕಾರರಾಗಿದ್ದು ತಮ್ಮ ನಾಲಗೆಯನ್ನು ಇಷ್ಟ ಬಂದಂತೆ ಬಳಸಿ ಅಶಾಂತಿ ಹರಡುತ್ತಿದ್ದವರು ಎಂದು ಹೇಳಲಾಯಿತು.

6. ಒಂದು ಕಡೆ ಒಂದು ಬಂಡೆಯಲ್ಲಿ ಸಣ್ಣ ಬಿರುಕು ಕಾಣಿಸಿಕೊಳ್ಳುತ್ತದೆ. ಅದರಿಂದ ಒಂದು ದಷ್ಟಪುಷ್ಟವಾದ ಎತ್ತು ಹೊರಬರುತ್ತದೆ. ಅದು ಮತ್ತೆ ಆ ಬಿರುಕಿನೊಳಗೆ ಹೋಗಲು ಪ್ರಯತ್ನಿಸಿ ವಿಫಲವಾಗುತ್ತದೆ. ಇದೇನೆಂದು ವಿಚಾರಿಸಿದಾಗ ಹೊಣೆಗೇಡಿತನದಿಂದ ಒಂದು ಅಶಾಂತಿ ಹರಡುವ ಮಾತು ಹೇಳಿದ ಬಳಿಕ ಅದರ ಬಗ್ಗೆ ಪಶ್ಚಾತ್ತಾಪ ಪಟ್ಟು ಅದನ್ನು ಸರಿಪಡಿಸಬಯಸುತ್ತಾನೆ. ಆದರೆ ಅದು ಸರಿ ಯಾಗುವುದಿಲ್ಲ ಎನ್ನಲಾಗುತ್ತದೆ.

7. ಒಂದೆಡೆ ಕೆಲವರು ತಮ್ಮದೇ ಮಾಂಸವನ್ನು ಕತ್ತರಿಸಿ ತಿನ್ನುತ್ತಿದ್ದಾರೆ. ಇವರು ಯಾರೆಂದು ಕೇಳಿದಾಗ ಇತರರ ಬಗ್ಗೆ ವ್ಯಂಗ್ಯ ಮಾತುಗಳನ್ನಾಡುವವರು ಎಂಬ ಉತ್ತರ ಸಿಗುತ್ತದೆ.

8. ಅವರ ಹತ್ತಿರವೇ ಇನ್ನು ಕೆಲವರು ಇದ್ದಾರೆ. ಅವರ ಉಗುರುಗಳು ತಾಮ್ರದವುಗಳಾಗಿದ್ದು, ಅವರು ಅದರಿಂದ ತಮ್ಮ ಮುಖ ಮತ್ತು ಎದೆಯನ್ನು ಪರಚುತ್ತಿದ್ದರು. ಇವರು ಯಾರೆಂದು ಪ್ರಶ್ನಿಸಿದಾಗ ಜನರ ಹಿಂದೆ ಅವರ ದೂಷಣೆ ಮಾಡುವವರು ಮತ್ತು ಇತರರ ಚಾರಿತ್ರ್ಯಹರಣ ಮಾಡುವವರು ಎನ್ನಲಾಯಿತು.

9. ಇನ್ನು ಕೆಲವರ ತುಟಿಗಳು ಒಂಟೆಯಂತಿದ್ದುವು. ಅವರು ಅಗ್ನಿಯನ್ನು ತಿನ್ನುತ್ತಿದ್ದರು. ಅವರು ಯಾರೆಂದು ವಿಚಾರಿಸಿದಾಗ ಅನಾಥರ ಸೊತ್ತು ಕಬಳಿಸುತ್ತಿದ್ದವರೆಂದು ತಿಳಿಸಲಾಯಿತು.

10. ಮತ್ತೆ ಕೆಲವರ ಹೊಟ್ಟೆಯು ಬಹಳ ದೊಡ್ಡದಾಗಿದ್ದು ಅದರೊಳಗೆ ಹಾವುಗಳು ತುಂಬಿದ್ದುವು. ದಾರಿಹೋಕರು ಅವರನ್ನು ತುಳಿಯುತ್ತಾ ಹೋಗುತ್ತಿದ್ದರು. ಆದರೂ ಅವರು ತಮ್ಮ ಸ್ಥಾನದಿಂದ ಕದಲುತ್ತಿರಲಿಲ್ಲ. ಇವರು ಯಾರೆಂದು ಕೇಳಿದಾದ ಬಡ್ಡಿ ತಿನ್ನುತ್ತಿದ್ದವರು ಎಂದು ತಿಳಿಸಲಾಯಿತು.

11. ಕೆಲವು ಮಂದಿಯ ಬಳಿ ಉತ್ತಮ ಮಾಂಸವು ಇಡಲಾಗಿತ್ತು. ಇನ್ನೊಂದು ಪಕ್ಕದಲ್ಲಿ ಕೊಳೆತ ಮಾಂಸವನ್ನು ಇಡಲಾಗಿತ್ತು. ಅವರು ಉತ್ತಮ ಮಾಂಸವನ್ನು ಬಿಟ್ಟು ಕೊಳೆತ ಮಾಂಸವನ್ನು ತಿನ್ನುತ್ತಿದ್ದರು. ಇವರು ಯಾರೆಂದು ವಿಚಾರಿಸಿದಾಗ ತಮ್ಮ ಧರ್ಮಸಮ್ಮತ ಪತಿ-ಪತ್ನಿಯರನ್ನು ಬಿಟ್ಟು ನಿಷಿದ್ಧ ಮಾರ್ಗದಿಂದ ತಮ್ಮ ಬಯಕೆಯನ್ನು ಈಡೇರಿಸಿದ ಸ್ತ್ರೀ-ಪುರುಷರು ಎಂದು ತಿಳಿಸಲಾಯಿತು.

12. ಕೆಲವು ಮಹಿಳೆಯರು ಬೋರಲಾಗಿ ತೂಗಾಡುತ್ತಿರುವುದು ಗೋಚರಿಸಿದಾಗ ಅವರು ಯಾರೆಂದು ವಿಚಾರಿಸಲಾಯಿತು. ತಮ್ಮ ಪತಿಯಂದಿರಿಗೆ ಅವರದಲ್ಲದ ಮಕ್ಕಳನ್ನು ನೀಡಿದ ಪತ್ನಿಯರು ಎಂದು ತಿಳಿಸಲಾಯಿತು.

## ಅಲ್ ಅಕ್ಸಾದಿಂದ ವಿಶ್ವ ಸಿಂಹಾಸನದೆಡೆಗೆ

ಮುಹಮ್ಮದ್(ಸ) ಜಿಬ್ರೀಲ್‌ರ(ಅ) ಜೊತೆಗೆ ಬೈತುಲ್ ಮಕ್ದಿಸ್ ತಲಪುತ್ತಾರೆ. ಅಲ್ಲಿ ತಮಗಿಂತ ಹಿಂದಿನ ಎಲ್ಲ ಪ್ರವಾದಿಗಳೂ 'ಮಸ್ಜಿದುಲ್ ಅಕ್ಸಾ'ದಲ್ಲಿ ನಮಾಝ್‌ನ ಸಿದ್ಧತೆಯಲ್ಲಿ ನಿಂತಿರುವರು. ಮುಹಮ್ಮದ್‌ರು(ಸ) ಜಿಬ್ರೀಲರ ಸೂಚನೆ ಮೇರೆಗೆ ನಮಾಝ್‌ನ ನೇತೃತ್ವ ವಹಿಸುತ್ತಾರೆ.

ತರುವಾಯ ಸೋಪಾನವೊಂದನ್ನೇರಿ ಗಗನದ ಕಡೆಗೆ ಧಾವಿಸುತ್ತಾರೆ. ಏಣಿಯನ್ನು ಅರಬಿಯಲ್ಲಿ 'ಮಿಅ್‌ರಾಜ್' ಎನ್ನುತ್ತಾರೆ. ಆದ್ದರಿಂದ ಈ ಘಟನೆಗೆ 'ಮಿಅ್‌ರಾಜ್' ಎಂಬ ಹೆಸರು ಬಂದಿದೆ. ಗಗನ ಯಾನದ ಪ್ರತಿಯೊಂದು ಹಂತದಲ್ಲಿ ಮುಹಮ್ಮದ್‌ರಿಗೆ(ಸ) ಕ್ರಮವಾಗಿ ಹ. ಆದಮ್, ಹ. ಯಹ್ಯಾ, ಹ. ಈಸಾ, ಹ. ಯೂಸುಫ್, ಹ. ಇದ್ರೀಸ್, ಹ. ಹಾರೂನ್ ಮತ್ತು ಹ. ಮೂಸಾರ(ಅ) ಭೇಟಿ ಯಾಗುತ್ತದೆ. ಕೊನೆಯ ಹಂತದಲ್ಲಿ ಹ.ಇಬ್ರಾಹೀಮ್‌ರ(ಅ) ಭೇಟಿಯಾಗುತ್ತದೆ.

ಈ ಎಲ್ಲ ಹಂತಗಳನ್ನು ದಾಟಿ ಪ್ರವಾದಿ ಮುಹಮ್ಮದ್(ಸ) ಜಿಬ್ರೀಲ್‌ರನ್ನು(ಅ) ತೊರೆದು ಇನ್ನಷ್ಟು ಉನ್ನತಿಗೇರುತ್ತಾರೆ. ಈ ತನಕ ಯಾವ ಸೃಷ್ಟಿಯೂ ತಲುಪಿರದಷ್ಟು ಔನ್ನತ್ಯಕ್ಕೆ ತಲುಪಿ ಅಲ್ಲಾಹನೊಂದಿಗೆ ಸಂಭಾಷಣೆ ನಡೆಸುತ್ತಾರೆ. ಅಲ್ಲಿ ಅವರಿಗೆ ದೊರೆತ ಮುಖ್ಯ ಆದೇಶಗಳು ಹೀಗಿವೆ:

1. ಪ್ರತಿದಿನ 50 ಸಲದ ನಮಾಝ್ ಕಡ್ಡಾಯಗೊಳಿಸಲಾಯಿತು.

2. ಸೂರಃ ಅಲ್‌ಬಕರಃದ ಕೊನೆಯ ಎರಡು ಸೂಕ್ತಗಳು ಅವತೀರ್ಣಗೊಂಡುವು:

"ಸಂದೇಶವಾಹಕರು ತನ್ನ ಪ್ರಭುವಿನ ವತಿಯಿಂದ ಅವತೀರ್ಣಗೊಂಡುದರ ಮೇಲೆ ವಿಶ್ವಾಸವಿರಿಸಿದ್ದಾರೆ ಮತ್ತು ಈ ಸಂದೇಶವಾಹಕರ ಮೇಲೆ ವಿಶ್ವಾಸವಿಡುವವರು ಸಹ ಈ ಬೋಧನೆಯನ್ನು ಹೃತ್ಪೂರ್ವಕ ಸ್ವೀಕರಿಸಿದ್ದಾರೆ. ಇವರೆಲ್ಲರೂ ಅಲ್ಲಾಹ ನಲ್ಲಿಯೂ ಅವನ ದೇವಚರರಲ್ಲಿಯೂ ಅವನ ದಿವ್ಯಗ್ರಂಥಗಳಲ್ಲಿಯೂ ಅವನ ಸಂದೇಶವಾಹಕರಲ್ಲಿಯೂ ವಿಶ್ವಾಸವಿರಿಸುತ್ತಾರೆ. ನಾವು ಅಲ್ಲಾಹನ ಸಂದೇಶವಾಹಕರ ನಡುವೆ ಯಾವತ್ತು ತಾರತಮ್ಯ ವನ್ನಿರಿಸುವುದಿಲ್ಲ. ನಾವು ಆಜ್ಞೆಯನ್ನು ಆಲಿಸಿದೆವು ಮತ್ತು ಅನುಸರಣೆಯನ್ನು ಸ್ವೀಕರಿಸಿದೆವು. ನಮ್ಮ ಪ್ರಭೂ, ನಾವು ನಿನ್ನಿಂದ ಪಾಪ ವಿಮೋಚನೆಯನ್ನು ಬಯಸುತ್ತೇವೆ ಮತ್ತು ನಮಗೆ ನಿನ್ನ ಕಡೆಗೇ ಮರಳಲಿಕ್ಕಿದೆ" ಎಂದು ಅವರನ್ನುತ್ತಾರೆ. ಅಲ್ಲಾಹನು ಯಾವ ಜೀವಿಯ ಮೇಲೂ ಅವನ ಶಕ್ತಿಗೆ ಮೀರಿದ ಹೊಣೆ ಹೊರಿಸುವುದಿಲ್ಲ. ಪ್ರತಿಯೊಬ್ಬನು ಗಳಿಸಿದ ಪುಣ್ಯದ ಫಲ ಅವನಿಗೆ ಸಿಗುವುದು ಮತ್ತು ಅವನು ಶೇಖರಿಸಿದ ಪಾಪದ ದಂಡವೂ ಅವನ ಮೇಲೆಯೇ ಇರುವುದು. (ಓ ಸತ್ಯವಿಶ್ವಾಸಿಗಳೇ! ನೀವು ಹೀಗೆ ಯಾಚಿಸಿರಿ:) ಓ ನಮ್ಮ ಪ್ರಭೂ, ನಮ್ಮಿಂದ ಪ್ರಮಾದವಶಾತ್ ಅಪರಾಧಗಳಾಗಿಬಿಟ್ಟರೆ ಅವುಗಳಿಗಾಗಿ ನಮ್ಮನ್ನು ಹಿಡಿಯಬೇಡ. ಪ್ರಭೂ, ನಮ್ಮ ಪೂರ್ವಿಕರ ಮೇಲೆ ಹೊರಿಸಿದಂತಹ ಹೊರೆಯನ್ನು ನಮ್ಮ ಮೇಲೆ ಹೊರಿಸಬೇಡ. ಓ ನಮ್ಮ ಪ್ರಭೂ, ನಮ್ಮಿಂದ ಹೊರಲು ಸಾಧ್ಯವಾಗದ ಹೊರೆಯನ್ನು ನಮ್ಮ ಮೇಲೆ ಹೊರಿಸಬೇಡ. ನಮ್ಮ ಪಾಪಗಳನ್ನು ಪರಿಹರಿಸು, ನಮ್ಮನ್ನು ಕ್ಷಮಿಸು, ನಮ್ಮ ಮೇಲೆ ಕೃಪೆದೋರು. ನೀನೇ ನಮ್ಮ ಸ್ವಾಮಿಯು. ಸತ್ಯನಿಷೇಧಿಗಳ ಎದುರು ನಮಗೆ ಸಹಾಯ ಮಾಡು." **(ಪವಿತ್ರ ಕುರ್‌ಆನ್, 2:285, 286)**

3. ಶಿರ್ಕ್ ಅಥವಾ ಬಹುದೇವಾರಾಧನೆಯ ಹೊರತು ಉಳಿದ ಎಲ್ಲ ಪಾಪಗಳು ಕ್ಷಮಿಸಲ್ಪಡಬಹುದೆಂದು ತಿಳಿಸಲಾಯಿತು.

4. ಯಾರು ಒಂದು ಪುಣ್ಯಕಾರ್ಯದ ಸಂಕಲ್ಪ ಮಾಡುವನೋ ಅವನ ಪಾಲಿಗೆ ಅದರ ಒಂದು ಪುಣ್ಯಫಲವನ್ನು ಬರೆಯಲಾಗುತ್ತದೆ. ಆ ಪುಣ್ಯ ಕಾರ್ಯವನ್ನು ಅವನು ಮಾಡಿದಾಗ ಅವನ ಪಾಲಿಗೆ 10 ಪುಣ್ಯಗಳನ್ನು ಬರೆಯಲಾಗುತ್ತದೆ. ಆದರೆ ಪಾಪಕಾರ್ಯದ ಸಂಕಲ್ಪ ಮಾಡುವವನ ಪಾಲಿಗೆ ಅದರ ಪಾಪವನ್ನು ಬರೆಯಲಾಗುವುದಿಲ್ಲ. ಅವನು ಆ ಪಾಪಕೃತ್ಯವನ್ನು ಎಸಗಿದಾಗ ಮಾತ್ರ ಅವನ ಪಾಲಿಗೆ ಒಂದು ಪಾಪವನ್ನು ಬರೆಯಲಾಗುತ್ತದೆ.

ಮುಹಮ್ಮದ್(ಸ) ಅಲ್ಲಾಹನ ಆಸ್ಥಾನದಿಂದ ಮರಳಿದಾಗ ಅವರ ಭೇಟಿ ಹ. ಮೂಸಾರೊಂದಿಗಾಗುತ್ತದೆ(ಅ). ಪ್ರವಾದಿ ಮುಹಮ್ಮದ್‌ರಿಂದ(ಸ) ದಿವ್ಯದರ್ಶನದ ವೃತ್ತಾಂತವನ್ನು ಆಲಿಸಿದ ಬಳಿಕ "ನನಗೆ ಬನೀ ಇಸ್ರಾಈಲರ ಕಹಿ ಅನುಭವವಿದೆ. ನಿಮ್ಮ ಸಮುದಾಯ ದಿನಕ್ಕೆ 50 ಹೊತ್ತಿನ ನಮಾಝನ್ನು ಪಾಲಿಸಲಾರದು. ಅದನ್ನು ಕಡಿತಗೊಳಿಸಲು

ವಿನಂತಿಸಿರಿ" ಎಂದು ಮೂಸಾ(ಅ) ಹೇಳುತ್ತಾರೆ. ಮುಹಮ್ಮದ್(ಸ) ಅಲ್ಲಾಹನ ಸನ್ನಿಧಿಗೆ ಮರಳಿ ನಮಾಝ್‌ನಲ್ಲಿ ಕಡಿತಕ್ಕಾಗಿ ಬಿನ್ನವಿಸುತ್ತಾರೆ. ಕೊನೆಗೆ 5 ಹೊತ್ತಿನ ನಮಾಝ್ ಕಡ್ಡಾಯವೆಂಬ ಆಜ್ಞೆ ಸಿಗುತ್ತದೆ. ಆದರೆ ಅದಕ್ಕೆ 50 ನಮಾಝ್‌ಗಳ ಪುಣ್ಯವೇ ಲಭಿಸುವುದೆಂದು ತಿಳಿಸಲಾಗುತ್ತದೆ.

ಮುಹಮ್ಮದ್(ಸ) ತಮ್ಮ ಪ್ರಭುವಿನ ಆಸ್ಥಾನದಿಂದ ಮರಳಿ ಪುನಃ 'ಬುರಾಕ್'ನಲ್ಲಿ ಸವಾರರಾಗಿ ಮಕ್ಕಾ ತಲುಪುತ್ತಾರೆ. ತಮ್ಮ ತಂದೆಯ ಸೋದರ ಪುತ್ರಿ ಉಮ್ಮು ಹಾನಿಯವರಿಗೆ(ರ) ತಮ್ಮ ಯಾತ್ರೆಯ ವೃತ್ತಾಂತವನ್ನು ತಿಳಿಸುತ್ತಾರೆ. ಮುಹಮ್ಮದ್(ಸ) ಅವರು ಉಮ್ಮು ಹಾನಿಯವರ ಮನೆಯಿಂದ ಹೊರಡತೊಡಗಿದಾಗ ಉಮ್ಮು ಹಾನಿಯವರು, "ಪ್ರವಾದಿವರ್ಯರೇ! ಈ ವೃತ್ತಾಂತವನ್ನು ದಯವಿಟ್ಟು ಯಾರಿಗೂ ತಿಳಿಸಬೇಡಿರಿ. ಅನ್ಯಥಾ ಅವರಿಗೆ ತಮ್ಮನ್ನು ಗೇಲಿ ಮಾಡಲು ಇನ್ನೊಂದು ನೆಪ ಸಿಕ್ಕಿದಂತಾಗುವುದು" ಎನ್ನುತ್ತಾರೆ.

ಮುಹಮ್ಮದ್(ಸ) ಪೂರ್ಣ ಧೈರ್ಯದೊಂದಿಗೆ, "ನಾನು ಖಂಡಿತ ಈ ಘಟನೆಯನ್ನು ತಿಳಿಸುವೆನು" ಎನ್ನುತ್ತಾ ಅಲ್ಲಿಂದ ಹೊರಡುತ್ತಾರೆ.

## ಅದ್ಭುತ ಯಾತ್ರೆ

ಕಅಬಾ ಭವನದಲ್ಲಿ ಮುಂಜಾನೆಯೇ ಕುರೈಶ್ ಸರದಾರರು ಸೇರಿ ಹರಟೆ ಕೊಚ್ಚುತ್ತಿದ್ದಾರೆ. ಅಬೂಜಹಲ್ ಸಭಾಪತಿಯ ಸ್ಥಾನವನ್ನು ಅಲಂಕರಿಸಿದ್ದಾನೆ. ಮುಹಮ್ಮದ್‌ರು(ಸ) ದೂರದಿಂದ ಬರುತ್ತಿರುವುದನ್ನು ಕಂಡು ಸ್ವಲ್ಪ ಹೊತ್ತು ಮನರಂಜನೆಯ ವ್ಯವಸ್ಥೆ ಆಯಿತೆಂದು ಭಾವಿಸುತ್ತಾ ನಗುತ್ತಾನೆ. ಮುಹಮ್ಮದ್(ಸ) ಹತ್ತಿರ ಬಂದು ಆಸೀನರಾಗುತ್ತಾರೆ.

ಅಬೂಜಹಲ್: "ಏನು ಮುಹಮ್ಮದ್(ಸ)! ಹೊಸ ಸಮಾಚಾರವೇನಾದರೂ ಇದೆಯೇ?"

ಮುಹಮ್ಮದ್: "ನಾನು ಕಳೆದ ರಾತ್ರಿ ಬೈತುಲ್ ಮಕ್ದಿಸ್‌ಗೆ ಹೋಗಿದ್ದೆ."

ಅಬೂಜಹಲ್: "ಒಂದೇ ರಾತ್ರಿಯಲ್ಲಿ ಬೈತುಲ್ ಮಕ್ದಿಸಿಗೆ ಹೋಗಿ ಬೆಳಗಾಗು ವುದರೊಳಗೆ ಇಲ್ಲಿಗೆ ತಲುಪಿದೆಯಾ?"

ಮುಹಮ್ಮದ್: "ಹೌದು."

ಮುಹಮ್ಮದ್‌ರ(ಸ) ತಲೆ ಕೆಟ್ಟಿದೆ ಎಂದು ಅಬೂಜಹಲ್‌ನಿಗೆ ಖಾತ್ರಿಯಾಯಿತು. ಇವರ ಬಾಯಿಯಿಂದಲೇ ಇತರರೂ ಆ ವೃತ್ತಾಂತವನ್ನು ಕೇಳಿದರೆ ಇನ್ನಷ್ಟು ಮಜಾ ಆಗುವುದೆಂದೂ ತನ್ಮೂಲಕ ಜನರನ್ನು ಮುಹಮ್ಮದ್‌ರ(ಸ) ವಿರುದ್ಧ ಎತ್ತಿಕಟ್ಟುವುದು ಸುಲಭವಾಗುವುದೆಂದೂ ಭಾವಿಸಿ ಅವನು ಮುಹಮ್ಮದ್‌ರಲ್ಲಿ(ಸ) ಹೀಗೆ ಪ್ರಶ್ನಿಸುತ್ತಾನೆ:

"ನಾನು ಎಲ್ಲ ಜನರನ್ನು ಕರೆಸಲೇ. ಅವರೆಲ್ಲರಿಗೂ ನೀನು ಆ ವೃತ್ತಾಂತವನ್ನು ತಿಳಿಸುತ್ತೀಯಾ?"

ಮುಹಮ್ಮದ್(ಸ): "ಖಂಡಿತವಾಗಿಯೂ."

ಇದನ್ನು ಕೇಳುತ್ತಲೇ ಅಬೂಜಹಲ್ ಬೊಬ್ಬೆ ಹಾಕಿ ಜನರನ್ನು ಕರೆದು ಕಅಬಾ ಭವನದಲ್ಲಿ ಸಭೆ ಸೇರಿಸುತ್ತಾನೆ. ಜನರು ತಮ್ಮನ್ನು ಕರೆಸಿದ ಕಾರಣವನ್ನು ವಿಚಾರಿಸಿದಾಗ ಅಬೂಜಹಲ್ ಮುಹಮ್ಮದ್‌ರತ್ತ(ಸ) ಬೆಟ್ಟು ಮಾಡಿ ಇವನಲ್ಲಿ ಕೇಳಿರಿ ಎನ್ನುತ್ತಾನೆ. ಜನರು ಆಶ್ಚರ್ಯದಿಂದ ಮುಹಮ್ಮದರನ್ನು ವಿಚಾರಿಸುತ್ತಾರೆ.

ಮುಹಮ್ಮದ್(ಸ) ಅವರೆಲ್ಲರ ಎದುರು ಮಕ್ಕಾದಿಂದ ಬೈತುಲ್ ಮಕ್ದಿಸ್‌ಗೆ ಹೋಗಿ ಬಂದ ವೃತ್ತಾಂತವನ್ನು ತಿಳಿಸುತ್ತಾರೆ. ಜನರು ಇದನ್ನು ಕೇಳಿ ಗೊಳ್ಳೆಂದು ನಗುತ್ತಾರೆ. ಚಪ್ಪಾಳೆ ಹೊಡೆದು ಸಿಳ್ಳು ಹಾಕಿ, ಕುಣಿದು ಕುಪ್ಪಳಿಸಿ ವ್ಯಂಗ್ಯವಾಡುತ್ತಾರೆ.

ಅಬೂಜಹಲ್: "ಮುಹಮ್ಮದ್ ಹುಚ್ಚನಾಗಿರುವನೆಂಬುದಕ್ಕೆ ಬೇರೆ ಪುರಾವೆ ಬೇಕೇ? ಇನ್ನೂ ಯಾರಿಗಾದರೂ ಈ ಬಗ್ಗೆ ಸಂಶಯವಿದೆಯೆ?" ಎಂದು ಪ್ರಶ್ನಿಸುತ್ತಾನೆ.

ಜನರು ಒಕ್ಕೊರಳಿನಿಂದ: "ಸಂಶಯ ನಮಗೆ ಈ ಹಿಂದೆಯೂ ಇರಲಿಲ್ಲ. ಆದರೆ ಈಗ ಖಾತ್ರಿಯಾಯಿತು."

ಈ ಸುದ್ದಿಯು ಕಾಡ್ಗಿಚ್ಚಿನಂತೆ ಮಕ್ಕಾ ನಗರದಲ್ಲೆಲ್ಲಾ ಹರಡಿತು. ದುರ್ಬಲ ವಿಶ್ವಾಸದ ಕೆಲವು ಮುಸ್ಲಿಮರು ಇಸ್ಲಾಮ್ ಧರ್ಮ ತ್ಯಜಿಸಿದರು. ಮುಹಮ್ಮದ್(ಸ) ಒಂದೇ ರಾತ್ರಿಯಲ್ಲಿ ಬೈತುಲ್ ಮಕ್ದಿಸ್‌ಗೆ ಹೋಗಿ ಮರಳಿರುವರೆಂಬುದನ್ನು ಅವರಿಗೆ ನಂಬಲು ಸಾಧ್ಯವಾಗಲಿಲ್ಲ. ಅವರಿಗೆ ಅವರ ಬುದ್ಧಿವಿವೇಕಗಳೇ ಸರ್ವಸ್ವ. ಅಲ್ಲಾಹನ ಶಕ್ತಿ-ಸಾಮರ್ಥ್ಯಗಳು ಅಪಾರವೆಂಬುದು ಅವರ ಬುದ್ಧಿಗೆ ನಿಲುಕುತ್ತಿರಲಿಲ್ಲ.

ಸತ್ಯನಿಷೇಧಿಗಳ ಒಂದು ತಂಡ ಹ. ಅಬೂಬಕರ್‌ರ(ರ) ಮನೆಗೆ ತಲುಪುತ್ತದೆ. ಈ ವಿಷಯ ಅಬೂಬಕರ್‌ರಿಗೆ(ರ) ತಿಳಿಸಿ ಅವರನ್ನು ಸತ್ಯಧರ್ಮದಿಂದ ವಿಮುಖಗೊಳಿಸುವುದೇ ಅವರ ಉದ್ದೇಶವಾಗಿತ್ತು. ಅಬೂಬಕರ್ ಅತ್ಯಂತ ವಿಚಾರವಂತ ವ್ಯಕ್ತಿ. ಅವರು ಇಂತಹ ಅಸಾಧ್ಯ ಮಾತನ್ನು ಒಪ್ಪಲಾರರು. ಅವರು ಮುಹಮ್ಮದ್‌ರ(ಸ) ಧರ್ಮದಿಂದ ವಿಮುಖರಾದರೆ ಈ ಆಂದೋಲನವು ತನ್ನಿಂತಾನೇ ಸಮಾಪ್ತಿಯಾಗುವುದು ಎಂದು ಅವರು ಬಗೆದಿದ್ದರು. ಒಬ್ಬರು ಅಬೂಬಕರ್‌ರ(ರ) ಮನೆಯ ಕದ ತಟ್ಟುತ್ತಾರೆ. ಅವರು ಹೊರಬಂದಾಗ,

"ಅಬೂಬಕರ್(ರ) ಅವರೇ! ತಾವು ಬಹಳ ಬುದ್ಧಿವಂತ ವ್ಯಕ್ತಿ. ನಮಗೆ ನಿಮ್ಮ ಬಗ್ಗೆ ಬಹಳ ಗೌರವವಿದೆ. ಕುರೈಶ್ ಗೋತ್ರದಲ್ಲಿ ನಿಮಗೆ ವಿಶಿಷ್ಟ ಸ್ಥಾನಮಾನವಿದೆ" ಎನ್ನುತ್ತಾರೆ.

ಅಬೂಬಕರ್: "ಏನು ಸಮಾಚಾರ. ನೇರವಾಗಿ ಹೇಳಿ."

ಆ ವ್ಯಕ್ತಿ: "ಸ್ವಲ್ಪ ಮುಹಮ್ಮದ್‌ರ(ಸ) ಮಾತು ಕೇಳಿ. ತನಗೆ ಕಳೆದ ರಾತ್ರಿ ಬೈತುಲ್ ಮಕ್ದಿಸ್‌ನ ಪ್ರವಾಸ ಮಾಡಿಸಲಾಗಿದೆ ಎನ್ನುತ್ತಾರೆ."

ಅಬೂಬಕರ್: "ನೀವು ನಿಮ್ಮ ಕಡೆಯಿಂದ ಈ ಮಾತು ಹೇಳುತ್ತಿರುವಿರೋ ಅಥವಾ

ಮುಹಮ್ಮದ್‌ರೇ(ಸ) ಸ್ವಯಂ ಹೀಗೆ ಹೇಳಿರುವರೇ?"

ಅವರೆಲ್ಲರೂ ಒಮ್ಮೆಲೇ ಹೇಳುತ್ತಾರೆ: "ಹೌದು. ಮುಹಮ್ಮದ್‌ರು(ಸ) ಸ್ವಯಂ ಈ ಮಾತನ್ನು ಕಅಬಾ ಭವನದಲ್ಲಿ ಇಡೀ ಜನಾಂಗದ ಮುಂದೆ ಹೇಳಿರುವರು. ಈಗ ನೀವೇ ಹೇಳಿ. ಈ ಮಾತು ಒಪ್ಪುವಂತಹುದೇ? ಮುಹಮ್ಮದ್‌ರಿಗೆ(ಸ) ನಿಜವಾಗಿಯೂ ಹುಚ್ಚು ಹಿಡಿದಿದೆ ಎಂಬುದು ನಿಮಗೆ ಈಗ ಖಾತ್ರಿಯಾಗಿರಬಹುದು. ಈಗಲಾದರೂ ನೀವು ಈ ಮಾತನ್ನು ಒಪ್ಪಿ ಮುಹಮ್ಮದ್‌ರನ್ನು(ಸ) ಬಿಟ್ಟುಬಿಡಿ."

ಅಬೂಬಕರ್: "ಒಂದು ವೇಳೆ ಮುಹಮ್ಮದ್(ಸ) ಸ್ವಯಂ ಈ ಮಾತು ಹೇಳಿದ್ದರೆ ಇದು ಖಂಡಿತ ಸತ್ಯ. ಅದರಲ್ಲಿ ಆಶ್ಚರ್ಯದ ಯಾವ ವಿಷಯವೂ ಇಲ್ಲ. ಅವರ ಬಳಿ ಆಕಾಶದಿಂದ ಸಂದೇಶ ಇಳಿಯುತ್ತಿದೆ ಎಂಬುದನ್ನಂತೂ ನಾನು ನಿತ್ಯ ಕೇಳುತ್ತಿದ್ದೇನೆ. ನಾನು ಅದನ್ನು ದೃಢೀಕರಿಸುತ್ತೇನೆ."

ಬಂದ ಜನರು ಸಪ್ಪೆ ಮೋರೆ ಹಾಕಿಕೊಂಡು ವಿಧ ವಿಧವಾಗಿ ಮಾತನಾಡುತ್ತಾ ಹಿಂತೆರಳಿದರು. ಅಬೂಬಕರ್(ರ) ಕೂಡಲೇ ಹೊರಟು ಕಅಬಾ ಭವನ ತಲುಪುತ್ತಾರೆ. ಮುಹಮ್ಮದ್(ಸ) ಈಗಲೂ ಅಲ್ಲೇ ಇದ್ದಾರೆ. ಸತ್ಯನಿಷೇಧಿಗಳ ಗುಂಪು ಅವರನ್ನು ಅಪಹಾಸ್ಯ ಮಾಡುವುದರಲ್ಲಿ ನಿರತವಾಗಿದೆ. ಅಬೂಬಕರ್(ರ) ಜನರನ್ನು ಸರಿಸುತ್ತಾ ಮುಂದೆ ಹೋಗಿ ಮುಹಮ್ಮದ್‌ರನ್ನುದ್ದೇಶಿಸಿ(ಸ):

"ತಾವು ಕಳೆದ ರಾತ್ರಿ ಬೈತುಲ್ ಮಕ್ದಿಸ್‌ಗೆ ಹೋಗಿ ಬಂದುದಾಗಿ ಹೇಳಿರುವಿರಾ?"

ಮುಹಮ್ಮದ್(ಸ): "ಹೌದು."

ಅಬೂಬಕರ್: "ಪ್ರವಾದಿವರ್ಯರೇ! ಬೈತುಲ್ ಮಕ್ದಿಸನ್ನು ನಾನು ಸಂದರ್ಶಿಸಿದ್ದೇನೆ. ಇಲ್ಲಿ ಅನೇಕ ಮಂದಿ ಅದನ್ನು ಕಂಡವರಿದ್ದಾರೆ. ಸ್ವಲ್ಪ ಅದರ ವಿವರಣೆ ನೀಡಿರಿ."

ನೆರೆದ ಜನಸ್ತೋಮದಲ್ಲಿ ಚಪ್ಪಾಳೆ ತಟ್ಟುವ, ಸಿಳ್ಳು ಹೊಡೆಯುವ ಮತ್ತು ಕೇಕೆ ಹಾಕುವ ಕ್ರಿಯೆ ಮತ್ತೆ ಆರಂಭವಾಗುತ್ತದೆ.

ಮುಹಮ್ಮದ್(ಸ) ಕೂಡಲೇ ಬೈತುಲ್ ಮಕ್ದಿಸ್‌ನ ವಿವರಣೆ ನೀಡಲಾರಂಭಿಸುತ್ತಾರೆ. ಅದರ ಒಂದೊಂದು ವಸ್ತುವನ್ನು ಕಣ್ಣಾರೆ ನೋಡಿ ಹೇಳುತ್ತಿರುವಂತೆ ಹೇಳುತ್ತಾರೆ. ಅಬೂಬಕರ್‌ರ(ರ) ಈ ಉಪಾಯದಿಂದ ಕುರೈಶರು ನಿರುತ್ತರರಾಗುತ್ತಾರೆ. ಆದರೂ ಅವರ ಪೈಕಿ ಓರ್ವ ಕಿಡಿಗೇಡಿ ಮುತ್‌ಇಮ್ ಹೀಗೆ ಹೇಳುತ್ತಾನೆ:

"ಈ ಎಲ್ಲ ವಿವರಣೆಯನ್ನು ಯಾರೋ ನಿಮಗೆ ಹೇಳಿ ಕೊಟ್ಟಿರಬೇಕು. ನಾವು ನಿಮ್ಮನ್ನು ನಂಬಲಾರೆವು. ಬೇರಾವುದಾದರೂ ಪುರಾವೆ ಕೊಡಿ."

ಮುತ್‌ಇಮ್‌ನ ಈ ಮಾತಿನ ಹೊರತಾಗಿಯೂ ಜನರು ಮೌನ ತಾಳಿದ್ದರು. ಅವರಿಗೆ ಮಾತೇ ಬರುತ್ತಿರಲಿಲ್ಲ. ಅವರಲ್ಲಿ ಅನೇಕರು ವ್ಯಾಪಾರ ನಿಮಿತ್ತ ಅಲ್ಲಿಗೆ ಹೋಗಿದ್ದರು.

ಮುಹಮ್ಮದ್‌ರ(ಸ) ವಿವರಣೆಯು ಸಂಪೂರ್ಣ ಸರಿಯಾಗಿತ್ತು. ಅದನ್ನು ನಿರಾಕರಿಸಲು ಅವರ ಬಳಿ ಯಾವ ಕಾರಣವೂ ಇರಲಿಲ್ಲ. ಅವರು ತಮ್ಮ ಮನಗಳಲ್ಲಿ ಮುಹಮ್ಮದ್‌ರ(ಸ) ಸತ್ಯಸಂಧತೆಯನ್ನು ಒಪ್ಪಿಕೊಂಡರೂ ತಮ್ಮ ಅಜ್ಞಾನಜನ್ಯ ಪಕ್ಷಪಾತದಿಂದಾಗಿ ಅದನ್ನು ಬಹಿರಂಗ ಪಡಿಸುವ ಧೈರ್ಯವನ್ನು ತೋರಲಿಲ್ಲ. ಆದರೂ ಮುಹಮ್ಮದ್(ಸ) ಮುತ್‌ಇಮ್‌ರ ಆಕ್ಷೇಪಕ್ಕೆ ಹೀಗೆ ಉತ್ತರಿಸುತ್ತಾರೆ,

"ನಾನು ಇಂತಿಂತಹ ಊರಿನ ಬಳಿ ತಲುಪಿದಾಗ ಒಂದು ವ್ಯಾಪಾರೀ ತಂಡ ಸಿಕ್ಕಿತು. ಅದರ ಜೊತೆ ಈ ಎಲ್ಲ ಸಾಮಾನುಗಳಿದ್ದುವು. ತಂಡದಲ್ಲಿದ್ದ ಒಂಟೆಗಳು ನನ್ನ 'ಬುರಾಕ್' ಅನ್ನು ಕಂಡು ಬೆಚ್ಚಿಬಿದ್ದುವು. ಒಂದು ಒಂಟೆಯಂತೂ ಒಂದು ಕಣಿವೆಯತ್ತ ಓಡತೊಡಗಿತು. ನಾನು ವ್ಯಾಪಾರೀ ತಂಡಕ್ಕೆ ಆ ವಿಷಯ ತಿಳಿಸಿದೆ."

ಇಂತಹ ಕೆಲವು ವಿವರಣೆಯನ್ನು ಮುಹಮ್ಮದ್(ಸ) ನೀಡಿದರು. ಅನಂತರ ಬಂದ ವ್ಯಾಪಾರೀ ತಂಡಗಳೂ ಅದನ್ನು ದೃಢೀಕರಿಸಿದುವು. ಆದರೆ ಕಲ್ಲು ಹೃದಯದವರಾದ ಕುರೈಶರ ಮೇಲೆ ಇದರ ಯಾವ ಪ್ರಭಾವವೂ ಆಗಲಿಲ್ಲ.

## ಮಿಅ್‌ರಾಜ್‌ನ ಸಂದೇಶ

'ಮಿಅ್‌ರಾಜ್'ನ ಘಟನೆಯ ಬಳಿಕ ಎರಡು ದಿನಗಳ ತನಕ ಜಿಬ್ರೀಲ್(ಅ) ಪ್ರತಿಯೊಂದು ನಮಾಝ್‌ನ ವೇಳೆ ಮುಹಮ್ಮದ್‌ರ(ಸ) ಬಳಿ ಬರುತ್ತಿದ್ದರು. ಕಡ್ಡಾಯಗೊಳಿಸಲ್ಪಟ್ಟ ಐದು ಹೊತ್ತಿನ ನಮಾಝ್‌ನ ಸಮಯವನ್ನು ಅವರಿಗೆ ತಿಳಿಸುವುದೇ ಉದ್ದೇಶವಾಗಿತ್ತು. ಎರಡು ದಿನವೂ ಅವರು ತಮ್ಮ ಇಮಾಮತ್(ನಾಯಕತ್ವ)ನಲ್ಲಿ ಮುಹಮ್ಮದ್‌ರಿಗೆ(ಸ) ನಮಾಝ್ ಮಾಡಿಸಿದರು. ಮೊದಲ ದಿನ ಅವರು ಎಲ್ಲ ನಮಾಝ್‌ಗಳನ್ನೂ ಅವುಗಳ ಸಮಯ ಆರಂಭವಾದಾಗಲೇ ಮಾಡಿಸಿದರು. ಎರಡನೆಯ ದಿನ ಎಲ್ಲ ನಮಾಝ್‌ಗಳನ್ನು ಅವುಗಳ ಅಂತಿಮ ಸಮಯದಲ್ಲಿ ಮಾಡಿಸಿದರು. ನಮಾಝ್‌ನ ಸಮಯವು ಈ ಎರಡು ವೇಳೆಗಳ ಮಧ್ಯೆಯಿದೆ ಎಂದೂ ಅವರಿಗೆ ತಿಳಿಸಿದರು.

'ಮಿಅ್‌ರಾಜ್'ನ ಸಂದರ್ಭದಲ್ಲಿ ಅಲ್ಲಾಹನು ಮುಹಮ್ಮದ್‌ರ(ಸ) ಮೂಲಕ ಮಾನವಕುಲಕ್ಕೆ ಒಂದು ಸಂದೇಶ ನೀಡಿದನು. ಇಸ್ಲಾಮೀ ಸಮಾಜ ಮತ್ತು ಇಸ್ಲಾಮೀ ರಾಷ್ಟ್ರದ ನಿರ್ಮಾಣಕ್ಕೆ ಬೇಕಾದ ತತ್ವಗಳನ್ನು ಆ ಸಂದೇಶ ಒಳಗೊಂಡಿತ್ತು. ಆ ಸಂದೇಶದ ಅನುವಾದವನ್ನು ಇಲ್ಲಿ ಕೊಡಲಾಗಿದೆ,

"ವಾಸ್ತವದಲ್ಲಿ ಈ ಕುರ್‌ಆನ್ ಅತ್ಯಂತ ನೇರ ಮಾರ್ಗವನ್ನು ತೋರಿಸಿ ಕೊಡುತ್ತದೆ. ಇದನ್ನು ಸ್ವೀಕರಿಸಿಕೊಂಡು ಸತ್ಕರ್ಮವೆಸಗಿದವರಿಗೆ ದೊಡ್ಡ ಸತ್ಫಲವಿದೆಯೆಂಬ ಸುವಾರ್ತೆಯನ್ನು ನೀಡುತ್ತದೆ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸದವರಿಗೆ ನಾವು ಅವರಿಗಾಗಿ ಘೋರ ಯಾತನೆಯನ್ನು ಸಿದ್ಧಗೊಳಿಸಿಟ್ಟಿದ್ದೇವೆಂದು ತಿಳಿಸುತ್ತದೆ. ಮಾನವನು ಒಳಿತನ್ನು

ಬೇಡಿಕೊಳ್ಳಬೇಕಾದ ರೀತಿಯಲ್ಲಿ ಕೆಡುಕನ್ನು ಬೇಡುತ್ತಾನೆ. ಮನುಷ್ಯನು ಮಹಾ ದುಡುಕು ಸ್ವಭಾವದವನು. ನಾವು ಇರುಳು ಮತ್ತು ಹಗಲನ್ನು ಎರಡು ನಿದರ್ಶನಗಳಾಗಿ ಮಾಡಿರುತ್ತೇವೆ. ನೀವು ನಿಮ್ಮ ಪ್ರಭುವಿನ ಅನುಗ್ರಹವನ್ನು ಅರಸಿಕೊಳ್ಳಲಾಗುವಂತೆಯೂ ಸಂವತ್ಸರಗಳ ಗಣನೆಯನ್ನು ಮಾಡಿಕೊಳ್ಳುವಂತೆಯೂ ನಾವು ಇರುಳಿನ ನಿದರ್ಶನವನ್ನು ಮಬ್ಬಾಗಿಯೂ ಹಗಲಿನ ನಿದರ್ಶನವನ್ನು ಪ್ರಕಾಶಮಾನವಾಗಿಯೂ ಮಾಡಿದೆವು. ನಾವು ಪ್ರತಿಯೊಂದು ವಸ್ತುವನ್ನೂ ಇದೇ ರೀತಿಯಲ್ಲಿ ಬೇರ್ಪಡಿಸಿಟ್ಟಿರುತ್ತೇವೆ. ಪ್ರತಿಯೊಬ್ಬ ಮನುಷ್ಯನ ಶಕುನವನ್ನು ನಾವು ಅವನ ಕೊರಳಿಗೇ ಕಟ್ಟಿ ಬಿಡುತ್ತೇವೆ. ಪುನರುತ್ಥಾನ ದಿನದಂದು ನಾವು ಅವನಿಗಾಗಿ ಒಂದು ಲಿಖಿತವನ್ನು ಹೊರಡಿಸುವೆವು. ಅವನು ಅದನ್ನು ತೆರೆದ ಗ್ರಂಥದಂತೆ ಕಾಣುವನು. ನಿನ್ನ ಕರ್ಮಪತ್ರವನ್ನು ಓದು. ಇಂದು ನಿನ್ನ ಲೆಕ್ಕ ತೆಗೆಯಲು ನೀನೇ ಸಾಕು.

ಸನ್ಮಾರ್ಗ ಸ್ವೀಕರಿಸಿಕೊಳ್ಳುವವನ ಸನ್ಮಾರ್ಗ ಗಮನವು ಅವನಿಗೇ ಒಳಿತಾಗಿದೆ ಮತ್ತು ಪಥಭ್ರಷ್ಟನ ಪಥಭ್ರಷ್ಟತೆಯ ವಿಪತ್ತೂ ಅವನ ಮೇಲೆಯೇ ಬೀಳುತ್ತದೆ. ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆಯನ್ನು ಹೊರಲಾರನು. (ಜನರಿಗೆ ಸತ್ಯಾಸತ್ಯತೆಗಳ ಅಂತರವನ್ನು ತೋರಿಸಿ ಕೊಡಲು) ಓರ್ವ ಸಂದೇಶವಾಹಕನನ್ನು ಕಳುಹಿಸಿಕೊಡದೆ ನಾವು ಯಾತನೆ ಕೊಡುವವರಲ್ಲ. ನಾವು ಒಂದು ನಾಡನ್ನು ನಾಶಗೊಳಿಸಲಿಚ್ಛಿಸಿದಾಗ ಅದರ ಸ್ಥಿತಿವಂತರಿಗೆ ಅಪ್ಪಣೆ ಕೊಡುತ್ತೇವೆ ಮತ್ತು ಅವರು ಅದರಲ್ಲಿ ಆಜ್ಞೋಲ್ಲಂಘನೆ ಮಾಡ ತೊಡಗುತ್ತಾರೆ. ಆಗ ಯಾತನೆಯ ತೀರ್ಮಾನವು ಆ ನಾಡಿಗೆ ಅನ್ವಯವಾಗಿ ಬಿಡುತ್ತದೆ ಮತ್ತು ನಾವು ಅದನ್ನು ಸಂಪೂರ್ಣ ನಾಶ ಮಾಡಿಬಿಡುತ್ತೇವೆ. ನೋಡಿಕೊಳ್ಳಿರಿ! ನೂಹರ ಅನಂತರ ನಮ್ಮ ಅಪ್ಪಣೆಯಿಂದ ನಾಶಗೊಂಡ ಅನೇಕ ತಲೆಮಾರುಗಳಿವೆ. ತನ್ನ ದಾಸರ ಪಾಪಗಳ ಬಗ್ಗೆ ಸಂಪೂರ್ಣ ಬೋಧವಿರಿಸಿಕೊಳ್ಳಲಿಕ್ಕೂ ಸರ್ವವನ್ನೂ ವೀಕ್ಷಿಸಲಿಕ್ಕೂ ನಿನ್ನ ಪ್ರಭುವೇ ಸಾಕು.

(ಈ ಲೋಕದಲ್ಲಿ) ಶೀಘ್ರವಾಗಿ ಪ್ರಾಪ್ತವಾಗುವ ಫಲಗಳನ್ನು ಅಪೇಕ್ಷಿಸುವವನಿಗೆ, ನಾವು ಕೊಡಲಿಚ್ಛಿಸುವುದನ್ನು ಇಲ್ಲೇ ಕೊಟ್ಟು ಬಿಡುತ್ತೇವೆ. ಅನಂತರ ಅವನ ಪಾಲಿಗೆ ನರಕವನ್ನು ಬರೆದು ಬಿಡುತ್ತೇವೆ. ಅದರಲ್ಲಿ ಅವನು ಧಿಕ್ಕರಿಸಲ್ಪಟ್ಟು ಹಾಗೂ ಕೃಪೆಯಿಂದ ವಂಚಿತನಾಗಿ ಬೇಯುತ್ತಿರುವನು ಮತ್ತು ಯಾರಾದರೂ ಪರಲೋಕವನ್ನು ಇಷ್ಟಪಟ್ಟು ಅದಕ್ಕಾಗಿ ಪ್ರಯತ್ನಿಸಬೇಕಾದ ರೀತಿಯಲ್ಲಿ ಪ್ರಯತ್ನಿಸಿದರೆ ಮತ್ತು ಅವನು ಸತ್ಯವಿಶ್ವಾಸಿ ಯಾಗಿದ್ದರೆ - ಇಂತಹ ಪ್ರತಿಯೊಬ್ಬನ ಪ್ರಯತ್ನವು ಕೃತಾರ್ಥವಾಗುವುದು. ನಾವು ಇವರಿಗೂ ಅವರಿಗೂ ಎರಡು ವರ್ಗದವರಿಗೂ (ಇಹಲೋಕದಲ್ಲಿ) ಜೀವನ ಸಾಮಗ್ರಿಯನ್ನು ಕೊಡುತ್ತಿರುತ್ತೇವೆ. ಇದು ನಿನ್ನ ಪ್ರಭುವಿನ ಕೊಡುಗೆ. ನಿನ್ನ ಪ್ರಭುವಿನ ಕೊಡುಗೆಯನ್ನು ತಡೆಯುವವನು ಯಾರೂ ಇಲ್ಲ. ಆದರೆ ನಾವು ಇಹಲೋಕದಲ್ಲಿ ಒಂದು ವರ್ಗಕ್ಕೆ ಇನ್ನೊಂದು ವರ್ಗದ ಮೇಲೆ ಎಂತಹ ಶ್ರೇಷ್ಠತೆ ಪ್ರದಾನ ಮಾಡಿರುತ್ತೇವೆಂದು ನೋಡಿರಿ.

ಪರಲೋಕದಲ್ಲಿ ಅದರ ಸ್ಥಾನವು ಇನ್ನಷ್ಟು ಹೆಚ್ಚುವುದು ಮತ್ತು ಅದರ ಶ್ರೇಷ್ಠತೆ ಮತ್ತಷ್ಟು ಅಧಿಕವಾಗುವುದು. ನೀನು ಅಲ್ಲಾಹನೊಂದಿಗೆ ಬೇರಾರನ್ನೂ ಆರಾಧ್ಯನಾಗಿ ಮಾಡಿ ಕೊಳ್ಳಬೇಡ. ಅನ್ಯಥಾ ಶಪಿತನಾಗಿ ಅಸಹಾಯಕನಾಗಿ ಕುಳಿತು ಕೊಂಡಿರುವೆ. ನಿಮ್ಮ ಪ್ರಭು (ಹೀಗೆ) ವಿಧಿಸಿ ಬಿಟ್ಟಿದ್ದಾನೆ; ನೀವು ಕೇವಲ ಅವನೊಬ್ಬನ ಹೊರತು ಇನ್ನಾರ ದಾಸ್ಯ-ಆರಾಧನೆಯನ್ನೂ ಮಾಡಬಾರದು. ಮಾತಾಪಿತರೊಡನೆ ಸೌಜನ್ಯದಿಂದ ವರ್ತಿಸಿರಿ. ಅವರ ಪೈಕಿ ಒಬ್ಬರು ಅಥವಾ ಅವರಿಬ್ಬರೂ ವೃದ್ಧರಾಗಿ ನಿಮ್ಮ ಬಳಿಯಲ್ಲಿದ್ದರೆ, ಅವರ ಬಗ್ಗೆ ಚಕಾರವೆತ್ತಬೇಡಿರಿ ಮತ್ತು ಅವರನ್ನು ಜರೆಯಬೇಡಿರಿ. ಅವರೊಂದಿಗೆ ಗೌರವಪೂರ್ವಕವಾಗಿ ಮಾತನಾಡಿರಿ.

ನಯ ವಿನಯ ಮತ್ತು ಕರುಣೆಯೊಂದಿಗೆ ಅವರ ಮುಂದೆ ಬಾಗಿಕೊಂಡಿರಿ. "ಓ ನನ್ನ ಪ್ರಭೂ, ಇವರು ನನ್ನ ಚಿಕ್ಕಂದಿನಲ್ಲಿ ದಯಾವಾತ್ಸಲ್ಯಗಳಿಂದ ನನ್ನನ್ನು ಸಾಕಿದಂತೆಯೇ ನೀನು ಅವರ ಮೇಲೆ ಕೃಪೆತೋರು" ಎಂದು ಪ್ರಾರ್ಥಿಸಿರಿ. ನಿಮ್ಮ ಅಂತರಂಗದಲ್ಲಿ ಏನಿದೆ ಯೆಂಬುದನ್ನು ನಿಮ್ಮ ಪ್ರಭು ಚೆನ್ನಾಗಿ ಬಲ್ಲನು. ನೀವು ಸಜ್ಜನರಾಗಿ ಬಾಳಿಕೊಂಡಿದ್ದರೆ ತಮ್ಮ ಅಪರಾಧಗಳ ಬಗ್ಗೆ ಜಾಗೃತರಾಗಿ ದಾಸ್ಯ-ಆರಾಧನೆಯ ಕಡೆಗೆ ಮರಳಿ ಬರುವಂತಹ ಸರ್ವರನ್ನೂ ಅವನು ಕ್ಷಮಿಸುವವನಾಗಿರುತ್ತಾನೆ. ಸಂಬಂಧಿಕನಿಗೆ ಅವನ ಹಕ್ಕನ್ನೂ, ದರಿದ್ರನಿಗೂ, ಪ್ರಯಾಣಿಕನಿಗೂ ಅವನವನ ಹಕ್ಕನ್ನೂ ಕೊಡಿರಿ. ದುಂದುವೆಚ್ಚ ಮಾಡಬೇಡಿರಿ. ದುಂದು ಗಾರರು ಶೈತಾನನ ಸೋದರರಾಗಿರುತ್ತಾರೆ ಮತ್ತು ಶೈತಾನನು ತನ್ನ ಪ್ರಭುವಿಗೆ ಕೃತಘ್ನನು.

ನೀವು ನಿರೀಕ್ಷಿಸುತ್ತಿರುವ ಅಲ್ಲಾಹನ ಕೃಪೆಯನ್ನು ಇನ್ನೂ ಅರಸುತ್ತಿರುವ ಕಾರಣ ನಿಮಗೆ ಅವರಿಂದ (ನಿರ್ಗತಿಕರಾದ ಸಂಬಂಧಿಕರಿಂದ, ದರಿದ್ರರಿಂದ ಮತ್ತು ಪ್ರಯಾಣಿಕ ರಿಂದ) ತಪ್ಪಿಸಿಕೊಳ್ಳಬೇಕೆಂದಾದರೆ, ಅವರಿಗೆ ನಯವಾಗಿ ಉತ್ತರಕೊಡಿರಿ. ನಿಮ್ಮ ಕೈಯನ್ನು ಕೊರಳಿಗೆ ಕಟ್ಟಿಕೊಂಡಿರಲೂ ಬೇಡಿರಿ ಮತ್ತು ನಿಂದ್ಯರೂ ನಿಸ್ಸಹಾಯಕರೂ ಆಗಿ ಬಿಡುವಂತೆ ಅದನ್ನು ಸಂಪೂರ್ಣವಾಗಿ ತೆರೆದಿಟ್ಟು ಬಿಡಲೂ ಬೇಡಿರಿ. ನಿನ್ನ ಪ್ರಭು ತನಗಿಷ್ಟ ಬಂದವರಿಗೆ ಜೀವನಾಧಾರವನ್ನು ವಿಶಾಲಗೊಳಿಸುತ್ತಾನೆ ಮತ್ತು ತನಗಿಷ್ಟ ಬಂದವರಿಗೆ ಸಂಕುಚಿತ ಗೊಳಿಸುತ್ತಾನೆ. ಅವನು ತನ್ನ ದಾಸರ ಸ್ಥಿತಿ-ಗತಿಗಳನ್ನು ಅರಿತವನಾಗಿರುತ್ತಾನೆ ಮತ್ತು ಅವರನ್ನು ವೀಕ್ಷಿಸುತ್ತಿದ್ದಾನೆ. ನಿಮ್ಮ ಮಕ್ಕಳನ್ನು ಬಡತನದ ಭೀತಿಯಿಂದ ಕೊಲ್ಲಬೇಡಿರಿ. ನಾವು ಅವರಿಗೂ ಆಹಾರ ನೀಡುವೆವು ನಿಮಗೂ ನೀಡುವೆವು. ವಾಸ್ತವದಲ್ಲಿ ಅವರ ವಧೆಯು ಒಂದು ಘೋರ ಅಪರಾಧವಾಗಿದೆ. ವ್ಯಭಿಚಾರದ ಹತ್ತಿರವೂ ಸುಳಿಯಬೇಡಿರಿ. ಅದು ಅತಿ ಹೀನ ಕಾರ್ಯ ಮತ್ತು ಅತ್ಯಂತ ಕೆಟ್ಟ ಮಾರ್ಗ. ಅಲ್ಲಾಹನು ಸನ್ಮಾನಿಸಿರುವ ಜೀವವನ್ನು ನ್ಯಾಯದಿಂದಲ್ಲದೆ ಹರಣ ಮಾಡಬೇಡಿರಿ. ಅಕ್ರಮವಾಗಿ ವಧಿಸಲ್ಪಟ್ಟವನ ವಾರೀಸುದಾರನಿಗೆ ಪ್ರತೀಕಾರ ಪಡೆಯುವ ಹಕ್ಕನ್ನು ನಾವು ನೀಡಿರುತ್ತೇವೆ. ಆದುದರಿಂದ ಅವನು ವಧೆಯಲ್ಲಿ ಹದಮೀರ ಬಾರದು. ನಿಶ್ಚಯವಾಗಿಯೂ ಅವನಿಗೆ ಸಹಾಯ ಮಾಡಲಾಗುವುದು. ಅನಾಥನ ಸೊತ್ತನ್ನು ಉತ್ತಮ ರೀತಿಯಿಂದಲ್ಲದೆ ಸಮೀಪಿಸ ಬಾರದು - (ಇದು) ಅವನು ಯೌವನಾವಸ್ಥೆಗೆ

ತಲುಪುವ ತನಕ. ವಚನವನ್ನು ಪಾಲಿಸಿರಿ. ನಿಶ್ಚಯವಾಗಿಯೂ ವಚನದ ಕುರಿತು- ನಿಮ್ಮನ್ನು ಪ್ರಶ್ನಿಸ ಲಾಗುವುದು. ಅಳತೆ ಮಾಡಿ ಕೊಡುವಾಗ ಪೂರ್ಣ ತುಂಬಿಸಿ ಕೊಡಿರಿ. ತೂಗುವಾಗ ಸರಿಯಾದ ತಕ್ಕಡಿಯಲ್ಲಿ ತೂಗಿರಿ. ಇದು ಒಳ್ಳೆಯ ಕ್ರಮ ಮತ್ತು ಪರಿಣಾಮದ ದೃಷ್ಟಿ ಯಿಂದಲೂ ಇದೇ ಉತ್ತಮ. ನಿಮಗೆ ಜ್ಞಾನವಿಲ್ಲದಂತಹ ವಸ್ತುಗಳನ್ನು ಬೆಂಬತ್ತಬೇಡಿರಿ. ನಿಶ್ಚಯವಾಗಿಯೂ ಶ್ರವಣ, ದೃಷ್ಟಿ ಮತ್ತು ಮನಸ್ಸು ಇವೆಲ್ಲವುಗಳ ವಿಚಾರಣೆ ನಡೆಯಲಿದೆ. ಭೂಮಿಯ ಮೇಲೆ ದರ್ಪದಿಂದ ನಡೆಯಬೇಡಿರಿ. ನೀವು ಭೂಮಿಯನ್ನು ಸೀಳಲಾರಿರಿ ಮತ್ತು ಪರ್ವತಗಳ ಶಿಖರಕ್ಕೂ ತಲಪಲಾರಿರಿ. ಈ ವಿಷಯದಲ್ಲಿ ಪ್ರತಿಯೊಂದು ದೋಷ ಭಾಗವು ನಿಮ್ಮ ಪ್ರಭುವಿನ ಬಳಿ ಅಪ್ರಿಯವಾಗಿರುತ್ತದೆ. ನಿಮ್ಮ ಪ್ರಭು ನಿಮ್ಮ ಮೇಲೆ 'ದಿವ್ಯವಾಣಿ' ಮಾಡಿದ (ಅವತೀರ್ಣ ಗೊಳಿಸಿದ) ಯುಕ್ತಿಪೂರ್ಣ ಮಾತುಗಳಿವು. ಇದೋ ನೋಡು! ಅಲ್ಲಾಹನೊಂದಿಗೆ ಇನ್ನಾವ ಆರಾಧ್ಯನನ್ನೂ ಮಾಡಿ ಕೊಳ್ಳಬೇಡ. ಅನ್ಯಥಾ ನೀನು ನಿಂದ್ಯನಾಗಿ ಸಕಲ ಒಳಿತುಗಳಿಂದ ವಂಚಿತನಾಗಿ ನರಕದೊಳಗೆ ತಳ್ಳಲ್ಪಡುವೆ.

**(ಪವಿತ್ರ ಕುರ್‌ಆನ್, 17:9-39)**

ಅಧ್ಯಾಯ - ೮

# ಹಿಜ್ರತ್‌ನ ಘಟ್ಟ

## ಮದೀನಾದ ಯಾತ್ರಿಕರು

ಮಿನಾದ ಪ್ರದೇಶದಲ್ಲಿ ಮಕ್ಕಾದ ದಾರಿಯಲ್ಲಿ ಹಾಜಿಗಳ ಡೇರೆಗಳು ಬೆಳದಿಂಗಳ ರಾತ್ರಿ ದೂರ ದೂರದವರೆಗೂ ಕಾಣಿಸುತ್ತದೆ. ಒಂಟೆಗಳ ಸಾಲುಗಳು ಕೂಡಾ ಬೆಟ್ಟಗಳಂತೆ ನಿಂತಿರುವುದು ಕಾಣಿಸುತ್ತದೆ. ರಾತ್ರಿಯ ಪ್ರಥಮ ಜಾವವಾದುದರಿಂದ ಜನರಿನ್ನೂ ತಂತಮ್ಮ ಕಾರ್ಯಗಳಲ್ಲಿ ನಿರತರಾಗಿರುವರು. ಎಂದಿನಂತೆ ಮುಹಮ್ಮದ್(ಸ) ಡೇರೆಗಳಿಗೆ ಭೇಟಿ ನೀಡಿ ಅಲ್ಲಾಹನ ಸಂದೇಶವನ್ನು ಮುಟ್ಟಿಸುತ್ತಿದ್ದಾರೆ.

ಇದು ಪ್ರವಾದಿತ್ವದ ಹನ್ನೊಂದನೆಯ ವರ್ಷದ ಹಜ್ಜ್ ತಿಂಗಳು. ಮುಹಮ್ಮದ್(ಸ) ಧರ್ಮಪ್ರಚಾರ ಕಾರ್ಯಕ್ಕಾಗಿ ಇಂದು ಅಕಬಾದವರೆಗೆ ತಲುಪಿದ್ದರು. ಅಲ್ಲಿ ಕೆಲವು ಮಂದಿ ಮದೀನಾದ ಹಾಜಿಗಳು ಇತರರಿಂದ ದೂರ ತಮ್ಮ ಡೇರೆಯಲ್ಲಿ ಕುಳಿತು ಪರಸ್ಪರ ಚರ್ಚಿಸುತ್ತಿದ್ದಾರೆ.

ಈ ಚಿಕ್ಕ ಡೇರೆಯಲ್ಲಿ 6 ಮಂದಿಯಿದ್ದಾರೆ. ಅವರ ಒಂಟೆಗಳು ಡೇರೆಯ ಹೊರಗೆ ಕುಳಿತು ಮೆಲುಕಾಡುತ್ತಿವೆ. ಮುಹಮ್ಮದ್(ಸ) ಅಲ್ಲಿಗೆ ತಲುಪಿ ವಾಡಿಕೆಯಂತೆ ಅತ್ಯಂತ ಆತ್ಮೀಯವಾಗಿ ಹೀಗೆ ವಿಚಾರಿಸಿದರು:

"ನೀವು ಯಾರು?"

ಅವರಲ್ಲಿ ಒಬ್ಬನು: "ನಾವು ಖಝ್ರಜ್ ಗೋತ್ರಕ್ಕೆ ಸೇರಿದವರು."

ಮುಹಮ್ಮದ್: "ನಾನು ನಿಮ್ಮಲ್ಲಿ ಸ್ವಲ್ಪ ಮಾತಾಡಬೇಕಿದೆ ನೀವು ಕೇಳುವಿರಾ?"

ಖಝ್ರಜಿ: "ಯಾಕಿಲ್ಲ. ಖಂಡಿತವಾಗಿಯೂ!"

ಮುಹಮ್ಮದ್(ಸ) ಅವರ ಬಳಿ ಕುಳಿತು ಅವರಿಗೆ ಏಕದೇವತ್ವದ ಸಂದೇಶ ನೀಡಿದರು. ಇಸ್ಲಾಮಿನ ಬೋಧನೆಗಳನ್ನು ಅವರ ಮುಂದಿಟ್ಟರು. ಮೂರ್ತಿಪೂಜೆಯನ್ನು ಖಂಡಿಸಿದರು. ಒಳಿತು ಮತ್ತು ಪರಿಶುದ್ಧತೆಯನ್ನು ಬೋಧಿಸಿದರು. ಕೆಡುಕು ಮತ್ತು ಪಾಪಕೃತ್ಯಗಳಿಂದ ದೂರವಿರುವಂತೆ ಹೇಳಿದರು. ಪವಿತ್ರ ಕುರ್‌ಆನಿನ ವಚನಗಳನ್ನೋದಿ ಕೇಳಿಸುತ್ತಾ ಅವರಲ್ಲಿ

ಹೀಗೆ ವಿಚಾರಿಸಿದರು: "ಅಲ್ಲಾಹನ ಕಡೆಗೆ ಬರುತ್ತೀರಾ? ದೇವನ ಮುಂದೆ ಶಿರಬಾಗುತ್ತೀರಾ?"

ಮುಹಮ್ಮದ್‌ರ(ಸ) ಮಾತು ಕೇಳಿ ಸ್ವಲ್ಪ ಹೊತ್ತಿನ ಮೌನ ಮತ್ತು ಪರಸ್ಪರರನ್ನು ಅರ್ಥಪೂರ್ಣವಾಗಿ ನೋಡಿದ ಬಳಿಕ ಅವರಲ್ಲಿ ಒಬ್ಬನು ಇತರರನ್ನುದ್ದೇಶಿಸಿ: "ಸೋದರರೇ! ಯಹೂದಿಗಳು ನಿಮ್ಮನ್ನು ಯಾವ ಪ್ರವಾದಿಯ ಆಗಮನದ ಕುರಿತು ಎಚ್ಚರಿಸುತ್ತಿದ್ದರೋ ಇದು ಆ ಪ್ರವಾದಿಯೇ ಆಗಿದ್ದಾರೆ. ತ್ವರೆ ಮಾಡಿರಿ, ಅನ್ಯಥಾ ಯಹೂದಿಗಳು ನಿಮ್ಮನ್ನು ಮೀರಿಸುವರು."

ಮುಹಮ್ಮದ್‌ರ(ಸ) ಬಾಯಿಯಿಂದ ಪ್ರವಾದಿತ್ವ, ದೇವವಾಣಿ, ದೇವಗ್ರಂಥ, ಶರೀಅತ್ ಇತ್ಯಾದಿ ಪದಗಳನ್ನು ಕೇಳಿದಾಗ ಅವರಿಗೆ ಯಹೂದಿಗಳಿಂದ ಈ ಬಗ್ಗೆ ಕೇಳಿದ ಮಾತುಗಳು ನೆನಪಾದುವು. ಮದೀನಾದ ಯಹೂದಿಗಳು ಓರ್ವ ಅಂತಿಮ ಪ್ರವಾದಿ ಬರಲಿಕ್ಕಿರುವುದನ್ನು ಕಾತರದಿಂದ ನಿರೀಕ್ಷಿಸುತ್ತಿದ್ದರು. ಆ ಬಗ್ಗೆ ಅವರ ಗ್ರಂಥಗಳಲ್ಲಿ ಇದ್ದ ಪ್ರಸ್ತಾಪಗಳ ಕುರಿತು ಆಗಾಗ ಹೇಳುತ್ತಿದ್ದರು. ಆ ಪ್ರವಾದಿಯು ಶೀಘ್ರ ಬರುವಂತಾಗಲಿ ಎಂದು ಪ್ರಾರ್ಥಿಸುತ್ತಿದ್ದರು. ಔಸ್ ಮತ್ತು ಖಝ್ರಜ್ ಗೋತ್ರ ಗಳನ್ನು ಆ ಕುರಿತು ಬೆದರಿಸುತ್ತಿದ್ದರು. ಈ ಎರಡು ಗೋತ್ರಗಳಿಂದ ಅವರು ಏಟು ತಿಂದಾಗ ಅಥವಾ ಯುದ್ಧದಲ್ಲಿ ಸೋತಾಗ 'ಬರಲಿ ಆ ಪ್ರವಾದಿ' ನಾವು ಅವರ ಜೊತೆ ಸೇರಿ ನಿಮ್ಮ ಮೇಲೆ ಆದ್ ಮತ್ತು ಇರಮ್‌ಗಳ ಮೇಲೆ ಎರಗಿದಂತಹ ಯಾತನೆಯನ್ನು ಎರಗಿಸುವೆವು. ಈಗ ಮುಹಮ್ಮದ್‌ರ(ಸ) ಬಗ್ಗೆ ತಿಳಿದು ನಮಗಿಂತ ಮುಂಚೆಯೇ ಅವರು ಸತ್ಯವಿಶ್ವಾಸ ಸ್ವೀಕರಿಸಿಕೊಂಡು ನಮ್ಮನ್ನು ಮೀರಿಸು ವಂತಾಗಬಾರದು. ಶಾಂತಿ ಸೌಹಾರ್ದವನ್ನು ಬೋಧಿಸುವ ಈ ಪ್ರವಾದಿಯ ಮೇಲೆ ವಿಶ್ವಾಸ ವಿಡುವ ಮೂಲಕ ನಾವು ನಮ್ಮ ದಾಯಾದಿ ಕಲಹದಿಂದ ಮುಕ್ತಿ ಪಡೆಯಬಹುದು. ನಮಗೆ ಇದೊಂದು ಸುಸಂದರ್ಭ. ಇದನ್ನು ಕೈ ಬಿಡಬಾರದು ಎಂದು ಅವರು ಮನದಲ್ಲೇ ನಿರ್ಧರಿಸಿಕೊಂಡರು.

ಮದೀನಾದ ಎರಡು ಪ್ರಬಲ ಗೋತ್ರಗಳಾದ ಔಸ್ ಮತ್ತು ಖಝ್ರಜ್ ಯಹೂದಿಗಳ ಕುತಂತ್ರದಿಂದಾಗಿ ಪರಸ್ಪರ ಕಾದಾಡಿ ಬಲಹೀನಗೊಂಡಿದ್ದುವು. ಈ ರೀತಿ ಅವರನ್ನು ದುರ್ಬಲಗೊಳಿಸಿ ನಾಶ ಮಾಡಬೇಕೆಂಬುದೇ ಯಹೂದಿಗಳ ಬಯಕೆ ಯಾಗಿತ್ತು. ಆದ್ದರಿಂದ ಒಂದಲ್ಲ ಒಂದು ಸಂಚನ್ನು ಅವರು ಸದಾ ಹೂಡುತ್ತಿದ್ದರು. ಪ್ರವಾದಿ ಮುಹಮ್ಮದ್‌ರ(ಸ) ಮದೀನಾ ವಲಸೆಯ 6 ವರ್ಷ ಹಿಂದೆಯಷ್ಟೇ ಔಸ್ ಮತ್ತು ಖಝ್ರಜ್‌ರ ಮಧ್ಯೆ 'ಬುಆಸ್' ಎಂಬಲ್ಲಿ ಘೋರ ಯುದ್ಧ ನಡೆದಿತ್ತು. 'ಬುಆಸ್' ಮದೀನಾದಿಂದ ಎರಡು ಮೈಲಿ ದೂರದಲ್ಲಿದೆ. ಈ ಯುದ್ಧದಲ್ಲಿ ಎರಡೂ ಬಣಗಳಿಗೆ ಆದ ನಷ್ಟವನ್ನು ಕಂಡು ಅವರಲ್ಲಿನ ಬುದ್ಧಿಜೀವಿಗಳು ಬಹಳ ನೊಂದು ಕೊಂಡಿದ್ದರು. ನಾವು ಈ ರೀತಿ ಪರಸ್ಪರ ಶತ್ರುಗಳಾಗಿಯೇ ಮುಂದುವರಿದರೆ ನಾವು ಪರಸ್ಪರ ಕಚ್ಚಾಡಿಯೇ ನಾಶ ಹೊಂದುವೆವು ಎಂಬುದು ಅವರಿಗೆ ಖಾತ್ರಿಯಾಗಿತ್ತು.

ಈಗ ಶಾಂತಿದೂತನ ಸಂದೇಶವನ್ನು ಆಲಿಸಿದಾಗ ಅವರು ಬಹಳ ಯೋಚಿಸ ತೊಡಗಿದರು. ಸ್ವಲ್ಪ ಹೊತ್ತಿನ ಚಿಂತನ, ಮಂಥನ ಮತ್ತು ಸಮಾಲೋಚನೆಯ ಬಳಿಕ ಅವರು ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದರು. ಮುಹಮ್ಮದ್‌ರ(ಸ) ಪ್ರವಾದಿತ್ವವನ್ನು ದೃಢೀಕರಿಸಿ ಪವಿತ್ರ ವಚನವನ್ನು ಪಠಿಸಿ ಮುಸ್ಲಿಮರಾದರು.

ತರುವಾಯ ಅವರ ಪೈಕಿ ಒಬ್ಬರು ಪ್ರವಾದಿವರ್ಯರನ್ನುದ್ದೇಶಿಸಿ(ಸ) ಹೀಗೆ ಹೇಳಿದರು: "ಪ್ರವಾದಿವರ್ಯರೇ! ನಾವು ನಮ್ಮ ಜನಾಂಗದ ಧರ್ಮವನ್ನು ತೊರೆದಿರುವೆವು. ನಮ್ಮ ಜನಾಂಗದಲ್ಲಿರುವಷ್ಟು ಪರಸ್ಪರ ದ್ವೇಷಾಸೂಯೆಗಳು ಇನ್ನಾವ ಜನಾಂಗದಲ್ಲೂ ಇರಲಾರದು. ತಮ್ಮ ವ್ಯಕ್ತಿತ್ವದ ಮೂಲಕ ಅಲ್ಲಾಹನು ಅವರನ್ನು ಪರಸ್ಪರ ಬೆಸೆಯು ವಂತಾಗಲಿ. ನಾವು ಅವರ ಬಳಿ ಹೋಗಿ ತಮ್ಮ ಧರ್ಮದ ಕಡೆಗೆ ಅವರನ್ನು ಆಹ್ವಾನಿಸು ವೆವು. ಈ ಧರ್ಮದ ಬಗ್ಗೆ ನಾವು ತಮ್ಮ ಮುಂದೆ ವ್ಯಕ್ತಪಡಿಸಿದ ನಮ್ಮ ಅನಿಸಿಕೆಯನ್ನು ಅವರ ಮುಂದೆಯೂ ಇಡುವೆವು. ಅಲ್ಲಾಹನು ಒಂದು ವೇಳೆ ಅವರನ್ನು ಈ ಧರ್ಮದಲ್ಲಿ ಒಟ್ಟುಗೂಡಿಸಿದರೆ ಆ ಬಳಿಕ ತಮಗಿಂತ ಬಲಶಾಲಿ ಯಾರೂ ಇರಲಾರರು."

ಯಾವ ಧರ್ಮವನ್ನು ಮಕ್ಕಾದ ಜನರು ತಮ್ಮ ಗೋತ್ರಗಳಲ್ಲಿ ಒಡಕುಂಟು ಮಾಡುವಂತಹದೆಂದು ಬಗೆದಿದ್ದರೋ ಅದೇ ಧರ್ಮದಲ್ಲಿ ಮದೀನಾದ ಜನರಿಗೆ ತಮ್ಮ ಐಕ್ಯ ಮತ್ತು ಒಗ್ಗಟ್ಟು ಇದೆಯೆಂದು ಕಂಡು ಬರುತ್ತದೆ.

ಈ ಸತ್ಯಪ್ರಿಯ ವ್ಯಕ್ತಿಗಳು ಮದೀನಾಕ್ಕೆ ಮರಳಿ ತಮ್ಮ ಜನಾಂಗದ ಪ್ರತಿಯೊಬ್ಬರ ಮುಂದೆ ಈ ಸುವಾರ್ತೆಯನ್ನು ಬಿತ್ತರಿಸುತ್ತಾರೆ:

"ಬಂಧುಗಳೇ! ಲೋಕದ ಜನಾಂಗಗಳು ಯಾವ ಪ್ರವಾದಿಗಾಗಿ ಕಾಯುತ್ತಿದ್ದರೋ ಅವರು ಆಗಮಿಸಿದ್ದಾರೆ. ನಮ್ಮ ಕಿವಿಗಳು ಅವರ ಮಧುರ ವಾಣಿಯನ್ನು ಆಲಿಸಿದುವು. ಅದು ಕಿವಿಯ ಮೂಲಕ ನಮ್ಮ ಹೃದಯಗಳಿಗೆ ಇಳಿಯಿತು. ನಮ್ಮ ಕಣ್ಣುಗಳು ಅವರನ್ನು ಕಂಡು ಧನ್ಯವಾದುವು. ಅವರು ನಮಗೆ ಚಿರಂತನನೂ ಸರ್ವರನ್ನು ಬದುಕಿಸುವವನೂ ಆದ ಅಲ್ಲಾಹನ ದರ್ಶನ ಮಾಡಿಸಿದರು. ಈಗ ನಮ್ಮ ಮಟ್ಟಿಗೆ ಲೌಕಿಕ ಜೀವನ ಮತ್ತು ಮರಣವು ಕ್ಷುಲ್ಲಕವಾಗಿದೆ."

## ಪ್ರಥಮ ಅಕಬಾ ಒಪ್ಪಂದ

ಈ ಆರು ಮಂದಿ ಖಝ್ರುಜೀಗಳ ಮೂಲಕ ಪ್ರವಾದಿ ಮುಹಮ್ಮದ್‌ರ(ಸ) ಪ್ರಸ್ತಾಪವು ಅನ್ಸಾರರ* ಎಲ್ಲಾ ಮೊಹಲ್ಲಾಗಳಿಗೂ ತಲುಪಿತು. ಈ ಅದೃಷ್ಟಶಾಲಿ ವ್ಯಕ್ತಿಗಳ ಮೂಲಕ ಇಸ್ಲಾಮ್ ಧರ್ಮದ ಸಂದೇಶವು ಮದೀನಾದಲ್ಲಿ ವ್ಯಾಪಿಸಿತು. ಅನ್ಸಾರರ ಎಲ್ಲಾ ಮನೆಗಳಿಗೂ ಈ ಸಂದೇಶ ತಲುಪಿ ಪ್ರತಿಯೊಂದು ಮನೆಯಲ್ಲೂ ಮುಹಮ್ಮದ್‌ರ(ಸ) ಅನುಯಾಯಿಗಳು ಹುಟ್ಟಿಕೊಂಡರು. ಈ ರೀತಿ ಮುಹಮ್ಮದ್‌ರ(ಸ) ಜ್ಯೋತಿಯು ಮದೀನಾದ ಎಲ್ಲಾ

ಮನೆಗಳನ್ನೂ ಬೆಳಗಿತು. ಈಗ ಅವರ ಪ್ರಸ್ತಾಪವಿಲ್ಲದ ಯಾವ ಸಭೆ ಸಮಾರಂಭಗಳೂ ಅಲ್ಲಿ ನಡೆಯುತ್ತಿರಲಿಲ್ಲ. ಮದೀನಾದ ಮನೆ ಮನೆಗಳಿಗೆ ಮತ್ತು ಎಲ್ಲ ಸಭೆ ಸಮಾರಂಭಗಳಿಗೆ ಅಂತಿಮ ಪ್ರವಾದಿಯ ಸಂದೇಶ ತಲುಪುವುದೆಂದು ಯಹೂದಿಗಳು ಭವಿಷ್ಯ ನುಡಿಯುತ್ತಿದ್ದುದು ಅಕ್ಷರಶಃ ನಿಜವಾಯಿತು.

ಒಂದು ವರ್ಷ ಕಳೆಯಿತು. ಮುಹಮ್ಮದ್‌ರು(ಸ) ಮದೀನಾದ ಯಾವ ವ್ಯಕ್ತಿಗೂ ಅಪರಿಚಿತರಾಗಿ ಉಳಿದಿರಲಿಲ್ಲ. ಪ್ರವಾದಿತ್ವದ 12ನೆಯ ವರ್ಷದಲ್ಲಿ ಮದೀನಾದ ಅನ್ಸಾರ್‌ಗಳ 12ಮಂದಿಯ ಒಂದು ತಂಡವು ಹಜ್ಜ್ ನಿರ್ವಹಿಸಲಿಕ್ಕಾಗಿ ಮಕ್ಕಾಕ್ಕೆ ತಲುಪಿತು. ಕಳೆದ ವರ್ಷ 6 ಮಂದಿ ಖಝ್ರುಜೀಗಳು ಮುಹಮ್ಮದ್‌ರನ್ನು(ಸ) ಭೇಟಿ ಯಾದ ಅದೇ ಅಕಬಾದಲ್ಲಿ ಅವರು ಪ್ರವಾದಿವರ್ಯರನ್ನು(ಸ) ಕಾತರದಿಂದ ಕಾಯ ತೊಡಗಿದರು. ಈ 12 ಮಂದಿಯಲ್ಲಿ ಐವರು ಗತ ವರ್ಷ ಪ್ರವಾದಿವರ್ಯರನ್ನು(ಸ) ಭೇಟಿಯಾದವರೇ ಆಗಿದ್ದರು. ಅವರಿಗೆ ಹೆಚ್ಚು ಹೊತ್ತು ಕಾಯಬೇಕಾಗಲಿಲ್ಲ. ಮುಹಮ್ಮದ್(ಸ) ಅಲ್ಲಿಗೆ ಬಂದರು. ಭೇಟಿಯಾಗಿ ವಿಚಾರ ವಿನಿಮಯ ನಡೆಸಿದರು. ಅವರ ಕಣ್ಮನಗಳು ತಣಿದವು. ಅವರಲ್ಲಿ ಪ್ರತಿಯೊಬ್ಬರೂ ಪ್ರವಾದಿ ಮುಹಮ್ಮದ್ ರೊಂದಿಗೆ(ಸ) ಈ ರೀತಿಯ ಪ್ರತಿಜ್ಞೆ ಮಾಡಿದರು:

"ನಾವು ಅಲ್ಲಾಹನೊಂದಿಗೆ ಯಾರನ್ನೂ ಭಾಗೀದಾರರಾಗಿ ಮಾಡಲಾರೆವು. ಕಳ್ಳತನ ಮಾಡಲಾರೆವು. ವ್ಯಭಿಚಾರವೆಸಗಲಾರೆವು. ನಮ್ಮ ಮಕ್ಕಳನ್ನು ಕೊಲ್ಲಲಾರೆವು. ಯಾರ ಮೇಲೂ ಸುಳ್ಳಾರೋಪ ಹೊರಿಸಲಾರೆವು. ಯಾವ ಒಳಿತಿನ ಕಾರ್ಯದಲ್ಲೂ ಮುಹಮ್ಮದ್‌ರನ್ನು(ಸ) ಅನುಸರಿಸದೆ ಇರಲಾರೆವು. ಸುಸ್ಥಿತಿಯಲ್ಲೂ ದುಸ್ಥಿತಿಯಲ್ಲೂ ಮುಹಮ್ಮದ್(ಸ) ಅವರ ಮಾತುಗಳನ್ನು ಆಲಿಸುವೆವು ಮತ್ತು ಪಾಲಿಸುವೆವು. ಅವರ ಆಜ್ಞೆಗಳು ನಮಗೆ ಪ್ರಿಯವಾದರೂ ಅಪ್ರಿಯವಾದರೂ, ನಮ್ಮ ಮೇಲೆ ಇತರರಿಗೆ ಪ್ರಾಶಸ್ತ್ಯ ನೀಡಲಾಗಿದ್ದರೂ ನಾವು ಅವರನ್ನು ಅನುಸರಿಸದೆ ಇರಲಾರೆವು. ಸರಕಾರದ ವಿಷಯದಲ್ಲಿ ನಾವು ಆಡಳಿತಗಾರರ ಜೊತೆ ಭಿನ್ನತೆ ತೋರಲಾರೆವು. (ಸರಕಾರದಲ್ಲಿ ನಮಗೆ ಹಕ್ಕಿದೆ ಎಂದು ತಿಳಿದಿರುವಾಗಲೂ ಬಹಿರಂಗ ಸತ್ಯನಿಷೇಧ ಧೋರಣೆಯನ್ನು ಕಾಣುವ ತನಕ ನಾವು ಅವರನ್ನು ಬೆಂಬಲಿಸುವೆವು) ನಾವು ಎಲ್ಲಿದ್ದರೂ, ಯಾವ ಸ್ಥಿತಿಯಲ್ಲಿದ್ದರೂ ಸತ್ಯವನ್ನೇ ನುಡಿಯುವೆವು. ಯಾವ ಆಕ್ಷೇಪಕನ ಆಕ್ಷೇಪಕ್ಕೂ ನಾವು ಹೆದರಲಾರೆವು."

ಈ ಪ್ರತಿಜ್ಞೆಯನ್ನು ಅವರು ಮಾಡಿದ ಕೂಡಲೇ ಪ್ರವಾದಿ(ಸ) ಈ ರೀತಿ ಹೇಳಿದರು:

"ನೀವು ಈ ಪ್ರತಿಜ್ಞೆಯನ್ನು ಪಾಲಿಸಿದರೆ ನಿಮಗೆ ಸ್ವರ್ಗವಿದೆ. ನಿಮ್ಮ ಪೈಕಿ ಯಾರಾದರೂ ಯಾವುದೇ ನಿಷಿದ್ಧ ಕಾರ್ಯವನ್ನೆಸಗಿದರೆ ಅವನ ವ್ಯವಹಾರವು ಅಲ್ಲಾಹನ ವಶದಲ್ಲಿದೆ. ಅವನು ಬಯಸಿದರೆ ಶಿಕ್ಷಿಸಲೂಬಹುದು ಕ್ಷಮಿಸಲೂಬಹುದು."

ಸತ್ಯಧರ್ಮ ಸ್ವೀಕಾರದ ಬಳಿಕ ಮರಳಿ ಮದೀನಾಕ್ಕೆ ಹೋಗಲು ಈ ತಂಡವು ಸಿದ್ಧ ವಾದಾಗ ಪ್ರವಾದಿವರ್ಯರು(ಸ) ಅವರ ಜೊತೆ ಹ. ಮುಸ್‌ಅಬ್ ಬಿನ್ ಉಮೈರ್‌ರನ್ನು(ರ)

ಕಳುಹಿಸಿಕೊಟ್ಟರು. ಅವರು ಮದೀನಾದ ಸತ್ಯವಿಶ್ವಾಸಿಗಳಿಗೆ ಪವಿತ್ರ ಕುರ್‌ಆನಿನ ಶಿಕ್ಷಣ ನೀಡಲು, ಇಸ್ಲಾಮ್ ಧರ್ಮದ ಪ್ರಚಾರ ಮಾಡಲು ಮತ್ತು ಮುಸ್ಲಿಮರಲ್ಲಿ ಧರ್ಮದ ತಿಳುವಳಿಕೆ ಮೂಡಿಸಲು ಪ್ರವಾದಿವರ್ಯರಿಂದ(ಸ) ನಿಯುಕ್ತರಾಗಿದ್ದರು.

## ದ್ವಿತೀಯ ಅಕಬಾ ಒಪ್ಪಂದ

ಮದೀನಾದಲ್ಲಿ ಇಸ್ಲಾಮ್ ಕ್ಷಿಪ್ರವಾಗಿ ವ್ಯಾಪಿಸತೊಡಗಿತು. ಅದು ಪರಸ್ಪರ ರಕ್ತದಾಹಿಗಳಾದ ಔಸ್ ಮತ್ತು ಖಝ್ರಜ್ ಗೋತ್ರಗಳನ್ನು ಏಕೋದರ ಸಹೋದರರಾಗಿ ಮಾರ್ಪಡಿಸಿತು. ಒಂದೇ ವರ್ಷದೊಳಗೆ ಮುಹಮ್ಮದ್‌ರ(ಸ) ಅನುಯಾಯಿಗಳ ಸಂಖ್ಯೆಯು ಗಣನೀಯವಾಗಿ ಏರಿತು. ಒಂದು ಮನೆಯಿಂದ ಒಬ್ಬನು ಹೊರಟು ಇಸ್ಲಾಮ್ ಸ್ವೀಕರಿಸಿ ಕುರ್‌ಆನ್ ಕಲಿತು ಮರಳಿ ಬಂದಾಗ ತನ್ನ ಮನೆಮಂದಿಯನ್ನೆಲ್ಲಾ ಮುಸ್ಲಿಮ್ ಆಗಿ ಮಾಡುತ್ತಿದ್ದನು. ಹೀಗೆ ಅನ್ಸಾರರ ಮೊಹಲ್ಲಾಗಳ ಪೈಕಿ ಮುಸ್ಲಿಮ್ ಮನೆಗಳಿಲ್ಲದ ಮೊಹಲ್ಲಾಗಳೇ ಇರಲಿಲ್ಲ. ಅವರು ತಮ್ಮ ಇಸ್ಲಾಮ್ ಸ್ವೀಕಾರವನ್ನು ಬಹಿರಂಗವಾಗಿ ಘೋಷಿಸುತ್ತಿದ್ದರು.

ಪ್ರವಾದಿತ್ವದ 13ನೆಯ ವರ್ಷ ಮದೀನಾದಿಂದ ಮಕ್ಕಾದ ಕಡೆಗೆ ಹಜ್ಜ್ ನಿರ್ವಹಣೆಗಾಗಿ ಹೊರಟ ತಂಡದಲ್ಲಿ 400 ಮುಸ್ಲಿಮೇತರರು, 73 ಮುಸ್ಲಿಮ್ ಪುರುಷರು ಮತ್ತು ಇಬ್ಬರು ಮುಸ್ಲಿಮ್ ಸ್ತ್ರೀಯರಿದ್ದರು. ಮುಸ್ಲಿಮರೆಲ್ಲರೂ ಮುಹಮ್ಮದ್‌ರನ್ನು(ಸ) ಭೇಟಿಯಾಗಲು ಕಾತರರಾಗಿದ್ದರು. ಆದರೆ ತಮ್ಮ ಮುಸ್ಲಿಮೇತರ ಸಂಗಾತಿಗಳ ಮುಂದೆ ಅವರು ಅದನ್ನು ಬಹಿರಂಗ ಪಡಿಸಿರಲಿಲ್ಲ.

ಮಕ್ಕಾ ತಲುಪಿದ ಕೂಡಲೇ ಉಮ್ಮೈಮ್ ಬಿನ್ ಸಾಇದಃ(ರ), ಸಅದ್ ಬಿನ್ ಖೈಶ್ಮ(ರ), ಮುಇನ್ ಬಿನ್ ಅದೀ(ರ) ಮತ್ತು ಅಬ್ದುಲ್ಲಾ ಬಿನ್ ಜುಬೈರ್(ರ)- ಮುಹಮ್ಮದ್‌ರನ್ನು(ಸ) ಅವರ ಚಿಕ್ಕಪ್ಪ ಹ. ಅಬ್ಬಾಸ್‌ರ(ರ) ಮನೆಯಲ್ಲಿ ಹೋಗಿ ಭೇಟಿಯಾದರು. ಸಲಾಮ್ ಮತ್ತು ಉಭಯ ಕುಶಲೋಪರಿಯ ನಂತರ ಹೀಗೆ ಹೇಳಿದರು: "ಪ್ರವಾದಿವರ್ಯರೇ! ನಾವು ಮದೀನಾದಿಂದ ಬಂದ ತಂಡದ ಸದಸ್ಯರು. ನಾವೆಲ್ಲರೂ ತಮ್ಮನ್ನು ಭೇಟಿಯಾಗಲು ಬಹಳ ಉತ್ಸುಕರಾಗಿದ್ದೆವು. ತಮ್ಮನ್ನು ಯಾವಾಗ ಎಲ್ಲಿ ಭೇಟಿಯಾಗಬಹುದೆಂದು ದಯವಿಟ್ಟು ತಿಳಿಸಿ."

ಮುಹಮ್ಮದ್(ಸ) ಈ ರೀತಿ ಉತ್ತರಿಸಿದರು: "ಹಜ್ಜ್‌ನ ಕೊನೆಯ ರಾತ್ರಿ ಹಾಜಿಗಳು ಮಿನಾದಿಂದ ಹೊರಡುವ ಸಮಯದಲ್ಲಿ ನೀವೆಲ್ಲರೂ ಅಕಬಾದ ಕಣಿವೆಯಲ್ಲಿ ಸೇರಬೇಕು. ಮಲಗಿದವರನ್ನು ಎಚ್ಚರಿಸಬಾರದು. ಬಾರದವನಿಗಾಗಿ ಕಾಯಬಾರದು."

ಆಗ ಅಬ್ಬಾಸ್(ರ) ಹೀಗೆ ಹೇಳಿದರು: "ನಿಮ್ಮ ಜೊತೆಯಲ್ಲಿ ನಿಮ್ಮ ಜನಾಂಗಕ್ಕೆ ಸೇರಿದ ನಿಮ್ಮ ವಿರೋಧಿಗಳೂ ಇದ್ದಾರೆ. ಆದ್ದರಿಂದ ನಿಮ್ಮ ಈ ಬಯಕೆಯನ್ನು

ರಹಸ್ಯವಾಗಿಡಿರಿ. ಎಲ್ಲ ಹಾಜಿಗಳೂ ನಿರ್ಗಮಿಸಿದ ಬಳಿಕ ಅಲ್ಲಿಗೆ ಬನ್ನಿರಿ."

ರಾತ್ರಿಯ ಅಂಧಕಾರದಲ್ಲಿ ಮುಹಮ್ಮದ್(ಸ) ಮತ್ತು ಅವರ ಚಿಕ್ಕಪ್ಪ ಅಬ್ಬಾಸ್(ರ) ಮೊದಲೇ ಅಕಬಾ ತಲುಪಿದ್ದರು. ಮುಹಮ್ಮದ್(ಸ) ತಮ್ಮ ವ್ಯವಹಾರ ಗಳಲ್ಲಿ ಅವರ ಮೇಲೆ ನಂಬಿಕೆ ಇಟ್ಟಿದ್ದರು. ಅವರು ಈಗಲೂ ಬಹಿರಂಗವಾಗಿ ಇಸ್ಲಾಮ್ ಸ್ವೀಕರಿಸಿರ ಲಿಲ್ಲ. ಆದರೂ ಮುಹಮ್ಮದ್(ಸ) ಮದೀನಾಕ್ಕೆ ಹೊರಡುವ ಮುಂಚೆಯೇ ಮದೀನಾದ ಜನರಲ್ಲಿ ಎಲ್ಲ ವಿಷಯಗಳನ್ನೂ ಚರ್ಚಿಸಿ ತೀರ್ಮಾನಿಸಲು ಮತ್ತು ಒಂದು ಬಲಿಷ್ಠ ಒಪ್ಪಂದವನ್ನು ಏರ್ಪಡಿಸಲು ಅವರು ತಮ್ಮ ಸೋದರ ಪುತ್ರನ ಜೊತೆ ಬಂದಿದ್ದರು.

ಮದೀನಾದ ಮುಸ್ಲಿಮರು ರಾತ್ರಿ ತಡವಾಗಿ ಅಕಬಾದಲ್ಲಿ ಬಂದು ಸೇರಿದಾಗ ಮುಹಮ್ಮದ್(ಸ) ಅವರನ್ನುದ್ದೇಶಿಸಿ ಹೇಳಿದರು: "ನಿಮ್ಮ ಪೈಕಿ ಯಾರಿಗಾದರೂ ಏನಾದರೂ ಹೇಳಲಿಕ್ಕಿದ್ದರೆ, ಅದನ್ನು ಸಂಕ್ಷಿಪ್ತವಾಗಿ ಹೇಳಲಿ. ಅನಗತ್ಯವಾಗಿ ದೀರ್ಘ ಮಾತನ್ನು ಆಡದಿರಲಿ. ಏಕೆಂದರೆ ಬಹುದೇವ ವಿಶ್ವಾಸಿಗಳ ಬೇಹುಗಾರರು ನಿಮ್ಮನ್ನು ಹುಡುಕುತ್ತಿದ್ದಾರೆ."

ಆ ಬಳಿಕ ಅಬ್ಬಾಸ್(ರ) ಅನ್ಸಾರರನ್ನುದ್ದೇಶಿಸಿ ಹೀಗೆ ಹೇಳಿದರು: "ಖಝ್ರುಜ್ ಗೋತ್ರ ದವರೇ! ನೀವು ಮುಹಮ್ಮದ್‌ರನ್ನು(ಸ) ನಿಮ್ಮಲ್ಲಿಗೆ ಕರೆಯುತ್ತಿರುವಿರಿ. ಮುಹಮ್ಮದ್(ಸ) ತಮ್ಮ ಕುಟುಂಬ ಮತ್ತು ಬಂಧುಬಳಗದವರ ಮಧ್ಯೆ ಅತ್ಯಂತ ಸುರಕ್ಷಿತ ಸ್ಥಿತಿಯಲ್ಲಿರುವರು. ನಮ್ಮ ಪೈಕಿ ಅವರ ಧರ್ಮವನ್ನು ಸ್ವೀಕರಿಸಿದವರೂ ಸ್ವೀಕರಿಸದೆ ಇರುವವರೂ ಕುಲ-ಗೋತ್ರದ ಆಧಾರದಲ್ಲಿ ಅವರನ್ನು ಬೆಂಬಲಿಸುತ್ತಿರುವೆವು. ಆದರೆ ಮುಹಮ್ಮದ್(ಸ) ನಮ್ಮೆಲ್ಲರನ್ನೂ ಬಿಟ್ಟು ನಿಮ್ಮಲ್ಲಿಗೇ ಹೋಗ ಬಯಸುತ್ತಾರೆ. ನಿಮ್ಮಲ್ಲಿ ಇಡೀ ಅರೇಬಿಯಾದ ವೈರವನ್ನು ಯಶಸ್ವಿಯಾಗಿ ಎದುರಿಸುವಷ್ಟು ಶಕ್ತಿ, ಸ್ಥೈರ್ಯ ಮತ್ತು ಯುದ್ಧ ಕುಶಲತೆ ಇದೆಯೋ-ಇಲ್ಲವೋ ಎಂಬುದನ್ನು ಈಗ ನೀವೇ ತೀರ್ಮಾನಿಸಿ. ಏಕೆಂದರೆ ಅರಬರು ಒಗ್ಗಟ್ಟಾಗಿ ನಿಮ್ಮ ವಿರುದ್ಧ ಯುದ್ಧ ಮಾಡುವರು. ಆದ್ದರಿಂದ ಚೆನ್ನಾಗಿ ಯೋಚಿಸಿದ ಬಳಿಕವೇ ಯಾವುದಾದರೂ ತೀರ್ಮಾನ ಕೈಗೊಳ್ಳಿರಿ. ಪರಸ್ಪರ ಸಮಾಲೋಚನೆ ನಡೆಸಿ ಒಂದು ಒಮ್ಮತದ ತೀರ್ಮಾನಕ್ಕೆ ಬನ್ನಿರಿ. ಸತ್ಯವೇ ಅತ್ಯುತ್ತಮ ಮಾತಾಗಿದೆ ಎಂಬುದನ್ನು ನೆನಪಿಡಿರಿ. ನೀವು ನಿಮ್ಮ ವೈರಿಗಳ ವಿರುದ್ಧ ಹೇಗೆ ಯುದ್ಧ ಮಾಡುತ್ತೀರೆಂಬುದನ್ನು ನಮಗೆ ತಿಳಿಸಿ."

ಇದಕ್ಕುತ್ತರವಾಗಿ ಬರಾ ಬಿನ್ ಮಅರೂರ್(ರ) ಹೇಳಿದರು: "ಅಲ್ಲಾಹನಾಣೆ! ನಮ್ಮ ಮನಸ್ಸಿನಲ್ಲಿ ಬೇರೇನಾದರೂ ಇದ್ದರೆ ನಾವು ಅದನ್ನು ಸ್ಪಷ್ಟವಾಗಿ ಹೇಳಿ ಬಿಡು ತ್ತಿದ್ದೆವು. ನಾವಂತೂ ಪ್ರವಾದಿವರ್ಯರೊಂದಿಗೆ(ಸ) ಪ್ರಾಮಾಣಿಕ ನಿಷ್ಠೆಯುಳ್ಳವರಾಗಿದ್ದು ಅವರಿಗಾಗಿ ನಮ್ಮ ಪ್ರಾಣಗಳನ್ನು ಬಲಿಗೊಡಲಿಚ್ಛಿಸುತ್ತೇವೆ. ನಮ್ಮ ಬಳಿ ಸಾಕಷ್ಟು ಯುದ್ಧ ಸಾಮಗ್ರಿಗಳಿವೆ. ನಾವು ಯುದ್ಧ ಮಾಡುವ ಪೂರ್ಣ ಸಾಮರ್ಥ್ಯ ಹೊಂದಿದ್ದೇವೆ. ನಾವು ಕಲ್ಲಿನ ಮೂರ್ತಿಗಳನ್ನು ಪೂಜಿಸುತ್ತಿದ್ದಾಗಲೇ ನಮ್ಮ ಸ್ಥಿತಿ ಇದಾಗಿತ್ತು. ಯಾವ ವಾಸ್ತವಿಕತೆಯ ಬಗ್ಗೆ ಇತರರು ಅಂಧರಾಗಿರುವರೋ ಅದನ್ನು ಅಲ್ಲಾಹನು ನಮಗೆ ತೋರಿಸಿಕೊಟ್ಟಿರುವಾಗ ಮತ್ತು

ಮುಹಮ್ಮದ್‌ರ(ಸ) ಮೂಲಕ ನಮಗೆ ಆತನು ನೆರವಾಗಿರುವಾಗ ನಮ್ಮ ಸ್ಥಿತಿಯು ಅದಕ್ಕಿಂತಲೂ ಉತ್ತಮವಾಗಿರಲೇಬೇಕಲ್ಲವೆ?"

ಇನ್ನು ಕೆಲವರು ಎದ್ದು ನಿಂತು ಹೇಳಿದರು: "ಪ್ರವಾದಿವರ್ಯರೇ(ಸ)! ತಾವು ಆಜ್ಞಾಪಿಸಿರಿ. ನಮ್ಮಿಂದ ಯಾವ ತರದ ಪ್ರತಿಜ್ಞೆ ಬೇಕಾದರೂ ಪಡಕೊಳ್ಳಿರಿ."

ಮುಹಮ್ಮದ್(ಸ) ಅವರು ಅನ್ಸಾರರ ಮುಂದೆ ಪವಿತ್ರ ಕುರ್‌ಆನಿನ ಕೆಲವು ವಚನಗಳನ್ನು ಓದಿ ಹೇಳಿದರು. ಅವರನ್ನು ಅಲ್ಲಾಹನತ್ತ ಆಹ್ವಾನಿಸಿದರು. ಇಸ್ಲಾಮ್ ಧರ್ಮದ ಬಗ್ಗೆ ಅವರಲ್ಲಿ ಆಸಕ್ತಿ ಮೂಡಿಸಿದರು ಮತ್ತು ಆ ಬಳಿಕ ಹೀಗೆ ಹೇಳಿದರು: "ನಿಮ್ಮ ಪ್ರತಿಜ್ಞೆ ಹೇಗಿರಬೇಕೆಂದರೆ ನೀವು ಸುಸ್ಥಿತಿಯಲ್ಲೂ ದುಸ್ಥಿತಿಯಲ್ಲೂ ನನ್ನ ಆಜ್ಞೆಗಳನ್ನು ಪಾಲಿಸಬೇಕು. ಶ್ರೀಮಂತಿಕೆಯಲ್ಲೂ ಬಡತನದಲ್ಲೂ ನಿಮ್ಮ ಸೊತ್ತನ್ನು ಅಲ್ಲಾಹನ ಮಾರ್ಗದಲ್ಲಿ ವ್ಯಯಿಸಬೇಕು. ಒಳಿತನ್ನು ಆಜ್ಞಾಪಿಸಬೇಕು ಮತ್ತು ಕೆಡುಕನ್ನು ತಡೆಯಬೇಕು. ಅಲ್ಲಾಹನ ಬಗ್ಗೆ ಸತ್ಯವಾದುದನ್ನೇ ಹೇಳಬೇಕು. ಯಾವ ಆಕ್ಷೇಪಕನ ಆಕ್ಷೇಪವನ್ನೂ ಲೆಕ್ಕಿಸಬಾರದು. ನಾನು ನಿಮ್ಮ ಬಳಿಗೆ ಬಂದಾಗ ನೀವು ಯಾವ ವಸ್ತುವಿನಿಂದ ನಿಮ್ಮ ಪ್ರಾಣಗಳನ್ನೂ ನಿಮ್ಮ ಮಡದಿ ಮಕ್ಕಳನ್ನೂ ಸಂರಕ್ಷಿಸುತ್ತೀರೋ ಅದರಿಂದಲೇ ನನ್ನ ಸಂರಕ್ಷಣೆ ಮಾಡಬೇಕು. ಇದಕ್ಕೆ ಪ್ರತಿಫಲವಾಗಿ ನಿಮ್ಮ ಪಾಲಿಗೆ ಸ್ವರ್ಗವಿದೆ."

ಇದನ್ನು ಕೇಳಿ ಜನರು ಮುಹಮ್ಮದ್(ಸ) ಅವರ ಬಳಿಗೆ ಪ್ರತಿಜ್ಞೆ ಮಾಡಲಿಕ್ಕಾಗಿ ಸಾಗಿದರು. ಆ ತಂಡದ ಅತ್ಯಂತ ಎಳೆಯ ವಯಸ್ಸಿನ ಯುವಕ ಅಸ್‌ಅದ್ ಬಿನ್ ಝುರಾರಃ ಮುಂದೆ ಬಂದು ಮುಹಮ್ಮದ್‌ರ(ಸ) ಕೈ ಹಿಡಿದು ಹೇಳಿದರು: "ಮದೀನಾದ ಜನರೇ! ನಿಲ್ಲಿರಿ. ಇವರು ಅಲ್ಲಾಹನ ಪ್ರವಾದಿಯಾಗಿರುವರೆಂಬುದು ನಮಗೆ ತಿಳಿದಿದೆ. ಇಂದು ಇವರನ್ನು ಮಕ್ಕಾದಿಂದ ನಮ್ಮಲ್ಲಿಗೆ ಕರೆದೊಯ್ಯುವುದು ಇಡೀ ಅರೇಬಿಯಾದ ವೈರವನ್ನು ಕಟ್ಟಿಕೊಳ್ಳುವುದಾಗಿದೆ. ಇದರ ಪರಿಣಾಮವಾಗಿ ನಿಮ್ಮ ಯುವಕರು ಕೊಲೆಯಾಗುವರು. ಅರಬರ ಖಡ್ಗಗಳು ನಿಮ್ಮ ರಕ್ತವನ್ನು ನೆಕ್ಕುವುವು. ಆದ್ದರಿಂದ ಅದನ್ನು ಸಹಿಸುವ ಸಾಮರ್ಥ್ಯ ನಿಮಲ್ಲಿದ್ದರೆ ಮಾತ್ರ ಇವರ ಕೈ ಹಿಡಿಯಿರಿ. ನಿಮ್ಮ ಪ್ರತಿಫಲವು ಅಲ್ಲಾಹನ ಬಳಿಯಿದೆ. ಒಂದು ವೇಳೆ ನಿಮಗೆ ನಿಮ್ಮ ಪ್ರಾಣಗಳ ಭಯವಿದ್ದರೆ ಈಗಲೇ ಇವರನ್ನು ತೊರೆದು ಬಿಡಿ. ಸ್ಪಷ್ಟವಾಗಿ ಅವರ ಕೊಡುಗೆಯನ್ನು ನಿರಾಕರಿಸಿ ಬಿಡಿ. ಏಕೆಂದರೆ ಈ ನಿರಾಕರಣೆಯು ಅಲ್ಲಾಹನ ಬಳಿ ಹೆಚ್ಚು ಸ್ವೀಕಾರಾರ್ಹ ವಾದೀತು."

ಇದನ್ನು ಕೇಳಿ ಜನರು ಹೀಗೆಂದರು: "ಸಅದ್ ನಮ್ಮ ದಾರಿಬಿಡಿರಿ. ಅಲ್ಲಾಹನಾಣೆ! ನಾವು ಈ ಪ್ರತಿಜ್ಞೆಯನ್ನು ಎಂದೂ ಮುರಿಯಲಾರೆವು. ಅದರಿಂದ ಎಂದೂ ಹಿಂಜರಿಯಲಾರೆವು."

ಆ ಬಳಿಕ ಎಲ್ಲರೂ ಪ್ರತಿಜ್ಞೆ ಮಾಡಿದರು. ಮುಹಮ್ಮದ್‌ರಿಗೆ(ಸ) ಮದೀನಾದಲ್ಲಿ

ನಿಷ್ಠ ಅನುಯಾಯಿಗಳ ಒಂದು ತಂಡ ಸಿದ್ಧವಾಯಿತು.

ಪ್ರತಿಜ್ಞೆ ಆದ ಬಳಿಕ ಪ್ರವಾದಿ(ಸ) ಅನ್ಸಾರರನ್ನುದ್ದೇಶಿಸಿ ಹೀಗೆ ಹೇಳಿದರು: "ನಿಮ್ಮ ನಿಮ್ಮ ಗೋತ್ರಗಳಿಂದ ನನಗೆ 12 ಮಂದಿ ಸರದಾರರನ್ನು ಆರಿಸಿಕೊಡಿ. ಅವರು ತಮ್ಮ ತಮ್ಮ ಗೋತ್ರಗಳ ಹೊಣೆಗಾರರಾಗಿರುವರು. ಹ. ಈಸಾರ(ಅ) ಹವಾರಿ ಗಳು ತಂತಮ್ಮ ಗೋತ್ರಗಳ ಹೊಣೆಗಾರರಾದಂತೆ."

ಅನ್ಸಾರರು ತಮ್ಮ ಪೈಕಿ 12 ಮಂದಿ ಸರದಾರರನ್ನು ಆರಿಸಿದ ಬಳಿಕ ಪ್ರವಾದಿವರ್ಯರು(ಸ) ಅವರಿಗೆ ಅವರವರ ಡೇರೆಗಳಿಗೆ ಮರಳುವಂತೆ ಆದೇಶಿಸಿದರು.

ಈ ರೀತಿ ಇಸ್ಲಾಮ್ ಧರ್ಮದ ಸುವರ್ಣ ಅಧ್ಯಾಯವೊಂದು ಆರಂಭ ಗೊಂಡಂತಾಯಿತು.

## ಏಕಾಂತ ಯಾತ್ರೆ

ಮಕ್ಕಾದಿಂದ ಮದೀನಾಕ್ಕೆ ಹೋಗುವ ದಾರಿಯಲ್ಲಿ ಕೆಲವೇ ಫರ್ಲಾಂಗುಗಳ ಅಂತರ ದಲ್ಲಿ ಓರ್ವ ಒಂಟೆ ಸವಾರನನ್ನು ಕೆಲವು ಮಂದಿ ಸುತ್ತುವರಿದಿರುವರು. ಅವರ ಕೈಗಳಲ್ಲಿ ಖಡ್ಗ ಮತ್ತು ಈಟಿಗಳಿದ್ದುವು. ಒಂಟೆ ಸವಾರನ ಹಿಂದೆ ಆತನ ಪತ್ನಿ ಮತ್ತು ಒಂದು ಸಣ್ಣ ಮಗುವೂ ಇದೆ. ಪಾಪ! ಆತ ಅತ್ಯಂತ ಅಸಹಾಯಕನಂತೆ ಕಾಣುತ್ತಿದ್ದಾನೆ. ಅವನನ್ನು ಸುತ್ತುವರಿದವರು ಗುಲ್ಲೆಬ್ಬಿಸುತ್ತಾರೆ. ಮಗು ಕಿರುಚಾಡಲಾರಂಭಿಸುತ್ತದೆ. ಮಹಿಳೆಯ ಕಣ್ಣು ಗಳಿಂದ ಅಶ್ರುಧಾರೆ ಹರಿಯುತ್ತಿದೆ. ಆಕೆ ಏನೋ ಹೇಳಬಯಸುತ್ತಾಳೆ. ಆದರೆ ಗಂಟಲಿಂದ ಸ್ವರವೇ ಹೊರಡುವುದಿಲ್ಲ. ತುಟಿಗಳು ಕಂಪಿಸುತ್ತಿವೆ. ಆ ವ್ಯಕ್ತಿ ಹೀಗೆ ಹೇಳುತ್ತಾರೆ:

"ದೂರ್ತರೇ! ನಾನು ನನ್ನ ಮನೆಮಾರುಗಳನ್ನು ಬಿಟ್ಟು ಬಂದಿರುವೆನು. ನನ್ನೆಲ್ಲ ಸೊತ್ತು ಅದರಲ್ಲೇ ಇದೆ. ಕೇವಲ ಮಡದಿ ಮತ್ತು ಮಗುವನ್ನು ಕೊಂಡು ಹೋಗುತ್ತಿರುವೆನು. ನಿಮ್ಮ ಕಿರುಕುಳಗಳನ್ನು ಸಹಿಸಲಾರದೆ ಹೋಗುತ್ತಿರುವೆನು. ಇನ್ನೇನು ಬೇಕು ನಿಮಗೆ?"

"ಏನೂ ಬೇಡ" ಒಬ್ಬನು ಒರಟಾಗಿ ಉತ್ತರಿಸಿದನು.

"ನೀವಂತೂ ನಮ್ಮ ನಿಯಂತ್ರಣದಿಂದ ಹೊರಗಾಗಿರುವಿರಿ. ನಿಮಗೆ ಬೇಕಾದಲ್ಲಿ ಹೋಗಬಹುದು. ಆದರೆ ನಾವು ನಮ್ಮ ಈ ಹುಡುಗಿಯನ್ನು ನಿಮ್ಮ ಜೊತೆ ಅಲೆದಾಡಲು ಬಿಡಲಾರೆವು."

ಒಂಟೆ ಸವಾರ: "ಇದು ನನ್ನ ಪತ್ನಿ. ಆಕೆಯನ್ನು ನೀವು ನಿಮ್ಮಿಚ್ಛೆಯಂತೆ ನನಗೆ ಮದುವೆ ಮಾಡಿ ಕೊಟ್ಟಿರುವಿರಿ. ಈಗ ಆಕೆಯನ್ನು ನನ್ನಿಂದ ಬೇರ್ಪಡಿಸಲು ಯಾವ ಅಧಿಕಾರವೂ ನಿಮಗಿಲ್ಲ."

ಇದನ್ನು ಕೇಳಿ ಜನರು ಕೆರಳುತ್ತಾರೆ. ಆತನನ್ನು ಒಂಟೆಯಿಂದ ಒತ್ತಾಯಪೂರ್ವಕ

ಕೆಳಗಿಳಿಸುತ್ತಾರೆ. ಕೆಲವರು ಆತನ ಕಡೆಗೆ ಈಟಿಯನ್ನೂ ತೋರಿಸುತ್ತಾರೆ. ಆದರೆ ಒಂಟೆ ಸವಾರ ಒಬ್ಬಂಟಿಗನಾದುದರಿಂದ ಸುಮ್ಮನಿರುತ್ತಾನೆ. ಅವರು ಆತನ ಸತಿಯನ್ನು ಬಲಾತ್ಕಾರವಾಗಿ ಕಸಿದು ಒಯ್ಯುತ್ತಾರೆ. ಆ ಮಹಿಳೆ ಗೋಳೋ ಎಂದು ಅಳುತ್ತಿದ್ದಾಳೆ. ಒಂಟೆ ಸವಾರನ ಕಣ್ಣುಗಳಿಂದಲೂ ಕಣ್ಣೀರ ಕೋಡಿಯೇ ಹರಿಯುತ್ತದೆ. ಆತ ಸ್ಥಂಭೀ ಭೂತನಾಗಿ ನಿಂತು ಬಿಡುತ್ತಾನೆ. ತನ್ನ ಪತ್ನಿ ಮತ್ತು ಮಗುವನ್ನು ಅಕ್ರಮಿಗಳ ಬಲೆಯಲ್ಲಿ ಕಂಡು ಕೊರಗುತ್ತಾನೆ.

ಇದು ಹಝ್ರತ್ ಅಬೂಸಲ್ಮಾ(ರ). ಅವರಿಗೆ ಇಸ್ಲಾಮ್ ಸ್ವೀಕರಿಸಿದ ಬಳಿಕ ತರತರದ ಹಿಂಸೆ ನೀಡಲಾಗಿತ್ತು. ಇಂದು ಮಕ್ಕಾ ಪಟ್ಟಣ ತೊರೆದುದರ ಪರಿಣಾಮವಾಗಿ ಮಡದಿ-ಮಗುವನ್ನೂ ಅವರಿಂದ ಕಸಿಯಲಾಯಿತು. ಮಕ್ಕಾದಲ್ಲಿ ಮುಸ್ಲಿಮರಿಗೆ ಜೀವನವನ್ನು ಅತ್ಯಂತ ದುಸ್ತರಗೊಳಿಸಲಾಗಿತ್ತು. ಮಾತ್ರವಲ್ಲ ಅವರನ್ನು ಆ ಪಟ್ಟಣ ತೊರೆದು ಹೋಗುವುದಕ್ಕೂ ಬಿಡುತ್ತಿರಲಿಲ್ಲ.

ಅಬೂ ಸಲ್ಮಾ ಸ್ವಲ್ಪ ಹೊತ್ತು ಅಲ್ಲೇ ಕಲ್ಲಾಗಿ ನಿಂತು ಬಿಡುತ್ತಾರೆ. ಮುಂದೆ ಹೋಗುವುದು ಅವರಿಗೆ ಬಹಳ ಕಷ್ಟವೆನಿಸುತ್ತದೆ. ಮರಳುವುದು ಕೂಡಾ ಅವರಿಗೆ ಬೇಕಾಗಿರಲಿಲ್ಲ. ಉಮ್ಮುಸಲ್ಮಾ ಮುಗೀರಾ ಗೋತ್ರದ ಪುತ್ರಿಯಾಗಿದ್ದರು. ಈ ದಂಪತಿಗಳ ಇಸ್ಲಾಮ್ ಸ್ವೀಕಾರವು ಅವರನ್ನು ವ್ಯಾಕುಲಗೊಳಿಸಿತ್ತು. ಅದಕ್ಕೆ ಆಕೆಯನ್ನು ಪತಿಯ ಜೊತೆ ವಲಸೆ ಹೋಗುವುದರಿಂದ ತಡೆದರು. ಅಬೂಸಲ್ಮಾ ಅಬ್ದುಲ್ ಅಸದ್ ಗೋತ್ರಕ್ಕೆ ಸೇರಿದವರು. ಅವರಿಗೆ ಈ ಕೃತ್ಯವು ಅಸಹ್ಯವೆನಿಸಿತು. ಆದರೆ ಅವರು ಅಬೂಸಲ್ಮಾರಿಗೆ ನೆರವಾಗಲಿಲ್ಲ. ಬದಲಾಗಿ ಮುಗೀರಾ ಗೋತ್ರದವರು ತಾಯಿ ಮತ್ತು ಮಗುವನ್ನು ಎಳೆದೊಯ್ಯುತ್ತಿರುವಾಗ ಅವರನ್ನು ತಡೆದು:

"ನೀವು ನಮ್ಮವನಿಂದ ನಿಮ್ಮ ಹುಡುಗಿಯನ್ನು ಕಸಿದುಕೊಂಡದ್ದು ಸರಿ. ಆದರೆ ನಾವು ನಮ್ಮ ಮಗು ಸಲ್ಮಾನನ್ನು ನಿಮ್ಮ ಜೊತೆ ಬಿಡಲಾರೆವು" ಎನ್ನುತ್ತಾ ಮಗುವನ್ನು ಉಮ್ಮುಸಲ್ಮಾರಿಂದ ಬಲವಂತವಾಗಿ ಕಸಿದುಕೊಂಡು ಹೋದರು. ಈ ರೀತಿ ಪತಿ ಮತ್ತು ಮಗು ಇಬ್ಬರನ್ನೂ ಕಳಕೊಂಡು ಉಮ್ಮುಸಲ್ಮಾ ಮುಗೀರಾ ಗೋತ್ರದ ಸೆರೆ ಯಲ್ಲಿ ಮಕ್ಕಾಕ್ಕೆ ಮರಳುತ್ತಾರೆ. ಈ ದೃಶ್ಯವನ್ನು ಕಂಡು ಅಬೂಸಲ್ಮಾ ಸ್ವಲ್ಪ ಹೊತ್ತು ಕಳೆದ ಬಳಿಕ ಪುನಃ ಮದೀನಾದತ್ತ ತಮ್ಮ ಒಂಟೆಯ ಮೇಲೆ ಏಕಾಂತವಾಗಿ ಹೊರಡುತ್ತಾರೆ. ಉಮ್ಮುಸಲ್ಮಾರನ್ನು ಗೃಹಬಂಧನದಲ್ಲಿರಿಸಲಾಗುತ್ತದೆ. ಸಲ್ಮಾ ಅಬ್ದುಲ್ ಅಸದ್ ಗೋತ್ರದ ವಶದಲ್ಲಿರುತ್ತಾರೆ. ಈ ರೀತಿ ಅಬೂಸಲ್ಮಾರ ಚಿಕ್ಕ ಸಂಸಾರ ಛಿದ್ರವಾಗುತ್ತದೆ. ಮೂವರು ಮೂರು ಕಡೆಯಾಗಿ ಒಂದು ವರ್ಷ ಕಳೆಯಿತು. ಉಮ್ಮುಸಲ್ಮಾ ತನ್ನ ಪತಿಯನ್ನೂ ಇಸ್ಲಾಮ್ ಧರ್ಮವನ್ನೂ ತೊರೆದು ಮರುಮದುವೆ ಮಾಡಿಕೊಳ್ಳುವಂತೆ ಆಕೆಗೆ ತರತರದ ಆಮಿಷಗಳನ್ನೊಡ್ಡಲಾಗುತ್ತದೆ. ಆದರೆ ಆ ಅಬಲೆ ಎಲ್ಲ ಕಿರುಕುಳಗಳನ್ನು ಸಹಿಸಿಯೂ ಧರ್ಮದಲ್ಲೂ ಪಾತಿವ್ರತ್ಯದಲ್ಲೂ ಸ್ಥಿರವಾಗಿ ನಿಲ್ಲುತ್ತಾರೆ.

ತನ್ಮಧ್ಯೆ ಉಮ್ಮುಸಲ್ಮಾ ಆಗಾಗ ಮನೆಯಿಂದ ಹೊರಟು ಮಕ್ಕಾದಿಂದ ದೂರ 'ಅಬ್‌ತಹ್' ಎಂಬಲ್ಲಿ ಹೋಗಿ ಕುಳಿತಿರುತ್ತಿದ್ದರು. ಒಮ್ಮೆ ಈ ರೀತಿ ಕುಳಿತು ತನ್ನ ಪತಿ ಮತ್ತು ಪುತ್ರನ ನೆನಪಿನಲ್ಲಿ ಮುಳುಗಿರುವಾಗ ಅವರ ಓರ್ವ ಸೋದರ ಸಂಬಂಧಿ ಅಲ್ಲಿಗೆ ಬರುತ್ತಾನೆ. ಉಮ್ಮುಸಲ್ಮಾ ಈ ರೀತಿ ಕುಳಿತು ಅಳುತ್ತಿರುವುದನ್ನು ಕಂಡು ಅವನ ಮನ ಕರಗಿತು.

"ಅಯ್ಯೋ! ಈ ಅಬಲೆಯ ಮೇಲೆ ಎಷ್ಟೊಂದು ಅನ್ಯಾಯವಾಗಿದೆ. ಈಕೆಯನ್ನು ತಡೆದಿರಿಸಿದುದಾದರೂ ಏತಕ್ಕೆ?" ಎಂದು ತನ್ನಲ್ಲೇ ಪ್ರಶ್ನಿಸಿಕೊಳ್ಳುತ್ತಾ ಆಕೆಯೊಂದಿಗೆ ಏನನ್ನೂ ಹೇಳದೆ ಉಮ್ಮುಸಲ್ಮಾರ ರಕ್ಷಕರ ಬಳಿಗೆ ತೆರಳುತ್ತಾನೆ:

"ಆ ಬಡಪಾಯಿಯನ್ನು ಏಕೆ ಹೋಗಲು ಬಿಡುವುದಿಲ್ಲ. ಆಕೆಯನ್ನು ಪತಿ ಮತ್ತು ಪುತ್ರ ಇಬ್ಬರಿಂದಲೂ ನೀವು ಬೇರ್ಪಡಿಸಿರುವಿರಿ. ಎಂತಹ ಅನ್ಯಾಯವಿದು!"

ಆತನ ಸ್ವರದಲ್ಲಿದ್ದ ಅನುಕಂಪವು ಉಮ್ಮುಸಲ್ಮಾರ ರಕ್ಷಕರನ್ನೂ ಪ್ರಭಾವಿತಗೊಳಿಸಿತು. "ಉಮ್ಮುಸಲ್ಮಾ! ನೀನು ಬಯಸುವುದಾದರೆ ನಿನ್ನ ಪತಿಯ ಬಳಿಗೆ ಹೋಗು" ಎಂದರು.

ಉಮ್ಮುಸಲ್ಮಾ ಅವರ ಆಶೆಯ ದೀಪ ಬೆಳಗಿತು. ಆಕೆಯ ಪಾಳುಬಿದ್ದ ತೋಟ ಮತ್ತೆ ನಳನಳಿಸಿತು. ಒಂದು ಹೊಸ ಜೀವನದ ಸುವಾರ್ತೆ ಲಭಿಸಿತು. ಆದರೂ ಅವರ ಮನದ ಮೊಗ್ಗು ಬಿರಿಯಲಿಲ್ಲ. ಅವರ ಕರುಳ ಕುಡಿ ಸಲ್ಮಾ!

"ನನಗೆ ನನ್ನ ಮಗುವನ್ನು ಹಿಂದಿರುಗಿಸಿ" ಎಂದು ಆಕೆ ಅಂಗಲಾಚಿದರು. ಆಕೆಗೆ ಮದೀನಾಕ್ಕೆ ಹೋಗಲು ಅನುಮತಿ ಲಭಿಸಿದ ವಿಷಯ ತಿಳಿದ ಅಬೂಸಲ್ಮಾರ(ರ) ಕಡೆಯವರು ಸಲ್ಮಾನನ್ನು ಅವರಿಗೆ ಮರಳಿಸಿದರು. ಇನ್ನು ಉಮ್ಮುಸಲ್ಮಾರಿಗೆ ಒಂದು ಘಳಿಗೆಯೂ ಮಕ್ಕಾದಲ್ಲಿ ನಿಲ್ಲಲಾಗಲಿಲ್ಲ. ಯಾರ ನೆರವನ್ನೂ ಯಾಚಿಸದೆ ಮಗುವನ್ನೆತ್ತಿ ಒಂಟೆಯ ಮೇಲೇರಿ ಮದೀನಾದ ಕಡೆಗೆ ಹೊರಟೇ ಬಿಟ್ಟರು.

ತನ್‌ಈಮ್‌ನ ಬಳಿ ಅಬ್ದುದ್ದಾರ್ ಗೋತ್ರದ ಉಸ್ಮಾನ್ ಬಿನ್ ತಲ್‌ಹಾ ಅವರು ಓರ್ವ ಮಹಿಳೆಯು ಮಗುವನ್ನೆತ್ತಿ ಏಕಾಂಗಿಯಾಗಿ ಬರುವುದನ್ನು ಕಂಡು ಅಚ್ಚರಿಗೊಂಡರು. ಹತ್ತಿರ ಬಂದಾಗ ಅವರಿಗೆ ಉಮ್ಮುಸಲ್ಮಾರ ಪರಿಚಯವಾಯಿತು.

"ಅಬೂ ಉಮಯ್ಯಾರ ಮಗಳೇ, ಎಲ್ಲಿಗೆ ಹೋಗುತ್ತಿರುವೆ?" ಎಂದು ವಿಚಾರಿಸಿದರು.

"ನನ್ನ ಪತಿಯನ್ನು ಸೇರಲು ಮದೀನಾಕ್ಕೆ ಹೋಗುತ್ತಿರುವೆನು" ಎಂದು ಉಮ್ಮುಸಲ್ಮಾ ಉತ್ತರಿಸಿದರು.

ಉಸ್ಮಾನ್: "ನಿನ್ನ ಜೊತೆಗೆ ಯಾರೂ ಇಲ್ಲವೇ?"

ಉಮ್ಮುಸಲ್ಮಾ: "ನಾನು ಅಲ್ಲಾಹನ ರಕ್ಷಣೆಯಲ್ಲಿ ಹೊರಟಿರುವೆನು. ನನ್ನ ಮಗು ಮತ್ತು ಆತನ ಹೊರತು ಬೇರೆ ಯಾರೂ ನನ್ನ ಜೊತೆಗಿಲ್ಲ."

ಉಸ್ಮಾನ್ (ಓರ್ವ ಮಹಿಳೆಯ ನಂಬಿಕೆಯ ಬಲ ಕಂಡು): ಅಲ್ಲಾಹನಾಣೆ! ನಾನು ನಿನ್ನನ್ನು ಒಬ್ಬಂಟಿಯಾಗಿ ಹೋಗಲು ಬಿಡಲಾರೆ ಎನ್ನುತ್ತಾ ಅವರ ಒಂಟೆಯ ದಾರ ಹಿಡಿದು ನಡೆಯುತ್ತಾರೆ.

ಕುಬಾದಲ್ಲಿ ಔಫ್ ಗೋತ್ರದ ಕೇರಿಗೆ ತಲುಪಿದಾಗ "ನೋಡಲ್ಲಿ, ನಿನ್ನ ಪತಿ ಅಲ್ಲಿದ್ದಾರೆ. ಅವರ ಬಳಿಗೆ ಹೋಗು. ಅಲ್ಲಾಹನು ನಿನಗೆ ಸಮೃದ್ಧಿ ದಯಪಾಲಿಸಲಿ" ಎನ್ನುತ್ತಾ ಬಂದ ದಾರಿಯಲ್ಲಿ ಕಾಲ್ನಡಿಗೆಯಲ್ಲೇ ಮರಳುತ್ತಾರೆ.

## ಮುಹಾಜಿರ್‌ಗಳ ಬವಣೆ

ಮುಹಮ್ಮದ್(ಸ) ಪ್ರವಾದಿಯಾಗಿ 12 ವರ್ಷಗಳು ಸಂದಿವೆ. ಆ ವರ್ಷ ದುಲ್ ಹಜ್ಜ್ ತಿಂಗಳಲ್ಲಿ ದ್ವಿತೀಯ ಅಕಬಾ ಒಡಂಬಡಿಕೆ ಏರ್ಪಟ್ಟಿತು. ಆ ಬಳಿಕ ಪ್ರವಾದಿ(ಸ) ಮುಸ್ಲಿಮರಿಗೆ ಮಕ್ಕಾದಿಂದ ಮದೀನಾಕ್ಕೆ ವಲಸೆ ಹೋಗುವ ಸಾರ್ವತ್ರಿಕ ಅನುಮತಿ ನೀಡುತ್ತಾ ಈ ರೀತಿ ಹೇಳಿದರು: "ಅಲ್ಲಾಹನು ಇದೀಗ ನಿಮಗೆ ಸೋದರರನ್ನು ಉಂಟು ಮಾಡಿರುವನು. ನೀವು ಶಾಂತಿಯುತವಾಗಿ ಬಾಳಲು ಸಾಧ್ಯವಾಗುವಂತಹ ಒಂದು ಪಟ್ಟಣವನ್ನು ನಿಮಗೆ ಒದಗಿಸಿರುವನು."

ಈ ಆಜ್ಞೆ ಜಾರಿಯಾದೊಡನೆ ಪ್ರಥಮವಾಗಿ ಆಮಿರ್ ಬಿನ್ ರಬೀಅ ಅಲ್ ಖಿಸ್ತರಿ ತಮ್ಮ ಪತ್ನಿ ಲೈಲಾ ಬಿಂತ್ ಅಬೀ ಹಶ್ಮಾರ ಜತೆ ಹೊರಡುತ್ತಾರೆ. ತರುವಾಯ ಅಮ್ಮಾರ್ ಬಿನ್ ಯಾಸಿರ್, ಬಿಲಾಲ್ ಮತ್ತು ಸಅದ್ ಬಿನ್ ಅಬೀ ವಕ್ಕಾಸ್ ಅವರು ಹಿಜ್ರತ್ ಮಾಡಿದರು. ಆ ಬಳಿಕ ಉಸ್ಮಾನ್ ಬಿನ್ ಅಫ್ಫಾನ್ ತಮ್ಮ ಪತ್ನಿಯೂ ಪ್ರವಾದಿ ಪುತ್ರಿಯೂ ಆದ ರುಕಿಯ್ಯಾರೊಂದಿಗೆ ಮದೀನಾದ ಕಡೆಗೆ ಹೊರಡುತ್ತಾರೆ. ಅನಂತರ ಹಿಜ್ರತ್‌ನ ಈ ಪರಂಪರೆಯು ನಿರಂತರವಾಗಿ ಹೆಚ್ಚುತ್ತಲೇ ಇತ್ತು. ಕೊನೆಗೆ ಇಡೀ ಕುಟುಂಬಗಳೇ ತಮ್ಮ ಮನೆಮಾರುಗಳನ್ನು ತೊರೆದು ಹೊರಡತೊಡಗಿದುವು.

ಅವರು ತೊರೆದು ಹೋದ ಮನೆಗಳನ್ನು ಕುರೈಶ್ ಸರದಾರರು ವಶಪಡಿಸಿ ಮಾರಾಟ ಮಾಡತೊಡಗಿದರು. ಅವರು ಮುಸ್ಲಿಮರನ್ನು ಹಿಜ್ರತ್‌ನಿಂದ ತಡೆಯಲು ತಮ್ಮಿಂದ ಸಾಧ್ಯವಿದ್ದುದೆಲ್ಲವನ್ನೂ ಮಾಡುತ್ತಿದ್ದರು. ಸುಹೈಬ್(ರ) ಹಿಜ್ರತ್‌ಗೆ ಹೊರಟಾಗ ಕುರೈಶರು ಅವರನ್ನು ತಡೆದು ಈ ರೀತಿ ಹೇಳಿದರು:

"ನೀವು ಇಲ್ಲಿಗೆ ಬಂದಾಗ ದರಿದ್ರರಾಗಿದ್ದಿರಿ. ನಮ್ಮ ನಗರದಲ್ಲಿದ್ದು ನೀವು ಶ್ರೀಮಂತ ರಾದಿರಿ. ಈಗ ನೀವು ಆ ಸೊತ್ತನ್ನು ಇಲ್ಲಿಂದ ಕೊಂಡು ಹೋಗಬಯಸುತ್ತೀರಾ? ಅಲ್ಲಾಹನಾಣೆ! ಅದು ಸಾಧ್ಯವಿಲ್ಲ."

ಸುಹೈಬ್(ರ): "ನಾನು ನನ್ನೆಲ್ಲ ಸಂಪತ್ತನ್ನು ನಿಮಗೆ ಕೊಟ್ಟು ಬಿಟ್ಟರೆ ನನ್ನನ್ನು ವಲಸೆ ಹೋಗಲು ಬಿಡುವಿರಾ?"

ಖುರೈಶರು: "ಖಂಡಿತ."

ಸುಹೈಬ್(ರ) ತಮ್ಮ ಎಲ್ಲ ಸಂಪತ್ತನ್ನು ಅವರಿಗೆ ನೀಡಿ ಕೈ ಕೊಡವಿಕೊಂಡು ಅಲ್ಲಾಹನ ಮಾರ್ಗದಲ್ಲಿ ಹೊರಟು ಬಿಟ್ಟರು.

ಪ್ರವಾದಿ ಮುಹಮ್ಮದ್‌ರಿಗೆ(ಸ) ಈ ವಿಷಯ ತಿಳಿದಾಗ ಅವರು ಹೀಗೆ ಹೇಳಿ ದರು: "ಸುಹೈಬ್ ಲಾಭದ ವ್ಯವಹಾರ ಮಾಡಿದರು. ಸುಹೈಬ್ ಲಾಭದ ವ್ಯವಹಾರ ಮಾಡಿದರು."

ಇತರೆಲ್ಲ ಮುಹಾಜಿರ್‌ಗಳು (ವಲಸಿಗರು) ರಹಸ್ಯವಾಗಿ ಹೊರಟರೆ ಹ. ಉಮರ್(ರ) ಬಹಿರಂಗವಾಗಿ ಇಪ್ಪತ್ತು ಮಂದಿ ಸವಾರರ ಜತೆ ಹೊರಟರು.

## ವಲಸೆಯ ಬಯಕೆ

ಮಕ್ಕಾ ಸನ್ಮಾರ್ಗದರ್ಶನದಿಂದ ವಂಚಿತವಾಯಿತು. ಆದರೆ ಸನ್ಮಾರ್ಗದರ್ಶನದ ಜ್ಯೋತಿಯನ್ನು ಬರಮಾಡಿಕೊಳ್ಳಲು ಮದೀನಾ ಸರ್ವ ರೀತಿಯಲ್ಲೂ ಸಜ್ಜಾಗಿ ನಿಂತಿತ್ತು.

ಒಮ್ಮೆ ಒಬ್ಬನು ಅಬೂಜಹಲನಲ್ಲಿ ಮುಹಮ್ಮದ್‌ರು(ಸ) ನೀಡುತ್ತಿರುವ ಇಸ್ಲಾಮ್‌ನ ಸಂದೇಶದ ಕುರಿತು ಆತನ ಅಭಿಪ್ರಾಯವನ್ನು ಕೇಳುತ್ತಾನೆ. ಆಗ ಅಬೂಜಹಲ್ ನೀಡಿದ ಉತ್ತರವಿದು: "ನಾನೇನು ಹೇಳಲಿ. ಮುಹಮ್ಮದ್‌ರ(ಸ) ಮನೆತನವು ತನ್ನ ಹಿರಿಮೆಯನ್ನು ಘೋಷಿಸಿತು. ಅದರ ಪುರಾವೆಯೆಂಬ ರೂಪದಲ್ಲಿ ಔತಣ ಕೂಟಗಳನ್ನೇರ್ಪಡಿಸಿತು. ಅದಕ್ಕುತ್ತರವಾಗಿ ನಾವೂ ಅವರಂತಹುದೇ ಔತಣ ಕೂಟಗಳನ್ನು ಏರ್ಪಡಿಸಿದೆವು. ಅವರು ತಮ್ಮವರ ಕೈಯಲ್ಲಿ ಕೊಲೆಗೀಡಾದವನ ವಾರಸುದಾರನಿಗೆ ದೊಡ್ಡ ಮೊತ್ತದ ಪರಿಹಾರ ಧನಗಳನ್ನು ನೀಡಿದರು. ನಾವೂ ಹಾಗೆಯೇ ನೀಡಿದೆವು. ಅವರು ದುಂದುವೆಚ್ಚದ ಆಡಂಬರ ಗಳನ್ನು ಮಾಡಿದಾಗ ನಾವೂ ಹಾಗೆಯೇ ಮಾಡಿದೆವು. ಎಲ್ಲಿಯವರೆಗೆಂದರೆ ನಾವಿಬ್ಬರೂ ಒಂದೇ ತೆರನಾದೆವು. ಆದರೆ ಒಮ್ಮೆಲೇ ಅವರು ತಮ್ಮ ಮನೆತನಕ್ಕೆ ಪ್ರವಾದಿತ್ವ ಲಭಿಸಿತೆಂದೂ ಆಕಾಶದಿಂದ ದಿವ್ಯವಾಣಿ ಅವತೀರ್ಣಗೊಂಡಿತೆಂದೂ ಹೇಳತೊಡಗಿದರು. ಇದನ್ನು ನಾವು ಸಹಿಸುವುದಾದರೂ ಹೇಗೆ? ಅಲ್ಲಾಹನಾಣೆ! ನಾವೆಂದೂ ಮುಹಮ್ಮದ್‌ರ(ಸ) ಮೇಲೆ ವಿಶ್ವಾಸವಿರಿಸಲಾರೆವು."

ಮಕ್ಕಾವಾಸಿಗಳ ಈ ದರ್ಪ ಮತ್ತು ಅಹಂಭಾವವು ಇತರರನ್ನೂ ಅಂಧರಾಗಿ ಮಾಡಲು ಬಯಸಿತ್ತು. ಅವರ ವಿಚಾರ ಚಿಂತನಗಳ ಬಾಗಿಲುಗಳಿಗೆ ಬೀಗ ಜಡಿಯಬಯಸಿತ್ತು. ತಾವು ಸನ್ಮಾರ್ಗದ ಜ್ಯೋತಿಯಿಂದ ವಂಚಿತರಾದಂತೆ ಇತರರೂ ವಂಚಿತರಾಗಬೇಕೆಂದು ಬಯಸಿತ್ತು.

ಇಥಿಯೋಪಿಯಾದಲ್ಲಿ ಮುಹಮ್ಮದ್‌ರ(ಸ) ಪ್ರವಾದಿತ್ವದ ಚರ್ಚೆ ಆರಂಭವಾದಾಗ ಅಲ್ಲಿನ 20 ಮಂದಿ ಕ್ರೈಸ್ತ ಮತಾವಲಂಬಿಗಳು ಆ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಮಕ್ಕಾ ನಗರಕ್ಕೆ ಬಂದರು. ಅವರು ಪ್ರವಾದಿವರ್ಯರ(ಸ) ಬಳಿಗೆ ಬಂದಾಗ ಮುಹಮ್ಮದ್‌ರು(ಸ)

ಪವಿತ್ರ ಕುರ್‌ಆನಿನ ವಚನಗಳನ್ನು ಅವರ ಮುಂದೆ ಪಠಿಸಿದರು. ಅದನ್ನು ಕೇಳಿ ಅವರ ಕಣ್ಣುಗಳಿಂದ ಅಶ್ರುಧಾರೆ ಹರಿಯತೊಡಗಿತು. ಅವರು ಕೂಡಲೇ ಇಸ್ಲಾಮ್ ಸ್ವೀಕರಿಸಿದರು. ಅವರು ಅಲ್ಲಿಂದ ಹಿಂತೆರಳುವಾಗ ಅಬೂಜಹಲ್ ಅವರನ್ನುದ್ದೇಶಿಸಿ ಹೀಗೆ ಹೇಳಿದನು:

"ನೀವು ದೊಡ್ಡ ಮೂರ್ಖರು. ಇಷ್ಟು ದೂರದಿಂದ ಬಂದವರು ಒಂದೇ ಘಳಿಗೆಯಲ್ಲಿ ನಿಮ್ಮ ಧರ್ಮವನ್ನು ತೊರೆದು ಈ ಹೊಸ ಧರ್ಮವನ್ನು ಸ್ವೀಕರಿಸಿದಿರಲ್ಲಾ?"

ಅವರು ಹೇಳಿದರು: "ನಾವು ನಿಮ್ಮೊಂದಿಗೆ ಜಗಳಕ್ಕಿಳಿಯಲಾರೆವು. ನಿಮ್ಮ ಧರ್ಮ ನಿಮಗೆ, ನಮ್ಮ ಧರ್ಮ ನಮಗೆ."

ಮುಹಮ್ಮದ್(ಸ) ತಮ್ಮ ಅನುಯಾಯಿಗಳಿಗೆ ಮದೀನಾದ ಕಡೆಗೆ ವಲಸೆ ಹೋಗುವ ಅನುಮತಿ ಕೊಟ್ಟು ಬಿಟ್ಟಿರುವರು. ಏಕೆಂದರೆ ಆಗ ಮಕ್ಕಾದಲ್ಲಿ ಮುಸ್ಲಿಮರಾಗಿ ಜೀವಿಸುವುದು ಅಸಾಧ್ಯವೆಂಬಷ್ಟರ ಮಟ್ಟಿಗೆ ಅನ್ಯಾಯ ಅತ್ಯಾಚಾರಗಳು ಹೆಚ್ಚಾಗಿದ್ದುವು. ಆದರೆ ಮಕ್ಕಾದ ಸತ್ಯನಿಷೇಧಿಗಳ ನೈಜ ಗುರಿಯಾಗಿರುವ ಪ್ರವಾದಿ(ಸ) ತಮ್ಮ ಬಗ್ಗೆ ಅಲ್ಲಾಹನ ಆಜ್ಞೆ ಬರುವುದನ್ನು ಕಾಯುತ್ತಿದ್ದರು. ಅಲ್ಲಾಹನ ಆಜ್ಞೆಯಿಲ್ಲದೆ ಅವರು ಅಲ್ಲಿಂದ ಹೊರಡುವಂತಿರಲಿಲ್ಲ. ಸೃಷ್ಟಿಕರ್ತನ ಅನುಮತಿ ದೊರೆತೊಡನೆ ಮಕ್ಕಾ ಪಟ್ಟಣಕ್ಕೆ ವಿದಾಯ ಹೇಳಲು ಪ್ರವಾದಿ(ಸ) ಕಾತರರಾಗಿದ್ದರು. ತನ್ಮಧ್ಯೆ ಅವರ ಆಪ್ತ ಸಂಗಾತಿ ಅಬೂಬಕರ್ ಸಿದ್ದೀಕ್(ರ) ಬಂದು ಹಿಜ್ರತ್‌ನ ಅನುಮತಿ ಕೋರಿದಾಗ ಹೀಗೆಂದರು: "ಈಗ ಹೊರಡಬೇಡಿರಿ. ಅಲ್ಲಾಹನು ನಿಮಗೊಬ್ಬ ಸಂಗಾತಿಯನ್ನು ಉಂಟುಮಾಡ ಬಹುದು. ಅವರೂ ಹಿಜ್ರತ್‌ನಲ್ಲಿ ನಿಮ್ಮ ಜೊತೆಗಿರುವರು."

ಆಗ ಅಬೂಬಕರ್(ರ) ಹೇಳಿದರು, "ನನ್ನ ತಂದೆ ತಾಯಿಗಳು ತಮಗೆ ಅರ್ಪಿತ. ತಾವು ತಮ್ಮ ಬಗ್ಗೆ ಹಿಜ್ರತ್‌ನ ಅನುಮತಿಯನ್ನು ನಿರೀಕ್ಷಿಸುತ್ತಿರುವಿರಾ?"

ಪ್ರವಾದಿ(ಸ): "ಹೌದು."

ಮುಹಮ್ಮದ್‌ರ(ಸ) ಜೊತೆ ಹಿಜ್ರತ್‌ಗೆ ಹೋಗಲಿಕ್ಕಾಗಿ ಅಬೂಬಕರ್(ರ) ಮಕ್ಕಾದಲ್ಲೇ ತಂಗಿರುವರು. ಎರಡು ಒಂಟೆಗಳನ್ನು ಸವಾರಿಗಾಗಿ ಸಿದ್ಧಗೊಳಿಸಿಟ್ಟಿರುವರು.

ಅಲ್ಲಾಹನು ಪ್ರವಾದಿ ಮುಹಮ್ಮದ್‌ರಿಗೆ(ಸ) ಈ ರೀತಿ ಪ್ರಾರ್ಥಿಸಲು ಆಜ್ಞಾಪಿಸುತ್ತಾನೆ, "ಓ ನನ್ನ ಪ್ರಭೂ! ನೀನು ನನ್ನನ್ನು ಎಲ್ಲಿಗೆ ಕೊಂಡೊಯ್ಯುವುದಿದ್ದರೂ ಸತ್ಯದೊಂದಿಗೇ ಒಯ್ಯು, ಎಲ್ಲಿಂದ ಹೊರಡಿಸುವುದಿದ್ದರೂ ಸತ್ಯ ಸಹಿತವೇ ಹೊರಡಿಸು ಮತ್ತು ನಿನ್ನ ಕಡೆಯಿಂದ ಒಂದು ಅಧಿಕಾರವನ್ನು ನನಗೆ ನೆರವಾಗಿಸು" ಎಂದು ಪ್ರಾರ್ಥಿಸಿರಿ.

**(ಪವಿತ್ರ ಕುರ್‌ಆನ್, 17:80)**

ಮಕ್ಕಾದಲ್ಲಿದ್ದ ಎಲ್ಲ ಮುಸ್ಲಿಮರು ಬಹಳ ಜಾಗರೂಕತೆಯಿಂದ ಒಬ್ಬೊಬ್ಬರಾಗಿ ಇಬ್ಬಿಬ್ಬರಾಗಿ ಮದೀನಾ ಪಟ್ಟಣಕ್ಕೆ ಹೋಗಿ ನೆಲೆಸಿದ್ದರು. ಅವರು ಅಲ್ಲಾಹನ ಮಾರ್ಗದಲ್ಲಿ

ತಮ್ಮೆಲ್ಲ ಸೊತ್ತುವಿತ್ತಗಳನ್ನು ತೊರೆದು ಹೋಗಿದ್ದರು. ಮದೀನಾದ ಅನ್ಸಾರ್‌ಗಳು ಅವರನ್ನು ಆದರದಿಂದ ಬರಮಾಡಿಕೊಂಡು ಸ್ವಇಚ್ಛೆಯಿಂದ ತಮ್ಮ ಸೊತ್ತು ಸಂಪತ್ತುಗಳಲ್ಲಿ ಅವರಿಗೆ ಪಾಲು ನೀಡಿದರು. ಈ ರೀತಿ ಮುಸ್ಲಿಮರೆಲ್ಲಾ ಒಬ್ಬೊಬ್ಬರಾಗಿ ಮದೀನಾಕ್ಕೆ ಹೋಗಿ ನೆಲೆಸಿ ಅದನ್ನು ತಮ್ಮ ಕೇಂದ್ರವಾಗಿಸಿಕೊಂಡರೆ ಪರಿಸ್ಥಿತಿ ತಮ್ಮ ಮಟ್ಟಿಗೆ ಬಹಳ ಗಂಭೀರವಾಗ ಬಹುದೆಂದು ಮಕ್ಕಾದ ಕುರೈಶರು ಆತಂಕಿತರಾದರು. ಆದ್ದರಿಂದ ಅವರು ಮುಸ್ಲಿಮರನ್ನು ಹಿಜ್ರತ್‌ನಿಂದ ತಡೆಯಲಿಕ್ಕಾಗಿ ಎಲ್ಲ ರೀತಿಯ ಅನ್ಯಾಯ ಅತ್ಯಾಚಾರಗಳನ್ನು ಎಸಗ ತೊಡಗಿದರು.

## ಕಅಬಾದಲ್ಲಿ ಕುರ್‌ಆನ್ ಪಠಣ

ಇಂದು ಕಅಬಾ ಭವನದಲ್ಲಿ ಕುರೈಶ್ ಸರದಾರರ ಜೊತೆ ದೊಡ್ಡ ಸಂಖ್ಯೆಯಲ್ಲಿ ಸಾರ್ವಜನಿಕರೂ ಸೇರಿದ್ದಾರೆ. ಎಲ್ಲರೂ ಲೋಕಾಭಿರಾಮದಲ್ಲಿ ನಿರತರಾಗಿದ್ದರು. ಮುಹಮ್ಮದ್(ಸ) ಅವರನ್ನು ದೂರದಿಂದ ನೋಡುತ್ತಾರೆ. ಅವರಿಗೆ ಅಲ್ಲಾಹನ ಸಂದೇಶ ತಲುಪಿಸಲಿಕ್ಕಾಗಿ ಅಲ್ಲಿಗೆ ತಲುಪುತ್ತಾರೆ. 'ಅನ್ನಜ್ಮ್' ಎಂಬ ಅಧ್ಯಾಯವು ಅಲ್ಲಾಹನ ವತಿಯಿಂದ ಅವತೀರ್ಣವಾಗುತ್ತದೆ. ಅದನ್ನು ಅವರು ಪಠಿಸಲಾರಂಭಿಸಿದಾಗ ಅದರಿಂದ ಅತ್ಯಧಿಕ ಪ್ರಭಾವಿತರಾದ ಬಹುದೇವ ವಿಶ್ವಾಸಿಗಳಿಗೆ ಮತ್ತು ಪ್ರವಾದಿ ವರ್ಯರ(ಸ) ವಿರೋಧಿಗಳಿಗೆ ಗುಲ್ಲು ಗಲಾಟೆ ಮಾಡುವ ಪ್ರಜ್ಞೆಯೇ ಇರುವುದಿಲ್ಲ. ಅವರು ಕಲ್ಲಿನ ಮೂರ್ತಿಗಳಂತಾಗಿ ಆ ವಚನಗಳನ್ನು ಆಲಿಸಲಾರಂಭಿಸಿದರು. ವಿರೋಧಿಗಳ ಮುಂದೆ ಪ್ರವಾದಿ(ಸ) ಕಅಬಾ ಭವನದಲ್ಲಿ ಪಠಿಸಿದ ಪ್ರಥಮ ಅಧ್ಯಾಯ ಇದು. ಅದರಲ್ಲಿ ಅಲ್ಲಾಹನು ಹೀಗೆ ಹೇಳಿರುವನು:

"ನಕ್ಷತ್ರದಾಣೆ - ಅದು ಅಸ್ತಮಿಸಿದಾಗ- ನಿಮ್ಮ ಸಂಗಾತಿ ದಾರಿಗೆಡಲೂ ಇಲ್ಲ ವಂಚಿಸಲ್ಪಡಲೂ ಇಲ್ಲ. ಅವರು ತಮ್ಮ ಸ್ವಚಿತ್ತದಿಂದ ನುಡಿಯುವುದಿಲ್ಲ. ಇದು ಅವರಿಗೆ ಅವತೀರ್ಣಗೊಳ್ಳುವಂತಹ ಒಂದು 'ದಿವ್ಯವಾಣಿ' ಆಗಿದೆ. ಅವರಿಗೆ ಮಹಾಶಕ್ತಿಶಾಲಿ ಯಾದವನು ಕಲಿಸಿರುತ್ತಾನೆ. ಅವನು ಬಹಳ ಯುಕ್ತಿವಂತ. ಅವನು ಪ್ರತ್ಯಕ್ಷನಾದನು, ಅವನು ಉನ್ನತ ದಿಗಂತದಲ್ಲಿದ್ದಾಗ. ತರುವಾಯ ಅವನು ಹತ್ತಿರ ಬಂದನು ಮತ್ತು ಮೇಲೆ ತೇಲತೊಡಗಿದನು- ಎರಡು ಬಿಲ್ಲುಗಳಷ್ಟು ಅಥವಾ ಅದಕ್ಕಿಂತ ತುಸು ಕಡಿಮೆ ಅಂತರ ಇರುವ ತನಕ. ಆಗ ಅವನು ಅಲ್ಲಾಹನ ದಾಸನಿಗೆ ತಾನು ತಲಪಿಸಬೇಕಾಗಿದ್ದ ದಿವ್ಯವಾಣಿಯನ್ನು ತಲಪಿಸಿದನು. ಕಣ್ಣು ಯಾವುದನ್ನು ಕಂಡಿತೋ, ಮನಸ್ಸು ಅದಕ್ಕೆ ಸುಳ್ಳನ್ನು ಸೇರಿಸಲಿಲ್ಲ. ನೀವೀಗ ಅವರು ಕಣ್ಣಾರೆ ಕಾಣುತ್ತಿರುವಂತಹ ವಿಷಯದ ಬಗ್ಗೆ ಅವರೊಡನೆ ಜಗಳಾಡುತ್ತೀರಾ?

ಇನ್ನೊಮ್ಮೆ ಅವರು, ಆತನು ಇಳಿಯುತ್ತಿರುವುದನ್ನು ಕಂಡರು. 'ಸಿದ್ರತುಲ್ ಮುಂತಹಾ'ದ ಬಳಿ. 'ಜನ್ನತುಲ್ ಮಅ್‌ವಾ'(ಸ್ವರ್ಗದ ನೆಲೆ) ಅದರ ಹತ್ತಿರದಲ್ಲೇ ಇದೆ. ಆಗ 'ಸಿದ್‌ರ'ವನ್ನು ಕವಿದುಕೊಂಡಿದ್ದುದು ಕವಿದುಕೊಂಡಿತ್ತು- ದೃಷ್ಟಿ ಕೋರೈಸಲೂ ಇಲ್ಲ, ಅತಿಕ್ರಮಿಸಲೂ ಇಲ್ಲ

ಮತ್ತು ಅವರು ತಮ್ಮ ಪ್ರಭುವಿನ ದೊಡ್ಡ ದೊಡ್ಡ ನಿದರ್ಶನಗಳನ್ನು ಕಂಡರು.

ಈಗ ಹೇಳಿರಿ ನೀವು 'ಲಾತ್', 'ಉಝ್ಝಾ' ಮತ್ತು ಮೂರನೆಯ ದೇವಿ 'ಮನಾತ್'ನ ವಾಸ್ತವಿಕತೆಯ ಕುರಿತು ಸ್ವಲ್ಪವಾದರೂ ವಿವೇಚಿಸಿದ್ದೀರಾ? ಏನು! ನಿಮಗೆ ಪುತ್ರರು ಮತ್ತು ಅಲ್ಲಾಹನಿಗೆ ಪುತ್ರಿಯರೇ? ಇದಂತೂ ದೊಡ್ಡ ದಾಂಧಲೆಯ ವಿತರಣೆಯೇ ಸರಿ. ನಿಜವಾಗಿ ಇವೆಲ್ಲ ನೀವು ಮತ್ತು ನಿಮ್ಮ ಪೂರ್ವಜರು ಇಟ್ಟು ಕೊಂಡಿರುವ ಕೆಲವು ಹೆಸರುಗಳೇ ಹೊರತು ಇನ್ನೇನೂ ಅಲ್ಲ. ಅಲ್ಲಾಹನು ಇವುಗಳ ಪರವಾಗಿ ಯಾವ ಆಧಾರವನ್ನೂ ಇಳಿಸಿಲ್ಲ. ವಾಸ್ತವದಲ್ಲಿ ಜನರು ಕೇವಲ ಊಹೆಯನ್ನು ಅನುಸರಿಸುತ್ತಾರೆ ಮತ್ತು ಸ್ವೇಚ್ಛೆಗಳ ದಾಸರಾಗಿ ಬಿಟ್ಟಿದ್ದಾರೆ. ವಸ್ತುತಃ ಅವರ ಪ್ರಭುವಿನ ಕಡೆಯಿಂದ ಅವರ ಬಳಿಗೆ ಮಾರ್ಗದರ್ಶನ ಬಂದಿದೆ. ಮನುಷ್ಯನ ಪಾಲಿಗೆ ತಾನಿಚ್ಛಿಸಿದ್ದೇ ಸತ್ಯವೇ? ಈ ಲೋಕ ಹಾಗೂ ಪರಲೋಕದ ಒಡೆಯನಂತು ಅಲ್ಲಾಹನೇ ಆಗಿರುತ್ತಾನೆ. ಆಕಾಶಗಳಲ್ಲಿ ಎಷ್ಟೋ ದೇವಚರರಿದ್ದಾರೆ. ಅವರ ಶಿಫಾರಸು ಸ್ವಲ್ಪವೂ ಉಪಯುಕ್ತ ವಾಗಲಾರದು- ಅಲ್ಲಾಹನೇ ಯಾವುದಾದರೂ ವ್ಯಕ್ತಿಯ ಪರವಾಗಿ ಮನವಿ ಕೇಳಲು ಬಯಸಿ, ಅವನ ವಿಷಯದಲ್ಲಿ ಅದನ್ನು ಅನುಮತಿಸುವ ಮತ್ತು ಅದನ್ನು ಮೆಚ್ಚಿಕೊಳ್ಳುವ ವರೆಗೆ. ಆದರೆ ಪರಲೋಕವನ್ನು ನಂಬದವರು ದೇವಚರರಿಗೆ ದೇವಿಯರ ಹೆಸರುಗಳನ್ನಿ ಡುತ್ತಾರೆ. ವಸ್ತುತಃ ಈ ಕುರಿತಾದ ಯಾವ ಜ್ಞಾನವೂ ಅವರಿಗೆ ಪ್ರಾಪ್ತವಿಲ್ಲ. ಅವರು ಕೇವಲ ಊಹೆಯನ್ನು ಅನುಸರಿಸುತ್ತಾರೆ. ಊಹೆಯು ಸತ್ಯದ ಸ್ಥಾನದಲ್ಲಿ ಯಾವ ಕೆಲಸಕ್ಕೂ ಬಾರದು. ಆದುದರಿಂದ ಸಂದೇಶವಾಹಕರೇ, ನಮ್ಮ ಸ್ಮರಣೆಯಿಂದ ವಿಮುಖ ನಾಗುವವನನ್ನು ಹಾಗೂ ಲೌಕಿಕ ಜೀವನದ ಹೊರತು ಇನ್ನೇನನ್ನೂ ಬಯಸದವನನ್ನು ಅವನ ಪಾಡಿಗೆ ಬಿಟ್ಟುಬಿಡಿರಿ. ಇವರ ಜ್ಞಾನ ಬಂಡವಾಳವಿಷ್ಟೇ. ಅವನ ಮಾರ್ಗದಿಂದ ಯಾರು ತಪ್ಪಿದ್ದಾನೆ ಮತ್ತು ಯಾರು ಸನ್ಮಾರ್ಗದಲ್ಲಿದ್ದಾನೆ ಎಂಬುದನ್ನು ನಿಮ್ಮ ಪ್ರಭುವೇ ಚೆನ್ನಾಗಿ ಬಲ್ಲನು. ಅಲ್ಲಾಹನೇ ಭೂಮಿ-ಆಕಾಶಗಳ ಸಕಲ ವಸ್ತುಗಳ ಒಡೆಯನು. (ಇದು) ದುಷ್ಕರ್ಮಿ ಗಳಿಗೆ ಅಲ್ಲಾಹನು ಅವರ ಕರ್ಮಗಳ ಪ್ರತಿಫಲ ನೀಡುವಂತಾಗಲಿಕ್ಕಾಗಿ ಮತ್ತು ಉತ್ತಮ ಧೋರಣೆ ಅನುಸರಿಸಿದವರಿಗೆ ಉತ್ತಮ ಪ್ರತಿಫಲ ದಯಪಾಲಿಸುವಂತಾಗಲಿಕ್ಕಾಗಿ.

ಅವರು ದೊಡ್ಡ ದೊಡ್ಡ ಪಾಪಕೃತ್ಯಗಳಿಂದ ಮತ್ತು ಬಹಿರಂಗವಾದ ಲಜ್ಜಾಸ್ಪದ ಕೃತ್ಯಗಳಿಂದ ದೂರವಿರುತ್ತಾರೆ. ಅಲ್ಪಸ್ವಲ್ಪ ನ್ಯೂನತೆಗಳು ಅವರಿಂದ ಸಂಭವಿಸಿದರೆ ಅದು ಇದಕ್ಕೆ ಹೊರತಾಗಿದೆ. ನಿಸ್ಸಂದೇಹವಾಗಿಯೂ ನಿಮ್ಮ ಪ್ರಭುವಿನ ಕ್ಷಮಾಶೀಲತೆಯು ಬಹಳ ವಿಶಾಲವಾಗಿದೆ. ಅವನು ನಿಮ್ಮನ್ನು ಭೂಮಿಯಿಂದ ಸೃಷ್ಟಿಸಿದನು ಹಾಗೂ ನೀವು ನಿಮ್ಮ ಮಾತೆಯರ ಉದರಗಳಲ್ಲಿ ಭ್ರೂಣಾವಸ್ಥೆಯಲ್ಲಿದ್ದ ಕಾಲದಿಂದಲೇ ಅವನು ನಿಮ್ಮನ್ನು ಚೆನ್ನಾಗಿ ಬಲ್ಲನು. ಆದುದರಿಂದ ನೀವು ನಿಮ್ಮ ಆತ್ಮಶುದ್ಧತೆಯ ಬಗ್ಗೆ ಹೇಳಿಕೊಳ್ಳ ಬೇಡಿರಿ. ನಿಜವಾದ ಧರ್ಮನಿಷ್ಠನು ಯಾರೆಂಬುದನ್ನು ಅವನೇ ಹೆಚ್ಚು ಬಲ್ಲನು. ಸಂದೇಶ ವಾಹಕರೇ, ನೀವು ಕಂಡಿರಾ ದೇವಮಾರ್ಗದಿಂದ ವಿಮುಖನಾಗಿ ಬಿಟ್ಟವನನ್ನು- ಮತ್ತು ಸ್ವಲ್ಪ ಮಾತ್ರ

ಕೊಟ್ಟು ನಿಲ್ಲಿಸಿ ಬಿಟ್ಟವನನ್ನು? ಅವನು ಸತ್ಯವನ್ನು ಕಾಣಲು, ಅವನ ಬಳಿ ಅದೃಶ್ಯದ ಜ್ಞಾನ ಇದೆಯೇ? ಮೂಸಾರ ಗ್ರಂಥಗಳಲ್ಲಿ ಮತ್ತು ನಿಷ್ಠೆಯ ಋಣ ತೀರಿಸಿದ ಇಬ್ರಾಹೀಮ್‌ರ ಗ್ರಂಥಗಳಲ್ಲಿ ತಿಳಿಸಲಾಗಿರುವ ವಿಷಯಗಳ ಬಗ್ಗೆ ಯಾವ ಸುದ್ದಿಯೂ ಅವನಿಗೆ ತಲುಪಿಲ್ಲವೇ? (ಅದೇನೆಂದರೆ) ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆ ಹೊರಲಾರನು. ಮನುಷ್ಯನು ತಾನೇ ಪರಿಶ್ರಮಿಸಿದುದರ ಹೊರತು ಅವನಿಗೆ ಬೇರೇನೂ ಇಲ್ಲ ಮತ್ತು ಅವನ ಪರಿಶ್ರಮವನ್ನು ಸದ್ಯವೇ ನೋಡಲಾಗುವುದು. ಅನಂತರ ಅವನ ಸಂಪೂರ್ಣ ಪ್ರತಿಫಲವನ್ನು ಕೊಡಲಾಗುವುದು- ಅಂತಿಮವಾಗಿ ತಲುಪ ಲಿಕ್ಕಿರುವುದು ನಿಮ್ಮ ಪ್ರಭುವಿನ ಕಡೆಗೇ ಆಗಿದೆ. ಅವನೇ ನಗಿಸಿದನು ಮತ್ತು ಅವನೇ ಅಳುವಂತೆ ಮಾಡಿದನು- ಅವನೇ ಮರಣ ಕೊಟ್ಟನು ಮತ್ತು ಅವನೇ ಜೀವಂತ ಗೊಳಿಸಿದನು. ಒಂದು ಹನಿಯು ತೊಟ್ಟಿಕ್ಕುವಾಗ, ಅವನೇ ಅದರಿಂದ ಗಂಡು ಮತ್ತು ಹೆಣ್ಣುಗಳ ಜೊತೆಯನ್ನುಂಟು ಮಾಡಿದನು. ಇನ್ನೊಂದು ಜೀವನ ಪ್ರದಾನ ಮಾಡುವುದೂ ಅವನ ಹೊಣೆಗಾರಿಕೆಯಾಗಿದೆ- ಅವನೇ ಶ್ರೀಮಂತಗೊಳಿಸಿದನು ಮತ್ತು ಆಸ್ತಿಪಾಸ್ತಿ ನೀಡಿದನು- ಅವನೇ 'ಶಿಅ್‌ರಾ' ನಕ್ಷತ್ರದ ಪ್ರಭು- ಅವನೇ ಪ್ರಥಮ 'ಆದ್' ಜನಾಂಗ ವನ್ನು ನಾಶಗೊಳಿಸಿದನು- ಮತ್ತು 'ಸಮೂದ್' ಜನಾಂಗವನ್ನು, ಅವರಲ್ಲಿ ಯಾರೂ ಉಳಿಯ ದಂತೆ ಅಳಿಸಿಬಿಟ್ಟನು- ಅವರಿಗಿಂತ ಮುಂಚೆ 'ನೂಹ'ರ ಜನಾಂಗವನ್ನು, ನಾಶಗೊಳಿಸಿ ದನು. ಏಕೆಂದರೆ, ಅವರು ಮಹಾ ಅಕ್ರಮಿಗಳು ಮತ್ತು ವಿದ್ರೋಹಿಗಳೇ ಆಗಿದ್ದರು.

ಅಧೋಮುಖವಾಗಿ ಬೀಳುತ್ತಿದ್ದ ನಾಡುಗಳನ್ನು ಅವನು ಕಿತ್ತೆಸೆದನು- ತರುವಾಯ ಅವರ ಮೇಲೆ (ನಿಮಗೆ ತಿಳಿದಿರುವಂತೆ) ಏನನ್ನು ಆವರಿಸಿದನೋ ಅದನ್ನು ಆವರಿಸಿಬಿಟ್ಟನು. ಆದುದರಿಂದ ಎಲೈ ಮಾನವಾ, ನಿನ್ನ ಪ್ರಭುವಿನ ಯಾವ ಯಾವ ಅನುಗ್ರಹಗಳ ಬಗ್ಗೆ ನೀನು ಸಂಶಯ ಪಡುವೆ? ಇದು, ಈ ಹಿಂದೆ ಬಂದಿದ್ದ ಎಚ್ಚರಿಕೆಗಳ ಪೈಕಿ ಒಂದು ಎಚ್ಚರಿಕೆಯಾಗಿದೆ. ಬರಲಿರುವ ಘಳಿಗೆಯು ಸನ್ನಿಹಿತವಾಗಿದೆ. ಅಲ್ಲಾಹನ ಹೊರತು ಯಾರೂ ಅದನ್ನು ಸರಿಸುವವನಿಲ್ಲ. ನೀವೀಗ ಇದೇ ವಿಷಯಗಳ ಬಗ್ಗೆ ಅಚ್ಚರಿ ಪಡುತ್ತಿರುವುದೇ? ನಗುತ್ತೀರಾ? ಅಳುವುದಿಲ್ಲವೇ? ಹಾಡಿ ನಲಿದು ಇವುಗಳನ್ನು ತಳ್ಳಿ ಹಾಕುತ್ತೀರಾ? ಅಲ್ಲಾಹನ ಮುಂದೆ ಸಾಷ್ಟಾಂಗವೆರಗಿರಿ ಮತ್ತು ಅವನ ದಾಸ್ಯ ಕೈಗೊಳ್ಳಿರಿ." **(ಪವಿತ್ರ ಕುರ್‌ಆನ್, 53:1-62)**

ಪ್ರವಾದಿ ಮುಹಮ್ಮದ್(ಸ) ಸಾಷ್ಟಾಂಗವೆರಗುತ್ತಾರೆ. ಈ ವಾಣಿಯಿಂದ ಪ್ರಭಾವಿತರಾಗಿ ಅವರ ವಿರೋಧಿಗಳೂ ಸಾಷ್ಟಾಂಗವೆರಗುತ್ತಾರೆ. ಅಷ್ಟರಲ್ಲಿ ಅವರ ಭ್ರಷ್ಟಚಿತ್ತಗಳು ಅವರನ್ನು ಹಳಿಯತೊಡಗಿದುವು. ಅವರ ಮನ-ಮಸ್ತಿಷ್ಕಗಳಲ್ಲಿ ಕೋಲಾಹಲವೆದ್ದಿತು.

"ಅಯ್ಯೋ! ನಮಗೇನಾಯಿತು. ನಾವಿದೇನು ಮಾಡಿದೆವು. ನಾವು ಮುಹಮ್ಮದ್‌ರ(ಸ) ಪ್ರಭುವಿನ ಮುಂದೆ ಸಾಷ್ಟಾಂಗವೆರಗುವುದೇ? ಇದಂತೂ ದೊಡ್ಡ ಪ್ರಮಾದವಾಯಿತು."

ವಿರೋಧಿಗಳ ಕೊರಳು ಮತ್ತೆ ಸೆಟೆಯಿತು. ಅವರು ಗುಲ್ಲು-ಗದ್ದಲ ಆರಂಭಿಸಿದರು.

ಅವರು ಅಲ್ಲಾಹನ ಬೆಳಕನ್ನು ಊದಿ ನಂದಿಸ ಬಯಸಿದ್ದಾರೆ. ಆದರೆ ಆ ಬೆಳಕು ಅವರ ಎಲ್ಲ ಪ್ರಯತ್ನಗಳ ಹೊರತಾಗಿಯೂ ವ್ಯಾಪಿಸುತ್ತಲೇ ಇತ್ತು.

## ಕೊಲೆಯ ಸಂಚು

ಅಂದು ಸಂಜೆಯಾಗುತ್ತಲೇ ಮಕ್ಕಾದ ಎಲ್ಲ ಪ್ರಮುಖ ಸರದಾರರೂ ದಾರುನ್ನದ್ವಾದಲ್ಲಿ ಸಭೆ ಸೇರಿರುವರು. ಯಾವುದೋ ಒಂದು ಪ್ರಮುಖ ಸಭೆ ನಡೆಯುತ್ತಿರುವಂತೆ ತೋರುತ್ತದೆ. ಮಕ್ಕಾದ ಆಯ್ದ 14 ಮಂದಿ ಸರದಾರರು ಸೇರಿದ್ದಾರೆ. ಇತರ ಕೆಲವು ಮಂದಿಯೂ ಇದ್ದಾರೆ. ಓರ್ವ ನಜದೀ ಮುದುಕನೂ ಇದ್ದಾನೆ. ಮುಹಮ್ಮದ್‌ರಿಂದ(ಸ) ಯಾವ ರೀತಿ ಮುಕ್ತಿ ಪಡೆಯಬಹುದೆಂಬುದೇ ಸಭೆಯ ಚರ್ಚಾ ವಿಷಯವಾಗಿತ್ತು. ಆ ಪೈಕಿ ಒಬ್ಬನು ಎದ್ದು ಹೀಗೆ ಹೇಳುತ್ತಾನೆ: "ಸೋದರರರೇ! ಮುಹಮ್ಮದ್‌ರು(ಸ) ಯಾವ ರೀತಿ ನಮ್ಮ ಮನೆತನಗಳಲ್ಲಿ ಒಡಕುಂಟು ಮಾಡಿರುವರೆಂಬ ವಿಷಯ ನಿಮಗೆಲ್ಲರಿಗೂ ತಿಳಿದೇ ಇದೆ. ನಮ್ಮ ದೇವರುಗಳ ವಿರುದ್ಧ ಹೇಳಲಾಗುತ್ತಿರುವ ಮಾತುಗಳನ್ನು ಕೂಡಾ ನೀವು ನಿತ್ಯ ಕೇಳುತ್ತಿರುತ್ತೀರಿ. ಈ ಹೊಸ ಧರ್ಮವು ಎಲ್ಲ ರೀತಿಯಿಂದಲೂ ನಮ್ಮನ್ನು ನಾಶ ಮಾಡಿದೆ. ಅನೇಕ ಮಂದಿ ಮುಸ್ಲಿಮರು ಮಕ್ಕಾ ತೊರೆದು ಇಥಿಯೋಪಿಯಾದ ಕಡೆಗೆ ವಲಸೆ ಹೋಗಿರುವರು. ಅವರನ್ನು ಹಿಂದಕ್ಕೆ ಕರೆಸಲು ದೊರೆ ನಜ್ಜಾಶಿಯ ಬಳಿ ಹೋದ ನಮ್ಮ ರಾಯಭಾರಿಗಳು ಕೂಡಾ ವಿಫಲರಾಗಿ ಮರಳಿರುವರು. ಈ ರೀತಿ ಅವರಿಗೆ ಇನ್ನಷ್ಟು ಧೈರ್ಯ ಬಂದಿದೆ. ಅವರಿಗೆ ಒಂದು ದೇಶ ಸಿಕ್ಕಿದಂತಾಗಿದೆ. ಈಗ ಮದೀನಾದ ಕಡೆಗೂ ಅವರ ವಲಸೆ ಯಶಸ್ವಿ ಯಾಗಿದೆ. ನಮ್ಮ ನಗರವೀಗ ಪೂರ್ಣವಾಗಿ ಖಾಲಿಯಾದಂತೆ ತೋರುತ್ತದೆ. ಎಲ್ಲ ಮನೆತನ ಗಳಲ್ಲೂ ಗೋಳಾಟ ಎದ್ದಿದೆ. ಮದೀನಾದಲ್ಲಿ ಅವರಿಗೆ ಸಿಗುತ್ತಿರುವ ಬೆಂಬಲದಿಂದಾಗಿ ಅಲ್ಲಿನ ಜನರು ಯಾವ ಸಮಯದಲ್ಲೂ ನಮ್ಮ ವಿರುದ್ಧ ಎದ್ದೇಳಬಹುದೆಂಬ ಆಶಂಕೆಯುಂಟಾಗಿದೆ.

ನನಗಂತೂ ಖುರೈಶ್ ಮತ್ತು ಮದೀನಾದ ಜನರ ಮಧ್ಯೆ ಒಂದು ಘೋರ ಯುದ್ಧ ನಡೆಯುತ್ತದೋ ಎಂಬ ಸಂದೇಹ ಮೂಡಿದೆ. ಆದರೆ ಎಲ್ಲಕ್ಕಿಂತಲೂ ಮಿಗಿಲಾಗಿ ನಾವು ವ್ಯಾಪಾರಕ್ಕಾಗಿ ಸಿರಿಯಾದ ಕಡೆಗೆ ಹೋಗುವ ಹೆದ್ದಾರಿಯು ಮದೀನಾದ ಬಳಿಯಿಂದಲೇ ಸಾಗುತ್ತದೆ. ಅದು ನಮ್ಮ ಕೈಯಿಂದ ತಪ್ಪಿ ಹೋದರೆ ನಾವು ವ್ಯಾಪಾರಕ್ಕಾಗಿ ಸಿರಿಯಾದ ಕಡೆಗೆ ಹೋಗುವಂತೆಯೂ ಇಲ್ಲ. ಇದು ನಮ್ಮ ಮಟ್ಟಿಗೆ ಅತ್ಯಂತ ಅಪಾಯಕಾರಿ ಬೆಳವಣಿಗೆಯಾಗಿದೆ.

ಮುಸ್ಲಿಮರು ಮದೀನಾದಲ್ಲಿ ಒಟ್ಟುಗೂಡುತ್ತಿರುವುದು ನಮ್ಮ ಮಟ್ಟಿಗೆ ವಿನಾಶಕಾರಿ ಯಾಗಿದೆ. ಇದು ನಮ್ಮ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಬಹಿಷ್ಕಾರದಲ್ಲಿ ಪರ್ಯವಸಾನಗೊಳ್ಳಬಹುದು. ಇದನ್ನು ತಕ್ಕ ಸಮಯದಲ್ಲಿ ತಡೆಯದೆ ಇದ್ದರೆ ನಾವು ಖಂಡಿತ ಸೋಲುವೆವು. ಇಡೀ ಅರಬ್ ಜನಾಂಗದಲ್ಲಿ ನಾವು ಅಪಮಾನಿತರಾಗುವೆವು. ನಮ್ಮ

ವ್ಯಾಪಾರ ಸ್ಥಗಿತಗೊಂಡು ನಾವು ಚಿಕ್ಕಾಸಿಗೂ ಗತಿ ಇಲ್ಲದವರಾಗಿ ಬಿಡುವೆವು."

ಅನಂತರ ಇನ್ನೊಬ್ಬ ವ್ಯಕ್ತಿ ಎದ್ದು ನಿಂತು ಹೀಗೆ ಹೇಳಿದನು: "ನಿಮ್ಮನ್ನುದ್ದೇಶಿಸಿ ಈಗ ಹೇಳಿದುದನ್ನು ನೀವು ಕೇಳಿ. ಮದೀನಾದ ಎರಡು ಶಕ್ತಿಶಾಲಿ ಗೋತ್ರಗಳಾದ ಔಸ್ ಮತ್ತು ಖಝ್ರಜ್ ಮುಸ್ಲಿಮರ ಬೆಂಬಲಕ್ಕೆ ಎದ್ದು ನಿಂತಿವೆ. ಅವರನ್ನು ಮುಹಮ್ಮದ್‌ರ(ಸ) ಗುಂಪಿನಿಂದ ಒಡೆಯಲು ನಾವು ಶತ ಪ್ರಯತ್ನ ಮಾಡಿಯೂ ವಿಫಲರಾಗಿದ್ದೇವೆ. ಮುಸ್ಲಿಮರು ಮಕ್ಕಾದಿಂದ ವಲಸೆ ಹೋಗುವುದನ್ನು ತಡೆಯಲಿಕ್ಕೂ ನಾವು ನಮ್ಮೆಲ್ಲ ಪ್ರಯತ್ನ ಮಾಡಿ ಸೋತಿದ್ದೇವೆ. ಈ ಹೊಸ ಧರ್ಮದ ಅನುಯಾಯಿ ಗಳಾಗಿ ಮಾರ್ಪಟ್ಟ ನಮ್ಮ ಬಂಧು ಮಿತ್ರರು ಇಂದು ಮದೀನಾದ ಜನರೊಂದಿಗೆ ಬೆರೆತು ಒಂದು ಬಲಿಷ್ಠ ಸೇನೆಯಾಗಿ ಮಾರ್ಪಟ್ಟಿರುವರು. ಯಮನ್‌ನಿಂದ ಸಿರಿಯಾಕ್ಕೆ ಹೋಗುವ ವ್ಯಾಪಾರ ಹೆದ್ದಾರಿಯಂತೂ ನಮ್ಮ ಜೀವನಾಡಿಯಾಗಿದೆ. ಅದರಿಂದಲೇ ನಮ್ಮ ವ್ಯಾಪಾರ ನಡೆಯುತ್ತಿದೆ. ಇನ್ನು ಅದರ ಮೇಲೂ ಮುಸ್ಲಿಮರ ಪ್ರಾಬಲ್ಯವಾಗಲಿದೆ. ನಮ್ಮ ಜೀವನಾಡಿಯೇ ಅವರ ಕೈಯಲ್ಲಿ ಬಂದಂತಾಗಿದೆ. ಈ ರೀತಿ ಈಗ ಜೀವನ್ಮರಣ ಹೋರಾಟ ಆರಂಭವಾಗಿದೆ. ಆದ್ದರಿಂದ ಈಗ ಈ ಮುಸ್ಲಿಮರನ್ನು ಸದೆಬಡಿಯುವುದು ಅನಿವಾರ್ಯವಾಗಿ ಬಿಟ್ಟಿದೆ."

ತರುವಾಯ ಒಂದು ಮೂಲೆಯಲ್ಲಿ ಕುಳಿತಿರುವ ಓರ್ವ ಜ್ಞಾನವೃದ್ಧನ ಕಡೆಗೆ ಎಲ್ಲರ ಗಮನ ಹರಿಯಿತು. ಎಲ್ಲರೂ ಆತನನ್ನು ಭಾಷಣಕ್ಕೆ ಕರೆದರು. ಆತ ಎದ್ದು ನಿಂತು ಹೀಗೆ ಹೇಳಿದನು: "ಸೋದರರೇ! ಮುಹಮ್ಮದ್(ಸ) ನಮ್ಮ ಮಧ್ಯೆ ಇರುವ ತನಕ ನಮ್ಮ ಯಾವ ಉಪಾಯವೂ ಫಲಕಾರಿಯಾಗದು. ಮೊಟ್ಟ ಮೊದಲು ಅವರನ್ನು ಮುಗಿಸಿಬಿಡುವ ವ್ಯವಸ್ಥೆ ಮಾಡಿರಿ. ಆಗ ಮುಸ್ಲಿಮರು ತನ್ನಿಂತಾನೇ ನಿರಾಶರಾಗುವರು. ನೀವು ಮುಹಮ್ಮದ್‌ರ(ಸ) ಕಥೆ ಮುಗಿಸಿಬಿಡುವಲ್ಲಿ ಯಶಸ್ವಿಯಾದರೆ ಮುಸ್ಲಿಮರ ಶಕ್ತಿಯು ಖಂಡಿತವಾಗಿಯೂ ಛಿದ್ರಗೊಳ್ಳುವುದು. ಅವರು ನಿಂದ್ಯರೂ ನೀಚರೂ ಆಗಿ ಮತ್ತೆ ನಮ್ಮ ಸಂಸ್ಕೃತಿಯಲ್ಲಿ ಲೀನವಾಗಿ ಬಿಡುವರು."

ಆತನ ಮಾತನ್ನು ಎಲ್ಲರೂ ಗಮನವಿಟ್ಟು ಆಲಿಸಿದರು. ಈ ಅಪಾಯವನ್ನು ಹೇಗೆ ತಡೆಗಟ್ಟುವುದೆಂದು ಈಗ ಚರ್ಚೆ ನಡೆಯಲಾರಂಭವಾಯಿತು. ಒಬ್ಬನು ಎದ್ದು ನಿಂತು ಹೀಗೆ ಹೇಳಿದನು: "ಮುಹಮ್ಮದ್‌ರಿಗೆ(ಸ) ಬೇಡಿ ತೊಡಿಸಿ ಅವರನ್ನು ಜೀವನ ಪರ್ಯಂತ ಕಾರಾಗೃಹ ದಲ್ಲಿರಿಸೋಣ."

ಇನ್ನೊಬ್ಬನು ಹೀಗೆ ಹೇಳಿದನು: "ಆತನನ್ನು ಹಿಡಿದು ಕೊರಳಿಗೆ ಸಂಕೋಲೆ ಬಿಗಿದು ಒಂದು ಮನೆಯಲ್ಲಿ ಕೂಡಿಹಾಕಿ ಅದರ ಬಾಗಿಲನ್ನು ಶಾಶ್ವತವಾಗಿ ಮುಚ್ಚಿ ಬಿಡುವ. ಇವನೂ ಝುಹೇರ್ ಮತ್ತು ನಾಬಿಗ ಎಂಬ ಕವಿಗಳಂತೆ ಮರಣದ ಸವಿಯುಣ್ಣುತ್ತಾ ಸಾಯಲಿ."

ವಯೋವೃದ್ಧ ವ್ಯಕ್ತಿ ಹೇಳಿದ: "ಇದು ಸರಿಯಲ್ಲ. ಮುಹಮ್ಮದ್‌ರ(ಸ) ಸೆರೆವಾಸದ ಸುದ್ದಿ ಹರಡದೆ ಇರಲಾರದು. ಮುಸ್ಲಿಮರು ಹೇಗಾದರೂ ಮಾಡಿ ಅವರನ್ನು

ಬಿಡಿಸಿಕೊಂಡೊಯ್ಯುವರು. ಏಕೆಂದರೆ ಈ ಕಾರ್ಯಕ್ಕಾಗಿ ಪ್ರಾಣತ್ಯಾಗ ಮಾಡುವುದು ಅವರ ಬಳಿ ಅತ್ಯಂತ ಪವಿತ್ರವೂ ಸುಲಭವೂ ಆಗಿದೆ. ಮಾತ್ರವಲ್ಲ ಅವರು ಶಕ್ತಿಗಳಿಸಿ ನಿಮ್ಮನ್ನು ಕೂಡಾ ನಾಶಗೊಳಿಸಿ ಬಿಡುವರು."

ಇನ್ನೊಬ್ಬ ವ್ಯಕ್ತಿ ಹೇಳಿದ: "ಆತನನ್ನು ಒಂದು ಮದವೇರಿದ ಒಂಟೆಯ ಮೇಲೆ ಕುಳ್ಳಿರಿಸಿ ಊರಿಂದ ಹೊರಗೆ ಅಟ್ಟಿ ಬಿಡೋಣ. ಆತ ನಮ್ಮ ಮಧ್ಯೆ ಇಲ್ಲದೆ ಹೋದರೆ ಎಲ್ಲಿದ್ದರೂ ನಮಗದರ ಪರಿವೆಯಿಲ್ಲ. ಆತನ ಉಪಸ್ಥಿತಿಯಿಂದ ನಮ್ಮಲ್ಲಿ ಇನ್ನಷ್ಟು ಒಡಕು ಉಂಟಾಗುವುದು ಮಾತ್ರ ನಮಗೆ ಬೇಕಾಗಿಲ್ಲ." ವಯೋವೃದ್ಧ ವ್ಯಕ್ತಿ ಮತ್ತೆ ಹೇಳಿದ: "ಈ ಅಭಿಪ್ರಾಯವೂ ಸ್ವೀಕಾರಾರ್ಹವಲ್ಲ. ನೀವು ಮುಹಮ್ಮದ್‌ನ(ಸ) ಮನಮುಟ್ಟುವ ಮಾತುಗಳನ್ನು ಮರೆತುಬಿಟ್ಟಿರಾ? ಈ ವ್ಯಕ್ತಿ ಅಪ್ರತಿಮ ವಾಗ್ಮಿ. ಅವನ ಮಾತು ಅತ್ಯಂತ ಮನಮೋಹಕ. ಇಲ್ಲಿಂದ ಆತ ಹೊರಟು ಹೋದರೆ ಅರಬರ ಯಾವ ಯಾವ ಗೋತ್ರ ಗಳನ್ನೆಲ್ಲಾ ತನ್ನ ಅನುಯಾಯಿಯಾಗಿ ಮಾಡುತ್ತಾನೆಂದು ಹೇಳಲಿಕ್ಕಾಗದು. ಅನಂತರ ಅವನು ಶಕ್ತಿ ಆರ್ಜಿಸಿ ಮಕ್ಕಾವನ್ನು ಜಯಿಸಲು ನಿಮ್ಮ ಮೇಲೆ ಆಕ್ರಮಣ ಮಾಡುವನು."

"ಹಾಗಾದರೆ ನಾವು ಮತ್ತೇನು ಮಾಡೋಣ?" ಎಂಬುದು ಎಲ್ಲರನ್ನು ಕಾಡುತ್ತಿರುವ ಪ್ರಶ್ನೆಯಾಗಿತ್ತು. ಅವರ ಸ್ವರಗಳಲ್ಲಿ ಗಾಬರಿ ಮತ್ತು ನಿರಾಶೆ ತುಂಬಿತ್ತು. ಸಮಾಲೋಚನಾ ಸಭೆಯಲ್ಲಿ ಸ್ವಲ್ಪ ಹೊತ್ತು ಮೌನ ಆವರಿಸಿತು. ಪ್ರತಿಯೊಬ್ಬನೂ ಇನ್ನೊಬ್ಬನನ್ನು ಕಣ್ಣು ಮಿಟುಕಿಸಿ ನೋಡತೊಡಗಿದನು.

ಅಷ್ಟರಲ್ಲಿ ಅಬೂಜಹಲ್ ಎದ್ದು ನಿಂತು ಹೇಳಿದ: "ನಿಮ್ಮ ಪೈಕಿ ಯಾರ ಗಮನವೂ ಈ ತನಕ ಹರಿಯದಂತಹ ಒಂದು ಸಲಹೆ ನನ್ನ ಬಳಿ ಇದೆ."

ಎಲ್ಲರೂ ಕಾತರದಿಂದ ಆತನೆಡೆಗೆ ಗಮನ ಹರಿಸುತ್ತಾ ಯಾವ "ಸಲಹೆಯದು?" ಎಂದು ವಿಚಾರಿಸಿದರು.

ಅಬೂಜಹಲ್: "ನಿಮ್ಮ ಎಲ್ಲ ಗೋತ್ರಗಳಿಂದ ಒಬ್ಬ ಕುಲೀನ ಮತ್ತು ಪರಾಕ್ರಮಿ ಯುವಕನನ್ನು ಆರಿಸಿ. ರಾತ್ರಿಯ ಅಂಧಕಾರದಲ್ಲಿ ಮುಹಮ್ಮದ್‌ರ(ಸ) ಮನೆಗೆ ಮುತ್ತಿಗೆ ಹಾಕಿ. ಆತ ಬೆಳಗ್ಗಿನ ನಮಾಝ್‌ಗಾಗಿ ಮನೆಯಿಂದ ಹೊರಡುವಾಗ ಎಲ್ಲರೂ ಏಕಕಾಲದಲ್ಲಿ ಹಲ್ಲೆ ಮಾಡಿ ಆತನನ್ನು ಮುಗಿಸಿ ಬಿಡಿರಿ. ಈ ರೀತಿ ಮುಹಮ್ಮದ್‌ರ(ಸ) ಕೊಲೆಯ ಆರೋಪವು ಮಕ್ಕಾದ ಎಲ್ಲಾ ಗೋತ್ರಗಳಲ್ಲಿ ಹಂಚಿಹೋಗುವುದು. ಹಾಶಿಮ್ ಮನೆತನದವರಿಗೆ ಅವರೆಲ್ಲರೊಂದಿಗೆ ಪ್ರತೀಕಾರ ತೀರಿಸುವುದು ಖಂಡಿತ ಸಾಧ್ಯವಾಗದು. ಆದ್ದರಿಂದ ರಕ್ತ ಪರಿಹಾರಕ್ಕೆ ಅವರು ಒಪ್ಪಬೇಕಾದೀತು. ನಿಮಗೆ ಈ ಎಲ್ಲ ಸಂಕಷ್ಟಗಳಿಂದ ಶಾಶ್ವತ ಪರಿಹಾರ ದೊರೆತಂತಾಗುವುದು."

ವಯೋವೃದ್ಧ ನಜದಿ ಅಬೂಜಹಲನ ಗುಣಗಾನ ಮಾಡತೊಡಗಿದನು. ಎಲ್ಲರೂ

ಈ ಅತ್ಯುಪಯುಕ್ತ ಸಲಹೆಗಾಗಿ ಅಬೂಜಹಲನನ್ನು ಅಭಿನಂದಿಸತೊಡಗಿದರು.

"ಅಬುಲ್ ಹಕಮ್! ಸಲಹೆ ಎನ್ನುವುದು ಇದಕ್ಕೆ! ನೀವು ನಮ್ಮ ಕಷ್ಟವನ್ನು ಪರಿಹರಿಸಿದಿರಿ."

ಸಭೆ ಮುಕ್ತಾಯವಾಯಿತು. ಪ್ರತಿಯೊಬ್ಬರೂ ಸಂತೋಷದಿಂದ ಹುಚ್ಚೆದ್ದು ಕುಣಿಯುತ್ತಾ ತೆರಳಿದರು. ಅವರ ಮಟ್ಟಿಗೆ ಮುಹಮ್ಮದ್‌ರ(ಸ) ಕಥೆ ಮುಗಿದಂತೆ. ಅವರ ಸಂದೇಶವು ಹೇಳ ಹೆಸರಿಲ್ಲದಂತೆ ಅಳಿದು ಬಿಡುವುದು. ಅವರ ನೆನಪೂ ಜನಮನದಲ್ಲಿ ಉಳಿಯಲಾರದು.

ಜನರೆಲ್ಲ ಹೊರಟು ಹೋದ ಮೇಲೆ ಸರದಾರರು ಕುಳಿತು ಕೊಲೆಯ ಸಂಚಿಗೆ ಯುವಕರನ್ನು ಆರಿಸತೊಡಗಿದರು. ಅವರಿಗಾಗಿ ಖಡ್ಗಗಳ ವ್ಯವಸ್ಥೆ ಮಾಡಿದರು.

ದಾರುನ್ನದ್ವಾದಲ್ಲಿ ನಡೆದ ಈ ಕಾರ್ಯಕ್ರಮವನ್ನು ಅತ್ಯಂತ ರಹಸ್ಯವಾಗಿಡಲಾಯಿತು. ಅದರ ಸುದ್ದಿ ಕೂಡಾ ಯಾರ ಕಿವಿಗೂ ಬೀಳದಂತೆ ನೋಡಿಕೊಳ್ಳಲಾಯಿತು. ಆದರೆ ಅಲ್ಲಾಹನು ಈ ರಹಸ್ಯವನ್ನು ತನ್ನ ಸಂದೇಶವಾಹಕರಿಗೆ ಈ ರೀತಿ ತಿಳಿಸಿದನು:

"ಸತ್ಯನಿಷೇಧಿಗಳು ನಿಮ್ಮನ್ನು ಸೆರೆಹಿಡಿಯಲಿಕ್ಕೆ ಅಥವಾ ವಧಿಸಲಿಕ್ಕೆ ಅಥವಾ ದೇಶಭ್ರಷ್ಟಗೊಳಿಸಲಿಕ್ಕೆ ಗೂಢಾಲೋಚನೆ ನಡೆಸುತ್ತಿದ್ದ ಕಾಲವೂ ಸ್ಮರಣೀಯವಾಗಿದೆ. ಅವರು ತಮ್ಮ ಕುತಂತ್ರಗಳನ್ನು ನಡೆಸುತ್ತಿದ್ದರು. ಅಲ್ಲಾಹ್ ತನ್ನ ತಂತ್ರ ಹೂಡುತ್ತಿದ್ದನು ಮತ್ತು ಅಲ್ಲಾಹ್ ಅತ್ಯುತ್ತಮ ತಂತ್ರಜ್ಞನಾಗಿರುತ್ತಾನೆ." (ಪವಿತ್ರ ಕುರ್‌ಆನ್, **8:30**)

## ಮಕ್ಕಾ ಜೀವನದ ಅಂತಿಮ ಕ್ಷಣಗಳು

ಮಕ್ಕಾದಿಂದ ಎಲ್ಲ ಮುಸ್ಲಿಮರೂ ಮದೀನಾಕ್ಕೆ ಹಿಜ್ರತ್(ವಲಸೆ) ಹೋಗಿದ್ದಾರೆ. ಇಲ್ಲಿ ಕೇವಲ ಮುಹಮ್ಮದ್(ಸ), ಅಬೂಬಕರ್(ರ) ಮತ್ತು ಅಲೀ(ರ) ಉಳಿದಿದ್ದಾರೆ. ಮುಹಮ್ಮದ್(ಸ) ತಮ್ಮ ಪ್ರಭುವಿನಿಂದ ಹಿಜ್ರತ್‌ನ ಅನುಮತಿ ಸಿಗುವುದನ್ನು ಕಾಯುತ್ತಿದ್ದಾರೆ. ಅಬೂಬಕರ್ ಮತ್ತು ಅಲೀಯವರನ್ನು(ರ) ಪ್ರವಾದಿವರ್ಯರು(ಸ) ಮಕ್ಕಾದಲ್ಲಿ ನಿಲ್ಲಿಸಿದ್ದಾರೆ. ಮುಹಮ್ಮದ್‌ರ(ಸ) ಬಳಿ ಮಕ್ಕಾದ ಸತ್ಯನಿಷೇಧಿಗಳ ಅನೇಕ ವಸ್ತು ಒಡವೆಗಳು ಮತ್ತು ಅಮೂಲ್ಯ ವಸ್ತುಗಳು ಇರಿಸಲ್ಪಟ್ಟಿವೆ. ಮುಹಮ್ಮದ್‌ರ(ಸ) ಬಗ್ಗೆ ಕಠಿಣ ವೈರದ ಹೊರತಾಗಿಯೂ ಅವರು ತಮ್ಮ ಅಮೂಲ್ಯ ವಸ್ತುಗಳನ್ನು ಜೋಪಾನವಾಗಿಡಲು ಮುಹಮ್ಮದ್‌ರನ್ನೇ(ಸ) ಆರಿಸಿದ್ದರು. ಹ. ಅಲೀಯವರನ್ನು(ರ) ಈ ವಸ್ತು-ಒಡವೆಗಳನ್ನು ಅವುಗಳ ಮಾಲಿಕರಿಗೆ ತಲುಪಿಸಲು ತಡೆಹಿಡಿಯಲಾಗಿದೆ. ಪ್ರವಾದಿ ವರ್ಯರ(ಸ) ಹಿಜ್ರತ್‌ನ ಸಂಗಾತಿಯಾಗಲಿಕ್ಕಾಗಿ ಅಬೂಬಕರ್(ರ) ತಡೆಹಿಡಿಯಲ್ಪಟ್ಟಿದ್ದಾರೆ.

ಮಕ್ಕಾ ಮುಹಮ್ಮದ್‌ರ(ಸ) ಕೊಲೆಯ ಸಂಚು ಹೂಡುವವರ ತಾಣವಾಗಿ ಮಾರ್ಪಟ್ಟಿದೆ. ಇಲ್ಲಿ ಈಗ ಇರುವವರು ಜೀವದ ಹಂಗು ತೊರೆದೇ ಇರಬೇಕಾಗಿತ್ತು. ಮುಹಮ್ಮದ್(ಸ) ಅವರಿಗೆ ಮಾತ್ರ ಅಲ್ಲಾಹನ ಆದೇಶದ ಮೇರೆಗೆ ಸತ್ಯನಿಷೇಧಿಗಳ ಎಲ್ಲ ಸಂಚುಗಳೂ

ಕಾರ್ಯರೂಪಕ್ಕಿಳಿಯುವ ತನಕ ಮಕ್ಕಾದಲ್ಲೇ ನೆಲೆಸಬೇಕಾಗಿತ್ತು. ದಾರುನ್ನದ್ವಾದ ಸಂಚಿನಿಂದ ಈ ಉದ್ದೇಶವೂ ಪೂರ್ಣಗೊಂಡಂತಾಯಿತು. ಆ ವೇಳೆಗೆ ಅಲ್ಲಾಹನ ವತಿಯಿಂದ ಪ್ರವಾದಿವರ್ಯರಿಗೆ(ಸ) ಈ ಕೆಳಗಿನ ಪ್ರಾರ್ಥನೆಯನ್ನು ಬೋಧಿಸಲಾಯಿತು: "ಓ ನನ್ನ ಪ್ರಭೂ! ನೀನು ನನ್ನನ್ನು ಎಲ್ಲಿಗೆ ಕೊಂಡೊಯ್ಯುವು ದಿದ್ದರೂ ಸತ್ಯದೊಂದಿಗೇ ಒಯ್ಯು, ಎಲ್ಲಿಂದ ನನ್ನನ್ನು ಹೊರಡಿಸುವುದಿದ್ದರೂ ಸತ್ಯ ದೊಂದಿಗೇ ಹೊರಡಿಸು ಮತ್ತು ನಿನ್ನ ಕಡೆಯಿಂದ ಒಂದು ಅಧಿಕಾರವನ್ನು ನನಗೆ ನೆರವಾಗಿಸು." **(ಪವಿತ್ರ ಕುರ್‌ಆನ್, 17:80)**

ಇಂದು ಪ್ರವಾದಿತ್ವದ 13ನೇ ವರ್ಷದ ಸಫರ್ ತಿಂಗಳ 13ನೇ ಗುರುವಾರ. ಕುರೈಶರ ಸಂಚಿನ ಕುರಿತು ಜಿಬ್ರೀಲ್(ಅ) ಪ್ರವಾದಿವರ್ಯರನ್ನು(ಸ) ಎಚ್ಚರಿಸಿರುವರು. ಈ ರಾತ್ರಿ ತಮ್ಮ ಹಾಸಿಗೆಯಲ್ಲಿ ಮಲಗಬಾರದೆಂಬ ಆದೇಶವನ್ನೂ ನೀಡಿದ್ದಾರೆ.

ಸಂಜೆ ಕಳೆದ ಕೂಡಲೇ ಮುಹಮ್ಮದ್(ಸ) ಮುಖ ಮರೆಸಿಕೊಂಡು ಅಬೂಬಕರ್‌ರ(ರ) ಮನೆಯ ಕಡೆ ಬರುತ್ತಿರುವುದು ಕಾಣಿಸುತ್ತದೆ.

ಕೆಲವೇ ಕ್ಷಣಗಳಲ್ಲಿ ಮುಹಮ್ಮದ್(ಸ) ಮನೆಯ ಕದ ತಟ್ಟಿದಾಗ ಅಬೂಬಕರ್(ರ) ನಡುಗುವ ಕೈಗಳೊಂದಿಗೆ ಬಾಗಿಲು ತೆರೆಯುತ್ತಾರೆ. ಮುಹಮ್ಮದ್‌ರನ್ನು(ಸ) ಆದರದಿಂದ ಮನೆಯೊಳಗೆ ಕರೆ ತರುತ್ತಾರೆ. ಒಳಗೆ ಬಂದ ಕೂಡಲೇ ಎಲ್ಲರನ್ನೂ ಅಲ್ಲಿಂದ ಸರಿಸುವಂತೆ ಪ್ರವಾದಿ(ಸ) ಆದೇಶಿಸುತ್ತಾರೆ. ಆಗ ಅಲ್ಲಿ ಇದ್ದುದು ಅಬೂಬಕರ್‌ರ(ರ) ಇಬ್ಬರು ಪುತ್ರಿಯರಾದ ಆಯಿಶಾ ಮತ್ತು ಅಸ್ಮಾ(ರ). ಅಲ್ಲಿ ಮನೆಯವರ ಹೊರತು ಯಾರೂ ಇಲ್ಲವೆಂದು ಹ. ಅಬೂಬಕರ್(ರ) ತಿಳಿಸಿದಾಗ:

"ನನಗೆ ಹಿಜ್ರತ್‌ನ ಅನುಮತಿ ದೊರೆತಿದೆ" ಎಂದು ಪ್ರವಾದಿ(ಸ) ಹೇಳುತ್ತಾರೆ.

"ನನಗೂ ತಮ್ಮ ಜೊತೆಗಿರುವ ಸೌಭಾಗ್ಯವಿದೆಯೇ?" ಎಂದು ಅಬೂಬಕರ್(ರ) ಪ್ರಶ್ನಿಸುತ್ತಾರೆ. ಮುಹಮ್ಮದ್(ಸ) ಹೌದೆಂದಾಗ, ಅಬೂಬಕರ್(ರ) ಆನಂದಾತಿರೇಕದಿಂದ ಆನಂದ ಭಾಷ್ಪಗಳನ್ನಿಳಿಸುತ್ತಾರೆ. ಪ್ರವಾದಿವರ್ಯರ(ಸ) ಜೊತೆ ಹಿಜ್ರತ್ ಮಾಡುವುದಕ್ಕಿಂತ ಹಿರಿಯ ಸೌಭಾಗ್ಯ ಅವರ ಮಟ್ಟಿಗೆ ಬೇರೆ ಇರಲಿಲ್ಲ.

ಅಬೂಬಕರ್(ರ) ಹೇಳಿದರು: "ಪ್ರವಾದಿವರ್ಯರೇ! ನಾನು ಈ ಉದ್ದೇಶಕ್ಕಾಗಿಯೇ ಎರಡು ಒಂಟೆಗಳನ್ನು ಸಾಕಿರುವೆನು. ಅವುಗಳಲ್ಲಿ ಒಂದನ್ನು ತಾವು ತೆಗೆದುಕೊಳ್ಳಿರಿ."

ಮುಹಮ್ಮದ್(ಸ): "ನಾನು ಅದರ ಬೆಲೆಯನ್ನು ತೆರದೆ ಅದನ್ನು ತೆಗೆದುಕೊಳ್ಳಲಾರೆ. ನೀವು ಖರೀದಿಸಿದ ಬೆಲೆಯನ್ನೇ ನಾನು ನೀಡುವೆನು."

ಈ ದಿನದ ನಿರೀಕ್ಷೆಯಲ್ಲೇ ಅಬೂಬಕರ್(ರ) ಅದ್ದೀಲ್ ಗೋತ್ರದ ಒಬ್ಬ ವ್ಯಕ್ತಿ ಅಬ್ದುಲ್ಲಾ ಬಿನ್ ಅರೀಕತ್ ಎಂಬವನನ್ನು ಮಕ್ಕಾದಿಂದ ಮದೀನಾದವರೆಗಿನ ಹೆಚ್ಚು ಪರಿಚಿತವಲ್ಲದ ಯಾವುದಾದರೂ ಮಾರ್ಗವನ್ನು ತೋರಿಸಿಕೊಡಲಿಕ್ಕಾಗಿ ಗೊತ್ತು ಪಡಿಸಿದ್ದರು.

ಆತ ಮಕ್ಕಾ-ಮದೀನಾಗಳ ನಡುವಿನ ಎಲ್ಲ ಮಾರ್ಗಗಳನ್ನೂ ಬಲ್ಲವನೂ ನಂಬಿಗಸ್ಥನೂ ಆಗಿದ್ದನು. ಈ ಎರಡು ಒಂಟೆಗಳನ್ನು ಅವನಿಗೆ ನೀಡಿ ಅಬೂಬಕರ್(ರ) ತಾವು ಹೇಳಿದಾಗ ಮತ್ತು ಹೇಳಿದಲ್ಲಿಗೆ ಆ ಒಂಟೆಗಳ ಜೊತೆ ತಲುಪಬೇಕೆಂದು ಆದೇಶಿಸಿದ್ದರು.

ಆಮಿರ್ ಬಿನ್ ಫಹೀರ ಎಂಬವರನ್ನು ಹಾಲು ಕೊಡುವ ಆಡುಗಳೊಂದಿಗೆ ರಾತ್ರಿ ಹೊತ್ತು 'ಸೌರ್' ಗುಹೆಯ ಬಳಿಗೆ ಬರಬೇಕೆಂದೂ ಅಬೂಬಕರ್(ರ) ಆದೇಶಿಸಿದರು. ಇದರಿಂದ ಪ್ರವಾದಿವರ್ಯರಿಗೆ(ಸ) ತಾಜಾ ಹಾಲು ಒದಗಿಸುವುದು ಹ. ಅಬೂಬಕರ್‌ರ(ರ) ಉದ್ದೇಶವಾಗಿತ್ತು. ಅವರು ತಮ್ಮ ಪುತ್ರ ಅಬ್ದುಲ್ಲಾರಿಗೆ ದಿನವಿಡೀ ಕುರೈಶರ ಚಲನ ವಲನಗಳನ್ನು ವೀಕ್ಷಿಸುತ್ತಿರಬೇಕೆಂದು ರಾತ್ರಿ ಹೊತ್ತು ಗುಹೆಯ ಬಳಿಗೆ ಬಂದು ಅದರ ಸುದ್ದಿ ಮುಟ್ಟಿಸಬೇಕೆಂದು ಆದೇಶಿಸಿದ್ದರು.

ಈ ಎಲ್ಲ ಕಾರ್ಯಗಳೂ ಅತ್ಯಂತ ರಹಸ್ಯವಾಗಿ ನಡೆಯುವಂತೆ ವ್ಯವಸ್ಥೆ ಮಾಡ ಲಾಗಿತ್ತು. ಈ ವ್ಯವಸ್ಥೆಗಳಿಂದ ಅಬೂಬಕರ್‌ರವರ(ರ) ಅತ್ಯುನ್ನತ ಮಟ್ಟದ ದೂರದೃಷ್ಟಿ, ಕಾರ್ಯ ಕುಶಲತೆ, ರಹಸ್ಯಪಾಲನೆ ಮತ್ತು ನಿಷ್ಠೆಯ ಸಾಕ್ಷ್ಯ ದೊರೆಯುತ್ತದೆ.

ಸತ್ಯನಿಷೇಧಿಗಳಿಗೆ ಯಾವುದೇ ರೀತಿಯ ಸಂಶಯ ಆಗದಿರಲು ಮತ್ತು ಅವರು ಮುಹಮ್ಮದ್‌ರನ್ನು(ಸ) ತಮ್ಮ ಮನೆಯಲ್ಲೇ ಕಾಣುವಂತಾಗಲು ಮುಹಮ್ಮದ್(ಸ) ತಮ್ಮ ಮನೆಗೆ ಮರಳಿ ಬಂದಿದ್ದಾರೆ.

ಮಕ್ಕಾದಲ್ಲಿ ಇಂದು ಅಸಾಮಾನ್ಯ ಮೌನ ಆವರಿಸಿದೆ. ಅದರ ಸದ್ದುಗದ್ದಲಗಳೆಲ್ಲಾ ಅರ್ಧರಾತ್ರಿಗಿಂತ ಮೊದಲೇ ನಿಂತು ಹೋಗಿದೆ. ಗಾಢಾಂಧಕಾರದ ರಾತ್ರಿ. ಅಸಾಮಾನ್ಯ ನೀರವತೆ. ನಗರದ ಒಂದು ಮೂಲೆಯಲ್ಲಿ ಮಾತ್ರ ರಹಸ್ಯ ಚಲನವಲನಗಳು ಕಂಡು ಬರುತ್ತವೆ. ಕೆಲವು ಯುವಕರು ಮುಖ ಮರೆಸಿಕೊಂಡು ಪ್ರವಾದಿ ಮುಹಮ್ಮದ್‌ರ(ಸ) ಮನೆಯನ್ನು ಸುತ್ತುವರಿದಿದ್ದಾರೆ. ಪ್ರತಿಯೊಬ್ಬರ ಕೈಯಲ್ಲೂ ಖಡ್ಗ ಅಥವಾ ಈಟಿಯಿದೆ. ಒಟ್ಟು 12 ಮಂದಿಯಿದ್ದಾರೆ.

ಮಕ್ಕಾವಾಸಿಗಳನ್ನು ಪಥಭ್ರಷ್ಟತೆಯ ಕೂಪದಿಂದ ಮೇಲೆತ್ತಲಿಕ್ಕಾಗಿ ತಮ್ಮ ತನು-ಮನ-ಧನವನ್ನು ಮುಡಿಪಾಗಿಟ್ಟು ರಾತ್ರಿ ಹಗಲೆನ್ನದೆ ಹೋರಾಡಿದ ಮುಹಮ್ಮದ್(ಸ). ಅತ್ಯುನ್ನತ ಮಟ್ಟದ ಶೀಲ ಚಾರಿತ್ರ್ಯಗಳನ್ನು ಹೊಂದಿದ ಮುಹಮ್ಮದ್(ಸ). ತಮ್ಮ ರಾತ್ರಿಗಳನ್ನು ಮಕ್ಕಾವಾಸಿಗಳ ಇಹಪರ ವಿಜಯಕ್ಕಾಗಿ ಪ್ರಾರ್ಥಿಸುತ್ತಾ ಕಳೆಯುತ್ತಿದ್ದ ಮುಹಮ್ಮದ್(ಸ). ತನ್ನ ಹಗಲುಗಳನ್ನು ಅವರ ಕ್ಷೇಮಾಭ್ಯುದಯಕ್ಕಾಗಿ ವ್ಯಯಿಸುತ್ತಿದ್ದ ಮುಹಮ್ಮದ್(ಸ). ಅವರನ್ನು ಇಂದು ಸ್ವೇಚ್ಛೆಯ ಆರಾಧಕರು ಮತ್ತು ಸ್ವಾರ್ಥದ ಸೇವಕರು ಶಾಶ್ವತವಾಗಿ ಮುಗಿಸಿಬಿಡುವ ಸಂಚು ಹೂಡಿದ್ದಾರೆ.

ಮನೆಗೆ ಮುತ್ತಿಗೆ ಹಾಕಿರುವವರು ತಮ್ಮ ಇಂಗಿತವನ್ನು ಪೂರ್ಣಗೊಳಿಸುವುದರಲ್ಲಿ

ರುವಾಗಲೇ ಮನೆಯೊಳಗೆ ಮುಹಮ್ಮದ್(ಸ) ತಮ್ಮ ಹಾಸಿಗೆಯಲ್ಲಿ ಅಲೀಯವರನ್ನು(ರ) ಮಲಗಿಸಿ ಅವರ ಮೇಲೆ ಹಸಿರು ಚದ್ದರ ಹೊದಿಸಿರುವರು,

"ಅಲೀ(ರ)! ನೀವು ನಿಶ್ಚಿಂತರಾಗಿ ಈ ಹಾಸಿಗೆಯಲ್ಲಿ ಮಲಗಿ. ನಿಮಗೆ ಯಾರೂ ಹಾನಿ ಮಾಡಲಾರರು. ನನ್ನ ಬಳಿಯಲ್ಲಿರುವ ಜನರ ವಸ್ತು-ಒಡವೆಗಳನ್ನು ಅವರಿಗೆ ಮರಳಿಸಿದ ಬಳಿಕ ಬಂದು ಮದೀನಾದಲ್ಲಿ ನನ್ನನ್ನು ಭೇಟಿಯಾಗಿರಿ."

ವೈರಿಗಳು ಗೋಡೆಯ ಎಡೆಯಿಂದ ಒಳಗೆ ಇಣುಕಿ ನೋಡಿದಾಗ ಅವರಿಗೆ ಮುಹಮ್ಮದ್(ಸ) ನಿದ್ರಿಸುತ್ತಿರುವುದಾಗಿ ಕಾಣಿಸುತ್ತದೆ.

ರಾತ್ರಿ ಬಹಳ ಹೊತ್ತಾಗಿದೆ. ಪ್ರವಾದಿವರ್ಯರ(ಸ) ಮನೆಗೆ ಮುತ್ತಿಗೆ ಹಾಕಿದವರ ಕಳವಳ ಹೆಚ್ಚಾಗುತ್ತದೆ. ಆದ್ದರಿಂದ ಅವರಲ್ಲಿ ಇಬ್ಬರು ಗೋಡೆಗೇರಿ ಒಳಗೆ ಪ್ರವೇಶಿಸಲು ಯತ್ನಿಸುತ್ತಾರೆ. ಆದರೆ ಒಳಗಿನಿಂದ ಒಬ್ಬ ಮಹಿಳೆಯ ಕಿರುಚಾಟ ಕೇಳಿ ಅವರು ಅಡಗಿಕೊಳ್ಳುತ್ತಾ ಒಬ್ಬನು ಇನ್ನೊಬ್ಬನನ್ನುದ್ದೇಶಿಸಿ:

"ಅಲ್ಲಾಹನಾಣೆ! ನಾವು ಗೋಡೆ ಏರಿ ನಮ್ಮದೇ ಬಂಧು ಒಬ್ಬರ ಮನೆಯನ್ನು ಪ್ರವೇಶಿಸುವುದು ಮತ್ತು ನಮ್ಮದೇ ಗೋತ್ರದ ಹೆಣ್ಣು ಮಕ್ಕಳ ಹಾಗೂ ಸೊಸೆಯಂದಿರ ಮಾನದ ಬಗ್ಗೆ ಲೆಕ್ಕಿಸದೆ ಇರುವುದು ನಮ್ಮ ಮಟ್ಟಿಗೆ ಇಡೀ ಅರಬ್ ದೇಶದಲ್ಲಿ ಅಪಕೀರ್ತಿಯ ವಿಷಯವಾಗುವುದು."

ತರುವಾಯ ಮುಹಮ್ಮದ್(ಸ) ಪ್ರಭಾತ ನಮಾಝ್‌ಗಾಗಿ ಹೊರಬರುವುದನ್ನು ನಿರೀಕ್ಷಿಸುತ್ತಾ ರಾತ್ರಿಯಿಡೀ ಕಳೆಯುತ್ತಾರೆ.

ತಮ್ಮ ಬಳಿ ಜೋಪಾನವಾಗಿರಿಸಿದ್ದ ಮಕ್ಕಾದ ಸತ್ಯನಿಷೇಧಿಗಳ ವಸ್ತು-ಒಡವೆಗಳ ವಿವರವನ್ನು ಪ್ರವಾದಿ(ಸ) ಹ. ಅಲೀಯವರಿಗೆ(ರ) ನೀಡಿದ್ದರು. ಇಂತಹ ಸಂದಿಗ್ಧ ಘಟ್ಟದಲ್ಲಿಯೂ ಶತ್ರುಗಳ ವಸ್ತು-ಒಡವೆಗಳನ್ನು ಅವರಿಗೆ ತಲುಪಿಸಲು ಹ. ಅಲೀಯವರನ್ನು(ರ) ಶತ್ರುಗಳ ಮುತ್ತಿಗೆಯಲ್ಲಿ ಬಿಟ್ಟು ಹೋಗುತ್ತಿದ್ದಾರೆ.

ಬೆಳಗ್ಗಿನ ಜಾವ ಸಮೀಪಿಸಿದಾಗ ಶತ್ರುಗಳ ಸಹನೆಯ ಕಟ್ಟೆಯೊಡೆಯಿತು. ಅವರು ಒಮ್ಮೆಲೆ ಮನೆಗೆ ಪ್ರವೇಶಿಸುತ್ತಾರೆ. ಮಲಗಿರುವವರ ಚದ್ದರವನ್ನು ಸರಿಸಿ ನೋಡಿದಾಗ ಮುಹಮ್ಮದ್‌ರಿಗೆ(ಸ) ಬದಲು ಅಲೀಯವರನ್ನು(ರ) ಕಂಡು ಕೋಪದಿಂದ ಹಲ್ಲು ಕಿರಿದುಕೊಂಡರು. 'ನಿಮ್ಮ ಯಜಮಾನರೆಲ್ಲಿ?' ಎಂದು ವಿಚಾರಿಸಿದರು.

ಹ. ಅಲೀ(ರ) ಶಾಂತಚಿತ್ತರಾಗಿ ಈ ರೀತಿ ಉತ್ತರಿಸಿದರು: "ಅವರೆಲ್ಲಿಗೆ ಹೋಗಿರುವರೆಂದು ನನಗೆ ತಿಳಿಯದು. ನಾನೇನೂ ಅವರ ಕಾವಲುಗಾರನಲ್ಲ. ನೀವು ಅವರನ್ನು ಹೊರ ಹಾಕಿದಿರಿ. ಅವರು ಹೊರಟು ಹೋದರು."

ಈ ರೀತಿಯ ಖಾರವಾದ ಉತ್ತರ ಕೇಳಿ ಶತ್ರುಗಳು ಕಿಡಿಕಿಡಿಯಾಗುತ್ತಾರೆ. ಹ.

ಅಲೀಯವರನ್ನು(ರ) ಜರೆಯುತ್ತಾರೆ, ಥಳಿಸುತ್ತಾರೆ ಮತ್ತು ಮಸ್ಜಿದುಲ್ ಹರಾಮ್‌ಗೆ ಕೊಂಡು ಹೋಗಿ ಅವರನ್ನು ಅಲ್ಲಿ ಕಟ್ಟಿ ಹಾಕುತ್ತಾರೆ.

ಆದರೆ ಅಲೀಯವರ ಬಳಿ ತಮ್ಮ ವಸ್ತು ಒಡವೆಗಳಿದ್ದು ಮುಹಮ್ಮದ್‌ರು(ಸ) ಅವುಗಳನ್ನು ತಮಗೆ ಮರಳಿಸಲಿಕ್ಕಾಗಿ ಅವರನ್ನು ಬಿಟ್ಟು ಹೋಗಿರುವರೆಂದು ತಿಳಿದು ಅಲೀಯವರನ್ನು ಬಿಟ್ಟು ಬಿಡುತ್ತಾರೆ. ಆದರೆ ಮುಹಮ್ಮದ್‌ರನ್ನು(ಸ) ಬೆನ್ನಟ್ಟುವ ಅವರ ಸಂಚನ್ನು ಇನ್ನೂ ಅವರು ಕೈ ಬಿಡಲು ಸಿದ್ಧರಾಗಲಿಲ್ಲ.

"ಈಗ ಏನು ಮಾಡೋಣ?" ಎಂದು ಅಬೂಲಹಬ್ ಪ್ರಶ್ನಿಸುತ್ತಾನೆ.

"ಅವರನ್ನು ಬೆನ್ನಟ್ಟುವುದನ್ನು ಮುಂದುವರಿಸಿ" ಎಂದು ಅಬೂಜಹಲ್ ಉತ್ತರಿಸುತ್ತಾನೆ.

"ಬೇಗನೇ ಹೊರಟು ಅಬೂಬಕರ್‌ರ(ರ) ಮನೆಯನ್ನು ಸುತ್ತುವರಿಯಿರಿ. ಮುಹಮ್ಮದ್(ಸ) ಖಂಡಿತ ಅಲ್ಲೇ ಇರಬೇಕು."

ಜನರು ಅಬೂಬಕರ್‌ರ(ರ) ಮನೆಗೆ ಓಡುತ್ತಾರೆ. ಅಲ್ಲಿಗೆ ತಲುಪಿ ಒಬ್ಬನು ಜೋರಾಗಿ ಕೂಗಿ ಕರೆಯುತ್ತಾನೆ. ಈ ಸ್ವರ ಕೇಳಿ ಅಬೂಬಕರ್‌ರ(ರ) ಹಿರಿಯ ಪುತ್ರಿ ಅಸ್ಮಾ(ರ) ಹೊರಬರುತ್ತಾರೆ. ಇಷ್ಟು ಜನರನ್ನು ಕಂಡು ಆಶ್ಚರ್ಯಚಕಿತರಾಗುತ್ತಾರೆ.

"ನಿಮ್ಮ ತಂದೆ ಎಲ್ಲಿದ್ದಾರೆ?" ಎಂದು ಅಬೂಜಹಲ್ ಪ್ರಶ್ನಿಸುತ್ತಾನೆ.

"ನನಗೇನೂ ಗೊತ್ತಿಲ್ಲ" ಅಸ್ಮಾ ಉತ್ತರಿಸುತ್ತಾರೆ.

ಇದನ್ನು ಕೇಳುತ್ತಲೇ ಅಬೂಜಹಲ್ ಕೋಪದಲ್ಲಿ ಕೆಂಡವಾಗುತ್ತಾನೆ. ಅವರ ಕೆನ್ನೆಗೆ ಬಲವಾದ ಒಂದು ಏಟು ಕೊಡುತ್ತಾನೆ. ಅವರ ಕಿವಿಯುಂಗುರ ತುಂಡಾಗಿ ಬೀಳುತ್ತದೆ. ಎಲ್ಲರೂ ಬಡಬಡಿಸುತ್ತಾ ಅಲ್ಲಿಂದ ಹೊರಟು ಹೋಗುತ್ತಾರೆ.

## ಮಕ್ಕಾ ನಗರಕ್ಕೆ ವಿದಾಯ

ರಾತ್ರಿಯ ಅಂಧಕಾರದಲ್ಲಿ ಮುಹಮ್ಮದ್(ಸ) ತಮ್ಮ ಸಂಗಾತಿ ಅಬೂಬಕರ್‌ರ(ರ) ಮನೆಯ ಕದ ತಟ್ಟುತ್ತಾರೆ. ಅಬೂಬಕರ್(ರ) ಸಿದ್ಧವಾಗಿಯೇ ನಿಂತಿದ್ದರು. ಕೂಡಲೇ ಹೊರಟು ಬರುತ್ತಾರೆ. ಅಸ್ಮಾ(ರ) ಇಬ್ಬರನ್ನೂ ಬೀಳ್ಕೊಡುತ್ತಾರೆ. ಅವರು ಮದೀನಾದ ಕಡೆ ಹೋಗುವ ಬದಲು ಮಕ್ಕಾದ ದಕ್ಷಿಣ ದಿಕ್ಕಿಗೆ ಹೊರಡುತ್ತಾರೆ. ಮುಹಮ್ಮದ್(ಸ) ಅವರ ಈ ಉಪಾಯವು ಸತ್ಯನಿಷೇಧಿಗಳ ಎಲ್ಲ ಯೋಜನೆಗಳನ್ನು ವಿಫಲಗೊಳಿಸುತ್ತದೆ.

ಮಕ್ಕಾದಿಂದ ಹೊರಟು ಹಝ್ವರ ಎಂಬಲ್ಲಿಗೆ ತಲುಪಿ ಮುಹಮ್ಮದ್(ಸ) ಕಅಬಾಕ್ಕೆ ಮುಖ ಮಾಡಿ ನಿಂತು ನೊಂದ ಹೃದಯದೊಂದಿಗೆ ಹೀಗೆ ಹೇಳುತ್ತಾರೆ:

"ಓ ಮಕ್ಕಾ ನಗರವೇ! ಅಲ್ಲಾಹನಾಣೆ, ನೀನು ನನಗೆ ಅಲ್ಲಾಹನ ಭೂಮಿಯಲ್ಲಿ ಅತ್ಯಂತ ಪ್ರಿಯವಾಗಿರುವಿ. ಅಲ್ಲಾಹನಿಗೂ ಈ ಭೂಮಿಯ ಮೇಲೆ ನೀನೇ ಅತ್ಯಂತ

ಪ್ರಿಯವಾಗಿರುವಿ. ನಿನ್ನ ಜನರು ನನ್ನನ್ನು ಇಲ್ಲಿಂದ ಹೊರ ಹಾಕದಿರುತ್ತಿದ್ದರೆ ನಾನೆಂದೂ ನಿನ್ನನ್ನು ಬಿಟ್ಟು ಹೋಗುತ್ತಿರಲಿಲ್ಲ."

ಇಂದು ಜಗತ್ತಿನ ಅತಿ ದೊಡ್ಡ ಉಪಕಾರಿ ಯಾವ ಅಪರಾಧವೂ ಇಲ್ಲದೆ ತಮ್ಮ ಮನೆಮಾರನ್ನು ತೊರೆಯುತ್ತಿದ್ದಾರೆ. ಯಾವ ಬೀದಿ ಕೇರಿಗಳಲ್ಲಿ ನಡೆದಾಡಿ ಬೆಳೆದು ಯುವಕ ರಾಗಿದ್ದರೋ ಅವುಗಳಿಗೆ ಈಗ ವಿದಾಯ ಹೇಳುತ್ತಿದ್ದಾರೆ. ಅಲ್ಲಿ ಸತ್ಯದ ಉತ್ಥಾನಕ್ಕಾಗಿ ಅವರು ಸಹಸ್ರಾರು ಸಲ ತಿರುಗಾಡಿದ್ದರು. ಅದಕ್ಕಾಗಿ ಬೈಗಳನ್ನು ಕೇಳಿದ್ದರು. ಎಲ್ಲ ರೀತಿಯ ಹಿಂಸೆಗಳನ್ನು ಸಹಿಸಿದ್ದರು.

ಅವರು ಸಾಷ್ಟಾಂಗವೆರಗುತ್ತಿದ್ದ, ಸದಾ ಮಕ್ಕಾದ ಜನರ ಕಲ್ಯಾಣಕ್ಕಾಗಿ ಪ್ರಾರ್ಥಿಸುತ್ತಿದ್ದ, ಕುರ್‌ಆನ್ ಪಠಿಸುತ್ತಿದ್ದ, ಶತ್ರುಗಳ ಬೈಗಳನ್ನೂ ಹಿಂಸೆಯನ್ನೂ ಎದುರಿಸುತ್ತಿದ್ದ ಕಅಬಾದ ಆ ಆಧ್ಯಾತ್ಮಿಕ ಕೇಂದ್ರವನ್ನು ಬಿಟ್ಟು ದೂರ ಹೋಗುತ್ತಿದ್ದರು.

ಅವರ ಹೃದಯ ರೋದಿಸುತ್ತಿದೆ. ಕಣ್ಣು ತೇವಗೊಂಡಿದೆ. ಭಾವನೆಗಳು ಉಕ್ಕಿ ಹರಿಯುತ್ತಿವೆ. ಆದರೆ ಅಲ್ಲಾಹನ ಸಂಪ್ರೀತಿ ಮತ್ತು ಜೀವನದ ಧ್ಯೇಯಕ್ಕಾಗಿ ಆ ಪರಿಪೂರ್ಣ ಮನುಷ್ಯ ಈ ತ್ಯಾಗವನ್ನೂ ನಡೆಸಿದರು.

ಸತ್ಯಪ್ರಚಾರದ ಸಸಿಯು ಮಕ್ಕಾದ ನೆಲದಲ್ಲಿ ಮೊಳೆಯಿತು. ಆದರೆ ಅದರ ಫಲಗಳನ್ನು ತಿನ್ನುವ ಸೌಭಾಗ್ಯ ಮಕ್ಕಾವಾಸಿಗಳ ಪಾಲಿಗೆ ಬರಲಿಲ್ಲ. ಫಲವು ಮದೀನಾ ವಾಸಿಗಳು ಮತ್ತು ಇಡೀ ಜಗತ್ತಿನ ಜನರಿಗೆ ದೊರೆಯಿತು. ಮಕ್ಕಾದ ಜನರು ಇಂದು ಹಿಂದಕ್ಕೆ ತಳ್ಳಲ್ಪಟ್ಟಿದ್ದಾರೆ. ಮದೀನಾದ ಜನರಿಗೆ ಮುಂದಿನ ಸಾಲಲ್ಲಿ ಸ್ಥಳಾವಕಾಶ ಮಾಡಿ ಕೊಡಲಾಗುತ್ತಿದೆ. ತಾವು ಉನ್ನತರೆಂದು ಭಾವಿಸಿದವರನ್ನು ಅವನತಿಗೆ ತಳ್ಳುವ ತೀರ್ಮಾನ ವಾಗುತ್ತದೆ. ಅವರಿಗಿಂತ ಕೆಳ ಮಟ್ಟದವರೆಂದು ಪರಿಗಣಿಸಲ್ಪಡುತ್ತಿದ್ದವರನ್ನು ಉನ್ನತಿಗೆ ತರಲಾಗುತ್ತಿದೆ.

## ಸೌರ್ ಗುಹೆಯಲ್ಲಿ

ಮುಹಮ್ಮದ್(ಸ) ತಮ್ಮ ಆಪ್ತ ಸ್ನೇಹಿತ ಅಬೂಬಕರ್(ರ) ಅವರ ಜೊತೆಗೆ ಮಕ್ಕಾದ ದಕ್ಷಿಣಕ್ಕೆ ಪ್ರಯಾಣ ಬೆಳೆಸುತ್ತಿದ್ದಾರೆ. ಗುರಿ ಮದೀನಾ ಆಗಿದ್ದರೂ ವೈರಿಗಳು ಬೆನ್ನಟ್ಟುವುದನ್ನು ತಪ್ಪಿಸಲಿಕ್ಕಾಗಿ ಉತ್ತರದ ಬದಲು ದಕ್ಷಿಣದ ಹಾದಿಯನ್ನು ಹಿಡಿಯ ಲಾಗಿದೆ. ದುರ್ಗಮ ಮಾರ್ಗಗಳಿಂದ ಸಾಗುತ್ತ ಕಾಲುಗಳು ಗಾಯಗೊಂಡಿವೆಯಾದರೂ ಪ್ರಯಾಣ ಮುಂದುವರಿದಿದೆ. ಇಬ್ಬರೂ ಮಕ್ಕಾದಿಂದ ಮೂರು ಮೈಲಿಗಳ ದೂರದಲ್ಲಿರುವ ಸೌರ್ ಪರ್ವತದ ಬಳಿ ತಲುಪಿದ್ದಾರೆ. ಇದು ನೂರ್ ಪರ್ವತಕ್ಕಿಂತ ಎತ್ತರವಾಗಿದೆ. ಮೇಲೇರುವ ರಸ್ತೆಯೂ ಬಹಳ ಅಪಾಯಕಾರಿಯಾಗಿದೆ. ವಾಸ್ತವದಲ್ಲಿ ಮೇಲೇರಲು ಯಾವ ರಸ್ತೆಯೂ ಇಲ್ಲ. ಕೇವಲ ಅಂದಾಜಿನ ಮೇರೆಗೆ ಇಬ್ಬರೂ ಬೆಟ್ಟವನ್ನು ಏರತೊಡಗಿದರು. ರಾತ್ರಿಯ ಅಂಧಕಾರ, ವನ್ಯಮೃಗಗಳ ಅಪಾಯ, ವೈರಿಗಳ ಆತಂಕ, ದಣಿವು ಮತ್ತು ಕಾಲಿನ ಗಾಯಗಳ ಹೊರತಾಗಿಯೂ ಮುಹಮ್ಮದ್(ಸ) ಬಲವಾದ ಹೆಜ್ಜೆಗಳನ್ನಿಟ್ಟು ಪರ್ವತವನ್ನೇರುತ್ತಿದ್ದಾರೆ.

ದಿನದ ಬೆಳಕಿನಲ್ಲಿ ಕೂಡಾ ಈ ಪರ್ವತವನ್ನೇರಲು ಅರ್ಧದಿನದ ಕಾಲ ಬೇಕಾಗುತ್ತಿತ್ತು. ಮುಹಮ್ಮದ್(ಸ) ಮತ್ತು ಅಬೂಬಕರ್(ರ) ಹೇಗಾದರೂ ಮಾಡಿ ಪ್ರಭಾತೋದಯಕ್ಕಿಂತ ಮುಂಚೆ 'ಸೌರ್ ಗುಹೆ'ಗೆ ತಲುಪುತ್ತಾರೆ.

ಅಲ್ಲಿಗೆ ತಲುಪುತ್ತಲೇ ಅಬೂಬಕರ್(ರ) ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೇ! ತಾವು ಸ್ವಲ್ಪ ಕಾಲ ಇಲ್ಲಿ ನಿಂತಿರಿ. ನಾನು ಒಳಗೆ ಹೋಗಿ ಗುಹೆಯನ್ನು ಸ್ವಚ್ಛಮಾಡಿ ಮತ್ತು ಸುರಕ್ಷಿತಗೊಳಿಸಿ ಬರುತ್ತೇನೆ."

ಅಬೂಬಕರ್(ರ) ನಿರ್ಭೀತರಾಗಿ ಆ ಗುಹೆಯನ್ನು ಪ್ರವೇಶಿಸುತ್ತಾರೆ. ಒಳಗೆ ಹೋಗಿ ಕತ್ತಲೆಯಲ್ಲಿ ಗುಹೆಯ ಎಲ್ಲ ಭಾಗಗಳಿಗೂ ಕೈಯಾಡಿಸಿ ಪ್ರತಿಯೊಂದು ಬಿಲವನ್ನು ತಮ್ಮ ಚದ್ದರದ ತುಂಡುಗಳಿಂದ ಮುಚ್ಚುತ್ತಾರೆ. ಗುಹೆಯು ಪೂರ್ಣ ಸುರಕ್ಷಿತವಾಗಿದೆಯೆಂದು ಮನವರಿಕೆಯಾದಾಗ ಹೊರ ಬಂದು ಪ್ರವಾದಿವರ್ಯರನ್ನು(ಸ) ಒಳಗೆ ಕರೆದೊಯ್ಯುತ್ತಾರೆ.

ಮುಹಮ್ಮದ್(ಸ) ಬಹಳ ಬಳಲಿದ್ದಾರೆ. ಅವರಿಗೆ ವಿಶ್ರಾಂತಿಯ ತೀವ್ರ ಅಗತ್ಯವಿದೆ. ಅವರು ಅಬೂಬಕರ್‌ರ(ರ) ತೊಡೆಯ ಮೇಲೆ ತಲೆಯಿಟ್ಟು ಮಲಗುತ್ತಾರೆ. ಸ್ವಲ್ಪ ಹೊತ್ತಿನಲ್ಲೇ ಅವರು ನಿದ್ರೆ ಹೋಗುತ್ತಾರೆ. ಅಷ್ಟರಲ್ಲಿ ಸ್ವಲ್ಪ ಬೆಳಕು ಹರಿಯಲಾರಂಭಿಸಿ ಒಂದು ಸಣ್ಣ ಬಿಲವು ಹಾಗೆಯೇ ಉಳಿದಿರುವುದು ಅಬೂಬಕರ್‌ರಿಗೆ(ರ) ಗೋಚರಿಸುತ್ತದೆ. ಅವರು ಆ ರಂಧ್ರದ ಮೇಲೆ ತಮ್ಮ ಕಾಲಿನ ಹೆಬ್ಬೆರಳನ್ನಿಟ್ಟು ಯಾವುದೇ ವಿಷ ಜಂತು ಬಂದು ಮುಹಮ್ಮದ್‌ರನ್ನು(ಸ) ಪೀಡಿಸದಂತೆ ತಡೆಯುತ್ತಾರೆ. ಆ ಬಿಲದೊಳಗೆ ಇದ್ದ ಹಾವೊಂದು ಅಬೂಬಕರ್‌ರ(ರ) ಕಾಲಿನ ಹೆಬ್ಬೆರಳನ್ನು ಕಡಿಯುತ್ತದೆ. ಅಬೂಬಕರ್‌ರಿಗೆ(ರ) ಸಹಿಸಲಾಗದ ನೋವು ಅನುಭವವಾಗುತ್ತದೆ. ಆದರೆ ಮುಹಮ್ಮದ್‌ರಿಗೆ(ಸ) ನಿದ್ರಾಭಂಗ ವಾದೀತೆಂಬ ಭಯದಿಂದಾಗಿ ಅವರು ಸ್ವಲ್ಪವೂ ಅಲುಗಾಡದೆ ಹಾಗೆಯೇ ಕುಳಿತಿರುತ್ತಾರೆ. ಸ್ವಲ್ಪ ಹೊತ್ತಿನ ನಂತರ ಮುಹಮ್ಮದ್(ಸ) ಎಚ್ಚರಗೊಂಡಾಗ ಅಬೂಬಕರ್‌ರ(ರ) ಮುಖ ವಿವರ್ಣಗೊಂಡಿರುವುದನ್ನು ಕಂಡು ಏನಾಯಿತೆಂದು ವಿಚಾರಿಸಿದಾಗ ಅಬೂಬಕರ್(ರ) ಹಾವು ಕಚ್ಚಿದ ವಿಷಯ ತಿಳಿಸುತ್ತಾರೆ.

ಪ್ರವಾದಿ(ಸ) ತಮ್ಮ ಎಂಜಲನ್ನು ಹಾವು ಕಚ್ಚಿದ ಜಾಗಕ್ಕೆ ಹಚ್ಚುತ್ತಾರೆ. ಸರ್ಪದ ವಿಷವು ಮಾಯವಾಗುತ್ತದೆ. ನೋವು ಶಮನಗೊಂಡು ಅಬೂಬಕರ್‌ರಿಗೆ(ರ) ನೆಮ್ಮದಿ ದೊರೆಯುತ್ತದೆ. ತರುವಾಯ ಅಬೂಬಕರ್(ರ) ಆ ಬಿಲವನ್ನು ಮುಚ್ಚಿ ಬಿಡುತ್ತಾರೆ.

ಈಗ ದಿನದ ಬೆಳಕು ಹರಿದಿದೆ. ಕುರೈಶರು ಮುಹಮ್ಮದ್‌ರನ್ನು(ಸ) ಹುಡುಕುತ್ತಾ ಅಲೆದಾಡುತ್ತಿದ್ದಾರೆ. ವಿಭಿನ್ನ ತಂಡಗಳು ಬೇರೆ ಬೇರೆ ರಸ್ತೆಗಳಲ್ಲಿ, ಪರ್ವತಗಳಲ್ಲಿ, ಕಣಿವೆ ಗಳಲ್ಲಿ ಮತ್ತು ವನಗಳಲ್ಲಿ ಹುಡುಕಲಾರಂಭಿಸುತ್ತಾರೆ. ಅವರು ಎಲ್ಲ ಮೂಲೆಗಳನ್ನೂ ಜಾಲಾಡಿ ಸುಸ್ತಾಗಿದ್ದಾರೆ. ಆದರೆ ಮುಹಮ್ಮದ್‌ರವರ(ಸ) ಸುಳಿವು ಎಲ್ಲೂ ಸಿಗುತ್ತಿರಲಿಲ್ಲ.

ಅವರು ನಿರಾಶರಾಗಿ ಮಕ್ಕಾಕ್ಕೆ ಮರಳಿದಾಗ ಒಬ್ಬ ಸರದಾರನು ಅವರನ್ನುದ್ದೇಶಿಸಿ: 'ಶೋಧ ನಡೆಸುವವರನ್ನು ಬಾಡಿಗೆಗೆ ಗೊತ್ತು ಪಡಿಸಿರಿ' ಎಂದು ಆಜ್ಞಾಪಿಸುತ್ತಾನೆ. ಇದನ್ನು ಕೇಳಿ ಅವರು ಮತ್ತೊಮ್ಮೆ ಸಕ್ರಿಯರಾಗುತ್ತಾರೆ. ಶೋಧ ಕಾರ್ಯದ ನಿಪುಣರನ್ನು ಕರೆಸಲಾಗುತ್ತದೆ. 'ಕುರರ್ಝ್' ಎಂಬ ಓರ್ವ ಪರಿಣತ ಶೋಧಕನು ಮುಹಮ್ಮದ್(ಸ) ಅವರ ಹೆಜ್ಜೆ ಗುರುತುಗಳನ್ನನುಸರಿಸಿ ಅವರನ್ನು ಸೌರ್ ಪರ್ವತದ ತನಕ ಒಯ್ಯುತ್ತಾನೆ. ಒಂದು ಬಂಡೆಯ ಬಳಿ ತಲುಪಿದ ನಂತರ ಮುಂದೆ ಹೆಜ್ಜೆ ಗುರುತು ಎಲ್ಲೂ ಕಾಣಿಸುವುದಿಲ್ಲ.

"ಹಾಗಾದರೆ ಅವನು ಗಗನವನ್ನೇರಿದನೇ? ಅಥವಾ ಭೂಮಿ ಅವನನ್ನು ನುಂಗಿ ಬಿಟ್ಟಿದೆಯೇ?" ಎಂದು ಒಬ್ಬ ವ್ಯಕ್ತಿ ಕೇಳುತ್ತಾನೆ.

'ನನಗೇನೂ ತಿಳಿಯದು' ಕುರರ್ಝ್ ಅಲಕ್ಷ್ಯದೊಂದಿಗೆ ಹೇಳುತ್ತಾನೆ.

ಆಗ ಓರ್ವ ಯುವಕ ಹೀಗೆನ್ನುತ್ತಾನೆ: "ಈ ಪರ್ವತದಲ್ಲಿ ಹರಡಿರಿ. ಇದರ ಮೇಲಿರುವ ಗುಹೆಯನ್ನು ಪ್ರವೇಶಿಸಿರಿ. ಪೊದೆಗಳಲ್ಲಿ ಹುಡುಕಿರಿ. ಅವರು ಇಲ್ಲಿಯೇ ಎಲ್ಲೋ ಇರಬೇಕು."

ಗುಹೆಯೊಳಗೆ ಅಬೂಬಕರ್‌ರಿಗೆ(ರ) ಹೊರಗಿನಿಂದ ಜನರ ಧ್ವನಿಯು ಹತ್ತಿರ ಬರುತ್ತಿರುವುದು ಕೇಳಿಸುತ್ತದೆ. ಅವರು ಕಳವಳಗೊಂಡು: 'ಈಗ ಏನಾದೀತು?' ಎಂದು ಉದ್ಗರಿಸುತ್ತಾರೆ.

ಅವರ ಮನದಾಳದಿಂದ ಪ್ರವಾದಿ ಪ್ರೇಮ ಮತ್ತು ಅನುಕಂಪದ ಅಲೆ ಎದ್ದಿತು. ಅವರ ದೃಷ್ಟಿಯು ಗುಹೆಯ ಬಾಗಿಲ ಮೇಲೆ ನೆಟ್ಟಿತು. ಮುಹಮ್ಮದ್(ಸ) ಶಾಂತಚಿತ್ತರಾಗಿ ನಮಾಝ್ ಮಾಡುತ್ತಿದ್ದರು. ಅಬೂಬಕರ್(ರ) ಯೋಚನಾ ಮಗ್ನರಾಗಿದ್ದರು.

ಮನುಷ್ಯರ ಧ್ವನಿಯು ಕ್ಷಣ ಕ್ಷಣಕ್ಕೂ ಹತ್ತಿರ ಬರುತ್ತಿದೆ. ಅನೇಕ ಜನರು ಅವರನ್ನು ಹುಡುಕುತ್ತಾ ಗುಹೆಯ ಬಾಗಿಲ ಬಳಿಗೆ ತಲುಪಿದಂತೆ ಭಾಸವಾಗುತ್ತದೆ. ಈಗಂತೂ ಗುಹೆಯ ಹೊರಗೆ ಅವರಿಗೆ ಜನರ ಕಾಲುಗಳೂ ಗೋಚರಿಸುತ್ತವೆ.

"ಈಗ ನನ್ನ ಪ್ರಾಣಪ್ರಿಯರ ಅವಸ್ಥೆ ಏನಾಗುವುದು?" ಎಂದು ಹ. ಅಬೂಬಕರ್(ರ) ಯೋಚಿಸಿ ಅತ್ತು ಬಿಡುತ್ತಾರೆ. ಅಷ್ಟರಲ್ಲಿ ಮುಹಮ್ಮದ್(ಸ) ನಮಾಝ್ ಪೂರ್ಣ ಗೊಳಿಸಿದರು. ಅಬೂಬಕರ್(ರ) ಅತ್ಯಂತ ಆತಂಕದಿಂದ ಅವರನ್ನುದ್ದೇಶಿಸಿ, "ಪ್ರವಾದಿವರ್ಯರೇ! ಅವರು ತಮ್ಮ ಕಾಲುಗಳತ್ತ ನೋಡಿದರೆ ಖಂಡಿತ ನಮ್ಮನ್ನು ಕಾಣುವರು."

ಮುಹಮ್ಮದ್(ಸ) ಅತ್ಯಂತ ಶಾಂತಚಿತ್ತರಾಗಿ ಈ ರೀತಿ ಹೇಳುತ್ತಾರೆ: "ಮೂರನೆಯವನು ಅಲ್ಲಾಹನಾಗಿರುವ ಆ ಇಬ್ಬರು ವ್ಯಕ್ತಿಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?"

ಅಬೂಬಕರ್(ರ): "ನನ್ನ ತಂದೆ ತಾಯಿಗಳು ತಮಗೆ ಅರ್ಪಿತ. ತಮ್ಮ ಜನಾಂಗದ

ಜನರು ತಮ್ಮನ್ನು ಹುಡುಕುತ್ತಾ ಬಂದಿರುವರು. ಅಲ್ಲಾಹನಾಣೆ! ನಾನು ನನಗಾಗಿ ಅಳುತ್ತಿಲ್ಲ. ನನ್ನ ಕಣ್ಣ ಮುಂದೆ ತಮಗೇನಾದರೂ ಹಾನಿಯಾಗದಿರಲಿ ಎಂದು ಅಳುತ್ತಿರುವೆನು."

ಮುಹಮ್ಮದ್(ಸ): "ಹೆದರಬೇಡಿ. ಖಂಡಿತ ಅಲ್ಲಾಹನು ನಮ್ಮೊಂದಿಗಿದ್ದಾನೆ."

ಮುಹಮ್ಮದ್(ಸ) ಅವರ ಸೃಷ್ಟಿಕರ್ತನು ಅವರ ರಕ್ಷಣೆಗಾಗಿ ಜೇಡರ ಹುಳ ಮತ್ತು ಪಾರಿವಾಳಗಳಿಗೆ ಆಜ್ಞಾಪಿಸುತ್ತಾನೆ. ಅತ್ಯದ್ಭುತ ರೀತಿಯಲ್ಲಿ ಆ ಆಜ್ಞೆಯು ಕಾರ್ಯರೂಪಕ್ಕಿಳಿಯುತ್ತದೆ. ಉಮಯ್ಯ ಬಿನ್ ಖಲಫ್ ಗುಹೆಯ ಬಾಗಿಲ ಬಳಿ ತಲುಪಿದಾಗ ಅದನ್ನು ಕಂಡು ಹೇಳಿದ: "ಇಲ್ಲೇನಿದೆ? ಈ ಗುಹೆಯಲ್ಲಿರುವ ಜೇಡನ ಬಲೆಯು ಮುಹಮ್ಮದ್‌ರ(ಸ) ಜನನಕ್ಕಿಂತಲೂ ಮುಂಚೆ ಕಟ್ಟಿದ್ದಾಗಿರಬೇಕು."

ಈ ಮಾತು ಕೇಳಿ ಕುರಝ್ ಹೇಳಿದ: "ಈ ಪಾರಿವಾಳದ ಜೋಡಿ ಮತ್ತು ಅದರ ಮೊಟ್ಟೆಗಳನ್ನು ನೋಡಿ, ಇವುಗಳು ಇರುತ್ತಲೇ ಗುಹೆಯೊಳಗೆ ಯಾರಾದರೂ ಪ್ರವೇಶಿಸುವುದಾದರೂ ಹೇಗೆ?"

ಗುಹೆಯ ಬಾಗಿಲಲ್ಲಿ ಜೇಡನ ಬಲೆ ಮತ್ತು ಪಾರಿವಾಳದ ಜೋಡಿಯನ್ನು ಕಂಡು ಎಲ್ಲರೂ ನಿರಾಶರಾದರು. ಎಲ್ಲರ ಮುಖವೂ ಕಳೆಗುಂದಿತು. ಅವರ ಎಲ್ಲ ಪ್ರಯತ್ನಗಳೂ ವಿಫಲವಾದುವು. ಅವರ ಆಶಾ ಗೋಪುರಗಳು ಒಮ್ಮೆಲೇ ಕುಸಿದು ಬಿದ್ದುವು. ಅವರು ಹತಾಶರಾಗಿ ಮರಳಿದರು. ಅವರು ಹೀಗೆ ಮರಳುತ್ತಿರುವುದನ್ನು ಕಂಡು ಗುಹೆಯ ಒಳಗೆ ಮುಹಮ್ಮದ್(ಸ) ತಮ್ಮ ಪ್ರಭುವನ್ನು ಕೂಗಿ ಕರೆದರು.

ಮಕ್ಕಾದಲ್ಲಿ ಅಕ್ರಮಿಗಳು ಮತ್ತೊಂದು ಸಭೆ ನಡೆಸಿದರು. ಮುಹಮ್ಮದ್(ಸ) ಅವರು ಮಕ್ಕಾವಾಸಿಗಳ ಕಣ್ಣು ತಪ್ಪಿಸಿ ಹೋಗಿ ಬಿಟ್ಟ ಮತ್ತು ಅವರು ತಮ್ಮ ಹಿಡಿತದಿಂದ ಪಾರಾದ ವಿಷಯದಲ್ಲಿ ಸಾಕಷ್ಟು ಚರ್ಚೆಯಾಯಿತು. ಕೊನೆಗೆ ಮುಹಮ್ಮದ್(ಸ) ಮತ್ತು ಅಬೂಬಕರ್‌ರನ್ನು(ರ) ಹಿಡಿದು ತಂದ ಅಥವಾ ಕೊಲೆಗೈದ ವ್ಯಕ್ತಿಗೆ 200 ಒಂಟೆಗಳನ್ನು ನೀಡಲಾಗುವುದೆಂದು ಘೋಷಿಸಲಾಯಿತು. ಈ ಘೋಷಣೆಯಿಂದ ಅವರಲ್ಲಿ ಮತ್ತೆ ಉತ್ಸಾಹ ಮೂಡಿತು. ಅವರು ಮತ್ತೊಮ್ಮೆ ಹುಡುಕಾಟದಲ್ಲಿ ಸಕ್ರಿಯರಾದರು.

ಮುಹಮ್ಮದ್(ಸ) ತಮ್ಮ ಸಂಗಾತಿ ಅಬೂಬಕರ್‌ರ(ರ) ಜೊತೆ ಮೂರು ದಿನಗಳ ಕಾಲ 'ಸೌರ್' ಗುಹೆಯಲ್ಲಿದ್ದರು. ತನ್ಮಧ್ಯೆ ಅಬೂಬಕರ್‌ರ(ರ) ಪುತ್ರ ಅಬ್ದುಲ್ಲಾ(ರ) ದಿನವಿಡೀ ಮಕ್ಕಾದಲ್ಲಿ ಕುರೈಶರ ಚಲನವಲನಗಳನ್ನು ವೀಕ್ಷಿಸುತ್ತಿದ್ದರು. ರಾತ್ರಿ ಬಂದು ಗುಹೆಯಲ್ಲಿ ಎಲ್ಲವನ್ನೂ ತಿಳಿಸುತ್ತಿದ್ದರು. ಅವರ ಸೋದರಿ ಅಸ್ಮಾ ಕೂಡಾ ಅವರ ಜೊತೆಗಿರುತ್ತಿದ್ದರು. ಅವರು ಮನೆಯಿಂದ ಊಟ ತರುತ್ತಿದ್ದರು. ಸಂಜೆಯಾದಾಗ ಅಬೂಬಕರ್‌ರ(ರ) ಗುಲಾಮ ಆಮಿರ್ ಬಿನ್ ಫುಹೈರ ಆಡುಗಳನ್ನು ಮೇಯಿಸಿ ಅವುಗಳನ್ನು ಮನೆಯ ಕಡೆ ಮರಳಿಸುತ್ತಾ ಅದೇ ದಾರಿಯಲ್ಲಿ ಸಾಗುತ್ತಿದ್ದರು. ಮುಹಮ್ಮದ್(ಸ) ಮತ್ತು

ಅಬೂಬಕರ್‌ರಿಗೆ(ರ) ತಾಜಾ ಹಾಲು ಲಭಿಸುತ್ತಿತ್ತು.

ಗುಹೆಯಲ್ಲಿ ಮೂರು ದಿನಗಳು ಕಳೆದು ನಾಲ್ಕನೆಯ ರಾತ್ರಿಯ ಕೊನೆಯ ಜಾವ ಆರಂಭವಾಗಿದೆ. ಆದೇಶದಂತೆ ಅಬ್ದುಲ್ಲಾ ಬಿನ್ ಅರೀಕತ್ ಎರಡೂ ಒಂಟೆಗಳನ್ನು ಕರೆತಂದಿರುವರು. ಆಮಿರ್ ಬಿನ್ ಫುಹೈರ, ಅಬ್ದುಲ್ಲಾ(ರ) ಮತ್ತು ಅಸ್ಮಾ(ರ) ಅವರೂ ಬಂದಿರುವರು. ಹಿಜ್ರತ್ ಪ್ರಯಾಣದ ಎಲ್ಲ ಸಿದ್ಧತೆಗಳೂ ಪೂರ್ಣಗೊಂಡಿವೆ. ಪ್ರಯಾಣಕ್ಕಾಗಿ ಹುರಿದ ಧಾನ್ಯದ ಹುಡಿಯನ್ನೂ ನೀರಿನ ಚೀಲವನ್ನೂ ಅಸ್ಮಾ(ರ) ತಂದಿರುವರು.

ಇಂದು ಪ್ರವಾದಿತ್ವದ 13ನೇ ವರ್ಷದ ರಬೀಉಲ್ ಅವ್ವಲ್ ತಿಂಗಳ ಪ್ರಥಮ ದಿನಾಂಕ (ಸೆಪ್ಟೆಂಬರ್ 16, 622) ಸೋಮವಾರ ದಿನ. ಸೌರ್ ಗುಹೆಯಿಂದ ಹೊರಟು ಒಂದು ಸಣ್ಣ ತಂಡವು ಮದೀನಾದ ಕಡೆಗೆ ಸಾಗುವ ಅಪರಿಚಿತ ಹಾದಿಯಲ್ಲಿ ಸಾಗುತ್ತಿದೆ. ಒಂದು ಒಂಟೆಯ ಮೇಲೆ ಮುಹಮ್ಮದ್(ಸ) ಮತ್ತು ಅಬೂಬಕರ್(ರ) ಕುಳಿತಿರುವರು. ಇನ್ನೊಂದರ ಮೇಲೆ ಆಮಿರ್ ಬಿನ್ ಫುಹೈರ ಮತ್ತು ಅಬ್ದುಲ್ಲಾ ಬಿನ್ ಅರೀಕತ್ ಕುಳಿತಿರುವರು. ಎರಡೂ ಒಂಟೆಗಳು ಸಮುದ್ರ ತೀರದ ನಿರ್ಜನ ಮಾರ್ಗದಲ್ಲಿ ಮುಂದುವರಿಯುತ್ತಿವೆ.

ಅಧ್ಯಾಯ - ೯

# ಮದೀನಾ ಜೀವನ

## ಮದೀನಾದ ಹಾದಿಯಲ್ಲಿ

ಇತಿಹಾಸದ ಧಾರೆಯು ಮಕ್ಕಾದಿಂದ ಮದೀನಾದ ಕಡೆಗೆ ಹರಿಯತೊಡಗಿದೆ. ಇತಿಹಾಸ ನಿರ್ಮಿಸುವ ವ್ಯಕ್ತಿತ್ವಗಳು ಈ ದೀರ್ಘ ಪ್ರಯಾಣಕ್ಕೆ ಹೊರಟಿವೆ. ಆ ಸಣ್ಣ ತಂಡವು ಸಮುದ್ರ ತೀರದ ಮಾರ್ಗಗಳ ಮೂಲಕ ಮದೀನಾದ ಕಡೆಗೆ ಧಾವಿಸುತ್ತಿದೆ. ಮಕ್ಕಾ ನಗರವು ಬಹಳ ಹಿಂದೆ ಬಿದ್ದಿದೆ. ಅಬ್ದುಲ್ಲಾ ಬಿನ್ ಅರೀಕತ್‌ರಿಗೆ ಈ ಮಾರ್ಗ ಬಹಳ ಸುಪರಿಚಿತ. ಅವನ ಮಾರ್ಗದರ್ಶನದಲ್ಲಿ ಯಾತ್ರಾ ತಂಡವು ಭರವಸೆಯೊಂದಿಗೆ ಮುನ್ನಡೆಯುತ್ತಿದೆ. ಇದು ಮದೀನಾಕ್ಕೆ ಹೋಗುವ ಅತ್ಯಂತ ಹತ್ತಿರದ ಮಾರ್ಗವಾದುದರಿಂದ ಕಡಿಮೆ ಸಮಯದಲ್ಲೇ ಗುರಿ ತಲುಪುವ ನಿರೀಕ್ಷೆಯಿದೆ. ಈ ಮಾರ್ಗದಲ್ಲಿ ಬರುವ 'ಮಫಾಯಿರ್' ಪರ್ವತದ ಮೂಲಕ ಹಾದು ಹೋಗುವುದು ಕಷ್ಟವಾದ ಕಾರಣ ಈ ಹಾದಿಯನ್ನು ಹೆಚ್ಚಿನ ಜನರು ಬಳಸುತ್ತಿರಲಿಲ್ಲ.

ಪ್ರಯಾಣದ ಎರಡನೆಯ ದಿನ. ಮಧ್ಯಾಹ್ನ ಆಯಾಸ ನೀಗಿಸಲು ಸ್ವಲ್ಪ ಹೊತ್ತು ಮಲಗಬೇಕೆಂದು ನಿರ್ಧರಿಸಿದರೂ ಎಲ್ಲೂ ನೆರಳಿನ ಆಶ್ರಯ ಕಾಣುತ್ತಿರಲಿಲ್ಲ. ದೂರ ದೂರದ ತನಕ ಮರಳ ರಾಶಿಯೇ ಕಂಡು ಬರುತ್ತಿತ್ತು. ಪ್ರಯಾಣ ಮುಂದುವರಿಯಿತು. ಒಂದೆಡೆ ಒಂದು ಬಂಡೆಯ ಕೆಳಗೆ ಸ್ವಲ್ಪ ನೆರಳು ಕಂಡಾಗ ಅಬೂಬಕರ್(ರ) ತಮ್ಮ ಒಂಟೆಯನ್ನು ಕೂರಿಸಿದರು. ಕೆಳಗಿಳಿದು ಸ್ವಲ್ಪ ಜಾಗದ ವ್ಯವಸ್ಥೆ ಮಾಡಿ ಚದ್ದರವನ್ನು ಹಾಸಿ ಮುಹಮ್ಮದ್‌ರನ್ನು(ಸ) ಮಲಗುವಂತೆ ಕೇಳಿಕೊಂಡರು.

ಸ್ವಲ್ಪ ದೂರದಲ್ಲಿ ಅಬ್ದುಲ್ಲಾ ಮತ್ತು ಆಮಿರ್ ತಂತಮ್ಮ ಚದ್ದರದ ನೆರಳು ಮಾಡಿ ಕುಳಿತರು. ಅಬೂಬಕರ್(ರ) ಜಾಗೃತರಾಗಿ ಸುತ್ತಲೂ ನೋಡುತ್ತಿದ್ದರು. ತನ್ಮಧ್ಯೆ ಅವರಿಗೆ ಓರ್ವ ಬಾಲಕ ಕಾಣಿಸಿದನು. ಆತ ಆಡುಗಳನ್ನಟ್ಟುತ್ತಾ ಬಹುಶಃ ನೆರಳಿನಾಶ್ರಯ ಅರಸುತ್ತಾ ಬರುತ್ತಿದ್ದ. ಆತ ಹತ್ತಿರ ತಲುಪಿದಾಗ ಅಬೂಬಕರ್(ರ): "ಮಗೂ! ಆಡಿನ ಹಾಲು ಕರೆದು ಕೊಡುತ್ತೀಯಾ?" ಎಂದು ವಿಚಾರಿಸಿದರು.

ಹುಡುಗ ಒಪ್ಪಿದ. ಅಬೂಬಕರ್(ರ) ಆತನ ಕೈ ತೊಳೆಯಿಸಿದರು. ಆಡಿನ ಸ್ತನ ತೊಳೆಯಿಸಿದರು. ಒಂದು ಪಾತ್ರೆ ಕೊಟ್ಟು ಹಾಲು ಕರೆಯಲು ಹೇಳಿದರು. ಅದು ತಂಪಾಗಲು ಸ್ವಲ್ಪ ನೀರು ಸೇರಿಸಿ ಮುಹಮ್ಮದ್‌ರಿಗೆ(ಸ) ನೀಡುತ್ತಾರೆ. ಮುಹಮ್ಮದ್(ಸ) ಸ್ವಲ್ಪ ಹಾಲು ಸೇವಿಸಿ ಉಳಿದುದನ್ನು ತಮ್ಮ ಸಂಗಾತಿಗಳಿಗೆ ನೀಡುತ್ತಾರೆ. ತರುವಾಯ ಯಾತ್ರಾತಂಡವು ತನ್ನ ಗುರಿಯತ್ತ ಸಾಗತೊಡಗಿತು.

ಜಹಫಾ ಎಂಬಲ್ಲಿ ಅವರ ರಸ್ತೆ ಮಕ್ಕಾದಿಂದ ಬರುವ ಮುಖ್ಯರಸ್ತೆಯೊಂದಿಗೆ ಸೇರಿಕೊಂಡಾಗ ಮುಹಮ್ಮದ್(ಸ) ಖಿನ್ನವದನರಾದರು. ಅವರಿಗೆ ಕಅಬಾ ಭವನದ ದೃಶ್ಯ ಕಣ್ಣಿಗೆ ಕಟ್ಟಿದಂತಾಯಿತು. ಮಾತೃಭೂಮಿಯ ಪ್ರೇಮವು ಉಕ್ಕಿ ಬಂತು. ಮುಹಮ್ಮದ್(ಸ) ಅತ್ತು ಬಿಟ್ಟರು. ಆಗಲೇ ಜಿಬ್ರೀಲ್(ಅ) ಪ್ರತ್ಯಕ್ಷರಾಗಿ ಹೀಗೆ ದಿವ್ಯವಾಣಿಯನ್ನು ಅವತೀರ್ಣಗೊಳಿಸಿದರು:

"ಪೈಗಂಬರರೇ, ನಿಮ್ಮ ಮೇಲೆ ಈ ಕುರ್‌ಆನನ್ನು ಕಡ್ಡಾಯಗೊಳಿಸಿರುವವನು ನಿಮ್ಮನ್ನು ಖಂಡಿತ ಒಂದು ಅತ್ಯುತ್ತಮ ಪರಿಣಾಮಕ್ಕೆ ಮುಟ್ಟಿಸಲಿರುವನು. 'ಸನ್ಮಾರ್ಗ ವನ್ನು ತೆಗೆದುಕೊಂಡು ಬಂದಿರುವವನು ಯಾರು ಮತ್ತು ಸುವ್ಯಕ್ತ ಪಥಭ್ರಷ್ಟತೆ ಯಲ್ಲಿ ಸಿಲುಕಿದವನಾರು ಎಂಬುದನ್ನು ನನ್ನ ಪ್ರಭು ಚೆನ್ನಾಗಿ ಬಲ್ಲನು' ಎಂದು ಇವರೊಡನೆ ಹೇಳಿ ಬಿಡಿರಿ."

**(ಪವಿತ್ರ ಕುರ್‌ಆನ್, 28:85)**

ಮುಹಮ್ಮದ್(ಸ) ಪವಿತ್ರ ಕುರ್‌ಆನಿನ ಪಠಣ ಮಾಡುತ್ತಾ ಮದೀನಾದ ದಾರಿಯಲ್ಲಿ ಸಾಗುತ್ತಿದ್ದರು. ಅವರು ತಮ್ಮ ಎಡ ಬಲಕ್ಕಾಗಲಿ, ಹಿಂದೆಯಾಗಲಿ ತಿರುಗಿ ನೋಡುತ್ತಿರಲಿಲ್ಲ. ಅಬೂಬಕರ್(ರ) ಬಹಳ ಜಾಗರೂಕತೆಯಿಂದ ಎಲ್ಲಾ ಕಡೆ ನೋಡುತ್ತಾ ಸಾಗುತ್ತಿದ್ದರು.

ಅತ್ತ ಮಕ್ಕಾದಿಂದ ಸುರಾಕಾ ಎಂಬವನು ಇನ್ನೂರು ಒಂಟೆಗಳ ಬಹುಮಾನ ಗಳಿಸುವ ದುರಾಶೆಯಿಂದ ತನ್ನ ಕುದುರೆ ಏರಿ ಮುಹಮ್ಮದ್‌ರ(ಸ) ಬೆಂಬತ್ತಿದನು. ಆತನೂ ಸಮುದ್ರ ತೀರದ ಮಾರ್ಗವಾಗಿ ವಾಯುವೇಗದಿಂದ ಸಾಗುತ್ತಿದ್ದನು.

ಅಬೂಬಕರ್(ರ) ದೂರದಿಂದಲೇ ಯಾರೋ ಬೆಂಬತ್ತಿದ್ದಾರೆಂಬುದನ್ನು ಗ್ರಹಿಸಿಕೊಂಡು: "ಪ್ರವಾದಿವರ್ಯರೇ! ನಮ್ಮನ್ನು ಬೆನ್ನಟ್ಟುತ್ತಿರುವವನು ತೀರಾ ಸಮೀಪಕ್ಕೆ ತಲುಪಿದ್ದಾನೆ."

ಮುಹಮ್ಮದ್(ಸ) ವಿಚಲಿತರಾಗಲಿಲ್ಲ. ಅವರು ಸ್ವಲ್ಪವೂ ಹಿಂದೆ ತಿರುಗಿ ನೋಡದೆ ಶಾಂತಚಿತ್ತರಾಗಿ ಕುರ್‌ಆನ್ ಪಠಿಸುತ್ತಾ ಮುಂದುವರಿಯುತ್ತಿದ್ದರು. ಜೊತೆಗೆ ಹೀಗೆ ಪ್ರಾರ್ಥಿಸುತ್ತಿದ್ದರು: "ಓ ಅಲ್ಲಾಹ್! ಅವನ ಕೇಡಿನಿಂದ ರಕ್ಷಿಸು."

ಪ್ರವಾದಿವರ್ಯರ(ಸ) ಬಾಯಿಯಿಂದ ಈ ಪದಗಳು ಹೊರಡುತ್ತಲೇ ಸುರಾಕಾನ ಕುದುರೆ ಮುಗ್ಗರಿಸಿ ಬಿದ್ದಿತು. ಅದು ಹೊಟ್ಟೆಯ ತನಕ ಮರಳಲ್ಲಿ ಹೂತು ಹೋಯಿತು.

ಸುರಾಕಾ ಭಯದಿಂದ ಕಂಪಿಸತೊಡಗಿದ. ತಾನೆಲ್ಲಿ ಮುಹಮ್ಮದ್(ಸ) ಮತ್ತು ಸಂಗಾತಿಗಳ ಆಕ್ರಮಣಕ್ಕೆ ಬಲಿಯಾಗುವೆನೋ ಎಂದು ಅವನು ಭೀತನಾಗಿದ್ದನು. ಅವನಿಗೆ ಓಡಿ ಹೋಗುವ ಯಾವ ದಾರಿಯೂ ಕಾಣುತ್ತಿರಲಿಲ್ಲ. ಮುಹಮ್ಮದ್‌ರನ್ನು(ಸ) ಹಿಡಿಯುವುದು ಸಾಧ್ಯವಿಲ್ಲವೆಂಬುದು ಅವನಿಗೆ ಖಾತ್ರಿಯಾಗಿತ್ತು. ಈಗ ಪ್ರವಾದಿವರ್ಯರಿಗೆ(ಸ) ಶರಣಾಗಿ ಆತ್ಮ ಸಮರ್ಪಣೆ ಮಾಡುವುದೇ ಕ್ಷೇಮವೆಂದು ಮನಗಂಡು ಹೀಗೆ ಹೇಳಿದನು: "ನಾನು ಜಲಅಶಮ್‌ರ ಮಗ ಸುರಾಕಾ. ತಮ್ಮಿಂದ ನಾನು ಅಭಯ ಯಾಚಿಸುತ್ತೇನೆ. ನನಗೆ ನನ್ನ ಮಾತು ಹೇಳುವ ಅವಕಾಶ ಕೊಡಿ. ಅಲ್ಲಾಹನಾಣೆ! ನಾನು ತಮಗೇನೂ ಹಾನಿ ಮಾಡಲಾರೆ. ತಮಗೆ ಅಪ್ರಿಯವಾಗುವ ಯಾವ ಕೃತ್ಯವನ್ನೂ ಎಸಗಲಾರೆ."

ಮುಹಮ್ಮದ್(ಸ) ಪ್ರಾರ್ಥಿಸಿದರು. ಕುದುರೆಯು ನೆಲ ಬಿಟ್ಟು ಎದ್ದಿತು. ಸುರಾಕಾ ಮುಹಮ್ಮದ್‌ರ(ಸ) ಸಮೀಪಕ್ಕೆ ಬಂದನು. ಮುಹಮ್ಮದ್‌ರ(ಸ) ಕಾಂತಿಯುತ ಮುಖವನ್ನು ಕಂಡು ಅತ್ಯಂತ ಪ್ರಭಾವಿತನಾಗಿ ಹೀಗೆ ಹೇಳಿದ:

"ತಮ್ಮ ಗೋತ್ರದವರು ತಮ್ಮನ್ನು ಸೆರೆಹಿಡಿದವರಿಗೆ ಇನ್ನೂರು ಒಂಟೆಗಳ ಬಹುಮಾನವನ್ನು ಘೋಷಿಸಿ ಅನೇಕ ಜನರನ್ನು ತಮ್ಮ ಹಿಂದೆ ಬೀಳುವಂತೆ ಮಾಡಿದರು. ನಾನು ಇನ್ನೂರು ಒಂಟೆಗಳ ಆಶೆಯಿಂದ ತಮ್ಮನ್ನು ಬೆಂಬತ್ತಿ ಹೊರಟಿದ್ದೆ. ಅನೇಕ ಜನರು ಇದೇ ಆಶೆಯಿಂದ ಮಕ್ಕಾದ ಹೆದ್ದಾರಿಯಲ್ಲಿ ತಮ್ಮನ್ನು ಹುಡುಕಾಡುತ್ತಿದ್ದಾರೆ. ತಾವು ಬಯಸಿದರೆ ತಮ್ಮ ಯಾತ್ರೆಯ ಎಲ್ಲ ಅವಶ್ಯಕತೆಗಳನ್ನೂ ನಾನು ಒದಗಿಸುತ್ತೇನೆ."

ಮುಹಮ್ಮದ್(ಸ): "ನನಗೆ ಯಾವುದೇ ವಸ್ತುವಿನ ಅಗತ್ಯವಿಲ್ಲ. ನೀನು ನಮ್ಮ ಬಗ್ಗೆ ಯಾರಿಗೂ ಸುಳಿವು ನೀಡದಿದ್ದರೆ ಸಾಕು."

ಸುರಾಕಾ: "ತಾವು ನಿಶ್ಚಿಂತರಾಗಿರಿ. ತಮ್ಮನ್ನು ಹಿಂಬಾಲಿಸುತ್ತಿರುವವರನ್ನು ತಡೆಯುವುದು ನನ್ನ ಕೆಲಸ. ನನಗೆ ಒಂದು ಅಭಯ ಪತ್ರವನ್ನು ಮಾತ್ರ ಕೊಟ್ಟು ಬಿಡಿ."

ಮುಹಮ್ಮದ್‌ರ(ಸ) ಆಜ್ಞೆಯ ಮೇರೆಗೆ ಆಮಿರ್ ಬಿನ್ ಫುಹೈರ ಸುರಾಕಾರಿಗೆ ಒಂದು ಅಭಯ ಪತ್ರವನ್ನು ಬರೆದು ಕೊಟ್ಟರು. ಸುರಾಕಾ ಅದನ್ನು ತನ್ನ ಜೇಬಿನಲ್ಲಿ ಭದ್ರವಾಗಿರಿಸಿ, "ಅಲ್ಲಾಹನ ಸಂದೇಶವಾಹಕರೇ! ತಮಗೆ ಇಷ್ಟ ಬಂದುದನ್ನು ನನಗೆ ಆಜ್ಞಾಪಿಸಿರಿ" ಎಂದನು.

"ಇಲ್ಲೇ ನಿಂತು ಯಾರೂ ನಮ್ಮನ್ನು ತಲುಪದಂತೆ ನೋಡಿಕೊಂಡರೆ ಸಾಕು" ಎಂದರು ಪ್ರವಾದಿ(ಸ). ಅವನು ಹಿಂತಿರುಗಲು ಅನುವಾದಾಗ ಮತ್ತೆ ಹೀಗೆ ಹೇಳಿದರು:

"ಸುರಾಕಾ! ನೀವು ಕಿಸ್ರಾ(ಇರಾನ್‌ನ ದೊರೆ)ರ ಕಂಕಣವನ್ನು ಧರಿಸುವಾಗ ನಿಮಗೆ ಹೇಗೆನಿಸಬಹುದು?"

ಸುರಾಕಾ ಆಶ್ಚರ್ಯಚಕಿತನಾಗಿ ಹೀಗೆ ಉದ್ಗರಿಸಿದನು: "ಇರಾನ್‌ನ ಚಕ್ರವರ್ತಿ ಕಿಸ್ರಾರ ಕಂಕಣವನ್ನು ನಾನು ಧರಿಸುವುದೇ?"

"ಹೌದು, ಇರಾನ್‌ನ ರಾಜ ಹರ್ಮುರ್ಝ್‌ನ ಕಂಕಣವನ್ನು ನೀವು ಧರಿಸುವ ಕಾಲ ಬರಲಿಕ್ಕಿದೆ."

ಇದನ್ನು ಕೇಳಿ ಸುರಾಕಾ ಹಿಂತೆರಳಿದನು. ಮುಹಮ್ಮದ್‌ರನ್ನು(ಸ) ಬೆನ್ನಟ್ಟುವವರನ್ನೆಲ್ಲಾ, ತಾನು ಮುಹಮ್ಮದ್(ಸ) ಈ ಕಡೆ ಹೋಗುತ್ತಿಲ್ಲವೆಂಬುದನ್ನು ಖಾತ್ರಿಪಡಿಸಿ ಬಂದಿರುವೆನೆಂದು ಹೇಳಿ ಹಿಂತಿರುಗಿಸುತ್ತಾ ಸಾಗಿದನು.

## ಮಅಬದ್‌ರ ಸಾಕ್ಷ್ಯ

ಕುದೈದ್ ಮರುಭೂಮಿಯಲ್ಲಿ ಒಂದೆಡೆ ಕೆಲವು ಡೇರೆಗಳು ಕಾಣಿಸುತ್ತವೆ. ಅಲ್ಲೊಂದು ಡೇರೆಯಲ್ಲಿ ಉಮ್ಮು ಮಅಬದ್ ಎಂಬೋರ್ವ ಮಹಿಳೆ ವಾಸಿಸುತ್ತಾಳೆ. ತನ್ನ ಔದಾರ್ಯ ಮತ್ತು ಅತಿಥಿ ಸತ್ಕಾರಕ್ಕೆ ಆಕೆ ಬಹಳ ಪ್ರಸಿದ್ಧಿ ಪಡೆದಿದ್ದಳು.

ಮುಹಮ್ಮದ್(ಸ) ಮದೀನಾದ ಹಾದಿಯಲ್ಲಿ ಅಲ್ಲಿಗೆ ತಲುಪಿದಾಗ ಸ್ವಲ್ಪ ಹೊತ್ತು ವಿಶ್ರಾಂತಿಗಾಗಿ ಇಳಿದರು. ಉಮ್ಮು ಮಅಬದ್‌ರ ಬಳಿ ಯಾವ ಆಹಾರ ಪದಾರ್ಥವೂ ಇರಲಿಲ್ಲ. ಆಡುಗಳೆಲ್ಲ ಮೇಯಲು ಹೋಗಿದ್ದುದರಿಂದ ಹಾಲು ಕೂಡಾ ಮನೆಯಲ್ಲಿರಲಿಲ್ಲ. ಒಂದು ಸಣಕಲು ಆಡು ಡೇರೆಯಲ್ಲಿ ಕಟ್ಟಿಹಾಕಲ್ಪಟ್ಟಿತ್ತು. ಅದಕ್ಕೆ ಮೇಯಲು ಹೋಗುವಷ್ಟು ತ್ರಾಣವಿರಲಿಲ್ಲ.

ಮುಹಮ್ಮದ್(ಸ) ಅವರ ದೃಷ್ಟಿ ಆ ಆಡಿನ ಮೇಲೆ ಬೀಳುತ್ತದೆ. ಯಾತ್ರೆಯ ದಣಿವು ಮತ್ತು ತೀಕ್ಷ್ಣ ದಾಹವು ಅವರನ್ನು ಕಾಡುತ್ತಿತ್ತು. ಪ್ರವಾದಿ(ಸ) ಆ ಸಣಕಲು ಆಡನ್ನು ಮನೆಯೊಡತಿಯ ಅನುಮತಿ ಪಡೆದು ಸ್ವತಃ ಕರೆಯುತ್ತಾರೆ. ಅದರ ಹೊಟ್ಟೆ ಮತ್ತು ಕೆಚ್ಚಲನ್ನು ಸವರಿ ಪ್ರಾರ್ಥಿಸುತ್ತಾರೆ:

"ಯಾ ಅಲ್ಲಾಹ್! ಈ ಮಹಿಳೆಯ ಆಡುಗಳನ್ನು ಸಮೃದ್ಧಗೊಳಿಸು."

ತರುವಾಯ 'ಬಿಸ್ಮಿಲ್ಲಾಹ್' ಎನ್ನುತ್ತಾ ಒಂದು ತಂಬಿಗೆಯಲ್ಲಿ ಹಾಲು ಕರೆಯಲಾರಂಭಿಸಿದರು. ಎಲ್ಲರೂ ತೃಷೆ ಆರುವ ತನಕ ಕುಡಿಯಬಲ್ಲಷ್ಟು ಹಾಲು ಸಿಕ್ಕಿತು. ಮೊತ್ತ ಮೊದಲು ಅದನ್ನು ಉಮ್ಮು ಮಅಬದ್ ಅವರಿಗೇ ಕುಡಿಸಲಾಯಿತು. ಎಲ್ಲರೂ ಕುಡಿದಾದ ಬಳಿಕವೇ ಪ್ರವಾದಿ(ಸ) ಕುಡಿದರು. ಆ ಬಳಿಕ ಮತ್ತೊಮ್ಮೆ ತಂಬಿಗೆ ತುಂಬ ಹಾಲು ಕರೆದು ಉಮ್ಮು ಮಅಬದ್‌ರಿಗೆ ಕೊಡುತ್ತಾ ಅವರ ಪತಿಗೆ ಕೊಡುವಂತೆ ಮುಹಮ್ಮದ್(ಸ) ವಿನಂತಿಸುತ್ತಾರೆ.

ಯಾತ್ರಾ ತಂಡವು ತನ್ನ ಯಾತ್ರೆಯನ್ನು ಮುಂದುವರಿಸುತ್ತದೆ.

ಅಬೂ ಮಅಬದ್ ಮನೆಗೆ ಬಂದವರೇ ತಂಬಿಗೆ ತುಂಬಾ ಹಾಲು ಕಂಡು ಆಶ್ಚರ್ಯಚಕಿತರಾಗುತ್ತಾರೆ. ಓರ್ವ ಮಹಾನ್ ವ್ಯಕ್ತಿ ಅಲ್ಲಿಗೆ ಬಂದಿದ್ದರೆಂದೂ ಅವರ ಅನುಗ್ರಹದಿಂದ ತಮ್ಮ ಸಣಕಲು ಆಡಿನಿಂದ ಆ ಹಾಲು ದೊರೆಯಿತೆಂದೂ ಉಮ್ಮು

ಮಅಬದ್ ಹೇಳುತ್ತಾರೆ. ಇಷ್ಟು ಕೇಳಿದ್ದೇ ತಡ. ಅಬೂ ಮಅಬದ್ ಉದ್ಗರಿಸುತ್ತಾರೆ: "ಅವರು ನಮಗೆ ಬೇಕಾಗಿರುವ ಕುರೈಶರ ವ್ಯಕ್ತಿಯೇ ಆಗಿರಬೇಕು. ಸ್ವಲ್ಪ ಅವರ ರೂಪದ ವರ್ಣನೆ ಮಾಡು."

ಆಗ ಉಮ್ಮು ಮಅಬದ್ ಮುಹಮ್ಮದ್‌ರ(ಸ) ರೂಪವನ್ನು ಈ ರೀತಿ ವರ್ಣಿಸುತ್ತಾರೆ: "ಪಾವನ ವ್ಯಕ್ತಿತ್ವ, ವಿಶಾಲ ಮುಖ, ಪ್ರಿಯವಾಗುವ ನಡತೆ, ಹೊಟ್ಟೆ ಉಬ್ಬಿಲ್ಲ, ತಲೆ ಕೂದಲು ಬಿದ್ದಿಲ್ಲ, ಸುಂದರ ವದನ, ಕಣ್ಣುಗಳು ವಿಶಾಲವಾಗಿ ಕಪ್ಪಾಗಿದ್ದುವು, ಉದ್ದನೆಯ ಮತ್ತು ದಟ್ಟ ಕೇಶ, ಸ್ವರದಲ್ಲಿ ಘನತೆ, ಎತ್ತರವಾದ ಕುತ್ತಿಗೆ, ಕಾಂತಿಯುತ ಕಣ್ಣಗೊಂಬೆ, ತೆಳುವಾದ ಮತ್ತು ದಟ್ಟವಾದ ಹುಬ್ಬುಗಳು, ಕಪ್ಪಾದ ಗುಂಗುರು ಕೂದಲು, ಘನ ಗಾಂಭೀರ್ಯವಾದ ಮಾತು, ಮನಮೋಹಕ ನೋಟ, ಹತ್ತಿರದಿಂದ ನೋಡಿದರೆ ಮೃದು ಭಾಷೆ, ಸುಂದರ ಮತ್ತು ಮಧುರ ವಾಣಿ, ಸ್ಪಷ್ಟ ಪದಗಳು, ಆಯ್ದ ಪದಗಳು, ಸಂಭಾಷಣೆ ಮುತ್ತಿನ ಮಾಲೆಯಂತೆ, ಮಧ್ಯಮ ಎತ್ತರ, ನಿಕೃಷ್ಟವೆನಿಸುವಷ್ಟು ಕುಳ್ಳನೂ ಅಲ್ಲ, ದ್ವೇಷಿಸುವಷ್ಟು ನೀಳಕಾಯನೂ ಅಲ್ಲ. ಸದಾ ಅವರನ್ನು ಸುತ್ತುವರಿದಿರುವಂತಹ ಸಂಗಾತಿಗಳು. ಅವರೇನಾದರೂ ಹೇಳಿದರೆ ಮೌನವಾಗಿ ಆಲಿಸುತ್ತಾರೆ. ಆಜ್ಞಾಪಿಸಿದರೆ ಚಾಚೂ ತಪ್ಪದೆ ಪಾಲಿಸುತ್ತಾರೆ. ಸದಾ ಅವರ ಸೇವೆಯಲ್ಲಿ ನಿರತ ರಾಗಿರುವವರು, ವಿಧೇಯರು, ಮಿತಭಾಷಿಗಳು."

ಇದನ್ನು ಕೇಳಿ ಅಬೂ ಮಅಬದ್ ಹೀಗೆ ಹೇಳುತ್ತಾರೆ: "ಹೌದು. ಇದು ನಾವು ಕೇಳುತ್ತಾ ಬಂದಿರುವ ಕುರೈಶರ ಅದೇ ವ್ಯಕ್ತಿ. ನಾನು ಅವರನ್ನು ಭೇಟಿಯಾದರೆ ಅವರ ಜೊತೆ ಸೇರಿ ಅವರಿಗೆ ಬೆಂಬಲ ನೀಡುವೆ. ಸಂದರ್ಭ ಸಿಕ್ಕಿದರೆ ಅದಕ್ಕಾಗಿ ಖಂಡಿತ ಪ್ರಯತ್ನಿಸುವೆ."

## ಕುಬಾದಲ್ಲಿ ಸ್ವಾಗತ

ಮಕ್ಕಾದಿಂದ ಯಸ್ರಿಬ್‌ನ ಕಡೆಗೆ ಮುಹಮ್ಮದ್‌ರ(ಸ) ಪ್ರಯಾಣದ ಸುದ್ದಿ ಯಸ್ರಿಬ್‌ನ ಕಣಕಣಕ್ಕೂ ತಲುಪಿತ್ತು. ಅಲ್ಲಿನ ಪ್ರತಿಯೊಬ್ಬ ಪ್ರಜೆಯೂ ಅವರನ್ನು ಅತ್ಯಂತ ಕಾತರದಿಂದ ಕಾಯುತ್ತಿದ್ದನು. ಮುಹಮ್ಮದ್‌ರ(ಸ) ಅನುಯಾಯಿಗಳು ಉತ್ಸಾಹ ಮತ್ತು ಕಾತರದಿಂದ ನಿರೀಕ್ಷಿಸುತ್ತಿದ್ದರು. ಮದೀನಾದಿಂದ ದಕ್ಷಿಣಕ್ಕೆ ಮೂರು ಮೈಲಿ ದೂರದಲ್ಲಿ ಮಕ್ಕಾದ ಹೆದ್ದಾರಿಯಲ್ಲಿರುವ ಕುಬಾ ಎಂಬ ಊರಿನಲ್ಲಿ ಜನರು ಮುಹಮ್ಮದ್‌ರಿಗಾಗಿ(ಸ) ಕಾಯುತ್ತಿರುವರು.

ಇಂದು ಪ್ರವಾದಿತ್ವದ 13ನೆಯ ವರ್ಷ. ಇತಿಹಾಸದ ಒಂದು ಘಟ್ಟವು ಮುಕ್ತಾಯಗೊಂಡು ಇನ್ನೊಂದು ಘಟ್ಟವು ಆರಂಭವಾಗುತ್ತಿದೆ. ಪ್ರವಾದಿವರ್ಯರ(ಸ) ಮಕ್ಕಾ ಜೀವನವು ಕೊನೆಗೊಂಡು ಮದೀನಾ ಜೀವನ ಆರಂಭಗೊಂಡಿದೆ. ಸೋಮವಾರದ ದಿನ ಪ್ರವಾದಿ(ಸ) ಮದೀನಾಕ್ಕೆ ಆಗಮಿಸುತ್ತಾರೆ.

ಕುಬಾದ ಅತ್ಯುನ್ನತ ಕಟ್ಟಡದ ಕಿಟಕಿಯ ಮೂಲಕ ಓರ್ವ ಯಹೂದಿ ನೋಡುತ್ತಿದ್ದಾನೆ. ಒಮ್ಮೆಲೇ ಅವನ ದೃಷ್ಟಿಯು ಸ್ಥಂಭೀಭೂತವಾಯಿತು. ಹೆದ್ದಾರಿಯಲ್ಲಿ ಅವನಿಗೆ ಒಂದು ಒಂಟೆಯ ಮೇಲೆ ಇಬ್ಬರು ಕಾಂತಿಯುತ ಮುಖದವರು ಸವಾರರಾಗಿ ಬರುತ್ತಿರುವುದು ಕಾಣಿಸಿತು. ಹಿಂದಿನ ಸವಾರನು ಮುಂದೆ ಕುಳಿತವರಿಗೆ ನೆರಳು ಮಾಡಿದ್ದಾನೆ. ಅದರ ಸ್ವಲ್ಪ ಹಿಂದೆ ಇನ್ನೊಂದು ಒಂಟೆಯಿದೆ. ಅದರ ಮೇಲೂ ಇಬ್ಬರು ಸವಾರರಾಗಿ ದ್ದಾರೆ. ಅವರ ದೃಷ್ಟಿ ಈಗ ಮತ್ತೆ ಮೊದಲಿನ ಒಂಟೆಯ ಕಡೆಗೆ ಹರಿಯುತ್ತದೆ. "ಹೌದು, ಅದು ಮುಸ್ಲಿಮರ ನಾಯಕರಾದ ಮುಹಮ್ಮದ್ ಬಿನ್ ಅಬ್ದುಲ್ಲಾ(ಸ) ಆಗಿರುವರು."

ಉರಿ ಬಿಸಿಲಿಗೆ ಕುಬಾದ ಪರಿಸರದಲ್ಲಿರುವ ಎಲ್ಲ ವಸ್ತುಗಳೂ ಸುಡುತ್ತಿದೆ. ಬಿಸಿಲಿನಿಂದ ರಕ್ಷಣೆ ಪಡೆಯಲಿಕ್ಕಾಗಿ ಹಕ್ಕಿಗಳೂ ಮರದ ಗೆಲ್ಲುಗಳನ್ನು ಆಶ್ರಯಿಸಿವೆ. ಎಲ್ಲೂ ಒಂಟೆ ಅಥವಾ ಕುರಿಯ ಮಂದೆ ಕಾಣಸಿಗುವುದಿಲ್ಲ. ಯಹೂದಿಗೆ ಅದು ಮುಹಮ್ಮದ್(ಸ) ಬರುತ್ತಿರುವುದೆಂದು ಖಾತ್ರಿಯಾದ ಕೂಡಲೇ ಆತ ಈ ರೀತಿ ಕೂಗಿ ಹೇಳುತ್ತಾನೆ: "ಓ ಬನೀ ಕೀಲ. ಅದೋ ಅಲ್ಲಿ ನಿಮ್ಮ ಸರದಾರರು ಬರುತ್ತಿದ್ದಾರೆ."

ಈ ಸ್ವರ ಕೇಳುತ್ತಲೇ ಕುಬಾದಲ್ಲಿ ವಾಸವಾಗಿರುವ ಅಮ್ರ್ ಬಿನ್ ಔಫ್ ತಕ್ಬೀರ್ ನಾದ ಮೊಳಗಿಸುತ್ತಾರೆ. ಕುಬಾದ ಪರಿಸರವು 'ಅಲ್ಲಾಹು ಅಕ್ಬರ್' ಎಂಬ ಧ್ವನಿಯಿಂದ ಕಂಪಿಸುತ್ತದೆ. ಜನರು ತಮ್ಮ ನೆಚ್ಚಿನ ನಾಯಕರನ್ನು ಸ್ವಾಗತಿಸಲು ಮನೆಗಳಿಂದ ಕುಣಿದಾಡುತ್ತಾ ಹೊರಡುತ್ತಾರೆ.

ಕುಬಾದ ಮುಹಾಜಿರ್ ಮತ್ತು ಅನ್ಸಾರ್‌ಗಳು ಪ್ರವಾದಿವರ್ಯರ(ಸ) ಸ್ವಾಗತಕ್ಕೆ ಸೇರಿದ್ದರು. ಅಮ್ರ್ ಬಿನ್ ಔಫ್ ಇದೇ ಊರಿನವರು. ಅವರು ಆಯುಧಗಳಿಂದ ಅಲಂಕೃತರಾಗಿ ಬಹಳ ಠೀವಿಯಿಂದ ಬಂದಿದ್ದರು. ಪ್ರವಾದಿವರ್ಯರ(ಸ) ನಿರೀಕ್ಷೆಯ ಘಳಿಗೆಗಳನ್ನು ಅವರು ಬಹಳ ನೋವಿನಿಂದ ಕಳೆದಿದ್ದರು. ಈಗ ತಮ್ಮ ಸರದಾರರನ್ನು ಕಣ್ಣ ಮುಂದೆಯೇ ಕಂಡು ಅವರಿಗೆ ಎಲ್ಲಿಲ್ಲದ ಸಂತೋಷವಾಗಿತ್ತು. ಅನ್ಸಾರ್‌ಗಳ ತಂಡವು ಮುಂದಿನ ಸಾಲುಗಳಲ್ಲಿತ್ತು. ಆದರೆ ಅವರು ಈ ಮೊದಲು ಪ್ರವಾದಿ ವರ್ಯರನ್ನು(ಸ) ಕಂಡಿರಲಿಲ್ಲ. ಆದ್ದರಿಂದ ಅವರು ಅಬೂಬಕರ್‌ರಿಗೆ(ರ) ಮೊದಲು ಸಲಾಮ್ ಹೇಳುತ್ತಾರೆ. ಅವರು ಪ್ರವಾದಿವರ್ಯರಿಗಿಂತ(ಸ) ಪ್ರಾಯದಲ್ಲಿ ಎರಡು ವರ್ಷ ಚಿಕ್ಕವರಾಗಿದ್ದರೂ ಕೃಶಕಾಯರಾಗಿದ್ದುದರಿಂದ ಮತ್ತು ಕೂದಲು ಬಿಳಿಯಾಗಿದ್ದುದರಿಂದ ಅವರಿಗಿಂತ ಹೆಚ್ಚು ಪ್ರಾಯದವರಂತೆ ಕಾಣಿಸುತ್ತಿದ್ದರು.

ಅನ್ಸಾರ್‌ಗಳ ಗೊಂದಲವನ್ನು ಅರಿತ ಅಬೂಬಕರ್(ರ) ಅದನ್ನು ನೀಗಿಸಲಿಕ್ಕಾಗಿ ತಮ್ಮ ಶಾಲಿನಿಂದ ಪ್ರವಾದಿವರ್ಯರಿಗೆ(ಸ) ನೆರಳು ಮಾಡುತ್ತಾರೆ. ತಮ್ಮ ನಾಯಕರಾರೆಂದು ತಿಳಿಯಲು ಇದು ಅನ್ಸಾರ್‌ಗಳಿಗೆ ಸಹಕಾರಿಯಾಯಿತು. ಈ ಜನರು ಮೊದಲು ಪ್ರವಾದಿ ಯವರಿಗೆ(ಸ) ಸಲಾಮ್ ಹೇಳಿ ಆ ಬಳಿಕ ಅಬೂಬಕರ್‌ರನ್ನು(ರ) ಅಭಿನಂದಿಸುತ್ತಿದ್ದರು.

ಸ್ವಾಗತಿಸುವವರ ಸಂಖ್ಯೆಯು ಐನೂರರ ತನಕ ತಲುಪಿದೆ. ಅವರ ಜತೆಗೆ ಮುಹಮ್ಮದ್(ಸ) ಝುಹರ್‌ನ ವೇಳೆಗೆ ಕುಬಾದಲ್ಲಿ ಪ್ರವೇಶಿಸುತ್ತಾರೆ. ತಕ್ಬೀರ್‌ನ ನಾದವು ಪರ್ವತಗಳಿಂದ ಮಾರ್ದನಿಸುತ್ತಿದೆ. ಊರಿನ ಬೀದಿಗಳಲ್ಲಿ ಮಹಿಳೆಯರು, ಮಕ್ಕಳು ಮತ್ತು ವೃದ್ಧರು ಕಿಕ್ಕಿರಿದು ನೆರೆದಿದ್ದರು. ಲೋಕಾನುಗ್ರಹಿಯನ್ನು ಒಮ್ಮೆ ದರ್ಶಿಸಬೇಕೆಂದು ಅವರು ತಂತಮ್ಮ ಮನೆಗಳಿಂದ ಹೊರಟು ಬಂದಿದ್ದರು. ಅವರ ಅನುಗ್ರಹದಿಂದಾಗಿ ಅವರ ಪರಸ್ಪರ ಭಿನ್ನಾಭಿಪ್ರಾಯಗಳು ಕೊನೆಗೊಂಡಿದ್ದುವು. ಅವರ ಕೌಟುಂಬಿಕ ವೈರವು ಮುಕ್ತಾಯಗೊಂಡಿತ್ತು. ಅವರ ಪ್ರತೀಕಾರದ ಅಗ್ನಿಯು ಶಮನಗೊಂಡಿತ್ತು.

## ಪ್ರಥಮ ಮಸೀದಿ

ಕುಬಾದ ಒಂದು ಮೂಲೆಯಿಂದ ಯಾರೋ ಮಧುರ ಕಂಠದಿಂದ ಪಠಿಸುತ್ತಿರುವುದು ಕೇಳಿಸುತ್ತದೆ:

ಮಸೀದಿ ನಿರ್ಮಿಸಿದವನು ಜಯಶೀಲನು.
ಕುಳಿತೂ ನಿಂತೂ ಕುರ್‌ಆನ್ ಪಠಿಸುವವನು ಜಯಶೀಲನು.
ರಾತ್ರಿಯಲ್ಲಿ ಆರಾಧನೆಗಾಗಿ ಎಚ್ಚರವಾಗಿರುವವನು ಜಯಶೀಲನು.

ಅದ್ಭುತ ದೃಶ್ಯ! ಕುಲ್‌ಸೂಮ್ ಬಿನ್ ಹದಮ್‌ರ ಭೂಮಿಯಲ್ಲಿ ಸಹಾಬಿಗಳ ಒಂದು ಗುಂಪು ಸೇರಿದೆ. ಒಂದೊಮ್ಮೆ ಆ ಹಿರಿಯರು ಅಲ್ಲಿ ಖರ್ಜೂರದ ತೋಟ ಬೆಳೆಸಿದ್ದರು. ನೆರೆದವರಲ್ಲಿ ಕೆಲವರು ಕಲ್ಲು ತರುತ್ತಿದ್ದಾರೆ. ಇನ್ನು ಕೆಲವರು ಗಾರೆ, ಪಿಕ್ಕಾಸುಗಳಿಂದ ಕಾರ್ಯನಿರತರಾಗಿದ್ದಾರೆ. ಮತ್ತೆ ಕೆಲವರು ಗೋಡೆ ಕಟ್ಟುತ್ತಿದ್ದಾರೆ. ಮುಹಮ್ಮದ್‌ರ(ಸ) ಆಪ್ತ ಸಂಗಾತಿ ಮತ್ತು ಕವಿ ಅಬ್ದುಲ್ಲಾ ಬಿನ್ ರವಾಹ(ರ) ಕಲ್ಲುಗಳನ್ನು ಎತ್ತಿ ತರುತ್ತಾ ತಮ್ಮ ಕವಿತೆಗಳನ್ನು ಸುಮಧುರವಾಗಿ ಹಾಡುತ್ತಾ ಸಾಗುತ್ತಿದ್ದರು. ಮುಹಮ್ಮದ್‌ರು(ಸ) ಕೂಡಾ ಅವರ ಜತೆ ಧ್ವನಿಗೂಡಿಸುತ್ತಾರೆ. ಇದನ್ನು ಕೇಳಿ ಸಹಾಬಿಗಳ ಹೃದಯದಲ್ಲಿ ವಿದ್ಯುತ್ ಸಂಚಾರವಾದಂತಾಗುತ್ತದೆ.

ಇದು ಮದೀನಾದಲ್ಲಿ ನಿರ್ಮಾಣಗೊಂಡ ಪ್ರಥಮ ಮಸೀದಿ. ಪ್ರವಾದಿಯವರೇ(ಸ) ಅದರ ಆಧಾರ ಶಿಲೆ ಇರಿಸಿದರು. ಅದರ ನಿರ್ಮಾಣ ಕಾರ್ಯದಲ್ಲಿ ಅವರು ಓರ್ವ ಕಾರ್ಮಿಕನಂತೆ ದುಡಿದರು. ಪ್ರವಾದಿ(ಸ) ಯಾವುದಾದರೂ ಭಾರವಾದ ಕಲ್ಲನ್ನು ಎತ್ತಿ ತರುವುದನ್ನು ಕಂಡಾಗ ಸಹಾಬಿಗಳು ಅದನ್ನು ಅವರಿಂದ ತೆಗೆದುಕೊಳ್ಳುತ್ತಿದ್ದರು. ಪ್ರವಾದಿ(ಸ) ಪುನಃ ಒಂದು ಭಾರವಾದ ಕಲ್ಲನ್ನು ಎತ್ತಿ ತರುತ್ತಿದ್ದರು. ಆ ಪ್ರಥಮ ಮಸೀದಿಯು ಅತ್ಯಂತ ಸರಳವಾಗಿತ್ತು. ಅದು ನಿರ್ಮಾಣಗೊಂಡಾಗ ಪ್ರವಾದಿವರ್ಯರು(ಸ) ಮತ್ತು ಸಂಗಾತಿಗಳು ಅತ್ಯಧಿಕ ಸಂತೋಷಗೊಳ್ಳುತ್ತಾರೆ.

ಯಾರು ಚೆನ್ನಾಗಿ ವುಝೂ ಮಾಡಿ ಮಸ್ಜಿದುಲ್ ಕುಬಾದಲ್ಲಿ ನಮಾಝ್ ಮಾಡುತ್ತಾರೋ ಅವರಿಗೆ ಉಮ್ರಾ ಮಾಡಿದಷ್ಟು ಪುಣ್ಯ ಲಭಿಸುವುದು.

ಈ ಮಸೀದಿಯಲ್ಲಿಯೇ ಪ್ರವಾದಿವರ್ಯರು(ಸ) ಪ್ರಥಮ ಬಾರಿ ತಮ್ಮ ಸಂಗಾತಿಗಳಿಗೆ ಬಹಿರಂಗವಾಗಿ ನಮಾಝ್ ಮಾಡಿಸಿದರು. ನಮಾಝ್‌ನ ನಂತರ ಮಸ್ಜಿದುಲ್ ಕುಬಾದ ಹೊರಗೆ ಮುಹಮ್ಮದ್‌ರ(ಸ) ಜತೆ ಅವರ ಸಂಗಾತಿಗಳೂ ನೆರೆದಿದ್ದರು. ಎಲ್ಲರೂ ಸಂಭ್ರಮೋಲ್ಲಾಸದಲ್ಲಿದ್ದರು.

ಮಸೀದಿಯಿಂದ ಸುಮಾರು ಐವತ್ತು ಗಜ ದೂರದಲ್ಲಿ ಒಂದು ಬಾವಿ ಇದೆ. ಆದರೆ ಅದರ ನೀರು ಉಪ್ಪಾಗಿತ್ತು. ಸಹಾಬಿಗಳ ದೃಷ್ಟಿ ಆ ಬಾವಿಯತ್ತ ಹರಿಯುತ್ತದೆ. ಆ ಬಾವಿಯ ನೀರು ಸಿಹಿಯಾಗುವಂತೆ ಪ್ರಾರ್ಥಿಸಿರಿ ಎಂದು ಕುಲ್‌ಸೂಮ್(ರ) ಪ್ರವಾದಿವರ್ಯರನ್ನು(ಸ) ವಿನಂತಿಸುತ್ತಾರೆ.

ಪ್ರವಾದಿ(ಸ) ಸಹಾಬಿಗಳ ಜತೆ ಬಾವಿಯ ಬಳಿಗೆ ಹೋಗಿ ಸ್ವಲ್ಪ ಹೊತ್ತು ಪ್ರಾರ್ಥಿಸುತ್ತಾರೆ. ಕೆಲವೇ ಕ್ಷಣಗಳ ಹಿಂದೆ ಉಪ್ಪುನೀರಿನ ಬಾವಿಯಾಗಿದ್ದ ಅದು ಅತ್ಯಂತ ಸಿಹಿನೀರಿನ ಬಾವಿಯಾಗಿ ಮಾರ್ಪಡುತ್ತದೆ. ಸಹಾಬಿಗಳೆಲ್ಲರೂ ಅದರ ನೀರನ್ನು ಕುಡಿಯುತ್ತಾರೆ. ಸಂತೋಷದಿಂದ ಎಲ್ಲರ ಮುಖಗಳೂ ಅರಳುತ್ತವೆ.

ಮಸ್ಜಿದುಲ್ ಕುಬಾದ ಕುರಿತು ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ: "ಆರಂಭದ ದಿನದಿಂದಲೇ ಧರ್ಮನಿಷ್ಠೆಯ ಆಧಾರದಲ್ಲಿ ಸ್ಥಾಪಿತಗೊಂಡಿರುವ ಮಸೀದಿಯೇ ನೀವು (ಆರಾಧನೆಗಾಗಿ) ನಿಲ್ಲಲು ಯೋಗ್ಯವಾದುದು. ಪರಿಶುದ್ಧತೆಯನ್ನು ಬಯಸುವವರು ಅದರಲ್ಲಿ ಇರುತ್ತಾರೆ ಮತ್ತು ಪರಿಶುದ್ಧತೆಯನ್ನು ಬಯಸುವವರೇ ಅಲ್ಲಾಹನಿಗೆ ಪ್ರಿಯರು."

**(ಪವಿತ್ರ ಕುರ್‌ಆನ್, 9:108)**

## ರಾತ್ರಿಯ ಯಾತ್ರಿಕ

ಮಕ್ಕಾದಿಂದ ಮದೀನಾಕ್ಕೆ ಹೋಗುವ ಹೆದ್ದಾರಿಯಲ್ಲಿ ಬಟ್ಟೆಯಿಂದ ಮುಖ ಮರೆಸಿಕೊಂಡು ಓರ್ವ ವ್ಯಕ್ತಿ ಸೊಂಟದಲ್ಲಿ ಖಡ್ಗವನ್ನು ನೇತಾಡಿಸಿ ಅತ್ಯಂತ ಕಠಿಣ ಮಾರ್ಗವನ್ನು ಕಾಲ್ನಡಿಗೆಯಲ್ಲೇ ಕ್ರಮಿಸುತ್ತಿದ್ದಾರೆ. ಒಂದು ಸಣ್ಣ ಸದ್ದು ಕೇಳಿದರೂ ಸರಿ ಅವರ ಕೈ ಸೊಂಟದಲ್ಲಿ ನೇತಾಡುತ್ತಿರುವ ಖಡ್ಗದ ಮೇಲೆ ಹೋಗುತ್ತದೆ. ಪ್ರತಿದಿನ ಸಂಜೆಯ ಹೊತ್ತು ಆರಂಭಿಸಿ ಅವರು ತಮ್ಮ ಯಾತ್ರೆಯನ್ನು ರಾತ್ರೆಯಿಡೀ ಜಾರಿಯಲ್ಲಿರಿಸುತ್ತಿದ್ದಾರೆ. ತಮ್ಮನ್ನು ಯಾರಾದರೂ ಬೆನ್ನಟ್ಟುತ್ತಿರಬಹುದೆಂಬ ಭಯದಿಂದ ಅವರು ದಿನದ ವೇಳೆ ಪ್ರಯಾಣ ಮಾಡುವುದಿಲ್ಲ.

ಇದು ಹ. ಅಲೀ ಬಿನ್ ಅಬೂತಾಲಿಬ್(ರ). ಪ್ರವಾದಿ ಮುಹಮ್ಮದ್‌ರ(ಸ) ಆಪ್ತ ಸಂಗಾತಿ ಮತ್ತು ಸೋದರ. ಹಾಶಿಮ್ ಗೋತ್ರದ ಎಲ್ಲ ಜನರೂ ಪ್ರವಾದಿ ವರ್ಯರಿಗೆ(ಸ) ನೆರವಾಗಲು ನಿರಾಕರಿಸಿದಾಗ ಹ.ಅಲೀಯವರೇ(ರ) ಪ್ರವಾದಿಯ ಬೆಂಬಲಕ್ಕೆ ಮುಂದೆ ಬಂದಿದ್ದರು. "ಪ್ರವಾದಿವರ್ಯರೇ! ನನ್ನ ಕಾಲುಗಳು ಕೃಶವಾಗಿವೆ, ನನ್ನ ಕಣ್ಣುಗಳೂ ನೋಯುತ್ತಿವೆ, ನಾನು ಪ್ರಾಯದಲ್ಲೂ ಎಲ್ಲರಿಗಿಂತಲೂ ಕಿರಿಯವನಾಗಿರುವೆನು. ಆದರೂ

ನಾನು ಖಂಡಿತ ತಮ್ಮ ಬೆಂಬಲಕ್ಕೆ ಇದ್ದೇನೆ" ಎಂದಿದ್ದರು.

ಒಮ್ಮೆ ಪ್ರವಾದಿ(ಸ) ಬನೂ ಹಾಶಿಮ್ ಗೋತ್ರವನ್ನುದ್ದೇಶಿಸಿ, "ಅಲ್ಲಾಹನ ಮಾರ್ಗದಲ್ಲಿ ನಿಮ್ಮ ಪೈಕಿ ಯಾರು ನನಗೆ ನೆರವಾಗುತ್ತಾರೆ?" ಎಂದು ವಿಚಾರಿಸಿದಾಗ ಎಲ್ಲರೂ ಪೂರ್ಣ ಮೌನ ತಾಳಿದ್ದರು. ಆಗ ಹ. ಅಲೀ(ರ) ಎದ್ದು ನಿಂತು ಈ ರೀತಿ ಉತ್ತರಿಸಿದ್ದರು.

ಪ್ರವಾದಿವರ್ಯರು(ಸ) ಹಿಜ್ರತ್‌ಗೆ ಹೊರಡುವ ರಾತ್ರಿ ಇದೇ ಹ. ಅಲೀಯವರನ್ನು(ರ) ತಮ್ಮ ಹಾಸಿಗೆಯಲ್ಲಿ ಮಲಗಿಸಿದ್ದರು. ಆಗ ಅವರ ಮನೆಯನ್ನು ಅವರ ರಕ್ತ ಪಿಪಾಸುಗಳು ಸುತ್ತುವರಿದಿದ್ದರು. ಅಂದು ಆ ಹಾಸಿಗೆಯಲ್ಲಿ ಮಲಗುವುದೆಂದರೆ ತನ್ನನ್ನು ಮೃತ್ಯುದವಡೆಗೆ ಕೊಡುವುದಾಗಿತ್ತು.

ಆಗ ಪ್ರವಾದಿ ಮುಹಮ್ಮದ್‌ರ(ಸ) ಒಂದು ಮಾತು ಹ. ಅಲೀಯವರ(ರ) ಜೀವನದ ಆಸರೆಯಾಗಿತ್ತು: "ಅಲೀ! ಜನರು ನನ್ನಲ್ಲಿ ಜೋಪಾನವಾಗಿಟ್ಟ ಈ ವಸ್ತುಗಳನ್ನೆಲ್ಲಾ ಮರಳಿಸಿ ಯಸ್ರಿಬ್‌ನಲ್ಲಿ ನನ್ನನ್ನು ಬಂದು ಸೇರಬೇಕು."

ಅಲೀ(ರ) ಅಂದು ರಾತ್ರಿಯಿಡೀ ಸತ್ಯನಿಷೇಧಿಗಳ ಮುತ್ತಿಗೆಯಲ್ಲಿ ಮರಣದ ದವಡೆಯಲ್ಲಿ ಕಳೆದರು. ದಿನ ಬೆಳಗಾಗುತ್ತಲೇ ಶತ್ರುಗಳ ಕೈಗೆ ಸಿಕ್ಕಿ ಕಅಬಾ ಭವನದಲ್ಲಿ ಬಂಧನಕ್ಕೊಳಗಾದರು. ಆದರೆ ತಮ್ಮ ನಾಯಕನ ಆಜ್ಞೆಯನ್ನು ಅನುಸರಿಸುವಲ್ಲಿ ಅಸಾಮಾನ್ಯ ಸ್ಥೈರ್ಯ ಮತ್ತು ನಿಷ್ಠೆಯನ್ನು ಪ್ರದರ್ಶಿಸಿದರು. ಮೂರು ದಿನಗಳಲ್ಲಿ ಅವರು ಸತ್ಯ ನಿಷೇಧಿಗಳು ಪ್ರವಾದಿವರ್ಯ ರಲ್ಲಿ(ಸ) ಜೋಪಾನವಾಗಿಟ್ಟಿದ್ದ ಎಲ್ಲ ವಸ್ತು ಒಡವೆಗಳನ್ನೂ ಅಮೂಲ್ಯ ಸಂಪತ್ತನ್ನೂ ಮರಳಿಸಿದರು. ಪ್ರವಾದಿ ಮುಹಮ್ಮದ್‌ರನ್ನು(ಸ) ತಮ್ಮ ಕಠಿಣ ಶತ್ರುವೆಂದು ಪರಿಗಣಿಸುತ್ತಿದ್ದ ವರೂ ತಮ್ಮ ವಿಶ್ವಸ್ಥ ನಿಧಿಗಳನ್ನೂ ಅಮೂಲ್ಯ ವಸ್ತುಗಳನ್ನೂ ಅವರಲ್ಲೇ ಜೋಪಾನವಾಗಿಡುವ ಮೂಲಕ ಅವರ ಸತ್ಯಸಂಧತೆ ಮತ್ತು ಪ್ರಾಮಾಣಿಕತೆಯ ಮೂಕ ಸಾಕ್ಷಿಗಳಾಗಿದ್ದರು.

ಮೂರನೆಯ ದಿನ ಎಲ್ಲ ವಸ್ತುಗಳನ್ನೂ ಅವುಗಳ ವಾರಸುದಾರರಿಗೆ ಮರಳಿಸಿದ ನಂತರ ರಾತ್ರಿಯ ಅಂಧಕಾರದಲ್ಲಿ ಯಸ್ರಿಬ್‌ನ ಕಡೆಗೆ ಪ್ರಯಾಣ ಬೆಳೆಸಿದ್ದರು.

ಮುಹಮ್ಮದ್(ಸ) ಕುಬಾದಿಂದ ಹೊರಗೆ ಬಂದಾಗ ಹ. ಅಲೀ(ರ) ಎದುರಾದರು. ಹರಿದ ಮತ್ತು ಕೊಳೆಯಾದ ಉಡುಪು, ಕಳೆಗುಂದಿದ ಮುಖ, ಮರುಭೂಮಿಯಲ್ಲಿ ಕಾಲ್ನಡಿಗೆಯಲ್ಲಿ ಸುಮಾರು 500 ಕಿ. ಮೀ. ಕ್ರಮಿಸಿ ಬಂದ ಕಾರಣ ಗಾಯಗೊಂಡ ಕಾಲುಗಳು, ಒಡೆದು ಹೋದ ಪಾದಗಳು. ಆದರೆ ಕಣ್ಣುಗಳು ಮನಸ್ಸಿಗೆ ಸಂತೋಷವನ್ನು ಸೂಚಿಸುವಂತೆ ಕಾಂತಿಯುತವಾಗಿದ್ದುವು. ಈ ಅವಸ್ಥೆಯಲ್ಲಿ ಹ. ಅಲೀಯವರನ್ನು(ರ) ತಮ್ಮ ಮುಂದೆ ಕಂಡಾಗ ಪ್ರವಾದಿವರ್ಯರು(ಸ) ಮುಂದುವರಿದು ಅವರನ್ನು ಬಲವಾಗಿ ಆಲಂಗಿಸಿ ಬಹಳ ಹೊತ್ತು ಮುದ್ದಿಸಿದರು. ಅವರ ಸ್ಥಿತಿಯನ್ನು ಕಂಡು ಪ್ರವಾದಿ ವರ್ಯರಿಗೆ(ಸ) ತಮ್ಮ ದುಃಖಾಶ್ರುಗಳನ್ನು ತಡೆಯಲಾಗಲಿಲ್ಲ. ಇದನ್ನು ಕಂಡು ನೆರೆದ ಜನರೆಲ್ಲರ ಕಣ್ಣುಗಳೂ ತೇವಗೊಂಡುವು.

# ಪ್ರಥಮ ಜುಮಾ ಪ್ರವಚನ

ಇಂದು ಹಿ.ಶ. 1ರ ರಬೀಉಲ್ ಅವ್ವಲ್ ತಿಂಗಳ 12ನೇ ದಿನಾಂಕ (ಕ್ರಿ.ಶ. 624 ಸೆಪ್ಟೆಂಬರ್ 24) ಶುಕ್ರವಾರದ ದಿನ. ಮುಹಮ್ಮದ್(ಸ) ಕುಬಾಗೆ ಬಂದು 5 ದಿನಗಳು ಕಳೆದಿವೆ. ಸೋಮವಾರದಂದು ಅವರು ಅಲ್ಲಿ ತಲುಪಿದ್ದರು. ಇಂದು ಕುಬಾದಿಂದ ಮದೀನಾಕ್ಕೆ ಹೊರಡುವ ದಿನವಾಗಿತ್ತು. ಮುಂಜಾನೆಯೇ ಪ್ರವಾದಿ(ಸ) ಯಸ್ರಿಬ್‌ನ ಕಡೆಗೆ ಹೊರಟರು. ರಸ್ತೆಯ ಇಕ್ಕೆಲಗಳಲ್ಲಿಯೂ ಅನ್ಸಾರ್ ಮತ್ತು ಮುಹಾಜಿರ್‌ಗಳು ನೆರೆದಿದ್ದರು. ತಕ್ಬೀರ್ ನಾದವು ಅಲ್ಲಲ್ಲಿ ಮೊಳಗುತ್ತಿತ್ತು. ಪ್ರವಾದಿವರ್ಯರ(ಸ) ಆಪ್ತ ಸಂಗಾತಿಗಳ ಒಂದು ದೊಡ್ಡ ಸಮೂಹ ಅವರ ಜೊತೆಯಲ್ಲಿತ್ತು. ಒಂಟೆಯು ಬಹಳ ನಿಧಾನವಾಗಿ ಚಲಿಸುತ್ತಿದೆ. ಜನಸಂದಣಿಯಿಂದಾಗಿ ಅದರ ಮಾರ್ಗವು ಬಹಳ ಕಿರಿದಾಗಿದೆ. ಆದ್ದರಿಂದ ಈ ತಂಡವು ಸಾಲಿಮ್ ಗೋತ್ರದವರ ಊರಿಗೆ ತಲುಪಿದಾಗ ಜುಮಾ ನಮಾಝ್‌ನ ವೇಳೆಯಾಯಿತು. ಆದ್ದರಿಂದ ಅಲ್ಲಿನ ಗುಬೈಬ್ ಎಂಬ ಮಸೀದಿಯಲ್ಲಿ ಪ್ರವಾದಿ ವರ್ಯರ(ಸ) ನೇತೃತ್ವದಲ್ಲಿ ಪ್ರಥಮ ಜುಮಾ ನಮಾಝ್ ನೆರವೇರಿಸಲಾಗುತ್ತದೆ. ಅಂದಿನಿಂದ ಈ ಮಸೀದಿಯನ್ನು 'ಮಸ್ಜಿದುಲ್ ಜುಮಾ' ಎಂದೇ ಕರೆಯಲಾಗುತ್ತದೆ. ಯಸ್ರಿಬ್ ನಾಡಿನಲ್ಲಿ ಪ್ರವಾದಿ ಮುಹಮ್ಮದ್‌ರ(ಸ) ನೇತೃತ್ವದಲ್ಲಿ ಪ್ರಥಮ ಜುಮಾ ನೆರವೇರಿಸಿದ ಶ್ರೇಷ್ಠತೆಯು ಇದೇ ಮಸೀದಿಗೆ ಸಲ್ಲುತ್ತದೆ.

ಈ ಸಂದರ್ಭದಲ್ಲಿ ಮುಹಮ್ಮದ್(ಸ) ನೀಡಿದ ಜುಮಾ ಖುತ್‌ಬಾ(ಪ್ರವಚನ)ವು ಅವರ ಪ್ರಪ್ರಥಮ ಪ್ರವಚನವಾಗಿತ್ತು. ಅವರು ಅದರಲ್ಲಿ ಹೀಗೆ ಹೇಳಿದರು:

"ಸರ್ವ ಸ್ತುತಿ-ಸ್ತೋತ್ರಗಳು ಅಲ್ಲಾಹನಿಗೆ. ನಾನು ಅವನನ್ನೇ ವಂದಿಸುತ್ತೇನೆ. ಅವನಿಂದಲೇ ಸಹಾಯ ಯಾಚಿಸುತ್ತೇನೆ. ಅವನಿಂದಲೇ ಕ್ಷಮಾಯಾಚನೆ ಮಾಡುತ್ತೇನೆ. ಅವನಿಂದಲೇ ಸನ್ಮಾರ್ಗದರ್ಶನವನ್ನು ಬೇಡುತ್ತೇನೆ. ಅವನ ಮೇಲೆ ವಿಶ್ವಾಸವಿಡುತ್ತೇನೆ. ನಾನು ಅವನನ್ನು ನಿರಾಕರಿಸುವುದಿಲ್ಲ. ಯಾರು ಅವನನ್ನು ನಿರಾಕರಿಸುತ್ತಾರೋ ಅವನು ನನ್ನ ಶತ್ರುವೆಂದು ಪರಿಗಣಿಸುತ್ತೇನೆ. ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯವಹಿಸುತ್ತೇನೆ. ಅವನು ಏಕೈಕನು. ಅವನಿಗಾರೂ ಸಹಭಾಗಿಗಳಿಲ್ಲ. ಮುಹಮ್ಮದ್(ಸ) ಅಲ್ಲಾಹನ ದಾಸನೆಂದೂ ಅವನ ಸಂದೇಶವಾಹಕನೆಂದೂ ನಾನು ಸಾಕ್ಷ್ಯವಹಿಸುತ್ತೇನೆ. ಒಂದು ದೀರ್ಘ ಅವಧಿಯ ತನಕ ಪ್ರವಾದಿಗಳ ಆಗಮನವೇ ನಿಂತು ಹೋಗಿದ್ದ ಒಂದು ಕಾಲಘಟ್ಟದಲ್ಲಿ ನೈಜ ಜ್ಞಾನದ ಬೆಳಕು ಮಂದವಾದಾಗ, ದುರ್ಮಾರ್ಗವು ವ್ಯಾಪಕವಾದಾಗ, ಜಗತ್ತಿನ ವ್ಯವಸ್ಥೆಯು ಅಸ್ತವ್ಯಸ್ತಗೊಂಡಾಗ, ಪ್ರಳಯ ಕಾಲವು ಸಮೀಪಿಸಿದಾಗ ಮತ್ತು ಪ್ರತಿಯೊಬ್ಬರ ಮರಣವು ಸನ್ನಿಹಿತವಾದಾಗ. ಅವರಿಗೆ ಅಲ್ಲಾಹನು ಸನ್ಮಾರ್ಗದರ್ಶನ, ಜ್ಯೋತಿ ಮತ್ತು ಉಪದೇಶವನ್ನು ನೀಡಿ. ಸಂದೇಶವಾಹಕನಾಗಿ ಮಾಡಿದನು.

ಆದ್ದರಿಂದ ಯಾರು (ಪ್ರವಾದಿಯನ್ನು ನಂಬಿ) ಅಲ್ಲಾಹ್ ಮತ್ತು ಪ್ರವಾದಿಯ

ಅನುಸರಣೆ ಮಾಡಿದನೋ ಅವನು ಸನ್ಮಾರ್ಗವನ್ನು ಹೊಂದುವನು. ಯಾರು (ಪ್ರವಾದಿಯನ್ನು ನಿರಾಕರಿಸಿ) ಅಲ್ಲಾಹ್ ಮತ್ತು ಪ್ರವಾದಿಗೆ ಅವಿಧೇಯತೆ ತೋರುತ್ತಾನೋ ಅವನು ಪಥಭ್ರಷ್ಟನಾಗುತ್ತಾನೆ. ದುರಂತಕ್ಕೆ ಸಿಲುಕುತ್ತಾನೆ ಮತ್ತು ಸನ್ಮಾರ್ಗದಿಂದ ದೂರ ಸರಿದು ಪಥಭ್ರಷ್ಟತೆಯಲ್ಲಿ ಬಹಳ ಮುಂದೆ ಸಾಗುತ್ತಾನೆ. ನಾನು ನಿಮಗೆ ಉಪದೇಶಿಸು ತ್ತೇನೆ ಅಲ್ಲಾಹನನ್ನು ಭಯಪಡಿರಿ. ಒಬ್ಬ ಮುಸ್ಲಿಮನು ಇನ್ನೊಬ್ಬ ಮುಸ್ಲಿಮನಿಗೆ ಮಾಡಬಲ್ಲ ಅತ್ಯುತ್ತಮ ಉಪದೇಶವು ಅವನನ್ನು ಪರಲೋಕದ ಬಂಡವಾಳವನ್ನು ಶೇಖರಿಸಲು ಪ್ರೇರೇಪಿಸುವುದು ಮತ್ತು ಅಲ್ಲಾಹನನ್ನು ಭಯಪಡುತ್ತಿರಲು ಬೋಧಿಸುವು ದಾಗಿದೆ. ಆದ್ದರಿಂದ ಅಲ್ಲಾಹನು ತನ್ನನ್ನು ಭಯಪಡಬೇಕೆಂದು ಆದೇಶಿಸಿದ ರೀತಿಯಲ್ಲಿ ಅಲ್ಲಾಹನನ್ನು ಭಯಪಡಿರಿ. ಇದಕ್ಕಿಂತ ಉತ್ತಮವಾದ ಒಂದು ಉಪದೇಶವಾಗಲಿ, ಇದಕ್ಕಿಂತ ಉತ್ತಮವಾದ ಒಂದು ಸ್ಮರಣೆಯಾಗಲಿ ಇಲ್ಲ. ವಾಸ್ತವದಲ್ಲಿ ಅಲ್ಲಾಹನ ಭಯ-ಭಕ್ತಿಯೊಂದಿಗೆ ಜೀವನ ಸಾಗಿಸುವ ದೇವ ದಾಸನಿಗೆ, ಭಯ-ಭಕ್ತಿಯು ಅವನು ಬಯಸುವ ಪರಲೋಕದ ಸದ್ಗತಿಯನ್ನು ಗಳಿಸಲು ನೈಜ ಸಹಕಾರಿಯಾಗುವುದು.

ಯಾವ ವ್ಯಕ್ತಿಯು ಕೇವಲ ಅಲ್ಲಾಹನ ಸಂಪ್ರೀತಿಗಾಗಿ ಅವನೊಂದಿಗೆ ತನ್ನ ಎಲ್ಲ ವ್ಯಕ್ತ ಮತ್ತು ಗುಪ್ತ ವ್ಯವಹಾರಗಳನ್ನು ಎಲ್ಲ ಸ್ಥಿತಿಗಳಲ್ಲೂ ಉತ್ತಮಪಡಿಸಿಕೊಳ್ಳುತ್ತಾನೋ ಅವನಿಗೆ ಅದರ ಫಲವಾಗಿ ಇಹಲೋಕದಲ್ಲಿ ಖ್ಯಾತಿ ಲಭಿಸುವುದು ಮತ್ತು ಮರಣದ ಬಳಿಕ ಪ್ರತಿಯೊಬ್ಬನೂ ತಾನು ಪರಲೋಕಕ್ಕಾಗಿ ಮಾಡಿದ ತನ್ನ ಸತ್ಕರ್ಮಗಳಿಗಾಗಿ ಅತ್ಯಧಿಕ ಬಯಕೆಯುಳ್ಳವನಾಗಿರುವಾಗ ಅವನು ಸತ್ಕರ್ಮಗಳ ದೊಡ್ಡ ಬಂಡವಾಳವನ್ನೇ ಹೊಂದಿರುವನು. ಅವುಗಳ ಹೊರತು ಇರು ವಂತಹ ದುಷ್ಕರ್ಮಗಳು ತನ್ನಿಂದ ಅತ್ಯಧಿಕ ದೂರವಾಗಲಿ ಎಂದು ಅವನು ಬಯಸು ವನು. ಅಲ್ಲಾಹನು ನಿಮ್ಮನ್ನು ತನ್ನ ಬಗ್ಗೆ ಹೆದರಿಸುತ್ತಾನೆ. ಅಲ್ಲಾಹನು ತನ್ನ ದಾಸರ ಮೇಲೆ ಅತ್ಯಧಿಕ ಕರುಣೆಯುಳ್ಳವನಾಗಿದ್ದಾನೆ.

ಮಾತು ಸತ್ಯವೂ ವಚನ ಪೂರೈಸಲ್ಪಡುವಂತಹದೂ ಆದವನ ಆಣೆ. ಅವನ ಮಾತು ಆಗಿಯೇ ತೀರುವುದು. ಏಕೆಂದರೆ ಆ ಮಹಾಮಹಿಮನು ಸ್ವಯಂ ಹೇಳುತ್ತಾನೆ: ನನ್ನ ಬಳಿ ಮಾತು ಬದಲಾಯಿಸಲ್ಪಡುವುದಿಲ್ಲ. ನಾನು ನನ್ನ ದಾಸರ ಮೇಲೆ ಕಿಂಚಿತ್ತೂ ಅನ್ಯಾಯವೆಸಗು ವವನಲ್ಲ. ಆದ್ದರಿಂದ ಐಹಿಕ ಮತ್ತು ಪಾರತ್ರಿಕವಾದ ಎಲ್ಲ ರಹಸ್ಯ, ಬಹಿರಂಗ ವ್ಯವಹಾರಗಳಲ್ಲಿ ಅಲ್ಲಾಹನನ್ನು ಭಯಪಡಿರಿ.

ವಾಸ್ತವದಲ್ಲಿ ಯಾರು ಅಲ್ಲಾಹನ ಕ್ರೋಧವನ್ನು ಭಯಪಡುತ್ತಾನೋ ಅಲ್ಲಾಹನು ಅವನ ಪಾಪಗಳನ್ನು ಅಳಿಸಿ ಬಿಡುತ್ತಾನೆ. ಅವನ ಪುಣ್ಯಗಳನ್ನು ಅತ್ಯಧಿಕ ಹೆಚ್ಚಿಸುತ್ತಾನೆ. ಯಾರು ಅಲ್ಲಾಹನನ್ನು ಭಯಪಡುತ್ತಾನೋ ಅವನು ಅತಿ ದೊಡ್ಡ ವಿಜಯವನ್ನು ಗಳಿಸುತ್ತಾನೆ. ಚೆನ್ನಾಗಿ ತಿಳಿಯಿರಿ, ಅಲ್ಲಾಹನ ಭಯವು ದಾಸನನ್ನು ಅವನ ಕ್ರೋಧದಿಂದ ದೂರವಿರಿಸುತ್ತದೆ. ಅವನ ಶಿಕ್ಷೆಯಿಂದ ರಕ್ಷಿಸುತ್ತದೆ. ಅವನ ಅಸಂತೃಪ್ತಿಯಿಂದ ಮುಕ್ತಗೊಳಿಸುತ್ತದೆ. ಈ ವಾಸ್ತವಿಕತೆಯನ್ನು ಚೆನ್ನಾಗಿ ತಿಳಿಯಿರಿ. ಅಲ್ಲಾಹನ ಭಯಭಕ್ತಿಯು

ಮುಖಗಳನ್ನು ಕಾಂತಿಯುತವೂ ಶೋಭಾಯಮಾನವೂ ಆಗಿ ಮಾಡುತ್ತದೆ.

ಒಡೆಯನನ್ನು ತನ್ನ ದಾಸನ ಬಗ್ಗೆ ಸಂತುಷ್ಟಗೊಳಿಸುತ್ತದೆ. ಅವನ ಸ್ಥಾನಮಾನವನ್ನು ಉನ್ನತಗೊಳಿಸುತ್ತದೆ. ನಿಮ್ಮ ನಿಮ್ಮ ಪಾಲಿನ ಪುಣ್ಯಗಳನ್ನು ಶೇಖರಿಸಿರಿ. ಅವನ ಸನ್ನಿಧಾನದಲ್ಲಿ ಎಂದೂ ಕುಂದು ಕೊರತೆ ಮಾಡದಿರಿ. ಅವನಂತೂ ನಿಮಗೆ ತನ್ನ ಗ್ರಂಥದ ಜ್ಞಾನವನ್ನು ನೀಡಿ ತನ್ನ ಸನ್ಮಾರ್ಗವನ್ನು ನಿಮಗೆ ವ್ಯಕ್ತಗೊಳಿಸಿರುವನು. ತಮ್ಮ ಸತ್ಯ ವಿಶ್ವಾಸದ ಘೋಷಣೆಯಲ್ಲಿ ಯಾರು ಸತ್ಯಸಂಧರು ಮತ್ತು ಯಾರು ಸುಳ್ಳರು ಎಂಬುದನ್ನು ಅವನು ಅರಿಯಬೇಕಾಗಿದೆ. ಆದ್ದರಿಂದ ಅಲ್ಲಾಹನು ನಿಮ್ಮೊಂದಿಗೆ ಉತ್ತಮವಾಗಿ ವ್ಯವಹರಿಸಿರುವಂತೆ ನೀವೂ ಜನರೊಂದಿಗೆ ಉತ್ತಮ ವ್ಯವಹಾರ ಕೈಗೊಳ್ಳಿರಿ. ಅವನ ಶತ್ರುಗಳನ್ನು ನಿಮ್ಮ ಶತ್ರುಗಳೆಂದು ಬಗೆಯಿರಿ. ಅವನ ಮಾರ್ಗದಲ್ಲಿ ಯಾವ ರೀತಿ ಹೋರಾಡಬೇಕಾದ ಬಾಧ್ಯತೆ ಇದೆಯೋ ಆ ರೀತಿ ಹೋರಾಡಿರಿ. ಅವನು ನಿಮ್ಮನ್ನು ತನ್ನ ಧರ್ಮಕ್ಕಾಗಿ ಆರಿಸಿರುವನು ಮತ್ತು ನಿಮ್ಮನ್ನು 'ಮುಸ್ಲಿಮ್' ಎಂದು ಹೆಸರಿಸಿರುವನು. ಏಕೆಂದರೆ ನಾಶಗೊಳ್ಳುವವನು ಸ್ಪಷ್ಟ ಪುರಾವೆಯೊಂದಿಗೆ ನಾಶಗೊಳ್ಳಬೇಕು ಮತ್ತು ಜೀವಂತ ಉಳಿಯುವವನು ಸುಸ್ಪಷ್ಟ ಪ್ರಮಾಣದೊಂದಿಗೆ ಜೀವಂತ ಉಳಿಯಬೇಕು.

ಶಕ್ತಿ-ಸಾಮರ್ಥ್ಯಗಳ ಉಗಮವು ದೇವನ ಅಸ್ತಿತ್ವವಾಗಿದೆ. ಆದ್ದರಿಂದ ಅಲ್ಲಾಹನ ಧ್ಯಾನ ಅತ್ಯಧಿಕ ಮಾಡಿರಿ. ಇಂದಿನ ಬಳಿಕ ಬರುವ ನಾಳೆಗಾಗಿ ದುಡಿಯುತ್ತಿರಿ. ಏಕೆಂದರೆ ತನ್ನ ಮತ್ತು ಅಲ್ಲಾಹನ ಮಧ್ಯೆ ಇರುವ ವ್ಯವಹಾರವನ್ನು ಯಾರು ಸರಿಪಡಿಸಿ ಕೊಳ್ಳುತ್ತಾನೋ ಅವನ ಪಾಲಿಗೆ ಅವನ ಮತ್ತು ಇತರ ಮನುಷ್ಯರ ನಡುವೆ ಇರುವ ಎಲ್ಲ ವ್ಯವಹಾರಗಳಿಗೆ ಅಲ್ಲಾಹನೇ ಸಾಕಾಗುತ್ತಾನೆ. ಅಲ್ಲಾಹನೇ ದಾಸರ ಮಧ್ಯೆ ತೀರ್ಮಾನ ಮಾಡುತ್ತಾನಲ್ಲದೆ ದಾಸರು ಅದರ ತೀರ್ಮಾನ ಮಾಡುವುದಲ್ಲ. ಅವನು ಮನುಷ್ಯನ ಪ್ರತಿಯೊಂದು ವಸ್ತುವಿನ ಒಡೆಯನಾಗಿದ್ದಾನೆ. ಅವನ ಯಾವ ವಸ್ತುವೂ ಮನುಷ್ಯನ ವಶದಲ್ಲಿಲ್ಲ. ಅವನು ಅತ್ಯಂತ ಮಹಾನನು. ಶಕ್ತಿ-ಸಾಮರ್ಥ್ಯಗಳೆಲ್ಲವೂ ಅವನ ಬಳಿಯೇ ಇವೆ.

## ಯಸ್ರಿಬ್‌ನ ಭವ್ಯ ಸ್ವಾಗತ

ಯಸ್ರಿಬ್ ಇಂದು ಸಂಭ್ರಮೋಲ್ಲಾಸದಲ್ಲಿ ಮೈ ಮರೆತಿದೆ. ಜನರ ಪ್ರಸನ್ನ ವದನಗಳು ಅವರ ಮನೋಭಾವದ ಪ್ರತೀಕವಾಗಿವೆ. ಮಹಿಳೆಯರು ತಂತಮ್ಮ ಮನೆಯ ಮಹಡಿಗಳಲ್ಲಿ ನಿಂತಿದ್ದಾರೆ. ಪರಿಸರದಿಂದ ಬಂದ ಜನರಿಂದ ರಸ್ತೆಯ ಇಕ್ಕೆಲವೂ ತುಂಬಿ ಹೋಗಿದೆ. ಇಡೀ ನಗರದಲ್ಲಿ ಉತ್ಸವದ ಕಳೆಯಿದೆ.

"ಅಲ್ಲಾಹು ಅಕ್‌ಬರ್ ಅಲ್ಲಾಹು ಅಕ್‌ಬರ್"

ಅಲ್ಲಾಹನ ಸಂದೇಶವಾಹಕರಾದ ಮುಹಮ್ಮದ್(ಸ) ತಲುಪಿದ್ದಾರೆ.

ಪ್ರವಾದಿವರ್ಯರು(ಸ) ಆಗಮಿಸಿದ್ದಾರೆ.

ಪ್ರವಾದಿವರ್ಯರು(ಸ) ಮತ್ತು ಸಂಗಾತಿಗಳು ಹತ್ತಿರ ಬರುತ್ತಿದ್ದಂತೆ ತಕ್ಬೀರ್

ಧ್ವನಿಯು ಅಂತರಿಕ್ಷದಲ್ಲಿ ಮೊಳಗಲಾರಂಭಿಸುತ್ತದೆ. ಜನರು ಆದಷ್ಟು ಎತ್ತರದ ಜಾಗದಲ್ಲಿ ನಿಂತು ಪ್ರವಾದಿವರ್ಯರ(ಸ) ದರ್ಶನ ಪಡೆಯಲು ಕಾತರರಾಗಿದ್ದಾರೆ. ಯಸ್ರಿಬ್ ನಿವಾಸಿಗಳು ಹಿಂದೆಂದೂ ಇಂತಹ ಉಜ್ವಲ ಮತ್ತು ಸಂಭ್ರಮದ ವಾತಾವರಣ ಕಂಡಿರಲಿಲ್ಲ.

ಪ್ರವಾದಿವರ್ಯರ(ಸ) ಮತ್ತು ಸಂಗಾತಿಗಳ ತಂಡವು ಯಸ್ರಿಬ್ ನಗರವನ್ನು ಪ್ರವೇಶಿಸಿತು. ಮುಹಮ್ಮದ್(ಸ) ಜುಮಾ ನಮಾಝ್‌ನ ಬಳಿಕ ಸಾಲಿಮ್ ಗೋತ್ರದ ಊರನ್ನು ಬಿಡುತ್ತಿರುವಾಗ ಉತ್‌ಬಾನ್ ಬಿನ್ ಮಾಲಿಕ್ ಮತ್ತು ಅಬ್ಬಾಸ್ ಬಿನ್ ಉಬಾದಃ(ರ) ಅವರ ನೇತೃತ್ವದಲ್ಲಿ ಸಾಲಿಮ್ ಗೋತ್ರದ ಜನರು ಸೇರಿ: "ಪ್ರವಾದಿ ವರ್ಯರೇ! ತಾವು ನಮ್ಮಲ್ಲೇ ಉಳಿಯಬೇಕು. ನಾವು ಸಂಖ್ಯೆಯಲ್ಲೂ ಅಧಿಕವಿದ್ದೇವೆ. ನಮ್ಮ ಬಳಿ ಆಯುಧಗಳೂ ಬಹಳ ಇದೆ. ನಮ್ಮಲ್ಲಿ ರಕ್ಷಣಾ ಸಾಮರ್ಥ್ಯವೂ ಸಾಕಷ್ಟಿದೆ."

ಆದರೆ ಪ್ರವಾದಿ ಮುಹಮ್ಮದ್(ಸ) ಹೀಗೆ ಉತ್ತರಿಸುತ್ತಾ ಮುಂದುವರಿದರು, "ನನ್ನ ಒಂಟೆಗೆ ದಾರಿ ಬಿಡಿ. ಇದು ಅಲ್ಲಾಹನ ಕಡೆಯಿಂದ ಆದೇಶ ಪಡೆದಿದೆ." ಯಸ್ರಿಬ್ ನಲ್ಲಿಯೂ ಇಂತಹುದೇ ಅನೇಕ ಮನವಿಗಳು ಬಂದುವು. ಅನ್ಸಾರರು ತಮ್ಮ ಪ್ರಾಣ ಸೊತ್ತುಗಳನ್ನೆಲ್ಲಾ ಅರ್ಪಿಸುವ ಪಣತೊಡುತ್ತಾ ಅತ್ಯುತ್ಸಾಹದಿಂದ ಪ್ರವಾದಿವರ್ಯರ(ಸ) ಆತಿಥ್ಯದ ಸೌಭಾಗ್ಯಕ್ಕಾಗಿ ಅರಿಕೆ ಮಾಡಿಕೊಳ್ಳುತ್ತಿದ್ದಾರೆ. ಮುಹಮ್ಮದ್‌ರ(ಸ) ಒಂಟೆಯು ಯಾವ ಬೀದಿಯಲ್ಲಿ ಸಾಗುವಾಗಲೂ ಅಲ್ಲಿನ ಜನನಾಯಕರು: "ಪ್ರವಾದಿವರ್ಯರೇ! ಶಕ್ತಿ ಮತ್ತು ಸಂರಕ್ಷಣೆಯ ಕಡೆಗೆ ಬನ್ನಿರಿ. ನಮ್ಮ ಪ್ರಾಣಾರ್ಪಣಾ ಭಾವವನ್ನು ಪರೀಕ್ಷಿಸಿರಿ. ನಮ್ಮ ಸೇವಕರೆಲ್ಲ ತಮ್ಮ ಸೇವೆಗೆ ಹಾಜರಿದ್ದಾರೆ. ನಮ್ಮ ಎಲ್ಲ ಸಂಪತ್ತನ್ನೂ ತಮಗೆ ಮುಡಿಪಾಗಿಡುತ್ತೇವೆ. ನಮ್ಮ ಪ್ರಾಣಗಳನ್ನೂ ತಮಗಾಗಿ ಬಲಿ ನೀಡಲು ಸಿದ್ಧರಿದ್ದೇವೆ" ಎನ್ನುತ್ತಾರೆ.

ಪ್ರವಾದಿವರ್ಯರ(ಸ) ಮುಖಾರವಿಂದವು ಸಂತೋಷದಿಂದ ಅರಳುತ್ತದೆ. ಅದರ ಕಾಂತಿಯು ಇಮ್ಮಡಿಸುತ್ತದೆ. ಅವರು ಬಹಳ ಪ್ರೀತಿ ಮತ್ತು ವಾತ್ಸಲ್ಯದೊಂದಿಗೆ ಅನ್ಸಾರರನ್ನು ಉದ್ದೇಶಿಸಿ,

"ನನ್ನ ಒಂಟೆಯನ್ನು ಅದರ ಪಾಡಿಗೆ ಬಿಟ್ಟು ಬಿಡಿ. ಅದು ಅಲ್ಲಾಹನ ವತಿಯಿಂದ ಆದೇಶಿಸಲ್ಪಟ್ಟಿದೆ" ಎನ್ನುತ್ತಾ ಮುಂದೆ ಸಾಗುತ್ತಾರೆ.

ಪ್ರವಾದಿ(ಸ) ಒಂಟೆಯ ಲಗಾಮನ್ನು ಸಡಿಲು ಬಿಟ್ಟಿರುವರು. ಈಗ ಅದು ಮಾಲಿಕ್ ಬಿನ್ ನಜ್ಜಾರ್ ಗೋತ್ರದ ಮುಹಲ್ಲಾದಿಂದ ಸಾಗುತ್ತಿದೆ. ಅಲ್ಲಿ ಜನರು ಹೆಚ್ಚು ಆವೇಶ ದಿಂದ ಅತ್ಯುತ್ತಮ ಪೋಷಾಕುಗಳನ್ನು ಧರಿಸಿ ರಸ್ತೆಯ ಇಕ್ಕೆಲಗಳನ್ನೂ ಅಲಂಕರಿಸಿ ನಿಂತು ಕಾಯುತ್ತಿರುವರು. ಇದು ಮುಹಮ್ಮದ್‌ರ(ಸ) ತಾಯಿಯವರ ಗೋತ್ರವಾಗಿದೆ. ಅವರು ಅತ್ಯಧಿಕ ಸಂತೋಷ ಆಚರಿಸುತ್ತಿದ್ದಾರೆ. ಅವರ ಹುಡುಗಿಯರು ದಫ್ ಬಾರಿಸುತ್ತಾ ಹಾಡುತ್ತಾ ಮುಂದೆ ಮುಂದೆ ನಿಂತಿರುವರು.

"ನಾವು ನಜ್ಜಾರ್ ಗೋತ್ರದ ಬಾಲಕಿಯರು. ಮುಹಮ್ಮದ್(ಸ) ನಮಗೆ ಎಷ್ಟೊಂದು ಉತ್ತಮ ನೆರೆಯವರು" ಎಂದು ಅವರು ಹಾಡುತ್ತಿದ್ದರು.

ಮುಹಮ್ಮದ್(ಸ) ಅಲ್ಲಿ ಸ್ವಲ್ಪ ನಿಂತು ಆ ಬಾಲಕಿಯರಲ್ಲಿ ಬಹಳ ವಾತ್ಸಲ್ಯದಿಂದ "ನೀವು ನನ್ನನ್ನು ಪ್ರೀತಿಸುತ್ತೀರಾ" ಎಂದು ವಿಚಾರಿಸುತ್ತಾರೆ.

ಆ ಮುಗ್ಧ ಬಾಲಕಿಯರು ಏಕಕಂಠವಾಗಿ ಹೇಳುತ್ತಾರೆ,

"ಹೌದು, ಪ್ರವಾದಿಯವರೇ!"

"ಅಲ್ಲಾಹನಾಣೆ! ನೀವು ನನಗೆ ಅತ್ಯಧಿಕ ಪ್ರೀತಿ ಪಾತ್ರರಾಗಿರುವಿರಿ. ನಾನು ನಿಮ್ಮನ್ನು ಅತ್ಯಧಿಕ ಪ್ರೀತಿಸುತ್ತೇನೆ" ಎಂದು ಪ್ರವಾದಿ(ಸ) ಮೂರು ಸಲ ಹೇಳುತ್ತಾರೆ.

ಮುಹಮ್ಮದ್‌ರ(ಸ) ಆಗಮನದಿಂದ ಯಸ್ರಿಬ್‌ನ ಅದೃಷ್ಟವು ಬೆಳಗಿದೆ. ಇನ್ನು ಈ ನಗರವು ಮದೀನತುನ್ನಬೀ (ಪ್ರವಾದಿಯ ನಗರ) ಹಾಗೂ ನಂತರ ಕೇವಲ ಮದೀನಾ ಎಂದು ಕರೆಯಲ್ಪಡುವುದು.

## ಮುಹಮ್ಮದ್(ಸ) ಅವರ ಆತಿಥ್ಯ

ಖಾಲಿದ್ ಬಿನ್ ಝೈದ್ ತಮ್ಮ ಎರಡಂತಸ್ತಿನ ಮನೆಯ ಮುಂದೆ ಅಕ್ಕಪಕ್ಕದ ಪರಿವೆಯೇ ಇಲ್ಲದಂತೆ ಪ್ರವಾದಿವರ್ಯರ(ಸ) ದರ್ಶನದಲ್ಲಿ ತಲ್ಲೀನರಾಗಿದ್ದಾರೆ. ಮುಹಮ್ಮದ್(ಸ) ಅವರ ಒಂಟೆಯು ಈಗ ಅವರ ಮನೆಯ ಮುಂದೆ ಬಂದು ದೃಢವಾಗಿ ಕುಳಿತು ಬಿಟ್ಟಿದೆ. ಅದು ಅಲ್ಲಾಹನ ವತಿಯಿಂದ ಆದೇಶಿಸಲ್ಪಟ್ಟಿದ್ದು ಅವನ ಆಜ್ಞೆಯಿಂದಲೇ ಅಲ್ಲಿ ಕುಳಿತಿದೆ. ಆದರೆ ಜನರಿನ್ನೂ ಪ್ರವಾದಿವರ್ಯರ(ಸ) ಆತಿಥ್ಯದ ಸೌಭಾಗ್ಯ ಹೊಂದಲಿಕ್ಕಾಗಿ ಅವರ ಮಾತನ್ನೇ ನಿರೀಕ್ಷಿಸುತ್ತಿದ್ದಾರೆ.

ಮುಹಮ್ಮದ್(ಸ) ಹೇಳುತ್ತಾರೆ: "ಅಲ್ಲಾಹನು ಬಯಸಿದರೆ ಇದುವೇ ನಮ್ಮ ವಾಸಸ್ಥಳವಾಗಲಿದೆ."

ಈ ಮಾತು ಖಾಲಿದ್ ಬಿನ್ ಝೈದ್‌ರ(ರ) ಕಿವಿಗಳ ಮೂಲಕ ಮನಸ್ಸಿನಾಳಕ್ಕೆ ಇಳಿದು ಬಿಟ್ಟಿದೆ. ಅವರು ಮುಂದುವರಿದು ಹೇಳಿದರು, "ಪ್ರವಾದಿವರ್ಯರೇ! ಮುಂದೆ ಇರುವುದು ನನ್ನ ಮನೆಯೇ. ನಾನು ಸಾಮಾನುಗಳನ್ನು ಇಳಿಸಿ ಒಳಗೆ ಸಾಗಿಸಲೇ?"

ಮುಹಮ್ಮದ್(ಸ) ನಗುತ್ತಾ ಅವರೆಡೆಗೆ ಪ್ರೀತಿಯ ದೃಷ್ಟಿ ಬೀರಿದರು. 'ಹಾಗೆಯೇ ಆಗಲಿ' ಎಂದರು. ಖಾಲಿದ್‌ರ ಮನದಲ್ಲಿ ಸಂತೋಷದ ಬೆಳಕು ಹರಿಯಿತು.

ಖಾಲಿದ್‌ರನ್ನು ಜನರು ಅಬೂ ಅಯ್ಯೂಬ್ ಎಂದೇ ಕರೆಯುತ್ತಾರೆ. ಅವರಿಗೆ ಪ್ರವಾದಿವರ್ಯರ(ಸ) ಆತಿಥ್ಯದ ಸೌಭಾಗ್ಯ ಲಭಿಸುತ್ತದೆ. ಅವರ ಮನೆ ಅತ್ಯಂತ ಸರಳವೂ ಸ್ವಚ್ಛವೂ ಆಗಿದೆ. ಎರಡಂತಸ್ತಿನ ಆ ಮನೆಯ ಕೆಳಗಿನ ಅಂತಸ್ತಿನಲ್ಲಿ ತಾನು ವಾಸಿಸುವುದಾಗಿ

ಮುಹಮ್ಮದ್(ಸ) ಹೇಳಿದಾಗ: "ಪ್ರವಾದಿವರ್ಯರೇ! ತಾವು ಮೇಲಿನ ಅಂತಸ್ತಿನಲ್ಲಿ ವಾಸಿಸಿರಿ. ನಾವು ಅಲ್ಲಿರುವುದನ್ನು ತಮಗೆ ಬಹಳ ಅನಾದರವೆಂದು ಭಾವಿಸುತ್ತೇವೆ" ಎಂದರು.

ಆಗ ಮುಹಮ್ಮದ್(ಸ) "ನೀವು ಮೇಲಿನ ಅಂತಸ್ತಿನಲ್ಲೇ ವಾಸಿಸಿರಿ. ಕೆಳಗಿನ ಅಂತಸ್ತು ನನಗೆ ಹೆಚ್ಚು ಅನುಕೂಲ. ಅಲ್ಲದೆ ಇಲ್ಲಿಗೆ ಬರುವ ಸಂದರ್ಶಕರಿಗೂ ಅದು ಅನುಕೂಲಕರವಾದೀತು" ಎಂದರು.

ಅತಿಥಿಯ ಆಜ್ಞೆಯಂತೆ ಪ್ರವಾದಿವರ್ಯರ(ಸ) ಆತಿಥೇಯರು ಮೇಲಂತಸ್ತಿನಲ್ಲಿ ವಾಸ ಹೂಡಿದರು. ಆದರೆ ರಾತ್ರಿಯಾಗುವಾಗ ಅವರು ಮತ್ತೆ ಚಿಂತಾಮಗ್ನರಾದರು. ಪತ್ನಿ ಕಾರಣ ಕೇಳಿದಾಗ, "ನಮಗಿಂತ ಪ್ರವಾದಿವರ್ಯರೇ ಮೇಲಂತಸ್ತಿನಲ್ಲಿ ವಾಸಿಸಬೇಕಾದವರು. ಅವರ ಬಳಿ ದೇವಚರರು ಬರುತ್ತಾರೆ. ಅವರಿಗೆ ದಿವ್ಯವಾಣಿ ಅವತೀರ್ಣವಾಗುತ್ತದೆ. ಆದ್ದರಿಂದ ನಾವು ಅವರಿಗಿಂತ ಮೇಲೆ ವಾಸಿಸುವುದು ದೊಡ್ಡ ಅಗೌರವವೆನಿಸುತ್ತದೆ."

ಕೊನೆಗೆ ಅವರ ಮನವಿಯನ್ನು ಸ್ವೀಕರಿಸಿ ಪ್ರವಾದಿ(ಸ) ಮೇಲಂತಸ್ತಿಗೆ ಹೋಗಿ ವಾಸಿಸತೊಡಗಿದರು.

ಅಬೂ ಅಯ್ಯೂಬ್(ರ) ಪ್ರತಿನಿತ್ಯ ಊಟ ತಯಾರಿಸಿ ಪ್ರವಾದಿವರ್ಯರಿಗೆ(ಸ) ಕಳುಹಿಸಿಕೊಡುತ್ತಿದ್ದರು. ಪ್ರವಾದಿವರ್ಯರು(ಸ) ಉಳಿದ ಆಹಾರವನ್ನು ಮರಳಿಸಿದಾಗ ಪತಿ ಪತ್ನಿಯರಿಬ್ಬರೂ ಮುಹಮ್ಮದ್(ಸ) ಬಿಟ್ಟಲ್ಲಿಂದಲೇ ಅದರಿಂದ ತಿನ್ನಲಾರಂಭಿಸುತ್ತಿದ್ದರು. ಒಂದು ದಿನ ಊಟದಲ್ಲಿ ಪ್ರವಾದಿವರ್ಯರ(ಸ) ಬೆರಳ ಗುರುತು ಕಾಣದೆ ಇದ್ದಾಗ ಅಬೂ ಅಯ್ಯೂಬ್(ರ) ಕಳವಳಗೊಂಡು ಮೇಲೆ ಹೋಗಿ ವಿಚಾರಿಸಿದರು, "ಪ್ರವಾದಿವರ್ಯರೇ! ತಾವು ಊಟ ಮಾಡದೆಯೇ ಮರಳಿಸಿದಿರಾ?"

ಮುಹಮ್ಮದ್(ಸ) ಹೌದೆನ್ನುತ್ತಾ ಈ ದಿನ ನೀವು ಊಟದಲ್ಲಿ ನೀರುಳ್ಳಿ ಸೇರಿಸಿದ್ದೀರಿ. ನಾನು ಅದರ ವಾಸನೆಯ ಕಾರಣ ಉಣ್ಣಲಿಲ್ಲ. ಏಕೆಂದರೆ ನನಗೆ ದೇವಚರರೊಂದಿಗೆ ಮಾತನಾಡಲಿಕ್ಕಿರುತ್ತದೆ. ನೀವು ಅದನ್ನು ನಿಸ್ಸಂಕೋಚವಾಗಿ ತಿನ್ನಿರಿ" ಎನ್ನುತ್ತಾರೆ. ಅಂದಿನಿಂದ ಅಬೂ ಅಯ್ಯೂಬ್ ಕೂಡಾ ನೀರುಳ್ಳಿ ತಿನ್ನುವುದನ್ನು ತೊರೆದು ಬಿಟ್ಟರು.

ಮುಹಮ್ಮದ್‌ರಿಗೆ(ಸ) ಪ್ರತಿದಿನ ಮೂರ್‍ನಾಲ್ಕು ಮನೆಯವರು ಊಟ ಕಳುಹಿಸಿ ಕೊಡುತ್ತಿದ್ದರು. ಅದನ್ನವರು ಸಂದರ್ಶಕರಿಗೂ ನಿರ್ಗತಿಕರಿಗೂ ಉಣಿಸುತ್ತಿದ್ದರು. ಅಬೂ ಅಯ್ಯೂಬ್‌ರ(ರ) ಮನೆಯಲ್ಲಿ ಪ್ರವಾದಿ(ಸ) ಸುಮಾರು ಏಳು ತಿಂಗಳ ಕಾಲ ವಾಸಿಸಿದರು.

ಅಧ್ಯಾಯ - ೧೦

# ಹೊಸ ಸಮಾಜ ಮತ್ತು ರಾಷ್ಟ್ರ

## ಪ್ರವಾದಿಯ ಮಸೀದಿ

ಅಬೂ ಅಯ್ಯೂಬ್‌ರ(ರ) ಮನೆಯಿಂದ ಕೆಲವೇ ಹೆಜ್ಜೆಗಳ ದೂರದಲ್ಲಿ ಪ್ರವಾದಿವರ್ಯರ(ಸ) ಸಂಗಾತಿಗಳ ಒಂದು ತಂಡ ಕೈಗಳಲ್ಲಿ ಗಾರೆ, ಪಿಕ್ಕಾಸುಗಳನ್ನು ಹಿಡಿದು ಸಿದ್ಧವಾಗಿ ನಿಂತಿದೆ. ಅವರ ಮಧ್ಯೆ ಮುಹಮ್ಮದ್(ಸ) ಅವರೂ ಇದ್ದಾರೆ. ಅವರ ಜೊತೆ ಅಮ್ರ್‌ನ ಇಬ್ಬರು ಅನಾಥ ಮಕ್ಕಳಾದ ಸಹಲ್ ಮತ್ತು ಸುಹೈಲ್ ನಿಂತಿದ್ದಾರೆ. ಅವರು ನಿಂತಿರುವ ನೆಲವು ಆ ಮಕ್ಕಳ ಪಾಲಿಗೇ ಸೇರಿದ್ದು, ಅಲ್ಲಿ ಮುಸ್ಲಿಮರು ಸಅದ್ ಬಿನ್ ಝುರಾರಃರ(ರ) ನೇತೃತ್ವದಲ್ಲಿ ನಮಾಝ್ ನಿರ್ವಹಿಸುತ್ತಾ ಬಂದಿದ್ದರು. ಜುಮಾ ನಮಾಝ್ ಕೂಡಾ ಅಲ್ಲೇ ಆಗುತ್ತಿತ್ತು. ಇದೇ ಸ್ಥಳದಲ್ಲಿ ಮುಹಮ್ಮದ್(ಸ) ಅವರ ಒಂಟೆಯು ದೃಢವಾಗಿ ಕುಳಿತು ಬಿಟ್ಟಿತ್ತು. ಆ ಜಾಗದಲ್ಲೇ ಈಗ ಮುಹಮ್ಮದ್(ಸ) ಒಂದು ಮಸೀದಿ ನಿರ್ಮಿಸಲು ಬಯಸಿದ್ದಾರೆ.

ಆದರೆ ಮಸೀದಿ ನಿರ್ಮಿಸುವುದಕ್ಕಿಂತ ಮುಂಚೆ ಆ ಸ್ಥಳವನ್ನು ಖರೀದಿಸಿ ವಕ್ಫ್ ಮಾಡುವುದು ಆಗತ್ಯವಾಗಿತ್ತು. ಆದ್ದರಿಂದ ಸಹಲ್ ಮತ್ತು ಸುಹೈಲ್‌ರಲ್ಲಿ ಅದರ ಬೆಲೆಯನ್ನು ನಿರ್ಧರಿಸಲಾಗುತ್ತಿದೆ. ಅವರು ಯಾವುದೇ ಬೆಲೆ ಸ್ವೀಕರಿಸಲು ಸಿದ್ಧರಿಲ್ಲ. ಆದರೂ ಮುಹಮ್ಮದ್‌ರ(ಸ) ಒತ್ತಾಯದ ಮೇರೆಗೆ ಅದರ ಬೆಲೆಯನ್ನು ನಿಗದಿಪಡಿಸಲಾಗುತ್ತದೆ ಮತ್ತು ಹ. ಅಬೂಬಕರ್(ರ) ಆ ಬೆಲೆಯನ್ನು ಪಾವತಿ ಮಾಡುತ್ತಾರೆ.

ಈ ಸ್ಥಳವು ಮುಸ್ಲಿಮರಿಗೆ ವಕ್ಫ್ ಆಗಿದೆ. ಪ್ರವಾದಿವರ್ಯರಿಂದ(ಸ) ನಿರ್ಮಾಣ ಕಾರ್ಯ ಆರಂಭಿಸುವ ಸೂಚನೆ ದೊರೆಯುತ್ತಲೇ ಗಾರೆ ಪಿಕ್ಕಾಸುಗಳು ಚಲಿಸಲಾರಂಭಿಸುತ್ತವೆ. ಮರಗಳನ್ನೂ ಪೊದೆಗಳನ್ನೂ ಕಡಿದು ಸರಿಸಲಾಗುತ್ತದೆ. ಪ್ರವಾದಿವರ್ಯರ(ಸ) ಸಂಗಾತಿಗಳು ಧೂಳಿನಲ್ಲಿ ಮುಳುಗಿ ಕೆಲಸದಲ್ಲಿ ಮಗ್ನರಾಗುತ್ತಾರೆ. ಪ್ರತಿಯೊಬ್ಬರೂ ಬೆವರಿಳಿಸಿ ದುಡಿಯುತ್ತಾರೆ. ಜತೆಗೆ ಸಂಭ್ರಮೋಲ್ಲಾಸದೊಂದಿಗೆ ಹಾಡುತ್ತಾ ಸಾಗುತ್ತಾರೆ.

"ದೇವಾ! ವಿಜಯವಂತೂ ಪರಲೋಕದ ವಿಜಯವಾಗಿದೆ. ಮುಹಾಜಿರ್‌ಗಳನ್ನೂ ಅನ್ಸಾರ್‌ಗಳನ್ನೂ ನೀನು ಕ್ಷಮಿಸು."

ಮುಹಮ್ಮದ್(ಸ) ಅವರು ಕೂಡಾ ಅವರ ಜೊತೆ ಧ್ವನಿಗೂಡಿಸುತ್ತಾರೆ. ಅವರೂ ಪಿಕ್ಕಾಸು ಹಿಡಿದು ಅಗೆಯುವ ಕಾರ್ಯದಲ್ಲಿ ನಿರತರಾಗಿದ್ದಾರೆ. ಅವರನ್ನು ಈ ರೀತಿ ಶ್ರಮವಹಿಸಿ ದುಡಿಯುತ್ತಿರುವುದನ್ನು ಕಂಡು ಓರ್ವ ಅನುಯಾಯಿ ಉದ್ಗರಿಸುತ್ತಾರೆ:

"ಅಲ್ಲಾಹನ ಪ್ರವಾದಿವರ್ಯರೇ(ಸ) ಈ ರೀತಿ ಕಾರ್ಯ ನಿರತರಾಗಿರುವಾಗ ನಾವು ಕುಳಿತು ನೋಡುತ್ತಿದ್ದರೆ ನಮ್ಮೆಲ್ಲ ಕರ್ಮಗಳೂ ವ್ಯರ್ಥವಾಗಿ ಹೋಗುವುವು."

ನೋಡು ನೋಡುತ್ತಿದ್ದಂತೆಯೇ ಆ ವಿಶಾಲ ಭೂಮಿಯು ಸಮತಟ್ಟಾದ ನೆಲ ವಾಗಿ ಮಾರ್ಪಡುತ್ತದೆ. ಈಗ ಗಾರೆ ಮತ್ತು ಹಸಿ ಇಟ್ಟಿಗೆಗಳಿಂದ ಗೋಡೆಗಳ ನಿರ್ಮಾಣ ಕಾರ್ಯ ಆರಂಭವಾಗುತ್ತದೆ. ಪ್ರವಾದಿವರ್ಯರು(ಸ) ಓರ್ವ ಕಾರ್ಮಿಕನಂತೆ ದುಡಿಯು ತ್ತಿದ್ದಾರೆ. ಮಸೀದಿಯ ಕಂಬಗಳಾಗಿ ಖರ್ಜೂರದ ಕಾಂಡಗಳನ್ನು ನಾಟಲಾಗುತ್ತದೆ. ಖರ್ಜೂರದ ಸೋಗೆಯ ಛಾವಣಿ ಹಾಕಲಾಗುತ್ತದೆ. ಮಳೆ ಮತ್ತು ಸೆಕೆಯಿಂದ ರಕ್ಷಣೆಗಾಗಿ ಅದಕ್ಕೂ ಗಾರೆಯನ್ನು ಲೇಪಿಸಲಾಗುತ್ತದೆ. ಖರ್ಜೂರದ ಒಂದು ಸಣ್ಣ ಕಾಂಡವನ್ನು ಮಿಂಬರ್‌ನ ಸ್ಥಾನದಲ್ಲಿ ನೆಡಲಾಗುತ್ತದೆ. ಅಂಗಣದಲ್ಲಿ ಒಂದೆಡೆ ಒಂದು ಪಡಸಾಲೆ ನಿರ್ಮಿಸಲಾಗುತ್ತದೆ. ಇದುವೇ ಮುಂದೆ 'ಸುಫ್ಫ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಇದನ್ನು ಇಸ್ಲಾಮ್ ಸ್ವೀಕರಿಸಿ ಬರುವಂತಹ ಬಡವರೂ ನಿರ್ಗತಿಕರೂ ಆದ ಜನರಿಗೆ ಆಶ್ರಯಧಾಮವಾಗಿ ನಿರ್ಮಿಸಲಾಗಿತ್ತು.

ಮಸೀದಿ ಸಿದ್ಧವಾದಾಗ ಮಿಂಬರ್(ವೇದಿಕೆ)ಗಾಗಿ ಇಡಲಾಗಿದ್ದ ಖರ್ಜೂರದ ಕಾಂಡದ ಆಸರೆಯಲ್ಲಿ ನಿಂತು ಮುಹಮ್ಮದ್(ಸ) ಹೀಗೆ ಹೇಳಿದರು, "ನನ್ನ ವೇದಿಕೆ ಮತ್ತು ಕೋಣೆಯ ಮಧ್ಯೆ ಸ್ವರ್ಗದ ತೋಟಗಳ ಪೈಕಿ ಒಂದು ತೋಟವಿದೆ ಮತ್ತು ನನ್ನ ವೇದಿಕೆ(ಕೌಸರ್) ಕೊಳದ ಮೇಲಿದೆ." (ಅರ್ಥಾತ್ ಅಂತಿಮ ದಿನದಂದು ಅದನ್ನು ಅವರಿಗಾಗಿ ಕೌಸರ್ ಕೊಳದ ಮೇಲೆ ಇರಿಸಲಾಗುವುದು)

ಒಂದು ನಮಾಝ್‌ಗೆ 50 ಸಹಸ್ರ ನಮಾಝ್‌ಗಳಷ್ಟು ಪುಣ್ಯವಿರುವಂತಹ ಪವಿತ್ರ ಮಸೀದಿ ಈಗ ಸಿದ್ಧವಾಗಿದೆ. ಅದೀಗ ಕಅಬಾ ಭವನದ ಬಳಿಕ ಜಗತ್ತಿನ ಅತ್ಯಧಿಕ ಪವಿತ್ರ ಸ್ಥಳವಾಗಿದೆ.

ಮಸೀದಿಗಳು ಭೂಮಿಯ ಮೇಲೆ ಅಲ್ಲಾಹನ ಭವನಗಳಾಗಿವೆ. ಭೂಮಿಯ ಮೇಲಿರುವವರಿಗೆ ನಕ್ಷತ್ರದ ಬೆಳಕು ತಲುಪುವಂತೆ ಆಕಾಶದಲ್ಲಿರುವವರಿಗೆ ಈ ಮಸೀದಿಗಳ ಬೆಳಕು ತಲುಪುತ್ತದೆ. ಅಲ್ಲಾಹನ ದೃಷ್ಟಿಯಲ್ಲಿ ಭೂಮುಖದ ಮೇಲೆ ಅತ್ಯಂತ ಪ್ರಿಯವಾದ ಸ್ಥಳ ಮಸೀದಿಗಳಾಗಿವೆ. ಅವುಗಳ ಕಟ್ಟಡದ ಸರಳತೆಯ ಹೊರತಾಗಿಯೂ ಅವುಗಳಲ್ಲಿ ಒಂದು ಅದ್ಭುತ ಆಕರ್ಷಣೆಯಿದೆ. ಅವು ನಮ್ಮ ಹೃದಯಗಳನ್ನು ಅಲ್ಲಾಹ್ ಮತ್ತು ಆತನ ಧರ್ಮದ ಕಡೆಗೆ ಸೆಳೆಯುತ್ತದೆ.

ಒಮ್ಮೆ ಪ್ರವಾದಿವರ್ಯರು(ಸ) ಆ ಮಸೀದಿಯಿಂದ ಹೊರಟು ಬರುವಾಗ ಸ್ತ್ರೀ-

ಪುರುಷರು ಒಂದೇ ದಾರಿಯಲ್ಲಿ ಜತೆ ಜತೆಯಾಗಿ ಹೋಗುತ್ತಿರುವುದು ಕಾಣಿಸಿತು. ಆಗ ಅವರು ಮಹಿಳೆಯರನ್ನುದ್ದೇಶಿಸಿ ಹೇಳಿದರು: "ನೀವು ರಸ್ತೆಯ ಮಧ್ಯೆ ನಡೆಯುವುದು ಸರಿಯಲ್ಲ. ನಿಮ್ಮ ಮಟ್ಟಿಗೆ ರಸ್ತೆಯ ಪಕ್ಕದಲ್ಲಿ ನಡೆಯುವುದೇ ಉತ್ತಮ."

ಪ್ರವಾದಿವರ್ಯರ(ಸ) ಈ ಆದೇಶವನ್ನು ಕೇಳಿದ ಬಳಿಕ ಮಹಿಳೆಯರು ಯಾವಾಗಲೂ ಗೋಡೆಗಳಿಗೆ ತಾಗಿಕೊಂಡೇ ನಡೆಯುತ್ತಿದ್ದರು.

ಒಮ್ಮೆ ಈ ಮಸೀದಿಯಲ್ಲಿ ಯಾರೋ ಉಗುಳಿದ ಕುರುಹು ಕಂಡಾಗ ಪ್ರವಾದಿ(ಸ) ಸ್ವಯಂ ತಮ್ಮ ಕೈಗಳಿಂದ ಅದನ್ನು ಸ್ವಚ್ಛಗೊಳಿಸಿದರು ಮತ್ತು ಹೀಗೆಂದರು: "ನಮಾಝ್‌ನಲ್ಲಿ ಪ್ರತಿಯೊಬ್ಬನೂ ಅಲ್ಲಾಹನೊಂದಿಗೆ ರಹಸ್ಯವಾಗಿ ಸಂಭಾಷಣೆ ನಡೆಸುತ್ತಾನೆ. ಆದ್ದರಿಂದ ಯಾರೂ ಕಿಬ್ಲಾಭಿಮುಖವಾಗಿ ಉಗುಳಬಾರದು."

## ಪ್ರವಾದಿವರ್ಯರ(ಸ) ನಿವಾಸ

ಮಸ್ಜಿದುನ್ನಬವಿಗೆ ತಾಗಿ ಪಶ್ಚಿಮದ ಕಡೆ ಎರಡು ಕೋಣೆಗಳನ್ನು ನಿರ್ಮಿಸಲಾಗಿದೆ. ಆ ಪೈಕಿ ಪ್ರತಿಯೊಂದು ಕೋಣೆಯು ಮೂರು ಮೀಟರ್‌ನಷ್ಟು ವಿಶಾಲವಿದೆ. ಹಸಿ ಇಟ್ಟಿಗೆ ಮತ್ತು ಗಾರೆಗಳಿಂದ ಗೋಡೆಗಳನ್ನು ನಿರ್ಮಿಸಲಾಗಿದೆ. ಗೋಡೆಯು ಆಳೆತ್ತರಕ್ಕಿಂತಲೂ ಹೆಚ್ಚಾದಾಗ ಒಬ್ಬ ವ್ಯಕ್ತಿ ನಿಂತು ಅವನ ಕೈಯನ್ನು ಮೇಲೆ ಚಾಚಿದಾಗ ಕೈಗೆಟುಕುವಂತೆ ಖರ್ಜೂರದ ಪಕ್ಕಾಸುಗಳನ್ನಿಟ್ಟು ಅವುಗಳನ್ನು ಎಲೆಗಳಿಂದ ಮುಚ್ಚಿಬಿಡಲಾಗಿದೆ. ಇದುವೇ ಆ ಕೋಣೆಗಳ ಛಾವಣಿಯಾಗಿದೆ. ಅದಕ್ಕೆ ಗಾರೆಯನ್ನು ಲೇಪಿಸಿ ಸೆಖೆ ಮತ್ತು ಮಳೆಯಿಂದ ರಕ್ಷಣೆ ಹೊಂದಲು ವ್ಯವಸ್ಥೆ ಮಾಡಲಾಗಿದೆ. ಅಂಗಣವಾಗಲಿ, ಪಡಸಾಲೆಯಾಗಲಿ ಇತರ ಕೋಣೆಗಳಾಗಲಿ ಇಲ್ಲ. ಮಣ್ಣಿನ ಇಟ್ಟಿಗೆಯಿಂದ ನಿಲ್ಲಿಸಿದ ಗೋಡೆಗಳಲ್ಲಿ ಹಲವೆಡೆ ಬಿರುಕು ಬಿಟ್ಟಿದ್ದು ಬಿಸಿಲು ಒಳಗೆ ಬರುತ್ತಿದೆ. ಮಣ್ಣಿನ ಗೋಡೆಗಳನ್ನು ಮಳೆಯಿಂದ ರಕ್ಷಿಸಲು ಅವುಗಳಿಗೆ ಉಣ್ಣೆಯ ಕಂಬಳಿಗಳನ್ನು ಹೊದಿಸಲಾಗಿದೆ. ಬಾಗಿಲಿಗೆ ದಾರಂದವೆಂಬುದಿಲ್ಲ. ಕೇವಲ ಗೋಡೆಯ ಮಧ್ಯೆ ಸ್ಥಳ ಬಿಡಲಾಗಿದ್ದು ಅದಕ್ಕೆ ಕಂಬಳಿಯನ್ನು ಇಳಿಬಿಟ್ಟು ಪರ್ದಾ ಮಾಡಲಾಗಿದೆ. ಈ ದ್ವಾರದ ಮೂಲಕ ಹೊರಗೆ ಕಾಲಿಟ್ಟರೆ ಹೆಜ್ಜೆ ಇಡುವುದೇ ಮಸೀದಿಯ ಅಂಗಣಕ್ಕೆ. ಅದುವೇ ಪ್ರವಾದಿ ಮುಹಮ್ಮದ್‌ರ(ಸ) ದೀವಾನಖಾನೆ ಅಥವಾ ಸಂದರ್ಶಕರನ್ನು ಭೇಟಿಯಾಗುವ ಸ್ಥಳ. ಈ ಎರಡು ಕೋಣೆಗಳು ಪ್ರವಾದಿವರ್ಯರ(ಸ) ಪತ್ನಿಯರಾದ ಹ. ಆಯಿಶಾ ಮತ್ತು ಹ. ಸೌದಾರವರಿಗಾಗಿದೆ(ರ).

ಈಗ ಮುಹಮ್ಮದ್(ಸ) ತಮ್ಮ ಪರಿವಾರ ಸಮೇತ ಆ ಕೋಣೆಗಳಲ್ಲಿ ಬಂದು ಬಿಡಾರ ಹೂಡಿದ್ದಾರೆ. ಆ ಕೋಣೆಗಳಿಗೆ ಒಂದು ಮಹಡಿಯನ್ನು ಮಾಡಿಸಲಾಗಿದೆ. ಅದರಲ್ಲಿ ಒಂದು ಮಂಚ, ಒಂದು ಚಾಪೆ, ಒಂದು ಹಾಸಿಗೆ, ಒಂದು ತಲೆದಿಂಬು ಇದೆ. ತಲೆದಿಂಬಿನಲ್ಲಿ ಖರ್ಜೂರದ ನಾರುಗಳನ್ನು ತುಂಬಲಾಗಿದೆ. ಎರಡು ಮಡಕೆಗಳಿದ್ದು ಒಂದರಲ್ಲಿ ಖರ್ಜೂರ, ಇನ್ನೊಂದರಲ್ಲಿ ಹಿಟ್ಟು ಇದೆ. ಒಂದು ಕೊಡಪಾನ ಮತ್ತು ಒಂದು ಲೋಟೆ- ಇವು ಮಾತ್ರ

ಅಲ್ಲಿರುವ ಒಟ್ಟು ಸಾಮಾನುಗಳು. ಹ. ಆಯಿಶಾ(ರ) ಹೀಗೆ ಹೇಳುತ್ತಾರೆ: "ಹಲವೊಮ್ಮೆ ನಲ್ವತ್ತು ರಾತ್ರಿಗಳು ಕಳೆದರೂ ನಮ್ಮ ಮನೆಯಲ್ಲಿ ಒಲೆ ಉರಿಯುತ್ತಿರಲಿಲ್ಲ."

ಒಮ್ಮೆ ಹ. ಆಯಿಶಾರ(ರ) ಕೋಣೆಯಲ್ಲಿ ಅವರ ಸೋದರಿ ಹ. ಅಸ್ಮಾ(ರ) ಪ್ರವೇಶಿಸಿದ್ದರು. ಆಗ ಅವರು ಒಂದು ತೆಳ್ಳಗಿನ ಬಟ್ಟೆಯನ್ನು ಧರಿಸಿದ್ದರು. ಪ್ರವಾದಿ ವರ್ಯರು(ಸ) ಅವರನ್ನು ಆ ಉಡುಪಿನಲ್ಲಿ ಕಂಡೊಡನೆ ಮುಖವನ್ನು ಬೇರೆಡೆಗೆ ತಿರುಗಿಸಿದರು ಮತ್ತು ಈ ರೀತಿ ಹೇಳಿದರು: "ಹೆಣ್ಣು ಯುವತಿಯಾದ ಬಳಿಕ ಕೇವಲ ಮುಖ ಮತ್ತು ಕೈಗಳನ್ನು ತೆರೆದಿಡಬಹುದು..."

"ಬಟ್ಟೆ ಧರಿಸಿಯೂ ನಗ್ನರಾಗಿರುವ, ಪರ ಪುರುಷರನ್ನು ಆಕರ್ಷಿಸುವ ಮತ್ತು ಸ್ವಯಂ ಆಕರ್ಷಿತರಾಗುವ ಸ್ತ್ರೀಯರು ನರಕವಾಸಿಗಳಾಗುವರು" ಎಂದೂ ಇನ್ನೊಂದು ಸಂದರ್ಭದಲ್ಲಿ ಅವರು ಹೇಳಿದ್ದರು.

## ಸಾರ್ವಜನಿಕ ಭಾಷಣ

ಮುಹಮ್ಮದ್(ಸ) ಮದೀನಾಕ್ಕೆ ಬಂದು ಏಳು ತಿಂಗಳುಗಳು ಕಳೆದಿವೆ. ಈ ಮಧ್ಯೆ ಮದೀನಾದ ಪ್ರತಿಯೊಂದು ಮನೆ ಮತ್ತು ಗೋತ್ರದಿಂದ ಅವರಿಗೆ ಅನುಯಾಯಿ ಗಳು ದೊರಕಿದ್ದಾರೆ. ಪ್ರವಾದಿವರ್ಯರು(ಸ) ವೈಯಕ್ತಿಕ ಧರ್ಮಪ್ರಚಾರ ಕಾರ್ಯದ ಜೊತೆಗೆ ಇಸ್ಲಾಮೀ ಆಂದೋಲನದ ಪ್ರಗತಿಗಾಗಿ ಪ್ರಥಮ ಬಾರಿ ತಮ್ಮ ಸಂಗಾತಿಗಳ ಒಂದು ದೊಡ್ಡ ಸಭೆಯನ್ನುದ್ದೇಶಿಸಿ ಭಾಷಣ ಮಾಡುತ್ತಾ ಈ ರೀತಿ ಹೇಳಿದರು: "ಜನರೇ! ನಿಮ್ಮ ಜೀವಗಳಿಗಾಗಿ ಸೂಕ್ತ ಸಮಯದಲ್ಲಿ ಏನಾದರೂ ಗಳಿಸಿರಿ. ಚೆನ್ನಾಗಿ ತಿಳಿದಿರಿ. ಅಲ್ಲಾಹನಾಣೆ! ನಿಮ್ಮ ಪೈಕಿ ಪ್ರತಿಯೊಬ್ಬನಿಗೂ ಮರಣ ಬರಲಿದೆ ಮತ್ತು ಅವನು ತನ್ನ ಜಾನುವಾರುಗಳ ಮಂದೆಯನ್ನು ಇಲ್ಲೇ ಬಿಟ್ಟು ಹೊರಟು ಹೋಗುವನು. ಅದಕ್ಕೆ ಯಾವನೇ ಕುರಿಗಾಹಿ ಇರಲಾರನು. ತರುವಾಯ ಯಾವ ಮಧ್ಯವರ್ತಿಯೂ ಇಲ್ಲದ ಸ್ಥಿತಿಯಲ್ಲಿ ಅವನ ಪ್ರಭು ಅವನನ್ನು ಅಭಿಸಂಬೋಧಿಸುವನು.

ಅವನಲ್ಲಿ ಈ ರೀತಿ ಹೇಳಲಾಗುವುದು: ನನ್ನ ವಚನಗಳನ್ನು ನಿನಗೆ ತಲುಪಿಸಲು ನನ್ನ ಪ್ರವಾದಿ ನಿನ್ನ ಬಳಿ ತಲುಪಿರಲಿಲ್ಲವೆ? ನಾನು ನಿನಗೆ ಸೊತ್ತು-ಸಂಪತ್ತು ಕೊಟ್ಟಿರಲಿ ಲ್ಲವೆ? ನಿನ್ನನ್ನು ಅನುಗ್ರಹಿಸಿರಲಿಲ್ಲವೆ? ಆದರೆ ನೀನು ನಿನ್ನ ಜೀವಕ್ಕಾಗಿ ಏನನ್ನು ಸಂಗ್ರಹಿಸಿರುವೆ. ಆಗ ಅವನು ತನ್ನ ಎಡ-ಬಲಗಳಿಗೆ ನೋಡುವನು. ಆದರೆ ಅಲ್ಲಿ ಅವನಿಗೆ ಏನೂ ಕಾಣಿಸದು. ಆ ಬಳಿಕ ತನ್ನ ಮುಂದಿನ ಕಡೆಗೆ ದೃಷ್ಟಿ ಬೀರುವನು. ಅಲ್ಲಿ ಅವನಿಗೆ ನರಕದ ಹೊರತು ಬೇರೇನೂ ಕಾಣಿಸದು. ಆದ್ದರಿಂದ ಯಾರಿಗಾದರೂ ಖರ್ಜೂರದ ಒಂದು ತುಂಡಿನ ಬದಲಿಗಾದರೂ ತನ್ನ ಮುಖವನ್ನು ನರಕದ ಅಗ್ನಿಯಿಂದ ರಕ್ಷಿಸುವ ಸೌಭಾಗ್ಯ ಗಳಿಸುವುದು ಸಾಧ್ಯವಾದರೆ ಆತನು ಹಾಗೆ ಮಾಡಲಿ. ಇದಕ್ಕೂ ಸಾಧ್ಯವಿಲ್ಲದವನು ಒಂದು ಒಳ್ಳೆಯ ಮಾತಿನ ಮೂಲಕ ವಾದರೂ ತನ್ನನ್ನು ರಕ್ಷಿಸಲಿ. ಏಕೆಂದರೆ ಸತ್ಕರ್ಮದ ಪ್ರತಿಫಲವು ಹತ್ತರಿಂದ

ಏಳುನೂರು ಪಟ್ಟು ಸಿಗುತ್ತದೆ. ನಿಮ್ಮ ಮೇಲೆ ಶಾಂತಿಯಿರಲಿ ಮತ್ತು ಅಲ್ಲಾಹನ ಕರುಣೆ ಮತ್ತು ಸಮೃದ್ಧಿ ಉಂಟಾಗಲಿ!"

ಇಂತಹುದೇ ಇನ್ನೊಂದು ಸಾರ್ವಜನಿಕ ಭಾಷಣದಲ್ಲಿ ಪ್ರವಾದಿ(ಸ) ಈ ರೀತಿ ಹೇಳಿದರು: "ಖಂಡಿತವಾಗಿಯೂ ಸ್ತುತಿ-ಸ್ತೋತ್ರಗಳು ಅಲ್ಲಾಹನಿಗೆ ಮೀಸಲಾಗಿದೆ. ನಾವು ಅವನಿಂದ ಸಹಾಯ ಯಾಚಿಸುತ್ತೇವೆ. ನಮ್ಮ ದುಷ್ಟ ಚಿತ್ತದ ದುಷ್ಪ್ರೇರಣೆಗಳಿಂದ ಮತ್ತು ನಮ್ಮ ದುಷ್ಕರ್ಮಗಳ ಪರಿಣಾಮದಿಂದ ನಾವು ಅವನ ಕೃಪಾಶ್ರಯದಲ್ಲಿ ಅಭಯ ಯಾಚಿಸುತ್ತೇವೆ. ಯಾರಿಗೆ ಅಲ್ಲಾಹನು ಸನ್ಮಾರ್ಗದರ್ಶನ ಮಾಡುತ್ತಾನೋ (ನಿಜವಾಗಿ ಅಲ್ಲಾಹನು ಸನ್ಮಾರ್ಗದರ್ಶನ ಮಾಡುವುದು ಅದನ್ನು ಬಯಸುವವನಿಗೆ ಮಾತ್ರ) ಅವನನ್ನು ಯಾರೂ ಪಥಭ್ರಷ್ಟಗೊಳಿಸಲಾರರು. ಯಾರನ್ನು ಅಲ್ಲಾಹನು ಪಥಭ್ರಷ್ಟ ಗೊಳಿಸಿದನೋ (ನಿಜವಾಗಿ ಅಲ್ಲಾಹನು ಪಥಭ್ರಷ್ಟಗೊಳಿಸುವುದು ಸನ್ಮಾರ್ಗದರ್ಶನವನ್ನು ಬಯಸದವರನ್ನು ಮಾತ್ರ) ಅವನಿಗೆ ಯಾರೂ ಸನ್ಮಾರ್ಗದರ್ಶನ ಮಾಡಲಾರರು.

ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂದು ನಾನು ಸಾಕ್ಷ್ಯವಹಿಸುತ್ತೇನೆ. ಅವನು ಏಕೈಕನು. ಅವನಿಗಾರೂ ಭಾಗೀದಾರರಿಲ್ಲ. ವಾಸ್ತವದಲ್ಲಿ ಅತ್ಯುತ್ತಮ ವಚನವು ಅಲ್ಲಾಹನ ಗ್ರಂಥವಾಗಿದೆ. ಯಾರ ಹೃದಯದಲ್ಲಿ ದೇವಗ್ರಂಥದ ಬೆಳಕಿದೆಯೋ ಮತ್ತು ಯಾರು ಎಲ್ಲ ಮನುಷ್ಯರ ವಚನಗಳನ್ನು ತೊರೆದು ಅಲ್ಲಾಹನ ಗ್ರಂಥವನ್ನು ಆರಿಸಿಕೊಂಡನೋ ಅವನು ಯಶಸ್ವಿಯಾದನು. ನಿಸ್ಸಂದೇಹವಾಗಿಯೂ ಅಲ್ಲಾಹನ ವಚನವು ಸಾದ್ಯಂತ ಸತ್ಯವಾಗಿದೆ. ಅತ್ಯಂತ ಪ್ರಭಾವಪೂರ್ಣವಾಗಿದೆ. ಅದರೊಂದಿಗೆ ಸಂಬಂಧ ಬೆಳೆಸುವವರನ್ನು ನೀವು ಪ್ರೀತಿಸಿರಿ ಮತ್ತು ನಿಮ್ಮ ಹೃದಯದ ಪೂರ್ಣ ಸನ್ನದ್ಧತೆಯೊಂದಿಗೆ ಅಲ್ಲಾಹನೊಂದಿಗೆ ನೈಜ ಪ್ರೇಮವನ್ನು ಬೆಳೆಸಿರಿ. ಅವನ ವಚನದ ಪಠನ ಮತ್ತು ಅವನ ಧ್ಯಾನದಿಂದ ಎಂದೂ ಬೇಸರಗೊಳ್ಳಬೇಡಿರಿ. ಅಲ್ಲಾಹನ ವಚನದ ಬಗ್ಗೆ ನಿಮ್ಮ ಹೃದಯವು ಎಂದೂ ನಿರಪೇಕ್ಷವೂ ಕಠಿಣವೂ ಆಗದಿರಲಿ. ಅಲ್ಲಾಹನನ್ನೇ ಆರಾಧಿಸಿರಿ. ಯಾರನ್ನೂ ಅವನ ಜೊತೆ ಕಿಂಚಿತ್ತೂ ಪಾಲುದಾರರಾಗಿ ಮಾಡಬೇಡಿರಿ. ಅವನನ್ನು ಭಯಪಡಬೇಕಾದ ರೀತಿಯಲ್ಲಿ ಭಯಪಡುತ್ತಲಿರಿ. ನಿಮ್ಮ ಸತ್ಕರ್ಮಗಳನ್ನು ನಿಮ್ಮ ಬಾಯಿಯಿಂದಲೂ ದೃಢಪಡಿಸಿರಿ (ಅರ್ಥಾತ್ ನಿಮಗೆ ಭೂಷಣವಾದುದನ್ನೇ ಬಾಯಿಯಿಂದಲೂ ಹೊರಡಿಸಿರಿ)

ಅಲ್ಲಾಹನ ದಯೆ ಮತ್ತು ಧರ್ಮದ ಬುನಾದಿಯಲ್ಲಿ ಪರಸ್ಪರರನ್ನು ಪ್ರೀತಿಸಿರಿ. ಅಲ್ಲಾಹನೊಂದಿಗೆ ಮಾಡಿದ (ಸತ್ಯವಿಶ್ವಾಸದ) ಕರಾರನ್ನು ಮುರಿದರೆ ಅವನು ಖಂಡಿತ ಕುಪಿತಗೊಳ್ಳುವನು. ನಿಮ್ಮ ಮೇಲೆ ಶಾಂತಿಯೂ ಅಲ್ಲಾಹನ ಕರುಣೆಯೂ ಇರಲಿ."

## ಸೋದರತ್ವ

ಅನ್ಸಾರ್‌ಗಳ ಅತ್ಯಂತ ಶ್ರೀಮಂತ ವ್ಯಕ್ತಿ ಸಅದ್ ಬಿನ್ ರಬೀಅ್ ಮತ್ತು ಮಕ್ಕಾ ದಿಂದ ಬಂದ ಮುಹಾಜಿರ್ ಅಬ್ದುರ್ರಹ್ಮಾನ್ ಬಿನ್ ಔಫ್ ಇಬ್ಬರೂ ಅನಸ್ ಬಿನ್

ಮಾಲಿಕ್‌ರ ಮನೆಯಿಂದ ಹೊರಟು ನಡೆಯುತ್ತಿದ್ದಾರೆ. ಇಬ್ಬರೂ ಪರಸ್ಪರ ಮಾತನಾಡುತ್ತಾ ಸಾಗುತ್ತಿದ್ದಾರೆ. ಸ್ವಲ್ಪ ದೂರ ಸಾಗಿದ ಬಳಿಕ ಅವರು ಒಂದು ಓಣಿಗೆ ಪ್ರವೇಶಿಸುತ್ತಾರೆ. ಕೆಲವೇ ಹೆಜ್ಜೆಗಳ ಬಳಿಕ ಒಂದು ಭವ್ಯ ಬಂಗಲೆಯ ಬಳಿ ತಲುಪುತ್ತಾರೆ. ಸಅದ್ ಬಾಗಿಲು ತಟ್ಟುತ್ತಾರೆ. ಬಾಗಿಲು ತೆರೆಯಲ್ಪಡುತ್ತದೆ. ಇಬ್ಬರೂ ಮನೆಯೊಳಗೆ ಪ್ರವೇಶಿಸುತ್ತಾರೆ.

ಇದು ಸಅದ್‌ರ ಮನೆ. ಸರ್ವ ರೀತಿಯ ಸಾಮಾನು ಸರಂಜಾಮುಗಳೂ ಅದರಲ್ಲಿವೆ. ಸಅದ್ ಮನೆಯೊಳಗಿನ ಪ್ರತಿಯೊಂದು ವಸ್ತುವನ್ನೂ ಅಬ್ದುರ್ರಹ್ಮಾನ್‌ರಿಗೆ ಪರಿಚಯಿಸುತ್ತಾರೆ. ಆ ಬಳಿಕ ಇಬ್ಬರೂ ಒಂದು ಕೋಣೆಯನ್ನು ಪ್ರವೇಶಿಸುತ್ತಾರೆ. ಸಅದ್ ಅಬ್ದುರ್ರಹ್ಮಾನ್ ರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ಸೋದರಾ! ನೀವು ನನ್ನ ಮನೆಯ ಎಲ್ಲ ವಸ್ತು-ಒಡವೆ ಗಳನ್ನೂ ನೋಡಿದ್ದೀರಿ. ಇದರಲ್ಲಿ ಅರ್ಧಾಂಶ ನಿಮ್ಮದು. ನಿಮಗಿಷ್ಟವಾದ ವಸ್ತುಗಳನ್ನು ನಿಸ್ಸಂಕೋಚವಾಗಿ ತೆಗೆದುಕೊಳ್ಳಿರಿ. ನನಗೆ ಇಬ್ಬರು ಪತ್ನಿಯರಿದ್ದಾರೆ. ಆ ಪೈಕಿ ನೀವು ಯಾರನ್ನು ಮೆಚ್ಚುತ್ತೀರೋ ನಾನು ಅವಳಿಗೆ ತಲಾಕ್ ಕೊಡುತ್ತೇನೆ. ಇದ್ದತ್ ಅವಧಿ ಕಳೆದ ಬಳಿಕ ನೀವು ಆಕೆಯೊಂದಿಗೆ ನಿಕಾಹ್ ಮಾಡಿ ಕೊಳ್ಳಿ. ನೀವು ನನ್ನ ಸೋದರರು. ಪ್ರತಿಯೊಂದು ವಸ್ತುವಿನಲ್ಲಿಯೂ ಅರ್ಧ ಹಕ್ಕು ನಿಮ್ಮದಿದೆ. ಅದನ್ನು ನಾನು ಸಸಂತೋಷ ನಿಮಗೆ ನೀಡುತ್ತಿರುವೆನು."

ಅಬ್ದುರ್ರಹ್ಮಾನ್ ಕೃತಜ್ಞತಾಭಾವದೊಂದಿಗೆ ಅವರನ್ನು ನೋಡುತ್ತಾ ಹೇಳಿದರು: "ನನ್ನ ಮಾನ್ಯ ಸೋದರಾ! ಅಲ್ಲಾಹನು ನಿಮ್ಮ ವ್ಯಾಪಾರದಲ್ಲಿ ಸಮೃದ್ಧಿ ದಯಪಾಲಿಸಲಿ. ನಿಮ್ಮ ಈ ಸೋದರಭಾವಕ್ಕಾಗಿ ಅತ್ಯುತ್ತಮ ಪ್ರತಿಫಲವನ್ನು ದಯಪಾಲಿಸಲಿ. ನಿಮಗೆ ಆತ ಇನ್ನಷ್ಟು ದಯಪಾಲಿಸಲಿ. ನನಗೆ ಈ ಪೈಕಿ ಯಾವುದೇ ವಸ್ತುವಿನ ಅಗತ್ಯವಿಲ್ಲ. ನನಗೆ ನೀವು ಪೇಟೆಯ ದಾರಿ ತೋರಿಸಿದರೆ ಸಾಕು."

ಇದೆಂತಹ ವಿಚಿತ್ರ ಘಟನೆ! ಸಅದ್ ಅನ್ಸಾರಿಯಾಗಿದ್ದು ಮದೀನಾವಾಸಿಯಾಗಿ ದ್ದಾರೆ. ಅಬ್ದುರ್ರಹ್ಮಾನ್ ಬಿನ್ ಔಫ್ ಮಕ್ಕಾದಿಂದ ವಲಸೆ ಬಂದವರಾಗಿದ್ದು ಇಬ್ಬ ರಲ್ಲೂ ಪರಸ್ಪರ ಯಾವುದೇ ಸಂಬಂಧವಾಗಲೀ ಪರಿಚಯವಾಗಲೀ ಇಲ್ಲ. ಇಬ್ಬರೂ ಬೇರೆ ಬೇರೆ ಗೋತ್ರಕ್ಕೆ ಸೇರಿದವರು. ಆದರೂ ಸಅದ್(ರ) ಯಾಕೆ ತಮ್ಮ ಸೊತ್ತಿನ ಅರ್ಧಾಂಶವನ್ನೂ ತನ್ನ ಓರ್ವ ಪತ್ನಿಯನ್ನೂ ಅವರಿಗೆ ನೀಡಲು ಮುಂದಾಗುತ್ತಾರೆ. ಅಬ್ದುರ್ರಹ್ಮಾನ್ ಬಡವರೂ ನಿರ್ಗತಿಕರೂ ಆಗಿದ್ದು ಯಾಕೆ ಆ ಕೊಡುಗೆಯನ್ನು ನಿರಾಕರಿಸುತ್ತಾರೆ. ಹೌದು! ಇದು ಕೇವಲ ಪ್ರವಾದಿ ಮುಹಮ್ಮದ್‌ರ(ಸ) ಶಿಕ್ಷಣ ಮತ್ತು ತರಬೇತಿಯ ಫಲವಾಗಿದೆ.

ಮಕ್ಕಾದ ಮುಹಾಜಿರರು ಚಿಕ್ಕಾಸೂ ಇಲ್ಲದೆ ಮದೀನಾಕ್ಕೆ ಬಂದಿದ್ದರು. ಅವರ ಪೈಕಿ ಶ್ರೀಮಂತರೂ ಸ್ಥಿತಿವಂತರೂ ಇದ್ದರು. ಆದರೆ ಅವರು ಮಕ್ಕಾದ ಮುಶ್ರಿಕರ ಕಣ್ಣು ತಪ್ಪಿಸಿ ಹೊರಟವರು. ಆದ್ದರಿಂದ ಏನನ್ನೂ ಅವರು ತಮ್ಮ ಜತೆ ತಂದಿರಲಿಲ್ಲ. ಮದೀನಾದಲ್ಲಿ ಅವರ ಮಟ್ಟಿಗೆ ಅನ್ಸಾರರ ಪ್ರತಿಯೊಂದು ಮನೆಯೂ ಅತಿಥಿಗೃಹ ವಾಗಿತ್ತು. ಆದರೂ

ಅವರ ಶಾಶ್ವತ ಪುನರ್ವಸತಿಗೆ ಪ್ರತ್ಯೇಕ ವ್ಯವಸ್ಥೆಯ ಅಗತ್ಯವಿತ್ತು. ಏಕೆಂದರೆ ಅವರಿಗೆ ಇತರರ ದಾನದ ಮೇಲೆ ಜೀವನ ಸಾಗಿಸುವುದು ಎಷ್ಟು ಮಾತ್ರಕ್ಕೂ ಇಷ್ಟವಿರಲಿಲ್ಲ. ಅವರು ಸ್ವಾಭಿಮಾನ ಉಳ್ಳವರೂ ಸಾಹಸಿಗಳೂ ಆಗಿದ್ದರು. ಇತರರ ನೆರವು ಪಡೆಯುವುದು ಅವರ ಘನತೆಗೆ ಕುಂದಾಗಿತ್ತು. ಅವರು ತಮ್ಮ ದುಡಿತದ ಫಲವನ್ನೇ ಉಣ್ಣ ಬಯಸಿದ್ದರು. ಆದರೆ ಅವರ ಬಳಿ ಚಿಕ್ಕಾಸೂ ಇರಲಿಲ್ಲ. ಈ ಪರಿಸ್ಥಿತಿಯ ಅರಿವು ಪ್ರವಾದಿ ಮುಹಮ್ಮದ್‌ರಿಗೆ(ಸ) ಚೆನ್ನಾಗಿ ತಿಳಿದಿತ್ತು.

ಇಂದು ಮುಹಮ್ಮದ್(ಸ) ಅನಸ್ ಬಿನ್ ಮಾಲಿಕ್‌ರ ಮನೆಯಲ್ಲಿ ಆಸೀನರಾಗಿದ್ದಾರೆ. ಅವರು ಈ ಕ್ಲಿಷ್ಟ ಸಮಸ್ಯೆಯನ್ನು ಬಗೆಹರಿಸಲಿಕ್ಕಾಗಿ ಮುಹಾಜಿರ್ ಮತ್ತು ಅನ್ಸಾರ್‌ಗಳನ್ನು ಅಲ್ಲಿ ಕರೆದಿರುವರು. ಸುಮಾರು ನೂರು ಮಂದಿ ಅಲ್ಲಿ ಸೇರಿದ್ದಾರೆ. ಅವರಲ್ಲಿ ಅರ್ಧಾಂಶ ಮುಹಾಜಿರ್‌ಗಳಾದರೆ ಇನ್ನು ಅರ್ಧಾಂಶ ಅನ್ಸಾರ್‌ಗಳಾಗಿದ್ದಾರೆ.

ಸಭಿಕರನ್ನು ಅತ್ಯಂತ ವಾತ್ಸಲ್ಯಭರಿತ ದೃಷ್ಟಿಯಿಂದ ನೋಡುತ್ತಾ ಈ ರೀತಿ ಹೇಳುತ್ತಾರೆ: "ಅನ್ಸಾರ್‌ಗಳೇ! ಈ ಮುಹಾಜಿರ್‌ಗಳು ನಿಮ್ಮ ಸೋದರರಾಗಿದ್ದಾರೆ."

"ಪ್ರವಾದಿವರ್ಯರೇ! ತಾವು ಹೇಳುತ್ತಿರುವುದು ನಿಜ. ಖಂಡಿತವಾಗಿಯೂ ಮುಹಾಜಿರ್‌ಗಳು ನಮ್ಮ ಸೋದರರಾಗಿದ್ದಾರೆ" ಎಂದು ಅನ್ಸಾರ್‌ಗಳು ಒಕ್ಕೊರಳಿನಿಂದ ಹೇಳುತ್ತಾರೆ.

ಮುಹಮ್ಮದ್(ಸ) ಅನ್ಸಾರ್‌ಗಳ ಸೋದರಭಾವ ಮತ್ತು ತ್ಯಾಗ ಮನೋಭಾವವನ್ನು ಪ್ರಶಂಸಿಸುತ್ತಾ ಒಬ್ಬ ಮುಹಾಜಿರ್ ಮತ್ತು ಇನ್ನೊಬ್ಬ ಅನ್ಸಾರಿಯನ್ನು ಹತ್ತಿರ ಕರೆದು: "ಇವರು ಮತ್ತು ನೀವು ಈಗ ಪರಸ್ಪರ ಸೋದರರಾಗಿರುವಿರಿ" ಎನ್ನುತ್ತಾರೆ.

ಇದನ್ನು ಕೇಳುತ್ತಲೇ ಅವರಿಬ್ಬರ ಮುಖಗಳು ಅರಳುತ್ತವೆ.

ಇದೇ ಸಭೆಯಲ್ಲಿ ಸಅದ್ ಬಿನ್ ರಬೀಅ್ ಮತ್ತು ಅಬ್ದುರ್ರಹ್ಮಾನ್ ಬಿನ್ ಔಫ್ ಅವರನ್ನು ಪರಸ್ಪರ ಸೋದರರೆಂದು ಘೋಷಿಸಲಾಗಿತ್ತು. ಆದ್ದರಿಂದಲೇ ಸಅದ್(ರ) ತಮ್ಮ ಪೂರ್ಣ ಸೊತ್ತಿನ ಅರ್ಧಾಂಶವನ್ನು ಅಬ್ದುರ್ರಹ್ಮಾನ್‌ರಿಗೆ(ರ) ನೀಡಲು ಮುಂದಾಗಿದ್ದರು. ಆದರೆ ಅಬ್ದುರ್ರಹ್ಮಾನ್(ರ) ತಮ್ಮ ಆ ಸೋದರನಿಗೆ ಹೊರೆಯಾಗಲು ಇಷ್ಟಪಡಲಿಲ್ಲ.

ಅಬ್ದುರ್ರಹ್ಮಾನ್(ರ) ಯಹೂದಿ ಗೋತ್ರವಾದ ಕೈನುಕಾದ ಪೇಟೆಯಲ್ಲಿ ತುಪ್ಪ ಮತ್ತು ಗಿಣ್ಣಿನ ವ್ಯಾಪಾರ ಆರಂಭಿಸಿದರು. ಕ್ರಮೇಣ ಅವರು ಓರ್ವ ಯಶಸ್ವಿ ವರ್ತಕರಾಗಿ ಮಾರ್ಪಟ್ಟರು. ಏಳುನೂರು ಒಂಟೆಗಳ ಮೇಲೆ ಹೇರಬಲ್ಲಷ್ಟು ಸರಕನ್ನು ಅವರು ಒಮ್ಮೆಗೆ ಮದೀನಾಕ್ಕೆ ತರುತ್ತಿದ್ದರು.

ಅಬೂಬಕರ್(ರ) ಬಟ್ಟೆಯ ವ್ಯಾಪಾರ ಆರಂಭಿಸಿದ್ದರು. ಉಸ್ಮಾನ್(ರ) ಖರ್ಜೂರದ ವ್ಯಾಪಾರ ನಡೆಸುತ್ತಾರೆ. ಉಮರ್‌ರ(ರ) ವ್ಯಾಪಾರವು ಇರಾನ್ ದೇಶದ ವರೆಗೂ ವ್ಯಾಪಿಸಿತ್ತು.

ಅನ್ಸಾರ್‌ಗಳು ಮಕ್ಕಾದಿಂದ ಬಂದವರೊಡನೆ ವ್ಯವಹರಿಸಿದ ರೀತಿ, ಅವರ ಆತಿಥ್ಯ,

ಸಮತಾಭಾವ ಇತ್ಯಾದಿಗಳು ಇತಿಹಾಸದಲ್ಲೇ ಅಪೂರ್ವವಾದುದು! ಸ್ವಲ್ಪ ಸಮಯದ ಬಳಿಕ ಬಹ್ರೈನ್ ಇಸ್ಲಾಮಿೂ ಆಡಳಿತಕ್ಕೆ ಒಳಪಟ್ಟಾಗ ಪ್ರವಾದಿ(ಸ) ಅನ್ಸಾರ್‌ಗಳನ್ನು ಕರೆದು "ನಾನು ಅಲ್ಲಿಯ ಭೂಮಿಯನ್ನು ನಿಮ್ಮೊಳಗೆ ವಿತರಣೆ ಮಾಡಬಯಸುತ್ತೇನೆ" ಎಂದಾಗ "ಮೊದಲು ನಮ್ಮ ಮುಹಾಜಿರ್ ಸೋದರರಿಗೂ ಅಷ್ಟೇ ಭೂಮಿಯನ್ನು ನೀಡಿರಿ ಆ ಬಳಿಕ ಮಾತ್ರ ನಾವು ಈ ಕೊಡುಗೆಯನ್ನು ಸ್ವೀಕರಿಸಬಲ್ಲೆವು" ಎಂದು ಅನ್ಸಾರ್‌ಗಳು ಉತ್ತರಿಸಿದರು.

ಅನ್ಸಾರ್‌ಗಳ ಪ್ರೀತಿ ಮತ್ತು ತ್ಯಾಗ ಮನೋಭಾವದಿಂದ ಪ್ರಭಾವಿತರಾಗಿ ಮುಹಾಜಿರ್‌ಗಳು ಮುಹಮ್ಮದ್‌ರಲ್ಲಿ(ಸ) ಹೀಗೆ ಹೇಳಿದರು: "ಪ್ರವಾದಿವರ್ಯರೇ! ನಾವು ಈ ತನಕ ಅನ್ಸಾರ್‌ರಂತಹ ಒಂದು ಜನಾಂಗವನ್ನು ಕಂಡಿಲ್ಲ. ಅವರು ನಮ್ಮ ಸ್ವಲ್ಪ ಕೆಲಸಕ್ಕೆ ಅಧಿಕ ಪ್ರತಿಫಲ ನೀಡುತ್ತಾರೆ. ಹೆಚ್ಚು ಕೆಲಸ ಮಾಡಿದರೆ ಅತ್ಯಧಿಕ ಸಂಬಳ ಕೊಡುತ್ತಾರೆ. ಅವರು ನಮ್ಮೆಲ್ಲ ಖರ್ಚು ವೆಚ್ಚಗಳ ಹೊಣೆಯನ್ನು ತಾವೇ ವಹಿಸಿಕೊಂಡಿರುವರು. ನಮ್ಮನ್ನು ತಮ್ಮ ವ್ಯಾಪಾರದಲ್ಲಿ ಪಾಲುದಾರರಾಗಿ ಮಾಡಿರುವರು. ಆದ್ದರಿಂದ ಪರಲೋಕದ ಪ್ರತಿಫಲವನ್ನು ಪೂರ್ಣವಾಗಿ ಅವರೇ ಬಾಚಿಕೊಳ್ಳುವರೋ ಎಂದು ನಮಗೆ ಚಿಂತೆಯಾಗುತ್ತಿದೆ."

ಇದನ್ನು ಕೇಳಿ ಪ್ರವಾದಿ(ಸ) ಬಹಳ ಸಂತುಷ್ಟರಾದರು. "ಹಾಗೆ ಆಗದು. ನೀವು ಅವರ ಬಗ್ಗೆ ಹೊಗಳುತ್ತಿರುವುದರಿಂದ ಮತ್ತು ಅವರಿಗಾಗಿ ಪ್ರಾರ್ಥಿಸುತ್ತಿರುವುದರಿಂದ ಅವರ ಸದ್ವರ್ತನೆಗೆ ಒಂದು ರೀತಿಯಲ್ಲಿ ಪರಿಹಾರ ನೀಡಿದಂತಾಗುವುದು."

## ಐತಿಹಾಸಿಕ ಒಡಂಬಡಿಕೆ

ಮದೀನಾದ ಬಹುದೇವಾರಾಧಕರು ಪ್ರವಾದಿವರ್ಯರನ್ನು(ಸ) ಮತ್ತು ಇಸ್ಲಾಮ್ ಧರ್ಮವನ್ನು ತೀವ್ರವಾಗಿ ವಿರೋಧಿಸುತ್ತಿದ್ದರು. ಅಲ್ಲಿ ಕಪಟವಿಶ್ವಾಸಿಗಳೂ ಇದ್ದರು. ಅವರು ಒಂದೆಡೆ ಮುಸ್ಲಿಮರನ್ನು ವಂಚನೆಯಲ್ಲಿಟ್ಟು ಇನ್ನೊಂದೆಡೆ ಇಸ್ಲಾಮಿನ ಶತ್ರು ಗಳೊಂದಿಗೆ ಸಹಕರಿಸುತ್ತಿದ್ದರು. ಯಹೂದಿಗಳ ಮೂರು ಪ್ರಮುಖ ಗೋತ್ರಗಳೂ ಮದೀನಾದಲ್ಲಿ ವಾಸವಾಗಿದ್ದುವು. ಕೈನುಕಾ ಗೋತ್ರ, ನಝೀರ್ ಗೋತ್ರ ಮತ್ತು ಕುರೈಝಾ ಗೋತ್ರ. ಈ ಎಲ್ಲ ಗೋತ್ರಗಳೂ ಸದಾ ಪ್ರವಾದಿವರ್ಯರ(ಸ) ವಿರುದ್ಧ ಸಂಚು ಹೂಡುತ್ತಿದ್ದುವು. ಮತ್ತೊಂದೆಡೆ ಮುಹಾಜಿರ್‌ಗಳು ಮತ್ತು ಅನ್ಸಾರ್‌ಗಳು ಇಸ್ಲಾಮಿನ ಉತ್ಥಾನಕ್ಕಾಗಿ ಎಲ್ಲ ರೀತಿಯ ತ್ಯಾಗ ಬಲಿದಾನಗಳನ್ನು ನೀಡುತ್ತಿದ್ದರು.

ಈ ಎರಡು ಬಣಗಳ ಹಿತಾಸಕ್ತಿಗಳು ಯಾವ ಕ್ಷಣದಲ್ಲೂ ಪರಸ್ಪರ ಸಂಘರ್ಷದ ಅವಸ್ಥೆಯನ್ನು ಸೃಷ್ಟಿಸಬಹುದಾದ ಪರಿಸ್ಥಿತಿಯಿತ್ತು. ಆದ್ದರಿಂದ ಮದೀನಾದ ಜನತೆಯನ್ನು ಶಾಂತಿ ಸುವ್ಯವಸ್ಥೆಯ ಉದ್ದೇಶಕ್ಕಾಗಿ ಪರಸ್ಪರ ಬೆಸೆಯುವ ಅಗತ್ಯವಿತ್ತು. ಅನ್ಯಥಾ ಮುಂದೆ ಮದೀನಾ ನಗರಕ್ಕೆ ಒದಗಬಹುದಾದ ಸಂಕಷ್ಟಗಳಿಂದ ಅದನ್ನು ರಕ್ಷಿಸುವುದು ಸಾಧ್ಯವಿರಲಿಲ್ಲ. ಮದೀನಾ ನಗರಕ್ಕೆ ಮತ್ತು ಅಲ್ಲಿನ ನಿವಾಸಿಗಳ ಶಾಂತಿಯುತ ಸಹಬಾಳ್ವೆಗೆ ಒದಗಬಹುದಾದ ವಿಪತ್ತುಗಳನ್ನು ಪ್ರವಾದಿ ಮುಹಮ್ಮದ್(ಸ) ಚೆನ್ನಾಗಿ ಅರಿತಿದ್ದರು. ಆದ್ದರಿಂದ ಈ ವಿಭಿನ್ನ

ಪಕ್ಷಗಳನ್ನು ಕೆಲವು ಸಮಾನ ಉದ್ದೇಶಗಳಿಗಾಗಿ ಸಕ್ರಿಯವಾಗಿ ದುಡಿಯುವಂತೆ ಮಾಡಬೇಕಾಗಿತ್ತು. ಈ ಧ್ಯೇಯ ಸಾಧನೆಗೆ ಪ್ರವಾದಿ ಮುಹಮ್ಮದ್(ಸ) ಒಂದು ಒಡಂಬಡಿಕೆಯನ್ನು ಸಿದ್ಧಪಡಿಸಿದರು. ಇದುವೇ ಮದೀನಾ ನಗರದ ಪ್ರಪ್ರಥಮ ಸಂವಿಧಾನವೆನಿಸಿಕೊಂಡಿತು. ಅದೊಂದು ಅಪ್ರತಿಮ ದಸ್ತಾವೇಜಾಗಿದ್ದು ಅದರ ಮೂಲ ಉದ್ದೇಶಗಳ ಸಾರಾಂಶ ಹೀಗಿವೆ:

1. ಎಲ್ಲ ಜನ ವಿಭಾಗಗಳೂ ಶಾಂತಿ ಸಮಾಧಾನದಿಂದ ಜೀವನ ಸಾಗಿಸುವಂತಾಗುವುದು.

2. ಪ್ರತಿಯೊಬ್ಬ ವ್ಯಕ್ತಿಗೂ ಅವನ ವಿಶ್ವಾಸ ಮತ್ತು ಆಚಾರಗಳ ಸ್ವಾತಂತ್ರ್ಯವಿರುವುದು.

3. ಹಿಂಸೆ ಮತ್ತು ಕ್ಷೋಭೆಯ ಎಲ್ಲ ಸ್ರೋತಗಳನ್ನೂ ಮುಚ್ಚಿಬಿಡುವುದು.

4. ಬಾಹ್ಯ ಶತ್ರುಗಳ ಆಕ್ರಮಣವನ್ನು ತಡೆಯುವುದು.

ಈ ಸಂವಿಧಾನದ ಪೂರ್ಣರೂಪ ಹೀಗಿದೆ:

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ.

ಇದು ಪ್ರವಾದಿ ಮುಹಮ್ಮದ್(ಸ) ಮಾಡಿಕೊಂಡಿರುವ ಒಂದು ಒಡಂಬಡಿಕೆ. ಕುರೈಶರು ಮತ್ತು ಯಸ್ರಿಬ್ ವಾಸಿಗಳ ಪೈಕಿ ಸತ್ಯವಿಶ್ವಾಸ ಸ್ವೀಕರಿಸಿದ ಹಾಗೂ ಅವರ ಅನುಸರಣೆಗೆ ಬದ್ಧರಾಗಿ ಅವರೊಂದಿಗೆ ಸೇರಿಕೊಳ್ಳುವ ಮತ್ತು ಅವರ ಜತೆಗೂಡಿ ಯುದ್ಧ ಮಾಡಲು ಸಿದ್ಧರಾಗುವ ಜನರ ಮಧ್ಯೆ ಏರ್ಪಟ್ಟ ಒಡಂಬಡಿಕೆ.

1. ಇವರೆಲ್ಲ ಸೇರಿ ಈ ಒಡಂಬಡಿಕೆಗೆ ಬದ್ಧರಲ್ಲದವರ ವಿರುದ್ಧ ಒಂದು ರಾಷ್ಟ್ರ (ರಾಜಕೀಯ ಒಕ್ಕೂಟ)ವೆಂದು ಪರಿಗಣಿಸಲ್ಪಡುವರು.

2. ಕುರೈಶರ ಪೈಕಿ ಇಲ್ಲಿಗೆ ವಲಸೆ ಬಂದವರು ಈ ಹಿಂದಿನ ಪದ್ಧತಿಯಂತೆ ತಮ್ಮ ರಕ್ತ ಪರಿಹಾರ ಧನವನ್ನು ತಾವೇ ಒಟ್ಟು ಸೇರಿ ಪಾವತಿಸುವರು. ತಮ್ಮ ಖೈದಿಗಳನ್ನು ಸ್ವತಃ ಪರಿಹಾರ ಧನ ಕೊಟ್ಟು ಬಿಡಿಸಿಕೊಳ್ಳುವರು. ತನ್ಮೂಲಕ ಸತ್ಯವಿಶ್ವಾಸಿಗಳ ಪರಸ್ಪರ ವರ್ತನೆಯು ಒಳಿತು ಮತ್ತು ನ್ಯಾಯದ್ದಾಗಿರುವುದು.

3. ಔಫ್ ಗೋತ್ರದವರು ವಾಡಿಕೆಯಂತೆ ತಾವು ಪಾವತಿಸಬೇಕಾದ ರಕ್ತ ಪರಿಹಾರ ಧನವನ್ನು ತಾವೇ ಒಟ್ಟು ಸೇರಿ ಪಾವತಿಸುವರು. ಪ್ರತಿಯೊಂದು ಗುಂಪೂ ತನ್ನ ಖೈದಿಗಳನ್ನು ತಾನೇ ಪರಿಹಾರ ಧನ ನೀಡಿ ಬಿಡಿಸಿಕೊಳ್ಳುವುದು. ತನ್ಮೂಲಕ ಸತ್ಯವಿಶ್ವಾಸಿಗಳ ಪರಸ್ಪರ ವರ್ತನೆಯು ಒಳಿತು ಮತ್ತು ನ್ಯಾಯದ್ದಾಗಿರುವುದು. (ಹಾರಿಸ್, ಸಾಇದಃ, ಜಸಮ್, ನಜ್ಜಾರ್, ಅಮ್ರ್, ನಬೀತ್ ಮತ್ತು ಔಸ್ ಗೋತ್ರಗಳ ಬಗೆಗೂ ಇಂತಹುದೇ ವಿಧಿಯನ್ನು ಬರೆಯಲಾಯಿತು)

4. ಸತ್ಯವಿಶ್ವಾಸಿಗಳು ತಮ್ಮ ಪೈಕಿ ಬಡವರು ಮತ್ತು ಸಾಲದ ಹೊರೆಯಲ್ಲಿ ನಲುಗಿದ

ವ್ಯಕ್ತಿಗೆ ನೆರವಾಗದೆ ಇರಬಾರದು. ಆತ ತನ್ನ ಪಾಲಿನ ರಕ್ತ ಪರಿಹಾರ ಧನ ಅಥವಾ ಖೈದಿ ಬಿಡುಗಡೆಯ ಪರಿಹಾರ ಧನವನ್ನು ಪಾವತಿಸಲು ನೆರವಾಗಬೇಕು.

5. ಯಾವ ಸತ್ಯವಿಶ್ವಾಸಿಯೂ ಇನ್ನೊಬ್ಬ ಸತ್ಯವಿಶ್ವಾಸಿಯೊಡನೆ ಆತನ ಮೌಲಾ (ಒಪ್ಪಂದದ ಸೋದರ)ನ ಅನುಮತಿಯಿಲ್ಲದೆ ಒಪ್ಪಂದ ಮಾಡಬಾರದು. (ಹಾಗೆ ಮಾಡಿದರೆ ಇದು ಸತ್ಯವಿಶ್ವಾಸಿಗಳ ಮಧ್ಯೆ ತಪ್ಪು ತಿಳುವಳಿಕೆಗೆ ಕಾರಣವಾಗಲೂ ಬಹುದು)

6. ವಿದ್ರೋಹವೆಸಗುವ, ಅಕ್ರಮ, ಪಾಪ ಮತ್ತು ದಬ್ಬಾಳಿಕೆಯಿಂದ ಕಾರ್ಯವೆಸಗುವ ಹಾಗೂ ಸತ್ಯವಿಶ್ವಾಸಿಗಳ ಮಧ್ಯೆ ಒಡಕುಂಟು ಮಾಡಲು ಪ್ರಯತ್ನಿಸುವ ಪ್ರತಿಯೊಬ್ಬ ವ್ಯಕ್ತಿಯನ್ನು ಸತ್ಯವಿಶ್ವಾಸಿಗಳು ಒಗ್ಗಟ್ಟಿನಿಂದ ಎದುರಿಸುವರು. ಅಂಥವರು ತಮ್ಮ ಪೈಕಿ ಯಾರ ಪುತ್ರನೇ ಆಗಿದ್ದರೂ ಅವರ ವಿರುದ್ಧ ಎಲ್ಲ ಸತ್ಯವಿಶ್ವಾಸಿಗಳು ಜಂಟಿಯಾಗಿ ಹೋರಾಡುವರು.

7. ಒಬ್ಬ ಸತ್ಯವಿಶ್ವಾಸಿಯು (ಯುದ್ಧ ನಿರತ) ಸತ್ಯನಿಷೇಧಿಗೆ ಬದಲಾಗಿ ಇನ್ನೊಬ್ಬ ಸತ್ಯ ವಿಶ್ವಾಸಿಯನ್ನು ಕೊಲ್ಲಬಾರದು ಮತ್ತು ಓರ್ವ ಸತ್ಯವಿಶ್ವಾಸಿಗೆದುರಾಗಿ(ಯುದ್ಧ ನಿರತ) ಸತ್ಯನಿಷೇಧಿಗೆ ಬೆಂಬಲವನ್ನೂ ನೀಡಬಾರದು.

8. ಅಲ್ಲಾಹನ ಕರಾರು ಮತ್ತು ಹೊಣೆ ಒಂದೇ ಆಗಿದೆ. ಸತ್ಯವಿಶ್ವಾಸಿಗಳ ಪೈಕಿ ಓರ್ವ ಸಾಮಾನ್ಯ ವ್ಯಕ್ತಿಯೂ ಯಾರಿಗಾದರೂ ಆಶ್ರಯ ನೀಡಿದರೆ ಅದಕ್ಕೆ ಎಲ್ಲ ಸತ್ಯವಿಶ್ವಾಸಿಗಳು ಬದ್ಧರಾಗಿರುವರು. ಇತರರ ವಿರುದ್ಧ ಮುಸ್ಲಿಮರು ಪರಸ್ಪರ ಸೋದರರಾಗಿರುವರು.

9. ಯಹೂದಿಗಳ ಪೈಕಿ ನಮಗೆ ವಿಧೇಯರಾಗುವವರಿಗೆ ನಮ್ಮ ಬೆಂಬಲ ಮತ್ತು ಸಮಾನತೆ ಪ್ರಾಪ್ತವಾಗುವುದು. ಅವರ ಪೈಕಿ ಯಾರ ಮೇಲೂ ಅನ್ಯಾಯವೆಸಗಲಾಗದು ಮತ್ತು ಅವರ ವಿರುದ್ಧ ಯಾರಿಗೂ ಬೆಂಬಲ ನೀಡಲಾಗದು.

10. ಸತ್ಯವಿಶ್ವಾಸಿಗಳ ಶಾಂತಿ ಒಪ್ಪಂದ ಒಂದೇ ಆಗಿರುವುದು. ಅಲ್ಲಾಹನ ಮಾರ್ಗದಲ್ಲಿ ಯುದ್ಧ ನಡೆಯುವಾಗ ಯಾವನೇ ಸತ್ಯವಿಶ್ವಾಸಿಯು ಇತರ ಸತ್ಯವಿಶ್ವಾಸಿಗಳನ್ನು ಬಿಟ್ಟು ವೈರಿಗಳೊಂದಿಗೆ ಶಾಂತಿ ಒಪ್ಪಂದ ಮಾಡಲಾರ. ಈ ಶಾಂತಿ ಒಪ್ಪಂದವು ಎಲ್ಲ ಸತ್ಯವಿಶ್ವಾಸಿಗಳಿಗೂ ಸಮಾನವಾಗಿರುವುದು.

11. ನಮ್ಮ ಜೊತೆ ಸೇರಿ ಯುದ್ಧ ಮಾಡುವ ಪ್ರತಿಯೊಂದು ವರ್ಗಕ್ಕೂ ಹಂತ ಹಂತವಾಗಿ ವಿಶ್ರಾಂತಿಯ ಅವಕಾಶ ಒದಗಿಸಲಾಗುವುದು.

12. ಅಲ್ಲಾಹನ ಮಾರ್ಗದ ಯುದ್ಧದಲ್ಲಿ ಪ್ರಾಣನಷ್ಟ ಅನುಭವಿಸಬೇಕಾಗಿ ಬಂದಾಗ ಸತ್ಯವಿಶ್ವಾಸಿಗಳು ಜೊತೆಯಾಗಿಯೇ ಅದಕ್ಕೆ ಪ್ರತೀಕಾರವೆಸಗುವರು.

13. ಖಂಡಿತವಾಗಿಯೂ ದೇವಭಕ್ತರಾದ ಸತ್ಯವಿಶ್ವಾಸಿಗಳೆಲ್ಲರೂ ಉತ್ತಮರೂ ನೇರ ಮಾರ್ಗದಲ್ಲಿರುವವರೂ ಆಗಿದ್ದಾರೆ.

14. (ಈ ಒಡಂಬಡಿಕೆಯಲ್ಲಿ ಶಾಮೀಲಾಗಿರುವ) ಯಾವ ಬಹುದೇವ ವಿಶ್ವಾಸಿಯೂ

ಕುರೈಶರ ಪ್ರಾಣ ಮತ್ತು ಸೊತ್ತುಗಳಿಗೆ ಅಭಯ ನೀಡಬಾರದು. ಈ ಬಗ್ಗೆ ಯಾವ ಸತ್ಯ ವಿಶ್ವಾಸಿಯನ್ನೂ ವಿರೋಧಿಸಬಾರದು.

15. ಯಾವ ವ್ಯಕ್ತಿಯು ಒಬ್ಬ ಸತ್ಯವಿಶ್ವಾಸಿಯನ್ನು ಕೊಲೆ ಮಾಡುತ್ತಾನೋ ಮತ್ತು ಅದಕ್ಕೆ ರುಜುವಾತು ಕೂಡಾ ಸಿಗುತ್ತದೋ ಅವನಿಂದ ಪ್ರತೀಕಾರ ಪಡೆಯ ಲಾಗುವುದು. ಒಂದು ವೇಳೆ ಕೊಲೆಗೀಡಾದವನ ವಾರೀಸುದಾರರು 'ರಕ್ತ ಪರಿಹಾರ ಧನ' ಸ್ವೀಕರಿಸಲು ಒಪ್ಪದಿದ್ದರೆ ಕೊಲೆಗಾರನ ವಿರುದ್ಧ ಪ್ರತೀಕಾರವೆಸಗುವುದು ಎಲ್ಲ ಸತ್ಯವಿಶ್ವಾಸಿಗಳ ಮೇಲೆ ಕಡ್ಡಾಯವಾಗಿದೆ. ಇದಲ್ಲದೆ ಬೇರಾವ ವಿಧಾನವೂ ಅವರಿಗೆ ಧರ್ಮಸಮ್ಮತವಾಗದು.

16. ಈ ಒಡಂಬಡಿಕೆಯ ಉಲ್ಲೇಖಗಳನ್ನು ಒಪ್ಪುವ, ಅಲ್ಲಾಹನ ಮೇಲೆ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುವ ಯಾವನೇ ಸತ್ಯವಿಶ್ವಾಸಿಯು ಯಾವುದೇ ಹೊಸ ವಿಷಯವನ್ನೆತ್ತಿ ಗೊಂದಲ ಉಂಟುಮಾಡುವವನಿಗೆ ನೆರವಾಗುವುದು ಅಥವಾ ಅವನಿಗೆ ಆಶ್ರಯ ನೀಡುವುದು ಖಂಡಿತ ಧರ್ಮಸಮ್ಮತವಾಗದು. ಅವನಿಗೆ ನೆರವಾದವನು ಅಥವಾ ಆಶ್ರಯ ನೀಡಿದವನು ನಿರ್ಣಾಯಕ ದಿನ ಅಲ್ಲಾಹನ ಕ್ರೋಧ ಮತ್ತು ಶಾಪಕ್ಕೆ ಗುರಿಯಾಗುವನು. ಅಲ್ಲಿ ಯಾವುದೇ ಪರಿಹಾರ ಧನ ಅಥವಾ ಬದಲು ಸ್ವೀಕರಿಸಲಾಗದು.

17. ಈ ಒಡಂಬಡಿಕೆಯನ್ನು ಪಾಲಿಸುವವರ ಮಧ್ಯೆ ಯಾವುದೇ ವಿಷಯದಲ್ಲಿ ಭಿನ್ನಾಭಿಪ್ರಾಯ ಉಂಟಾದರೆ, ಆ ಕುರಿತು ಅಲ್ಲಾಹನ ಮತ್ತು ಮುಹಮ್ಮದ್‌ರ(ಸ) ತೀರ್ಮಾನವೇ ಅಂತಿಮವೆನಿಸುವುದು.

18. ಯಹೂದಿಗಳು ಸತ್ಯವಿಶ್ವಾಸಿಗಳ ಜತೆ ಸೇರಿ ವೈರಿಗಳ ವಿರುದ್ಧ ಯುದ್ಧ ಮಾಡುತ್ತಿರುವ ತನಕ ತಮ್ಮ ಖರ್ಚುಗಳನ್ನು ತಾವೇ ನೋಡಿಕೊಳ್ಳುವರು.

19. ಔಸ್ ಗೋತ್ರದ ಯಹೂದಿಗಳು ಮತ್ತು ಸತ್ಯವಿಶ್ವಾಸಿಗಳು ಒಂದೇ ಜನಾಂಗ (ರಾಜಕೀಯ ಏಕತೆ)ವೆಂದು ಪರಿಗಣಿಸಲ್ಪಡುವರು. ಯಹೂದಿಗಳು ಮತ್ತು ಮುಸ್ಲಿಮರು (ಗುಲಾಮರಾಗಲಿ, ಸ್ವತಂತ್ರರಾಗಲಿ) ತಂತಮ್ಮ ಧರ್ಮದಂತೆ ಬಾಳಲು ಸ್ವತಂತ್ರ ರಾಗಿರುವರು. ಆದರೆ ಯಾರು ಅನ್ಯಾಯ - ಅಕ್ರಮ ಎಸಗುವರೋ ಅವರು ತಮ್ಮನ್ನೂ ತಮ್ಮ ಪರಿವಾರವನ್ನೂ ಹೊರತು ಇತರ ಯಾರನ್ನೂ ಸಂಕಷ್ಟದಲ್ಲಿ ಸಿಲುಕಿಸಲಾರರು. (ಈ ಪರಿಚ್ಛೇದದಲ್ಲಿ ನಜ್ಜಾರ್ ಮತ್ತು ಯಹೂದಿಗಳ ಇತರೆಲ್ಲ ಗೋತ್ರಗಳೂ ಸೇರಿವೆ)

20. ಮುಹಮ್ಮದ್‌ರ(ಸ) ಅನುಮತಿ ಇಲ್ಲದೆ ಯಾರೂ ಯುದ್ಧಕ್ಕೆ ಹೊರಡಬಾರದು.

21. ಯುದ್ಧಕ್ಕೆ ಪ್ರತೀಕಾರ ಎಸಗುವುದನ್ನು ತಡೆಯಲಾಗದು. ಯಾರು ರಕ್ತಪಾತ ವೆಸಗುವನೋ ಅದರ ಹೊಣೆಯು ಅವನ ಮತ್ತು ಅವನ ಗೋತ್ರದ ಮೇಲಿರುವುದು. ಆದರೆ ಅನ್ಯಾಯಕ್ಕೆ ಒಳಗಾದವನು ಇದಕ್ಕೆ ಹೊರತಾಗಿರುವನು. ಅವನ ಜೊತೆ ಅಲ್ಲಾಹನಿದ್ದಾನೆ.

22. ಯಹೂದಿಗಳು ತಮ್ಮ ಖರ್ಚಿಗೆ ಹಾಗೂ ಮುಸ್ಲಿಮರು ತಮ್ಮ ಖರ್ಚಿಗೆ ಹೊಣೆಗಾರರಾಗಿರುವರು.

23. ಈ ಒಡಂಬಡಿಕೆಯಲ್ಲಿ ಸೇರಿದವರ ವಿರುದ್ಧ ಯಾರು ಯುದ್ಧ ಮಾಡಿದರೂ ಅವರು (ಯಹೂದಿಗಳು ಮತ್ತು ಮುಸ್ಲಿಮರು) ಒಬ್ಬರಿಗೊಬ್ಬರು ನೆರವಾಗುವರು. ಪರಸ್ಪರ ನಿಷ್ಠಾವಂತರಾಗಿರುವರು. ವಚನಭಂಗ ಮಾಡಲಾರರು.

24. ಮಿತ್ರ ಗೋತ್ರದ ದುರ್ನಡತೆಗೆ ಯಾವ ವ್ಯಕ್ತಿಯನ್ನೂ ಹೊಣೆಗಾರನಾಗಿ ಮಾಡಲಾಗದು. ಎಲ್ಲ ಸ್ಥಿತಿಯಲ್ಲೂ ಮರ್ದಿತನಿಗೆ ನೆರವು ನೀಡಲಾಗುವುದು.

25. ಯಹೂದಿಗಳು ಮುಸ್ಲಿಮರ ಜತೆ ಸೇರಿ ಯುದ್ಧ ಮಾಡುತ್ತಿರುವ ತನಕ ತಮ್ಮ ಎಲ್ಲ ವೆಚ್ಚಗಳನ್ನೂ ಅವರೇ ಭರಿಸುವರು.

26. ಯಸ್ರಿಬ್ ನಗರವು ಈ ಒಡಂಬಡಿಕೆಯಲ್ಲಿ ಸೇರಿದವರ ಮಟ್ಟಿಗೆ ಪವಿತ್ರವೂ ಗೌರವಾರ್ಹವೂ ಆಗಿರುವುದು.

27. ಆಶ್ರಯ ನೀಡುವವನ ಜತೆ ವರ್ತಿಸುವಂತೆಯೇ ಆಶ್ರಯ ಪಡೆದವನ ಜತೆಗೂ ವರ್ತಿಸಲಾಗುವುದು. ಅವನಿಗೆ ಯಾವುದೇ ರೀತಿಯ ನಷ್ಟ ಉಂಟುಮಾಡಲಾಗದು. ಅವನೂ ವಚನಭಂಗ ಮಾಡಲಾರನು.

28. ಯಾವ ಮಹಿಳೆಗೂ ಆಕೆಯ ಮನೆತನದ ಅನುಮತಿಯಿಲ್ಲದೆ ಆಶ್ರಯ ನೀಡಲಾಗದು.

29. ಒಡಂಬಡಿಕೆಯಲ್ಲಿ ಸೇರಿದವರ ಮಧ್ಯೆ ಯಾವುದೇ ಹೊಸ ವಿಷಯ ಅಥವಾ ವ್ಯವಹಾರದಲ್ಲಿ ಭಿನ್ನಮತ ಉಂಟಾಗಿ ಅದರಿಂದ ಕ್ಷೋಭೆಯುಂಟಾಗುವ ಆಶಂಕೆಯಿದ್ದರೆ ಅಲ್ಲಾಹ್ ಮತ್ತು ಮುಹಮ್ಮದ್‌ರ(ಸ) ತೀರ್ಮಾನವೇ ಅಂತಿಮವೆನಿಸುವುದು. ಈ ಒಡಂಬಡಿಕೆಯಲ್ಲಿ ಉಲ್ಲೇಖಿಸಲಾಗಿರುವ ವಿಷಯಗಳನ್ನು ಅತ್ಯಂತ ಜಾಗರೂಕತೆ ಮತ್ತು ನಿಷ್ಠೆಯಿಂದ ಪಾಲಿಸುವುದನ್ನು ಅಲ್ಲಾಹನು ಮೆಚ್ಚುತ್ತಾನೆ.

30. ಕುರೈಶರಿಗಾಗಲಿ ಅವರ ಬೆಂಬಲಿಗರಿಗಾಗಲೀ ಆಶ್ರಯ ನೀಡಲಾಗದು.

31. ಯಾರಾದರೂ ಯಸ್ರಿಬ್‌ನ ಮೇಲೆ ಆಕ್ರಮಣ ಮಾಡಿದರೆ ಯಹೂದಿಗಳು ಮತ್ತು ಮುಸ್ಲಿಮರು ಕಡ್ಡಾಯವಾಗಿ ಪರಸ್ಪರರಿಗೆ ನೆರವಾಗುವರು.

32. ಯಹೂದಿಗಳನ್ನು ಯಾವುದೇ ಶಾಂತಿ ಒಪ್ಪಂದ ಮಾಡಿಕೊಳ್ಳಲು ಅಥವಾ ಅದರಲ್ಲಿ ಸೇರಿಕೊಳ್ಳಲು ಆಹ್ವಾನಿಸಿದರೆ ಅವರು ಅದನ್ನು ಸ್ವೀಕರಿಸುವರು. ಯಹೂದಿಗಳು ಯಾರೊಂದಿಗಾದರೂ ಶಾಂತಿ ಒಪ್ಪಂದ ಮಾಡಿಕೊಂಡು ಮುಸ್ಲಿಮರನ್ನೂ ಅದರಲ್ಲಿ ಸೇರಿಕೊಳ್ಳಲು ಆಹ್ವಾನಿಸಿದರೆ ಅವರಿಗೂ ಅದನ್ನು ಸ್ವೀಕರಿಸುವುದು ಕಡ್ಡಾಯವಾಗಿರುವುದು. ಧರ್ಮದ ವಿಷಯದಲ್ಲಿ ನಡೆಯುವ ಯುದ್ಧವು ಇದಕ್ಕೆ ಹೊರತಾಗಿರುವುದು (ಅರ್ಥಾತ್ ಧರ್ಮಯುದ್ಧದಲ್ಲಿ ಯಾವುದೇ ವಿಭಾಗಕ್ಕೆ ನೆರವಾಗುವುದು ಕಡ್ಡಾಯವಲ್ಲ).

33. ಪ್ರತಿಯೊಂದು ವರ್ಗವು ತನ್ನ ಮುಂದಿರುವ ಗಡಿಯ ರಕ್ಷಣೆಗೆ ಜವಾಬ್ದಾರಿಯಾಗಿರುವುದು.

34. ಔಸ್‌ನ ಯಹೂದಿಗಳಿಗೆ - ಅವರು ಗುಲಾಮರಾಗಿರಲಿ, ಸ್ವತಂತ್ರರಾಗಿರಲಿ- ಈ ಒಡಂಬಡಿಕೆಯನ್ನು ಅಂಗೀಕರಿಸುವವರಿಗೆ ಇರುವಂತಹ ಹಕ್ಕುಗಳೇ ಇರುವುವು.

35. ಈ ಒಡಂಬಡಿಕೆಯು ಯಾವನೇ ಅಕ್ರಮಿ ಅಥವಾ ಅಪರಾಧಿಯನ್ನು ರಕ್ಷಿಸಲಾರದು. ಯುದ್ಧಕ್ಕೆ ಹೊರಟವರೂ ಮನೆಯಲ್ಲಿ ಕುಳಿತವರೂ ಶಾಂತಿಗೆ ಅರ್ಹರಾಗಿರುವರು. ಅನ್ಯಾಯ ಮತ್ತು ಅಪರಾಧ ಎಸಗಿದವರು ಮಾತ್ರ ಇದಕ್ಕೆ ಹೊರತಾಗಿರುವರು.

36. ವಚನಪಾಲನೆಯಲ್ಲಿ ನಿಷ್ಠಾವಂತನೂ ದೇವಭಯ ಉಳ್ಳವನೂ ಆಗಿರುವವನಿಗೆ ಅಲ್ಲಾಹನ ಸಹಾಯ ಮತ್ತು ಸಂರಕ್ಷಣೆ ಪ್ರಾಪ್ತವಾಗುವುದು. ಅಲ್ಲಾಹನ ಪ್ರವಾದಿ ಮುಹಮ್ಮದ್‌ರು(ಸ) ಕೂಡಾ ಅವನಿಗೆ ಸಹಾಯ ಮತ್ತು ಸಂರಕ್ಷಣೆ ನೀಡುವರು.

## ಕುರೈಶರ ಒಳಸಂಚುಗಳು

ಕುರೈಶ್ ಮುಖಂಡರು ಇಂದು ಬೆಳಿಗ್ಗೆಯೇ ಕಅಬಾದ ಬಳಿ ದಾರುನ್ನದ್‌ವಾದಲ್ಲಿ ಸಭೆ ಸೇರಿರುವರು. ಯಾವುದೋ ಮಹತ್ವದ ವಿಷಯವು ಚರ್ಚಿಸಲ್ಪಡುತ್ತಿದೆ.

ಮಕ್ಕಾದಿಂದ ಮುಹಮ್ಮದ್(ಸ) ಮತ್ತು ಅವರ ಸಂಗಾತಿಗಳು ವಲಸೆ ಹೋಗಿ ಒಂದು ವರ್ಷಕ್ಕಿಂತಲೂ ಹೆಚ್ಚಿನ ಅವಧಿ ಕಳೆದಿದೆ. ಆದರೂ ಕುರೈಶರ ಮನದಲ್ಲಿ ಅವರ ಬಗ್ಗೆ ಇದ್ದ ದ್ವೇಷ, ಅಸೂಯೆ, ಪ್ರತೀಕಾರ ಮನೋಭಾವ ಮತ್ತು ವೈರತ್ವದ ಬೆಂಕಿ ಇನ್ನೂ ಉರಿಯುತ್ತಿತ್ತು.

ದಾರುನ್ನದ್‌ವಾ ಸಭಿಕರಿಂದ ತುಂಬಿ ತುಳುಕುತ್ತಿದೆ. ಉಕ್‌ಬಾ ಎದ್ದು ನಿಂತು ಒಮ್ಮೆ ಎಲ್ಲರನ್ನೂ ಚೆನ್ನಾಗಿ ವೀಕ್ಷಿಸಿದ ಬಳಿಕ ಹೀಗೆ ಹೇಳುತ್ತಾನೆ: "ಸೋದರರೇ! ನಾವಿಲ್ಲಿ ಸೇರಿರುವುದು ಯಾವ ಉದ್ದೇಶಕ್ಕೆ ಎಂಬುದು ನಿಮಗೆ ಚೆನ್ನಾಗಿ ತಿಳಿದಿದೆ. ಆದರೂ ಕೆಲವು ವಿಷಯಗಳನ್ನು ನಾನು ನಿಮ್ಮ ಮುಂದೆ ಇಡುತ್ತಿರುವೆನು. ಈ ವಿಷಯಗಳ ಬಗ್ಗೆ ಕಳೆದ ಅನೇಕ ತಿಂಗಳುಗಳಿಂದ ನಾವು ವೈಯಕ್ತಿಕವಾಗಿ ಚಿಂತಿಸಿದ್ದೇವೆ. ಆದರೆ ಸಾಮೂಹಿಕವಾಗಿ ಅದರ ಮಹತ್ವದ ಬಗ್ಗೆ ಚರ್ಚಿಸುವ ಸಂದರ್ಭ ಈ ತನಕ ಒದಗಿ ಬಂದಿರಲಿಲ್ಲ. ಈಗ ಈ ವಿಷಯವು ಯಾವ ವ್ಯಕ್ತಿಗೂ ಸೀಮಿತವಾಗಿರದೆ ನಮ್ಮೆಲ್ಲರ ಸಾಮೂಹಿಕ ಸಮಸ್ಯೆಯಾಗಿ ಮಾರ್ಪಟ್ಟಿದೆ."

ಇಷ್ಟು ಹೇಳಿ ಅವನು ಸಭಿಕರ ಪ್ರತಿಕ್ರಿಯೆಗಾಗಿ ಅವರ ಮೇಲೆ ಒಂದು ದೃಷ್ಟಿ ಹಾಯಿಸುತ್ತಾನೆ. ಆಗ ಕೆಲವರು "ಹೌದು. ನೀವು ಹೇಳುತ್ತಿರುವುದು ಸತ್ಯ. ನಾವು ಈ ಬಗ್ಗೆ ಏನಾದರೂ ಮಾಡಲೇಬೇಕಾಗಿದೆ" ಎನ್ನುತ್ತಾರೆ.

ಉಕ್‌ಬಾ ತನ್ನ ಭಾಷಣವನ್ನು ಮುಂದುವರಿಸುತ್ತಾ ಈ ರೀತಿ ಹೇಳುತ್ತಾನೆ:

"ಮುಹಮ್ಮದ್(ಸ) ಮತ್ತು ಅವರ ಸಂಗಾತಿಗಳು ನಮ್ಮ ಮನೆಗಳಲ್ಲಿ ಒಡಕು ಮತ್ತು ವೈರದ ಬೀಜ ಬಿತ್ತಿ ಇಲ್ಲಿಂದ ಪಲಾಯನಗೈಯುವಲ್ಲಿ ಸಫಲರಾಗಿರುವರು. ಇಂದು ನಮ್ಮ

ಯಾವ ಮನೆತನದಲ್ಲೂ ಶಾಂತಿಯಿಲ್ಲ. ಪ್ರತಿಯೊಂದು ಮನೆತನದ ಯುವಕರು ಬಂಡಾಯವೆದ್ದು ಅವರ ಜತೆ ಹೋಗಿರುವರು. ಇದನ್ನು ನಾವು ಸಹಿಸಿಕೊಂಡು ಸುಮ್ಮನಿರಬಹುದಾಗಿತ್ತು. ಆದರೆ ಈ ಜನರು ಅಲ್ಲಿ ಹೋಗಿ ತಮ್ಮ ಬೇಳೆಯನ್ನು ಬೇಯಿಸಿಕೊಂಡಿರುವರು. ಇದರಿಂದಾಗಿ ನಾವಿಂದು ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಅವರ ಕಿರುಕುಳದಿಂದ ರಕ್ಷಣೆ ಪಡೆಯುವುದು ಹೇಗೆಂದು ಯೋಚಿಸುವುದು ಅನಿವಾರ್ಯವಾಗಿದೆ."

ಇದನ್ನು ಕೇಳಿ ಉಮಯ್ಯ ಅತ್ಯಂತ ಕಳವಳದಿಂದ ಅವನ ಮಾತಿನ ಮಧ್ಯೆ ಹೀಗೆ ಹೇಳುತ್ತಾನೆ:

"ಅವರ ವಿರುದ್ಧ ಅತ್ಯಂತ ಕಠಿಣಕ್ರಮ ತುರ್ತಾಗಿ ಕೈಗೊಳ್ಳಬೇಕಾಗಿದೆ. ಅನ್ಯಥಾ ಈ ಕ್ಷೋಭೆಯು ನಿರಂತರ ಏರುತ್ತಲೇ ಹೋಗುವುದು. ಮುಹಮ್ಮದ್(ಸ) ಕೇವಲ ಯಸ್ರಿಬ್ ನಿವಾಸಿಗಳನ್ನು ತಮ್ಮ ಬಲೆಗೆ ಹಾಕಿರುವುದಲ್ಲ. ಅಲ್ಲಿಂದ ಹತ್ತು ಹದಿನೈದು 'ಕೋಸ್'* ದೂರದ ತನಕ ಹರಡಿರುವ ಎಲ್ಲ ಗೋತ್ರಗಳೊಂದಿಗೂ ಶಾಂತಿಯ ಕರಾರು ಮಾಡಿ ಕೊಂಡಿರುವರು. ನನಗೆ ತಿಳಿದಿರುವಂತೆ ಹೊರಗಿನಿಂದ ಯಾರಾದರೂ ಅವರ ಮೇಲೆ ಆಕ್ರಮಣ ಮಾಡಿದರೆ ಯಸ್ರಿಬ್ ನಿವಾಸಿಗಳು ಮಾತ್ರವಲ್ಲ ಪರಿಸರದ ಎಲ್ಲ ಗೋತ್ರಗಳೂ ಅವರ ನೆರವಿಗೆ ನಿಲ್ಲುವರು. ಇದು ಅತ್ಯಂತ ಅಪಾಯಕಾರಿ ಬೆಳವಣಿಗೆ. ಯಾವ ಕ್ಷಣದಲ್ಲೂ ಅವರು ಸಿರಿಯಾಕ್ಕೆ ಹೋಗುವ ಹೆದ್ದಾರಿಯನ್ನು ತಡೆಯುವ ಮೂಲಕ ನಮ್ಮ ವ್ಯಾಪಾರವನ್ನೇ ಮೊಟಕುಗೊಳಿಸಿ ಬಿಡಬಹುದು. ಆದ್ದರಿಂದ ಅವರನ್ನು ಸದೆಬಡಿಯುವುದು ಅತೀ ಅಗತ್ಯ. ಅದಕ್ಕಾಗಿ ಈಗಿಂದೀಗಲೇ ಏನಾದರೂ ಮಾಡಬೇಕಾಗಿದೆ."

ಇದನ್ನು ಕೇಳಿ ಅಬೂ ಜಹಲ್ ಎದ್ದು ಅತ್ಯಂತ ಘನ ಗಾಂಭೀರ್ಯದೊಂದಿಗೆ ಸಭಿಕರ ಮೇಲೆ ಒಂದು ನೋಟ ಬೀರಿ ಹೀಗೆ ಹೇಳುತ್ತಾನೆ:

"ಮುಹಮ್ಮದ್(ಸ) ಮತ್ತು ಅವನ ಸಂಗಾತಿಗಳನ್ನು ಸದೆಬಡಿಯಲು ನಮಗೆ ಯಸ್ರಿಬ್ ನಿವಾಸಿಗಳ ನೆರವು ಬೇಕೇ ಬೇಕು. ಅದಕ್ಕೆ ಒಂದು ಸುಲಭದ ಉಪಾಯವಿದೆ. ಅಬ್ದುಲ್ಲಾ ಬಿನ್ ಉಬೈ ಮತ್ತು ಅವನ ಸಂಗಾತಿಗಳನ್ನು ನಮ್ಮ ಕಡೆಗೆ ಒಲಿಸಿಕೊಳ್ಳಬೇಕು. ಆತ ಯಸ್ರಿಬ್‌ನ ಅತ್ಯಂತ ಪ್ರಭಾವಶಾಲೀ ವ್ಯಕ್ತಿ. ಮುಸ್ಲಿಮರ ಬಗ್ಗೆ ಆತನ ನಿಲುವೂ ನಮಗಿಂತ ಭಿನ್ನವಲ್ಲ."

"ಇದು ಹೇಗೆ ಸಾಧ್ಯ?" ಒಬ್ಬ ಕುಪಿತನಾಗಿ ಕೇಳುತ್ತಾನೆ.

"ನನ್ನ ಮಾತು ಕೇಳಿ, ನನ್ನ ಬಳಿ ಅದಕ್ಕೆ ಪರಿಹಾರವಿದೆ. ನಾನು ಅದರ ಒಂದು ಸುಲಭೋಪಾಯವನ್ನು ನಿಮಗೆ ತಿಳಿಸುತ್ತೇನೆ" ಎನ್ನುತ್ತಾ ಅಬೂಜಹಲ್ ಸಭಿಕರ ಮೇಲೆ ಒಂದು ದೃಷ್ಟಿ ಹಾಯಿಸುತ್ತಾನೆ ಹಾಗೂ ಅತ್ಯಂತ ಅಹಂಭಾವದೊಂದಿಗೆ ಹೀಗೆ ಹೇಳುತ್ತಾನೆ:

"ಬುಆಸ್ ಯುದ್ಧದ ಬಳಿಕ ಔಸ್ ಮತ್ತು ಖಝ್ರಜ್ ಗೋತ್ರದವರು ಶಾಂತಿಗಾಗಿ

ಹಾತೊರೆಯುತ್ತಿದ್ದರು. ಈಗ ಕೆಲವು ಸಮಯದಿಂದ ಖಝ್ರಜ್ ಗೋತ್ರದ ಸರದಾರ ಅಬ್ದುಲ್ಲಾ ಬಿನ್ ಉಬೈಯನ್ನು ಯಸ್ರಿಬ್‌ನ ದೊರೆಯಾಗಿ ಮಾಡಿ ಆತನ ಮೂಲಕ ಹಿಂಸೆ ಮತ್ತು ರಕ್ತಪಾತವನ್ನು ನಿಲ್ಲಿಸಬೇಕೆಂಬ ವಿಷಯವು ಅವರ ಮಧ್ಯೆ ಇತ್ಯರ್ಥಗೊಂಡಿತ್ತು. ಈ ಉದ್ದೇಶಕ್ಕಾಗಿ ಆತನಿಗೆ ಬೆಳ್ಳಿ, ಬಂಗಾರ, ವಜ್ರ ಮತ್ತು ಮಾಣಿಕ್ಯಗಳ ಒಂದು ಕಿರೀಟವನ್ನೂ ಸಿದ್ಧಗೊಳಿಸಲಾಗಿತ್ತು. ಮುಹಮ್ಮದ್(ಸ) ಯಸ್ರಿಬ್‌ಗೆ ಹೋಗದಿರುತ್ತಿದ್ದರೆ, ಈಗಾಗಲೇ ಅವನ ಪಟ್ಟಾಭಿಷೇಕವೂ ಆಗಿ ಬಿಡುತ್ತಿತ್ತು. ಆತ ಒಳಗಿಂದೊಳಗೆ ಅವರ ಆಗಮನದ ಕಡು ವಿರೋಧಿಯಾಗಿದ್ದಾನೆಂಬುದು ನನಗೆ ಚೆನ್ನಾಗಿ ತಿಳಿದಿದೆ. ಆದ್ದರಿಂದ ಅವನನ್ನು ಮುಹಮ್ಮದ್(ಸ) ಮತ್ತು ಅವನ ಸಂಗಾತಿಗಳಿಂದ ಬೇರ್ಪಡಿಸುವುದು ಸುಲಭದ ಕೆಲಸ. ಅದುವೇ ಈಗ ಅಗತ್ಯವಾಗಿ ಆಗಬೇಕಾದ ಕೆಲಸ. ಅದರ ಉಪಾಯ ಹೇಗೆಂದರೆ ಆತನಿಗೊಂದು ಪತ್ರ ಬರೆಯಬೇಕು. 'ನೀವು ನಮ್ಮ ವ್ಯಕ್ತಿಗೆ ಕೊಟ್ಟಿರುವ ಆಶ್ರಯವನ್ನು ರದ್ದುಪಡಿಸಿ ಅವನೊಂದಿಗೆ ಯುದ್ಧ ಮಾಡಬೇಕು. ಅವನನ್ನೂ ಅವನ ಸಂಗಾತಿಗಳನ್ನೂ ಯಸ್ರಿಬ್‌ನಿಂದ ಹೊರ ಹಾಕಬೇಕು. ಇಲ್ಲವಾದರೆ ನಾವು ನಿಮ್ಮ ಮೇಲೆ ಹಠಾತ್ ಧಾಳಿ ಮಾಡಿ ನಿಮ್ಮ ಯುವಕರನ್ನು ಕೊಂದು ಬಿಡುವೆವು ಮತ್ತು ನಿಮ್ಮ ಮಹಿಳೆಯರನ್ನು ವಶಪಡಿಸಿಕೊಳ್ಳುವೆವು.' ನಮ್ಮ ಈ ಬೆದರಿಕೆಯು ಖಂಡಿತ ಯಶಸ್ವಿಯಾಗುತ್ತದೆ ಎಂದು ನಾನು ದೃಢವಾಗಿ ನಂಬಿದ್ದೇನೆ. ಒಂದು ವೇಳೆ ಕಾರಣಾಂತರದಿಂದ ಅದು ವಿಫಲವಾದರೆ ಹೆದರಬೇಕಾಗಿಲ್ಲ, ನಾನು ನಿಮಗೆ ಬೇರೆಯೇ ಉಪಾಯವನ್ನು ಹೇಳಿಕೊಡುವೆನು."

ಸಭಿಕರು ಈ ಸಲಹೆಯನ್ನು ಅನುಮೋದಿಸುತ್ತಾರೆ. ಪತ್ರ ಬರೆಯಲಾಗುತ್ತದೆ. ಓರ್ವ ನಂಬಿಗಸ್ಥ ದೂತನ ಮೂಲಕ ಅದನ್ನು ಯಸ್ರಿಬ್‌ಗೆ ರವಾನಿಸಲಾಗುತ್ತದೆ.

## ವಿಫಲವಾದ ಕುತಂತ್ರ

ಔಸ್ ಮತ್ತು ಖಝ್ರಜ್‌ನ ಗಣ್ಯ ವ್ಯಕ್ತಿಗಳೆಲ್ಲಾ ಅಬ್ದುಲ್ಲಾ ಬಿನ್ ಉಬೈನ ಸುತ್ತು ಕುಳಿತಿರುವರು. ಮಕ್ಕಾದ ಕುರೈಶರಿಂದ ಬಂದ ಒಂದು ಪತ್ರವೇ ಅವರ ಚರ್ಚಾ ವಿಷಯ. ಅಬ್ದುಲ್ಲಾ ಬಿನ್ ಉಬೈ ಅದನ್ನು ಮತ್ತೆ ಮತ್ತೆ ಓದುತ್ತಾನೆ,

"ನೀವು ಆಶ್ರಯ ಕೊಟ್ಟಿರುವ ನಮ್ಮ ವ್ಯಕ್ತಿಯೊಂದಿಗೆ ಯುದ್ಧ ಮಾಡಿರಿ. ಆತನನ್ನೂ ಆತನ ಸಂಗಾತಿಗಳನ್ನೂ ಯಸ್ರಿಬ್‌ನಿಂದ ಹೊರ ಹಾಕಿರಿ. ಅನ್ಯಥಾ ನಾವು ನಿಮ್ಮ ಮೇಲೆ ಹಠಾತ್ತನೇ ಧಾಳಿ ಮಾಡಿ ನಿಮ್ಮ ಯುವಕರನ್ನು ಕೊಂದು ಬಿಡುವೆವು ಮತ್ತು ನಿಮ್ಮ ಮಹಿಳೆಯರನ್ನು ವಶಪಡಿಸಿಕೊಳ್ಳುವೆವು."

ಜನರು ಅತ್ಯಂತ ಕಳವಳದಿಂದ ಅಬ್ದುಲ್ಲಾ ಬಿನ್ ಉಬೈಯನ್ನು ದಿಟ್ಟಿಸುತ್ತಿದ್ದಾರೆ. ಇವರೆಲ್ಲರೂ ಮುಸ್ಲಿಮೇತರರಾಗಿದ್ದು ವೃದ್ಧಿಸುತ್ತಿರುವ ಇಸ್ಲಾಮಿನ ವರ್ಚಸ್ಸಿನಿಂದ ಭಯಗ್ರಸ್ತರಾಗಿದ್ದಾರೆ. ಮಕ್ಕಾದಿಂದ ಕಂಗಾಲಾಗಿ ಬಂದ ವಲಸಿಗರು ಕೆಲವೇ ತಿಂಗಳುಗಳಲ್ಲಿ ಯಸ್ರಿಬ್‌ನ ಅತ್ಯಂತ ಪ್ರಬಲ ಶಕ್ತಿಯಾಗಿ ಮಾರ್ಪಟ್ಟಿರುವುದು ಮತ್ತು ಸುತ್ತಮುತ್ತಲಿನ

ಎಲ್ಲ ಗೋತ್ರಗಳಲ್ಲಿಯೂ ತಮ್ಮ ಪ್ರಭಾವ ಬೀರಿರುವುದು ಅವರಿಗೆ ಎಷ್ಟು ಮಾತ್ರಕ್ಕೂ ಸಹ್ಯವಾಗಿರಲಿಲ್ಲ. ಅವರಂತೂ ಅಬ್ದುಲ್ಲಾನನ್ನು ಯಸ್ರಿಬ್‌ನ ರಾಜನಾಗಿ ಮಾಡಲು ಹೊರಟಿದ್ದರು. ಅದಕ್ಕಾಗಿ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡಿದ್ದರು. ಅಬ್ದುಲ್ಲಾನೂ ತನ್ನ ಪಟ್ಟಾಭಿಷೇಕದ ದಿನವನ್ನೇ ಕಾಯುತ್ತಿದ್ದನು.

ಅಬ್ದುಲ್ಲಾ ಒಮ್ಮೆ ತನ್ನ ಸಂಗಾತಿಗಳತ್ತ ನೋಡುತ್ತಾನೆ. ಅವರೆಲ್ಲರೂ ಮುಹಮ್ಮದ್‌ರ(ಸ) ಆಡಳಿತ ವ್ಯವಸ್ಥೆಯ ವಿರುದ್ಧ ಬಂಡಾಯವೆದ್ದವರಾಗಿದ್ದರು. ಅಬ್ದುಲ್ಲಾನ ನಿಷ್ಠಾವಂತ ಮಿತ್ರರಾಗಿದ್ದರು. ಅವನಿಗೂ ಅವರ ಮೇಲೆ ಪೂರ್ಣ ಭರವಸೆ ಇತ್ತು. ಅವನು ನಿರ್ಣಾಯಕ ಸ್ವರದಲ್ಲಿ ಹೀಗೆ ಹೇಳುತ್ತಾನೆ: "ನಾವು ಖಂಡಿತ ಅವರ ವಿರುದ್ಧ ಹೋರಾಡುವೆವು. ಅವರನ್ನು ನಮ್ಮ ನಾಡಿನಿಂದ ಹೊರಹಾಕುವೆವು."

ಈ ಸಭೆಯ ಸುದ್ದಿಯು ಮುಹಮ್ಮದ್‌ರಿಗೆ(ಸ) ತಲುಪುತ್ತದೆ. ಅದರ ದೂರಗಾಮಿ ಪರಿಣಾಮವನ್ನು ಮನಗಂಡ ಪ್ರವಾದಿವರ್ಯರು(ಸ) ಕೂಡಲೇ ಆ ಸಭೆಗೆ ಧಾವಿಸಿ ಬರುತ್ತಾರೆ. ಜನರು ಅನಿರೀಕ್ಷಿತವಾಗಿ ಮುಹಮ್ಮದ್(ಸ) ಬಂದು ತಮ್ಮ ಮಧ್ಯೆ ಕುಳಿತಿರುವುದನ್ನು ಕಂಡು ಆಶ್ಚರ್ಯ ಚಕಿತರಾಗುತ್ತಾರೆ. ಪ್ರವಾದಿ(ಸ) ಸಭಿಕರನ್ನುದ್ದೇಶಿಸಿ ಈ ರೀತಿ ಹೇಳುತ್ತಾರೆ: "ಕುರೈಶರು ನಿಮ್ಮ ವಿರುದ್ಧ ಕುತಂತ್ರ ಹೂಡಿರುವರು. ನೀವು ಯುದ್ಧ ಮಾಡಿದರೆ ಮುಸ್ಲಿಮ್ ಆಗಿರುವ ನಿಮ್ಮ ಮಕ್ಕಳನ್ನೂ ಸೋದರರನ್ನೂ ಕೊಲ್ಲಬೇಕಾದೀತು. ಈ ರೀತಿ ಎರಡೂ ಕಡೆ ನೀವೇ ನಷ್ಟ ಅನುಭವಿಸಬೇಕಾದೀತು. ನೀವು ಕುರೈಶರ ವಿರುದ್ಧ ಯುದ್ಧ ಮಾಡುವುದಾದರೆ ಅದು ಅನ್ಯರ ಜೊತೆ ಹೋರಾಟವಾಗುವುದು."

ಮುಹಮ್ಮದ್‌ರ(ಸ) ಈ ಮಾತು ಕೇಳಿ ಅವರ ಕಣ್ಣು ತೆರೆಯಿತು. ಇದು ಅವರ ಪೈಕಿ ಯಾರೂ ನಿರಾಕರಿಸಲು ಸಾಧ್ಯವಿಲ್ಲದ ಒಂದು ವಾಸ್ತವಿಕತೆಯಾಗಿತ್ತು. ಎಲ್ಲ ಸಭಿಕರೂ ಪೆಚ್ಚಾಗಿದ್ದರು. ಅಬ್ದುಲ್ಲಾ ಬಿನ್ ಉಬೈ ಹೀಗೆ ಹೇಳುತ್ತಾನೆ:

"ಮುಹಮ್ಮದರೇ! ತಾವು ಹೇಳುತ್ತಿರುವುದು ಸತ್ಯ. ನಾವು ಕುರೈಶರ ಬಲೆಗೆ ಬೀಳಲಾರೆವು."

ಮುಹಮ್ಮದ್(ಸ) ಅಲ್ಲಿಂದ ಹೊರಟು ಹೋಗುತ್ತಾರೆ. ಕುರೈಶರು ಹೊತ್ತಿಸಿದ ಕಿಡಿಯು ಈಗ ಆರಿ ಹೋಗಿದೆ. ಅವರ ಅತ್ಯಂತ ಬುದ್ಧಿವಂತ ವ್ಯಕ್ತಿಗಳ ಈ ಕುತಂತ್ರವು ಮುಹಮ್ಮದ್‌ರ(ಸ) ಒಂದೇ ಮಾತಿನಿಂದ ವಿಫಲವಾಯಿತು.

## ಹೊಸ ಯೋಜನೆ

ಕುರೈಶರ ದೂತ ಮರಳಿ ಬಂದು ದಾರುನ್ನದ್‌ವಾದಲ್ಲಿ ಎಲ್ಲರ ಮುಂದೆ ಹೀಗೆ ಹೇಳುತ್ತಾನೆ:

"ನಿಮ್ಮ ಪತ್ರ ಸಿಗುತ್ತಲೇ ಅಬ್ದುಲ್ಲಾ ಬಿನ್ ಉಬೈ ತನ್ನ ಸಂಗಾತಿಗಳನ್ನು ಸೇರಿಸಿ ಅದನ್ನು ಅವರ ಮುಂದೆ ಓದಿದಾಗ ಎಲ್ಲರೂ ಅದನ್ನು ಮೆಚ್ಚಿದರು. ಅವರೆಲ್ಲರೂ

ಒಕ್ಕೊರಳಿನಿಂದ ತಾವು ಮುಹಮ್ಮದ್‌ರ(ಸ) ವಿರುದ್ಧ ಯುದ್ಧ ಮಾಡುವುದಾಗಿ ಘೋಷಿಸಿದರು. ಖಂಡಿತವಾಗಿ ಅವರನ್ನು ಯಸ್ರಿಬ್‌ನಿಂದ ಹೊರ ಹಾಕುವುದಾಗಿ ಸಾರಿದರು. ಆದರೆ ಅವರು ಅಲ್ಲಿಂದ ಎದ್ದು ಹೋಗುವುದಕ್ಕೆ ಮುಂಚೆಯೇ ಅನಿರೀಕ್ಷಿತವಾಗಿ ಮುಹಮ್ಮದ್(ಸ) ಅಲ್ಲಿಗೆ ತಲುಪಿದರು. ಈ ರಹಸ್ಯ ಸಮಾಲೋಚನೆಯ ಬಗ್ಗೆ ಅವರಿಗೆ ಹೇಗೆ ತಿಳಿಯಿತೋ ದೇವನೇ ಬಲ್ಲ! ಅವರು ಬಂದ ಕೂಡಲೇ ಕುರೈಶರು ನಿಮ್ಮ ವಿರುದ್ಧ ಒಂದು ಕುತಂತ್ರ ಹೂಡಿದ್ದಾರೆ ಎಂದರು. ನೀವು ಮುಸ್ಲಿಮರ ವಿರುದ್ಧ ಯುದ್ಧ ಮಾಡಿದರೆ ನಿಮ್ಮ ಬಂಧುಗಳ ವಿರುದ್ಧವೇ ಯುದ್ಧ ಮಾಡಿದಂತಾಗುವುದು. ಒಂದು ವೇಳೆ ಕುರೈಶರ ವಿರುದ್ಧ ನಿಮಗೆ ಯುದ್ಧ ಮಾಡಬೇಕಾಗಿ ಬಂದರೆ ಅವರಂತೂ ಪರಕೀಯರು ಅವರ ಈ ಮಾತಿನ ಪ್ರಹಾರವು ಬಹಳ ಪ್ರಭಾವಶಾಲಿಯಾಗಿತ್ತು. ಅಬ್ದುಲ್ಲಾ ಮತ್ತು ಅವನ ಸಂಗಾತಿಗಳು ಆ ಕೂಡಲೇ ನಿಮ್ಮ ಬೆಂಬಲದಿಂದ ಹಿಂಜರಿದರು."

ಇದನ್ನು ಕೇಳುತ್ತಲೇ ಕುರೈಶರು ಮಂಕಾದರು. ಅವರ ಕುತಂತ್ರವು ನಿಜಕ್ಕೂ ವಿಫಲವಾಗಿತ್ತು. ಕುರೈಶರ ಬಲೆಯು ಯಸ್ರಿಬ್ ವಾಸಿಗಳನ್ನು ಸಿಲುಕಿಸುವುದಕ್ಕಿಂತ ಮುಂಚಿತವಾಗಿಯೇ ಮುಹಮ್ಮದ್‌ರು(ಸ) ಅದನ್ನು ನುಚ್ಚುನೂರುಗೊಳಿಸಿ ಬಿಟ್ಟರು. ಅವರು ಮಾಟಬಾಧಿತರಂತೆ ಒಬ್ಬರನ್ನೊಬ್ಬರು ದಿಟ್ಟಿಸತೊಡಗಿದರು. ಅವರ ಬುದ್ಧಿಯು ಮಂಕಾಗಿ ಹೋಗಿತ್ತು. ಬಹಳ ಹೊತ್ತಿನ ತನಕ ಅವರು ಇದೇ ಸ್ಥಿತಿಯಲ್ಲಿ ಕುಳಿತಿದ್ದರು. ಕೊನೆಗೆ ಉಕ್ಬಾ ಮೌನ ಮುರಿಯುತ್ತಾ ಹೀಗೆ ಹೇಳಿದನು:

"ಸೋದರರೇ! ಪರಿಸ್ಥಿತಿಯು ಬಹಳ ಚಿಂತಾಜನಕವಾಗಿದೆ. ಈಗ ಶುಭ ನಿರೀಕ್ಷೆಯಲ್ಲಿರುವ ಸಮಯವು ಕೈ ಮೀರಿ ಹೋಗಿದೆ. ಆದ್ದರಿಂದ ಈಗ ಚೆನ್ನಾಗಿ ಯೋಚಿಸಿ ಒಂದು ಹೊಸ ಯೋಜನೆ ಸಿದ್ಧಗೊಳಿಸಬೇಕಾಗಿದೆ."

ಆಗ ಅಬೂಜಹಲ್ ಎದ್ದು 'ನನ್ನ ಮಾತನ್ನು ಗಮನವಿಟ್ಟು ಆಲಿಸಿರಿ' ಎನ್ನುತ್ತಾ ಹೀಗೆ ಹೇಳತೊಡಗಿದನು: "ಈಗ ಸಿರಿಯಾದ ಕಡೆಗೆ ಹೊರಟಿರುವ ನಮ್ಮ ವ್ಯಾಪಾರ ತಂಡದಲ್ಲಿ ನಾವೆಲ್ಲರೂ ನಮ್ಮ ನಮ್ಮ ಬಂಡವಾಳಗಳನ್ನು ಹೂಡಬೇಕು. ಈ ಪ್ರವಾಸದಲ್ಲಿ ನಮಗೆ ಆದ ಲಾಭವನ್ನು ಪೂರ್ಣವಾಗಿ ಮುಸ್ಲಿಮರ ವಿರುದ್ಧ ಶಸ್ತ್ರ ಸಂಗ್ರಹಣೆಗಾಗಿ ವಿನಿಯೋಗಿಸಬೇಕು. ಈ ರೀತಿ ಯುದ್ಧದ ಖರ್ಚಿನ ಸಮಸ್ಯೆಯು ಬಗೆಹರಿಯುವುದು ಮತ್ತು ನಾವು ಪೂರ್ಣ ಸಿದ್ಧತೆಯೊಂದಿಗೆ ಮುಸ್ಲಿಮರ ವಿರುದ್ಧ ಹೋರಾಡಿ ಅವರಿಗೆ ಬಲವಾದ ಏಟು ಕೊಡಬಹುದು ಜತೆಗೆ ಅಬ್ದುಲ್ಲಾ ಬಿನ್ ಉಬೈಗೂ ಅವನ ಸಂಗಾತಿಗಳಿಗೂ ಅವರು ಸದಾ ನೆನಪಿಡುವ ರೀತಿಯಲ್ಲಿ ಪಾಠ ಕಲಿಸುವೆವು."

ಈ ಸಲಹೆಯನ್ನು ಎಲ್ಲರೂ ಒಮ್ಮತದಿಂದ ಅಂಗೀಕರಿಸಿದರು. ಬಂಡವಾಳ ಶೇಖರಿಸುವ ಕಾರ್ಯವನ್ನು ಅಬೂಜಹಲನ ಪಾಲಿಗೇ ಒಪ್ಪಿಸಲಾಯಿತು. ಇದು ಹಿ. ಶ. 2ರ ರಬೀಉಲ್ ಅವ್ವಲ್ ತಿಂಗಳಲ್ಲಿ ನಡೆದ ಘಟನೆ.

◈◈◈

ಅಧ್ಯಾಯ - ೧೧

# ಸತ್ಯ-ಮಿಥ್ಯಗಳ ಸಂಘರ್ಷ

## ಬದ್ರ್‌ನ ಕಡೆಗೆ

ಮದೀನಾ ನಗರದಿಂದ ದೂರ 'ಬದ್ರ್' ಎಂಬ ಪ್ರದೇಶದ ಸಮೀಪ ಮುಸ್ಲಿಮರ ಒಂದು ಸೇನಾ ತುಕಡಿಯು ಬೀಡು ಬಿಟ್ಟಿದೆ. ದಂಡನಾಯಕರಾಗಿ ಸ್ವಯಂ ಮುಹಮ್ಮದ್(ಸ) ಆಸೀನರಾಗಿದ್ದಾರೆ. ಸಹಾಬಿಗಳ ಒಂದು ತಂಡವು ಅವರ ಸುತ್ತಲೂ ನಿಂತಿದೆ. ಕುರೈಶರ ಒಂದು ಸೇನೆಯು ತನ್ನ ವ್ಯಾಪಾರಿ ತಂಡದ ರಕ್ಷಣೆಗಾಗಿ ಬಂದಿದೆ ಎಂಬ ಸುದ್ದಿ ಇದೀಗ ತಲುಪಿದೆ. ಈ ವ್ಯಾಪಾರಿ ತಂಡವು ಸಿರಿಯಾದಿಂದ ಹಿಂದಿರುಗುತ್ತಿತ್ತು. ಮುಸ್ಲಿಮರ ವಿರುದ್ಧ ಯುದ್ಧ ಸಿದ್ಧತೆಗಾಗಿ ಇದರ ಸಂಪೂರ್ಣ ಲಾಭವನ್ನು ಬಳಸಲಾಗುವುದು ಎಂಬ ಇರಾದೆಯೊಂದಿಗೆ ಕುರೈಶರು ಇದರಲ್ಲಿ ತಂತಮ್ಮ ಬಂಡವಾಳವನ್ನು ತೊಡಗಿಸಿದ್ದರು. ಈ ಯಾತ್ರಾ ತಂಡವು ಬದ್ರ್‌ನ ಮಾರ್ಗವಾಗಿ ಹೋಗುವ ಬದಲು ಸಮುದ್ರ ತೀರದಿಂದ ಸಾಗುವ ದಾರಿಯನ್ನು ಹಿಡಿದಿದೆ ಎಂಬ ಸುದ್ದಿಯೂ ಈಗ ಬಂದಿದೆ.

ಮಕ್ಕಾದ ಕುರೈಶರ ಅಕ್ರಮ ಅನ್ಯಾಯಗಳನ್ನು ಎದುರಿಸಲು ಮತ್ತು ಮದೀನಾವನ್ನು ರಕ್ಷಿಸಲು ಮುಹಮ್ಮದ್(ಸ) ಅತ್ಯಂತ ಪರಿಣಾಮಕಾರಿಯಾದ ಎರಡು ಉಪಾಯಗಳನ್ನು ಯೋಚಿಸಿದ್ದರು. ಒಂದನೆಯದು ಮದೀನಾದ ಪರಿಸರದಲ್ಲಿರುವ ಎಲ್ಲ ಗೋತ್ರಗಳೊಂದಿಗೆ ಶಾಂತಿಯ ಒಡಂಬಡಿಕೆಯಾಗಿತ್ತು. ಅದು ಈಗಾಗಲೇ ಕಾರ್ಯರೂಪಕ್ಕೆ ಬಂದಿತ್ತು. ಎರಡನೆಯದು ಕುರೈಶರ ವ್ಯಾಪಾರಿ ತಂಡಗಳನ್ನು ತಡೆಯಲಿಕ್ಕಾಗಿ ಸಿರಿಯಾದ ಮಾರ್ಗವನ್ನು ಅವರ ಮಟ್ಟಿಗೆ ಅಪಾಯಕಾರಿಯಾಗಿ ಮಾರ್ಪಡಿಸುವುದು. ಈ ಯೋಜನೆಯನ್ನು ಕಾರ್ಯ ರೂಪಕ್ಕೆ ತರುವುದಕ್ಕಾಗಿ ಕುರೈಶರ ಈ ವ್ಯಾಪಾರಿ ತಂಡದ ಮೇಲೆ ಧಾಳಿ ಮಾಡುವುದು ಅನಿವಾರ್ಯವಾಗಿತ್ತು. ಅನ್ಯಥಾ ಕುರೈಶರಿಗೆ ಯುದ್ಧಸಿದ್ಧತೆಗಾಗಿ ಧಾರಾಳ ಹಣ ಲಭಿಸುತ್ತಿತ್ತು.

ಮುಹಮ್ಮದ್(ಸ) ತಮ್ಮ ಸಂಗಾತಿಗಳ ಜತೆ ಮದೀನಾದಿಂದ ಹೊರಟಾಗಲೂ ಯಾತ್ರಾ ತಂಡದ ರಕ್ಷಣೆಗಾಗಿ ಕುರೈಶರ ಸೇನೆಯು ಬರುತ್ತಿದೆ ಎಂಬ ವದಂತಿಯಿತ್ತು. ಸೇನೆಯು ಬರುವುದಕ್ಕಿಂತ ಮುಂಚೆಯೇ ಯಾತ್ರಾತಂಡದ ಮೇಲೆ ಧಾಳಿ ಮಾಡಬೇಕು ಎಂಬುದೇ ಪ್ರವಾದಿವರ್ಯರ(ಸ) ಇಂಗಿತವಾಗಿತ್ತು. ಇದು ದರೋಡೆಯಾಗಿರಲಿಲ್ಲ. ಬದಲಾಗಿ ಶತ್ರುಗಳ

ಒಂದು ಅತ್ಯಂತ ಅಪಾಯಕಾರಿ ಯೋಜನೆಯನ್ನು ವಿಫಲಗೊಳಿಸುವ ಪ್ರಯತ್ನವಾಗಿತ್ತು.

ಕಅಬಾದ ನೆರಳಲ್ಲಿ ಉತ್ಬಾ, ನದೀರ್, ಉಮಯ್ಯ, ಅಬೂಜಹಲ್ ಮತ್ತಿತರರು ಹರಟೆಯಲ್ಲಿ ನಿರತರಾಗಿರುವರು. ಯಾತ್ರಾ ತಂಡವು ಬರುವಾಗ ಎಷ್ಟು ಲಾಭ ಸಿಗ ಬಹುದೆಂಬ ಲೆಕ್ಕಾಚಾರವೇ ಚರ್ಚಾ ವಿಷಯವಾಗಿತ್ತು.

ಅಷ್ಟರಲ್ಲಿ ದೂರದಿಂದ ಓರ್ವ ಒಂಟೆ ಸವಾರ ಬರುತ್ತಿರುವುದು ಕಾಣಿಸಿತು. ಎಲ್ಲರೂ ಆ ಕಡೆ ನೋಡತೊಡಗಿದರು.

'ಯಾರಾಗಿರಬಹುದು?' ಉಮಯ್ಯ ಕುತೂಹಲದಿಂದ ಕೇಳುತ್ತಾನೆ.

'ಇದು ದಮ್‌ದಾಮ್ ಗಿಫ್ಫಾರಿ' ಎಂದು ಉತ್ಬಾ ಹೇಳುತ್ತಾನೆ.

'ಯಾತ್ರಾ ತಂಡವು ತಲುಪಿದ ಸುದ್ದಿಯೊಂದಿಗೆ ಬಂದಿರಬೇಕು' ಎನ್ನುತ್ತಾನೆ ಅಬೂಜಹಲ್. ಅವನು ಇಷ್ಟು ಹೇಳಿ ಮುಗಿಸುವಷ್ಟರಲ್ಲಿ ಮತ್ತೆ ಜೋರಾಗಿ ಕೂಗಿ ಹೇಳುತ್ತಾನೆ: "ಅವನು ತನ್ನ ಒಂಟೆಯ ಮೂಗು ಕತ್ತರಿಸಿರುವನು. ಅವನ ಬಟ್ಟೆ ಹರಿದು ಚಿಂದಿಯಾಗಿದೆ. ನಮ್ಮ ಯಾತ್ರಾ ತಂಡವು ಯಾವುದೋ ಅನಾಹುತಕ್ಕೆ ಸಿಲುಕಿರಬೇಕು."

ದಮ್‌ದಾಮ್ ಗಿಫ್ಫಾರಿ ಕಅಬಾದ ಬಳಿ ತಲುಪುತ್ತಲೇ ಬೊಬ್ಬಿಡುತ್ತಾನೆ, "ಕುರೈಶ್ ಸೋದರರೇ! ನಾವು ದೋಚಲ್ಪಟ್ಟಿದ್ದೇವೆ. ನಾವು ಹಾಳಾಗಿ ಹೋಗಿದ್ದೇವೆ. ಸರ್ವನಾಶವಾಗಿ ಹೋಗಿದ್ದೇವೆ."

"ಏನಾಯಿತು?" ಎಂದು ಅಬೂಜಹಲ್ ಘರ್ಜಿಸುತ್ತಾನೆ.

ದಮ್‌ದಾಮ್: "ನಿಮ್ಮ ವ್ಯಾಪಾರಿ ತಂಡವನ್ನು ಮುಸ್ಲಿಮರು ದೋಚಿದ್ದಾರೆ. ಐದು ಲಕ್ಷದ ಸರಕುಗಳನ್ನು ಅವರು ವಶಪಡಿಸಿಕೊಂಡಿದ್ದಾರೆ. ನೀವಿನ್ನು ಅದನ್ನು ಗಳಿಸುವುದು ಸಾಧ್ಯವೇ ಇಲ್ಲ."

ಉತ್ಬಾ ಆರ್ಭಟಿಸುತ್ತಾ "ಅಬೂ ಸುಫ್‌ಯಾನ್ ಇನ್ನೇನಾದರೂ ಹೇಳಿರುವನೇ?"

ದಮ್‌ದಾಮ್: "ಹೌದು, ಅವನು ನೆರವಿಗಾಗಿ ನಿಮ್ಮನ್ನು ಕರೆದಿರುವನು. ಧಾವಿಸಿರಿ. ಅವನ ನೆರವಿಗಾಗಿ ಕೂಡಲೇ ಹೊರಡಿರಿ."

ಅಬೂಜಹಲ್ ಕ್ರುದ್ಧನಾಗಿ: "ಮುಸ್ಲಿಮರು ನಮ್ಮನ್ನು ಬಲಹೀನರೆಂದು ಭಾವಿಸಿರುವರೇ! ಖಂಡಿತ ಇಲ್ಲ. ನಾವು ಅವರಿಂದ ಪ್ರತೀಕಾರ ಪಡೆದೇ ತೀರುವೆವು. ಹೊರಡಿರಿ. ಯುದ್ಧದ ಸಿದ್ಧತೆ ಮಾಡಿ ಆದಷ್ಟು ಬೇಗ ಹೊರಡಿರಿ."

ಮರುದಿನವೇ ಕುರೈಶರ ಸೇನೆಯು ಹೊರಟಿತು. ಈ ಮೊದಲು ಮಕ್ಕಾವಾಸಿಗಳು ತಮ್ಮ ಸೇನೆಯನ್ನು ಇಷ್ಟು ಸುಸಜ್ಜಿತವಾಗಿ ಎಂದೂ ನೋಡಿರಲಿಲ್ಲ. ಒಂದು ಸಾವಿರ ಸೈನಿಕರು, 600 ಯುದ್ಧ ಕವಚಗಳು, ನೂರು ಕುದುರೆಗಳು ಮತ್ತು 700 ಒಂಟೆಗಳು.

ಸಾಯಿಬ್ ಬಿನ್ ಯಝೀದ್ ಈ ಸೇನೆಯ ಧ್ವಜವಾಹಕನಾಗಿದ್ದನು. ಜೊತೆಗೆ

ನರ್ತಕಿಯರೂ ಗಾಯಕಿಯರೂ ಇದ್ದರು. ಅವರು ತಮ್ಮ ದಫ್‌ಗಳನ್ನು ಬಾರಿಸುತ್ತಾ ಮುಸ್ಲಿಮರನ್ನು ಅಣಕಿಸುವ ಹಾಡುಗಳನ್ನು ಹಾಡುತ್ತಿದ್ದರು. ಕುರೈಶ್ ಯೋಧರು ಬಹಳ ದರ್ಪ ಮತ್ತು ಠೀವಿಯಿಂದ ನಡೆಯುತ್ತಿದ್ದರು. ಅವರಿಗೆ ತಮ್ಮ ಸಂಖ್ಯಾಬಲ ಮತ್ತು ಶಸ್ತ್ರದ ಬಗ್ಗೆ ಅಹಂಭಾವವಿತ್ತು. ಅವರಿಗೆ ಮುಸ್ಲಿಮರು ತೃಣ ಸಮಾನರಾಗಿ ಕಾಣಿಸುತ್ತಿದ್ದರು.

ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಹೇಳಿರುವನು: "ನೀವು (ಬದ್ರ್ ಯುದ್ಧದ ಸಂದರ್ಭದಲ್ಲಿ) ದರ್ಪ ತೋರುತ್ತಾ, ಸೆಟೆಯುತ್ತಾ ಹಾಗೂ ಜನರಿಗೆ ತಮ್ಮ ವೈಭವವನ್ನು ಪ್ರದರ್ಶಿಸುತ್ತಾ ಮತ್ತು ಜನರನ್ನು ಅಲ್ಲಾಹನ ಮಾರ್ಗದಿಂದ ತಡೆಯುತ್ತಾ ತಮ್ಮ ನಗರದಿಂದ ಹೊರಟ ಸತ್ಯನಿಷೇಧಿಗಳಂತಾಗಬಾರದು. ಅವರ ಎಲ್ಲ ಕೃತ್ಯಗಳೂ ಅಲ್ಲಾಹನಿಗೆ ತಿಳಿದಿವೆ." **(ಪವಿತ್ರ ಕುರ್‌ಆನ್, 8:47)**

ಈ ಸೇನೆಯ ಊಟದ ವ್ಯವಸ್ಥೆಯನ್ನು ಹನ್ನೆರಡು ಜನರಿಗೆ ವಹಿಸಿಕೊಡಲಾಗಿತ್ತು. ಅವರು ಪ್ರತಿದಿನ 9-10 ಒಂಟೆಗಳನ್ನು ಕೊಯ್ದು ಅಡುಗೆ ಮಾಡುತ್ತಿದ್ದರು.

ಅಬೂಜಹಲ್, ಉಮಯ್ಯ ಬಿನ್ ಖಲಫ್, ಸುಹೈಲ್ ಬಿನ್ ಅಮ್ರ್, ಶೀಬಾ ಬಿನ್ ರಬೀಅ, ಉತ್ಬಾ ಬಿನ್ ರಬೀಅ, ಅಬ್ನಾ ಹಜ್ಜಾಜ್, ಮತ್ತು ಅಬುಲ್ ಬಖ್ತರಿ ಇವರ ಬಗ್ಗೆ ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಹೇಳಿರುವನು: "ಸತ್ಯನಿಷೇಧಿಗಳು ತಮ್ಮ ಸಂಪತ್ತನ್ನು ಜನರನ್ನು ಅಲ್ಲಾಹನ ಮಾರ್ಗದಿಂದ ತಡೆಯಲಿಕ್ಕಾಗಿ ವ್ಯಯಿ ಸುತ್ತಾರೆ. ಈಗಂತೂ ಇವರು ಅದನ್ನು ವ್ಯಯಿಸಿಬಿಡುವರು. ಆದರೆ ಅಂತಿಮವಾಗಿ ಈ ಸಂಪತ್ತೇ ಅವರ ಪಾಲಿಗೆ ಹತಾಶೆ ಮತ್ತು ಪಶ್ಚಾತ್ತಾಪದ ಹೇತುವಾಗಿದೆ. ಕೊನೆಗೆ ಇವರು ಮುಸ್ಲಿಮರಿಂದ ಪರಾಜಿತರಾಗುವರು." **(ಪವಿತ್ರ ಕುರ್‌ಆನ್, 8:36)**

ಈ ಸೇನೆಯು ಮಕ್ಕಾದಿಂದ ಹೊರಟು ಎಂಟು ದಿನಗಳಲ್ಲಿ ಬದ್ರ್ ತಲುಪುತ್ತದೆ.

## ಇತ್ತಂಡಗಳ ಪೈಕಿ ಒಂದು

ಮದೀನಾದಿಂದ ಹೊರಟಾಗ ಮುಸ್ಲಿಮರ ಮುಂದಿದ್ದುದು ಕುರೈಶರ ವ್ಯಾಪಾರೀ ತಂಡವಾಗಿತ್ತು. ಕುರೈಶ್ ಸೇನೆಯನ್ನು ಎದುರಿಸಬೇಕಾಗಬಹುದೆಂಬ ಆಶಂಕೆಯೂ ಅವರಿಗೆ ಇತ್ತು. ಆದರೆ ಈಗ ವ್ಯಾಪಾರಿ ತಂಡವು ತನ್ನ ದಾರಿಯನ್ನು ಬದಲಿಸಿ ದೂರ ಸಾಗಿದೆ. ಕುರೈಶ್ ಸೇನೆಯ ಆಶಂಕೆಯು ವಾಸ್ತವಿಕತೆಯ ರೂಪ ತಾಳಿದೆ. ಈ ಸೇನೆಯ ಉದ್ದೇಶವು ವ್ಯಾಪಾರಿ ತಂಡವನ್ನು ಸುರಕ್ಷಿತವಾಗಿ ಹಿಂದಕ್ಕೆ ಒಯ್ಯುವುದೇ ಆಗಿತ್ತು. ಆದರೆ ಈಗ ಮುಸ್ಲಿಮರು ಬದ್ರ್‌ನಲ್ಲಿ ಸೇರಿರುವ ವಿಷಯ ತಿಳಿದು ಅಬೂಜಹಲ್‌ನ ಅಹಂಕಾರವು ನೆತ್ತಿಗೇರಿತ್ತು. ಅವನು ತನ್ನ ವರ್ಚಸ್ಸನ್ನು ಬೀರಲು ಮತ್ತು ಪರಿಸರದ ಗೋತ್ರಗಳಲ್ಲಿ ಭೀತಿ ಹುಟ್ಟಿಸಲು ಬದ್ರ್‌ನ ಕಡೆಗೆ ಹೊರಟಿದ್ದನು.

ಈ ಎರಡು ತಂಡಗಳ ಪೈಕಿ ಒಂದನ್ನು ಮುಸ್ಲಿಮರು ಸೋಲಿಸಲಿರುವರು ಎಂಬ ಶುಭವಾರ್ತೆಯನ್ನು ಅಲ್ಲಾಹನು ಮುಹಮ್ಮದ್‌ರಿಗೆ(ಸ) ಮೊದಲೇ ನೀಡಿದ್ದನು. ಆದರೆ ಈಗ

ಪರಿಸ್ಥಿತಿಯನ್ನು ಮುಂದಿಟ್ಟುಕೊಂಡು ಮುಸ್ಲಿಮರು ಯಾವ ತಂಡವನ್ನು ಎದುರಿಸಬಯಸುತ್ತಾರೆಂಬುದನ್ನು ತಿಳಿಯಲು ಅವರೊಂದಿಗೆ ಸಮಾಲೋಚನೆ ನಡೆಸಲು ಪ್ರವಾದಿವರ್ಯರು(ಸ) ತೀರ್ಮಾನಿಸಿದರು.

ಪ್ರವಾದಿವರ್ಯರ(ಸ) ಎಲ್ಲ ಪ್ರಮುಖ ಮತ್ತು ಪ್ರಬುದ್ಧ ಸಂಗಾತಿಗಳು ಅವರ ಜತೆಯಲ್ಲಿದ್ದಾರೆ. ಪ್ರವಾದಿವರ್ಯರು(ಸ) ಅವರ ಮುಂದೆ ಈ ವಿಷಯವನ್ನು ಪ್ರಸ್ತಾಪಿಸುತ್ತಾರೆ. ಅವರು ಈ ಬಗ್ಗೆ ತಮ್ಮೊಳಗೆ ಸಮಾಲೋಚನೆ ನಡೆಸುತ್ತಾರೆ.

ಅವರಿಂದ ಸ್ವಲ್ಪ ದೂರ ಒಂದು ಗುಂಪಿನಲ್ಲಿ ಪಿಸುಮಾತು ನಡೆಯುತ್ತಿದೆ. "ನಾವಂತೂ ಯಾತ್ರಾ ತಂಡವನ್ನು ತಡೆಯಲು ಬಂದವರು. ಆದ್ದರಿಂದ ನಮ್ಮಲ್ಲಿದ್ದ ಎಲ್ಲ ಆಯುಧಗಳನ್ನೂ ಜತೆಗೆ ತಂದಿಲ್ಲ. ಈಗ ನಮ್ಮ ಮುಂದೆ ಕುರೈಶರ ಸೇನೆಯಿದೆ. ನಮ್ಮನ್ನು ಅವರೊಂದಿಗೆ ಯುದ್ಧ ಮಾಡಿಸಲು ಅಲ್ಲಿ ಸಮಾಲೋಚನೆ ನಡೆಯುತ್ತಿದೆ."

ಈ ಬಗ್ಗೆ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ: "ಎರಡು ತಂಡಗಳ ಪೈಕಿ ಒಂದು ನಿಮಗೆ ಸಿಗುವುದೆಂದು ಅಲ್ಲಾಹನು ನಿಮಗೆ ವಾಗ್ದಾನ ಮಾಡುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ. ದುರ್ಬಲ ತಂಡವು ನಿಮಗೆ ಸಿಗಬೇಕೆಂದು ನೀವು ಇಚ್ಛಿಸುತ್ತಿದ್ದಿರಿ. ಆದರೆ ಅಪರಾಧಿಗಳಿಗೆ ಎಷ್ಟೇ ಅಪ್ರಿಯವಾಗಿದ್ದರೂ ಸತ್ಯವು ಸತ್ಯ ವಾಗಿಯೂ ಮಿಥ್ಯವು ಮಿಥ್ಯವಾಗಿಯೂ ಇರುವಂತಾಗಲು ತನ್ನ ಆದೇಶಗಳಿಂದ ಸತ್ಯವನ್ನು ಸತ್ಯವಾಗಿ ಮಾಡಿ ತೋರಿಸಿ, ಸತ್ಯನಿಷೇಧಿಗಳ ಮೂಲೋತ್ಪಾಟನಗೊಳಿಸಿ ಬಿಡಬೇಕೆಂಬುದು ಅಲ್ಲಾಹನ ಇಚ್ಛೆಯಾಗಿತ್ತು" (ಪವಿತ್ರ ಕುರ್‌ಆನ್, 8:7, 8)

ಮುಹಾಜಿರ್‌ಗಳ ನಾಯಕರೆನಿಸಿದ ಹ. ಅಬೂಬಕರ್(ರ) ಆಗ ಒಂದು ಪ್ರಭಾವಶಾಲೀ ಭಾಷಣ ಮಾಡುತ್ತಾರೆ. ಬಳಿಕ ಹ. ಉಮರ್(ರ) ಉತ್ಸಾಹಪೂರ್ಣ ಭಾಷಣ ಮಾಡುತ್ತಾರೆ. ತರುವಾಯ ಹ. ಮಿಕ್‌ದಾದ್(ರ) ಮುಹಮ್ಮದ್‌ರನ್ನುದ್ದೇಶಿಸಿ(ಸ) ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೇ! ಅಲ್ಲಾಹನು ತಮಗೆ ಏನನ್ನು ಆದೇಶಿಸುತ್ತಾನೋ ಅದನ್ನೇ ಮಾಡಿರಿ. ನಾವು ತಮ್ಮ ಜತೆಗಿರುವೆವು. ಅಲ್ಲಾಹನಾಣೆ! ಬನೀ ಇಸ್ರಾಈಲರು* ಮೂಸಾರಿಗೆ(ಅ) ಹೇಳಿದಂತೆ ನಾವು ತಮಗೆ ಹೇಳಲಾರೆವು. ತಮ್ಮನ್ನು ಸತ್ಯಪೂರ್ಣವಾಗಿ ನಿಯುಕ್ತಗೊಳಿಸಿರುವ ಅಲ್ಲಾಹನಾಣೆ! ತಾವು ಬರ್ಕುಲ್ ಅಮಾದ್‌ನ (ಯಮನ್‌ನ ಒಂದು ಪ್ರದೇಶ) ವರೆಗೆ ಹೋದರೂ ತಾವು ಅಲ್ಲಿಗೆ ತಲುಪುವ ತನಕವೂ ನಾವು ತಮ್ಮೊಂದಿಗಿರುವೆವು."

ಈ ಮಾತುಗಳನ್ನು ಕೇಳಿ ಪ್ರವಾದಿವರ್ಯರ(ಸ) ಮುಖಾರವಿಂದದಲ್ಲಿ ಪ್ರಸನ್ನತೆಯ

* 'ಬನೀ ಇಸ್ರಾಈಲ್' ಎಂಬುದು ಅಲ್ಲಾಹನ ಪ್ರವಾದಿಯಾದ ಹ. ಯಾಕೂಬ್(ಅ)ರವರ ಸಂತತಿಗಳ ಗೋತ್ರದ ಜನರು. ಮೂಸಾ(ಅ)ರನ್ನುದ್ದೇಶಿಸಿ ಆ ಜನರು, "ನೀವು ಮತ್ತು ನಿಮ್ಮ ಪ್ರಭು ಅಲ್ಲಿಗೆ ಹೋಗಿ ಅವರೊಡನೆ ಯುದ್ಧ ಮಾಡಿರಿ. ನಾವಂತೂ ಇಲ್ಲೇ ಕುಳಿತಿರುತ್ತೇವೆ" ಎಂದು ಹೇಳಿದ್ದರ ಕಡೆಗೆ ಸೂಚನೆಯಿದು.

ಕಾಂತಿ ಮೂಡುತ್ತದೆ. ಕೆಲವು ಕ್ಷಣಗಳು ಸುಮ್ಮನಿದ್ದು ಪ್ರವಾದಿ(ಸ) ಹೀಗೆ ಹೇಳುತ್ತಾರೆ: "ಈಗ ಏನು ಮಾಡುವುದೆಂಬ ಬಗ್ಗೆ ನನಗೆ ಸಲಹೆ ನೀಡಿರಿ."

ಪ್ರವಾದಿವರ್ಯರ(ಸ) ತರಬೇತಿಯಲ್ಲಿದ್ದ ಅನ್ಸಾರ್‌ಗಳು ಈಗ ಮುಹಮ್ಮದ್(ಸ) ತಮ್ಮ ಅಭಿಪ್ರಾಯವನ್ನು ತಿಳಿಯಬಯಸುತ್ತಾರೆಂಬುದನ್ನು ಗ್ರಹಿಸಿಕೊಳ್ಳುತ್ತಾರೆ.

ಸಅದ್ ಬಿನ್ ಮುಆದ್(ರ) ಪ್ರವಾದಿವರ್ಯರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ:

"ಪ್ರವಾದಿವರ್ಯರೇ! ಪ್ರಾಯಶಃ ತಾವು ನಮ್ಮನ್ನು ಉದ್ದೇಶಿಸಿ ಮಾತನಾಡುತ್ತಿರ ಬಹುದು. ನಾವು ತಮ್ಮ ಮೇಲೆ ನಂಬಿಕೆಯನ್ನಿಟ್ಟಿರುವೆವು. ತಮ್ಮ ಪ್ರವಾದಿತ್ವವನ್ನು ದೃಢೀಕರಿಸಿರುವೆವು. ತಾವು ತಂದಿರುವ ಬೋಧನೆಯು ಸತ್ಯಪೂರ್ಣವಾಗಿದೆಯೆಂಬುದರ ಬಗ್ಗೆ ಸಾಕ್ಷ್ಯ ವಹಿಸಿರುವೆವು. ನಾವು ತಮ್ಮ ವಿಧೇಯತೆ ಮತ್ತು ಅನುಸರಣೆಯ ದೃಢ ವಾದ ಪ್ರತಿಜ್ಞೆಯನ್ನು ಮಾಡಿರುವೆವು. ತಾವು ಎಲ್ಲಿಗೆ ಬಯಸುತ್ತೀರೋ ಪ್ರಸ್ತಾಪ ಮಾಡಿರಿ. ನಾವು ತಮ್ಮ ಜೊತೆಗಿದ್ದೇವೆ. ತಮ್ಮನ್ನು ಸತ್ಯದ ಸಹಿತ ನಿಯುಕ್ತಗೊಳಿಸಿದ ಅಲ್ಲಾಹನಾಣೆ! ತಾವು ಸಮುದ್ರವನ್ನು ನಮ್ಮ ಮುಂದೆ ತಂದು ಅದರಲ್ಲಿ ಪ್ರವೇಶಿಸಿದರೆ ನಾವು ತಮ್ಮ ಜೊತೆಗೆ ಅದರಲ್ಲೂ ಪ್ರವೇಶಿಸುವೆವು. ನಮ್ಮ ಪೈಕಿ ಒಬ್ಬನೂ ಅದರಿಂದ ಹಿಂಜರಿಯಲಾರನು. ತಾವು ನಮ್ಮನ್ನು ಕೊಂಡುಹೋಗಿ ನಾಳೆ ಶತ್ರುಗಳನ್ನು ಎದುರಿಸಿದರೆ ನಾವು ಅದಕ್ಕೂ ಸಿದ್ಧರಿರುವೆವು. ನಾವು ಯುದ್ಧದಲ್ಲಿ ಸ್ಥಿರಚಿತ್ತರೂ ಶತ್ರುಗಳನ್ನು ಎದುರಿಸುವುದರಲ್ಲಿ ಪ್ರಾಮಾಣಿಕರೂ ಆಗಿರುವೆವು. ತಮ್ಮ ಕಣ್ಣುಗಳು ತಂಪಾಗುವ ರೀತಿಯಲ್ಲಿ ಅಲ್ಲಾಹನು ನಮ್ಮಿಂದ ಸಾಧನೆಗಳನ್ನು ಮಾಡಿಸುವನೆಂದು ನಾವು ನಿರೀಕ್ಷಿಸುತ್ತೇವೆ. ತಾವು ಅಲ್ಲಾಹನ ಅನುಗ್ರಹದಿಂದ ಹೊರಡಿರಿ."

ಮುಹಮ್ಮದ್(ಸ) ಅವರ ಮುಖವು ಸಂತೋಷದಿಂದ ಅರಳಿದೆ. ಸಂಗಾತಿಗಳಲ್ಲಿ ಯುದ್ಧದ ಸ್ಫೂರ್ತಿಯು ಮೈವೆತ್ತಿ ನಿಂತಿದೆ. ಪ್ರವಾದಿ(ಸ) ಈ ರೀತಿ ಆದೇಶಿಸುತ್ತಾರೆ:

"ಹೊರಡಿರಿ! ಪ್ರಸನ್ನರಾಗಿರಿ! ಅಲ್ಲಾಹನು ನನಗೆ ಎರಡರ ಪೈಕಿ ಒಂದು ತಂಡದ ಕುರಿತು ವಾಗ್ದಾನ ಮಾಡಿರುವನು. ನಾನೀಗ ಕುರೈಶರು ಕುಸಿದು ಬೀಳುತ್ತಿರುವ ಸ್ಥಳಗಳನ್ನು ಕಣ್ಣಾರೆ ಕಾಣುತ್ತಿರುವೆನು."

ಬದ್ರ್‌ನ ಬಳಿ ಪ್ರವಾದಿ(ಸ) ನಮಾಝ್‌ನಲ್ಲಿ ನಿರತರಾಗಿರುವರು. ನಮಾಝ್ ಮುಗಿಸಿ ಅವರು ತಮ್ಮ ಸಂಗಾತಿಗಳನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ಮಕ್ಕಾ ಪಟ್ಟಣವು ನಿಮ್ಮನ್ನು ಎದುರಿಸಲಿಕ್ಕಾಗಿ ತನ್ನ ಕರುಳ ಕುಡಿಗಳನ್ನು ಕಳುಹಿಸಿಕೊಟ್ಟಿದೆ."

ಅಷ್ಟರಲ್ಲಿ ಹುಬಾಬ್ ಬಿನ್ ಮುಂದಿರ್(ರ) ಮುಂದೆ ಬಂದು ವಿನಮ್ರವಾಗಿ ಹೀಗೆ ನಿವೇದಿಸಿಕೊಳ್ಳುತ್ತಾರೆ: "ಪ್ರವಾದಿವರ್ಯರೇ! ಈ ಸ್ಥಳದಲ್ಲಿ ಇಳಿಯಬೇಕೆಂದು ಅಲ್ಲಾಹನ ಆಜ್ಞೆಯಾಗಿದೆಯೆ?"

"ಇಲ್ಲ. ಇದು ನನ್ನ ಅಭಿಪ್ರಾಯ" ಎಂದು ಪ್ರವಾದಿ(ಸ) ಉತ್ತರಿಸುತ್ತಾರೆ.

ಹುಬಾಬ್: "ಈ ಸ್ಥಳ ಒಳ್ಳೆಯದಲ್ಲ. ಮುಂದೆ ಹೋಗೋಣ, ಕುರೈಶರಿಗೆ ಸಮೀಪದಲ್ಲಿರುವ ಆ ಚಿಲುಮೆಯ ಬಳಿ ಇಳಿಯೋಣ. ಅದರ ಹಿಂದಿರುವ ಎಲ್ಲ ಚಿಲುಮೆ ಗಳನ್ನೂ ನಿರುಪಯುಕ್ತಗೊಳಿಸಿ ಬಿಡೋಣ. ಚಿಲುಮೆಯ ಬಳಿ ಕೊಳವನ್ನು ನಿರ್ಮಿಸಿ ಅದರಲ್ಲಿ ನೀರು ಶೇಖರಿಸಿಡೋಣ."

ಪ್ರವಾದಿ(ಸ) ಹುಬಾಬ್‌ರ(ರ) ಮಾತು ಕೇಳಿ ಬಹಳ ಸಂತುಷ್ಟರಾಗುತ್ತಾರೆ. "ನನಗೆ ನಿಮ್ಮ ಸಲಹೆಯೊಂದಿಗೆ ಪೂರ್ಣ ಸಹಮತವಿದೆ" ಎನ್ನುತ್ತಾರೆ.

ಪ್ರವಾದಿ(ಸ) ಮತ್ತು ಸಂಗಾತಿಗಳು ಮುಂದುವರಿಯುತ್ತಾರೆ. ಕುರೈಶರಿಗೆ ಸಮೀಪವಿರುವ ಚಿಲುಮೆಯ ಬಳಿ ಎಲ್ಲರೂ ಇಳಿಯುತ್ತಾರೆ.

## ಬದ್ರ್‌ನ ರಣಾಂಗಣದಲ್ಲಿ

ಸೂರ್ಯಪ್ರಕಾಶದ ಪ್ರಖರತೆಯು ಕಡಿಮೆಯಾಗುತ್ತಾ ಬರುತ್ತಿದೆ. ಆದರೆ ಅದಿನ್ನೂ ಮದೀನಾದಿಂದ ಇಷ್ಟು ದೂರ ಬಂದು ಯಾವುದೇ ಪ್ರಸ್ತಾಪ ಯೋಗ್ಯ ಶಸ್ತ್ರಾಸ್ತ್ರ ಗಳಿಲ್ಲದೆಯೇ ಕುರೈಶರ ಬಲಿಷ್ಠ ಸೇನೆಯನ್ನು ಎದುರಿಸಲಿಕ್ಕಾಗಿ ಡೇರೆಹಾಕಿ ಕುಳಿತವರನ್ನೇ ದಿಟ್ಟಿಸಿ ನೋಡುತ್ತಿದೆ. ಅವರಿಗೆ ಬದ್ರ್‌ನ ಮರಳಲ್ಲಿ ನಡೆಯುವುದೇ ಕಷ್ಟವಾಗಿದೆ. ಹೆಜ್ಜೆಹೆಜ್ಜೆಗೂ ಕಾಲುಗಳು ಮರಳಲ್ಲಿ ಹೂತು ಹೋಗುತ್ತಿವೆ. ನೀರಿಲ್ಲದೆ ಅವರ ತುಟಿಗಳು ಮಾತ್ರ ಒಣಗಿರುವುದಲ್ಲ, ಅವರೂ ಸೊರಗಿ ಹೋಗಿದ್ದಾರೆ. ಮುನ್ನೂರ ಮೂವತ್ತು ಮಂದಿಯ ಈ ಸಂಘವು ಸತ್ಯದ ಮೇಲ್ಮೆಗಾಗಿ ಯುದ್ಧ ಕಣದಲ್ಲಿ ನಿಂತಿರುವ ಭೂಮುಖದ ಅತ್ಯಂತ ಪಾವನ ಮನುಷ್ಯ ಸಮೂಹವಾಗಿದೆ. ಅವರ ಬಳಿ ಇರುವುದು ಕೇವಲ ಎರಡು ಕುದುರೆಗಳು ಮತ್ತು ಅರವತ್ತು ಒಂಟೆಗಳು. ಖಡ್ಗಗಳೂ ಭರ್ಜಿಗಳೂ ಬಿಲ್ಲು-ಬಾಣಗಳೂ ಬಹಳ ಕಡಿಮೆ ಇವೆ. ಆದರೆ ಅವರು ತಮ್ಮ ವಿಶ್ವಾಸಬಲದ ಸ್ಫೂರ್ತಿಯಿಂದ ಅಚಲರಾಗಿ ನಿಂತಿರುವರು. ಅವರ ಎದುರಾಳಿ ಸೇನೆಯ ಬಳಿ ಕುದುರೆ, ಒಂಟೆ, ಖಡ್ಗ, ಬಿಲ್ಲು- ಬಾಣ ಮತ್ತು ಭರ್ಜಿಗಳಿಗೆ ಯಾವ ಕೊರತೆಯೂ ಇರಲಿಲ್ಲ. ಅವರ ಸಂಖ್ಯಾಬಲವೂ ಮುಸ್ಲಿಮರಿ ಗಿಂತ ಮೂರ್ಮಡಿ ಇದೆ. ನೀರಿನ ಒಂದು ಚಿಲುಮೆಯೂ ಅವರ ವಶದಲ್ಲಿದೆ. ಅವರು ಕುದುರೆ ಸವಾರರಾಗಿರುವಾಗ ಮುಸ್ಲಿಮರು ಕೇವಲ ಕಾಲಾಳುಗಳು. ಬಾಹ್ಯ ನೋಟಕ್ಕೆ ಅವರಿಗೆ ತಮ್ಮ ಶತ್ರುಗಳೊಂದಿಗೆ ಯಾವ ಹೋಲಿಕೆಯೂ ಇರಲಿಲ್ಲ.

ಬದ್ರ್‌ನ ಒಂದು ಎತ್ತರದ ಗುಡ್ಡದಲ್ಲಿ ಸಅದ್ ಬಿನ್ ಮುಆದ್(ರ) ಒಂದು ಚಪ್ಪರ ನಿರ್ಮಿಸಿರುವರು. ಅಲ್ಲಿಂದ ಬದ್ರ್‌ನ ರಣಾಂಗಣವು ಸ್ಪಷ್ಟವಾಗಿ ಗೋಚರಿ ಸುತ್ತಿತ್ತು. ಹ. ಮುಹಮ್ಮದ್(ಸ) ಮತ್ತು ಹ. ಅಬೂಬಕರ್(ರ) ಅಲ್ಲಿ ಆಸೀನರಾಗಿರು ವರು. ಸಅದ್(ರ) ಹೊರಗೆ ಕಾವಲು ನಿಂತಿರುವರು. ಮುಸ್ಲಿಮರ ಸೇನೆಯು ಬಯಲಲ್ಲಿದೆ. ಅಲ್ಲಾಹನು ಮಳೆ ಸುರಿಸಿ ಮುಸ್ಲಿಮರಿಗೆ ಸಂತೃಪ್ತಿಯನ್ನು ದಯಪಾಲಿಸಿರುವನು. ಮಳೆ ಯಲ್ಲಿ ಮಿಂದು ಅವರು

ಬಹಳ ಸಂತುಷ್ಟರಾಗಿರುವರು. ಮಳೆಯ ನೀರನ್ನು ಶೇಖರಿಸಿ ಒಂದು ಕೊಳವನ್ನು ನಿರ್ಮಿಸಿರುವರು. ಎತ್ತರದಿಂದ ತಗ್ಗಿಗೆ ಇಳಿಯುತ್ತಿರುವ ನೀರು ವೈರಿಗಳಿಗೆ ಕೆಸರು ಮತ್ತು ರಾಡಿಯನ್ನು ನಿರ್ಮಿಸಿದೆ. ತೀಕ್ಷ್ಣ ಸೆಖೆಯ ನಂತರ ಸುರಿದ ಧಾರಾಕಾರದ ಮಳೆಯಿಂದಾಗಿ ಮುಸ್ಲಿಮರಲ್ಲಿ ತೂಕಡಿಕೆ ಮತ್ತು ಮಂಪರು ಆವರಿಸಿದೆ. ಇದರಿಂದಾಗಿ ಅವರ ದಣಿವೆಲ್ಲಾ ನೀಗಿದಂತಾಯಿತು. ಮರುದಿನ ಅವರು ಹೊಸ ಹುರುಪಿನೊಂದಿಗೆ ಶತ್ರು ಸೇನೆಯನ್ನು ಎದುರಿಸಲು ಶಕ್ತರಾದರು.

ಅಲ್ಲಾಹನು ತನ್ನ ಈ ಅನುಗ್ರಹದ ಕುರಿತು ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಿರುವನು: "ಅಲ್ಲಾಹನು ತನ್ನ ಕಡೆಯಿಂದ ತೂಕಡಿಕೆಯ ರೂಪದಲ್ಲಿ ನಿಮ್ಮ ಮೇಲೆ ನೆಮ್ಮದಿ ಹಾಗೂ ನಿರ್ಭಯತೆಯನ್ನು ಆಚ್ಛಾದಿಸುತ್ತಿದ್ದ ಹಾಗೂ ನಿಮ್ಮನ್ನು ಶುದ್ಧೀಕರಿಸಲಿಕ್ಕೂ ಶೈತಾನನಿಂದ ಹಾಕಲ್ಪಟ್ಟ ಮಾಲಿನ್ಯವನ್ನು ನಿಮ್ಮಿಂದ ನೀಗಿಸಲಿಕ್ಕೂ ನಿಮ್ಮ ಹೃದಯಗಳಲ್ಲಿ ಧೈರ್ಯ ತುಂಬಲಿಕ್ಕೂ ತನ್ಮೂಲಕ ನಿಮ್ಮ ಪಾದಗಳನ್ನು ನೆಲೆಯೂರಿಸಲಿಕ್ಕೂ ಆಕಾಶದಿಂದ ನಿಮ್ಮ ಮೇಲೆ ಮಳೆ ಸುರಿಸುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ."

**(ಪವಿತ್ರ ಕುರ್‌ಆನ್: 8: 11)**

ನಿದ್ರೆಯಿಂದೆದ್ದಾಗ ಮುಸ್ಲಿಮರ ಮನಸ್ಸಿನಿಂದ ಭಯಾತಂಕಗಳು ಮಾಯವಾಗಿ ದ್ದುವು. ಮಳೆಯಿಂದಾಗಿ ನೀರಿನ ಅಭಾವವೂ ನೀಗಿತ್ತು. ಜನರು ಸ್ನಾನ ಮಾಡಿ, ಬಟ್ಟೆ ಬರೆಗಳನ್ನು ತೊಳೆದು ನಿರ್ಮಲರೂ ಸುದೃಢರೂ ಆಗಿದ್ದರು. ಮಳೆಯಿಂದಾಗಿ ಮರಳು ಗಟ್ಟಿಯಾಗಿತ್ತು. ಕಾಲುಗಳು ಹೂತು ಹೋಗುವ ಸಂಭವ ಉಳಿದಿರಲಿಲ್ಲ. ಶೈತಾನನ ದುಸ್ಸೂಚನೆಯಿಂದ ಮನದಲ್ಲುಂಟಾಗಿದ್ದ ಆತಂಕವು ಪೂರ್ಣವಾಗಿ ಅಳಿದು ಹೋಗಿತ್ತು.

ಅದೊಂದು ವಿಚಿತ್ರ ಸನ್ನಿವೇಶವಾಗಿತ್ತು. ಇಷ್ಟು ದೊಡ್ಡ ಮತ್ತು ವಿಶಾಲ ಭೂಮುಖದ ಮೇಲೆ ಏಕದೇವ ವಿಶ್ವಾಸದ ಭಾಗ್ಯವು ಕೇವಲ ಕೆಲವು ಜೀವಗಳ ಮೇಲೆ ಅವಲಂಬಿಸಿತ್ತು. ಪ್ರವಾದಿವರ್ಯರು(ಸ) ಅತ್ಯಧಿಕ ಭಯಭಕ್ತಿ ಮತ್ತು ತನ್ಮಯತೆಯಿಂದ ಅಲ್ಲಾಹನ ಕಡೆಗೆ ಧ್ಯಾನಾಸಕ್ತರಾಗಿದ್ದರು. ಎರಡೂ ಕೈಗಳನ್ನೆತ್ತಿ ಈ ರೀತಿ ಪ್ರಾರ್ಥಿಸುತ್ತಿದ್ದರು: "ಓ ಅಲ್ಲಾಹ್! ನೀನು ನನ್ನಲ್ಲಿ ಮಾಡಿರುವಂತಹ ವಾಗ್ದಾನವನ್ನು ಪೂರ್ಣಗೊಳಿಸು."

ಅವರಿಗರಿವಿಲ್ಲದಂತೆ ಅವರ ಹೆಗಲ ಮೇಲಿದ್ದ ಶಾಲು ಕೆಳಗೆ ಬಿದ್ದಿತು. ಅವರು ಅದೇ ಸ್ಥಿತಿಯಲ್ಲಿ ಸಾಷ್ಟಾಂಗವೆರಗಿ ಈ ರೀತಿ ಪ್ರಾರ್ಥಿಸುತ್ತಾರೆ: "ಓ ಅಲ್ಲಾಹ್! ಇಂದು ಈ ಕೆಲವು ಮಂದಿ ನಾಶವಾದರೆ ಮತ್ತೆ ಈ ಭೂಮಿಯ ಮೇಲೆ ಕೇವಲ ನಿನ್ನ ಆರಾಧನೆ ಮಾಡುವವರು ಯಾರೂ ಉಳಿಯಲಾರರು."

ಇಂದು ಹಿಜರಿ ಎರಡನೆಯ ವರ್ಷದ ಪವಿತ್ರ ರಮಝಾನ್ ತಿಂಗಳ 17ನೇ ದಿನಾಂಕ. ಮುಂಜಾವಿನ ಪ್ರಮತ್ತತೆಯ ಕ್ಷಣಗಳಲ್ಲಿ ಮುಸ್ಲಿಮ್ ಸೇನೆಯು ಪಂಕ್ತಿಬದ್ಧ ವಾಗಿ ಅಣಿಗೊಂಡಿದೆ. ದಂಡನಾಯಕರಾದ ಮುಹಮ್ಮದ್(ಸ) ಪಂಕ್ತಿಗಳನ್ನು ವೀಕ್ಷಿಸುತ್ತಿ ರುವರು.

ಪಂಕ್ತಿಗಳನ್ನು ಇನ್ನಷ್ಟು ದುರಸ್ತಿಗೊಳಿಸಿದ ಬಳಿಕ ಪ್ರವಾದಿ(ಸ) ಈ ರೀತಿ ಪ್ರಾರ್ಥಿಸುತ್ತಾರೆ: "ಓ ಅಲ್ಲಾಹ್! ಇವರು ಕುರೈಶರು. ತಮ್ಮ ದರ್ಪ ದುರಹಂಕಾರಗಳಲ್ಲಿ ಮೈ ಮರೆತು ನಿನ್ನ ದಾಸರನ್ನು ನಿನ್ನ ಅನುಸರಣೆಯಿಂದ ಹಿಂಜರಿಸಲು ಬರುತ್ತಿರುವರು. ನಿನ್ನ ಪ್ರವಾದಿಯನ್ನು ಸುಳ್ಳಾಗಿಸಲು ಹೊರಟಿರುವರು. ಓ ಅಲ್ಲಾಹ್! ನೀನು ನನಗೆ ವಾಗ್ದಾನ ಮಾಡಿರುವ ನಿನ್ನ ಸಹಾಯವನ್ನು ಕಳುಹಿಸು. ಓ ಅಲ್ಲಾಹ್! ಅವರನ್ನು ನಾಶ ಮಾಡಿಬಿಡು."

ತರುವಾಯ ಪ್ರವಾದಿ(ಸ) ತಮ್ಮ ಚಪ್ಪರಕ್ಕೆ ಹೋಗಿ ಮತ್ತೆ ಪ್ರಾರ್ಥನೆಯಲ್ಲಿ ನಿರತರಾಗುತ್ತಾರೆ. ಕೆಲವು ಕ್ಷಣಗಳ ಬಳಿಕ ಹೊರಬಂದು ಒಂದು ಹಿಡಿ ಮರಳನ್ನು ಎತ್ತಿ ಕುರೈಶರ ಕಡೆಗೆ ಎಸೆಯುತ್ತಾ, "ಓ ಅಲ್ಲಾಹ್! ಅವರ ಮುಖಗಳನ್ನು ವಿವರ್ಣ ಗೊಳಿಸು" ಎನ್ನುತ್ತಾರೆ.

ಆ ಬಳಿಕ ಮುಸ್ಲಿಮ್ ಸೈನ್ಯಕ್ಕೆ ವೈರಿಗಳ ಮೇಲೆ ಆಕ್ರಮಣ ಮಾಡುವಂತೆ ಆಜ್ಞಾಪಿಸುತ್ತಾರೆ. ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಈ ಸನ್ನಿವೇಶವನ್ನು ಹೀಗೆ ವಿವರಿಸಿರುವನು: "ನೀವು ಅವರನ್ನು ವಧಿಸಲಿಲ್ಲ. ನಿಜವಾಗಿ ಅಲ್ಲಾಹನು ಅವರನ್ನು ವಧಿಸಿದನು. ಓ ಪೈಗಂಬರರೇ, ನೀವು ಎಸೆದುದಲ್ಲ. ನಿಜವಾಗಿ ಅಲ್ಲಾಹನು ಎಸೆದನು. ಇದು (ಸತ್ಯವಿಶ್ವಾಸಿಗಳ ಕೈಗಳು ಈ ಕಾರ್ಯಕ್ಕಾಗಿ ಬಳಸಲ್ಪಟ್ಟದ್ದು) ಅಲ್ಲಾಹ್ ಸತ್ಯವಿಶ್ವಾಸಿಗಳನ್ನು ಒಂದು ಅತ್ಯುತ್ತಮ ಪರೀಕ್ಷೆಯಿಂದ ಜಯಪ್ರದವಾಗಿ ಪಾರುಗಾಣಿಸಲಿಕ್ಕಾಗಿತ್ತು. ನಿಶ್ಚಯವಾಗಿಯೂ ಅಲ್ಲಾಹ್ ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ." **(ಪವಿತ್ರ ಕುರ್‌ಆನ್, 8:17)**

ಮುಹಮ್ಮದ್(ಸ) ಅವರು ಎಸೆದ ಮರಳಿನ ಕಣಗಳು ಪ್ರತಿಯೊಬ್ಬ ಕುರೈಶ್ ಸೈನಿಕನ ಕಣ್ಣು ಮೂಗುಗಳಿಗೆ ಬಲವಾಗಿ ತಾಗಿತು. ಈ ವಿಷಯವನ್ನು ಅಲ್ಲಾಹನು ಕುರ್‌ಆನಿನಲ್ಲಿ ಹೀಗೆ ಪ್ರಸ್ತಾಪಿಸಿರುವನು, "ನೀವು ನಿಮ್ಮ ಪ್ರಭುವಿನೊಡನೆ ಮೊರೆಯಿಡುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ. ನಾನು ನಿಮ್ಮ ಸಹಾಯಕ್ಕಾಗಿ ಸರದಿಯಂತೆ ಒಂದು ಸಾವಿರ ದೇವಚರರನ್ನು ಕಳುಹಿಸು ತ್ತಲಿದ್ದೇನೆಂದು ಅವನು ಉತ್ತರಿಸಿದನು. ನಿಮಗೆ ಸುವಾರ್ತೆ ಹಾಗೂ ಅದರಿಂದ ನಿಮ್ಮ ಮನಸ್ಸಿಗೆ ನೆಮ್ಮದಿ ಉಂಟಾಗುವಂತಾಗಲಿಕ್ಕಾಗಿ ಮಾತ್ರ ಅಲ್ಲಾಹನು ನಿಮಗೆ ಈ ವಿಷಯವನ್ನು ತಿಳಿಯಪಡಿಸಿದನು. ಸಹಾಯವು ಯಾವಾಗ ಲಭಿಸಿದರೂ ಅದು ಅಲ್ಲಾಹನ ಕಡೆಯಿಂದಲೇ ಲಭಿಸುತ್ತದೆ. ನಿಶ್ಚಯವಾಗಿಯೂ ಅಲ್ಲಾಹ್ ಮಹಾಪ್ರತಾಪಿಯೂ ಧೀಮಂತನೂ ಆಗಿರುತ್ತಾನೆ." **(ಪವಿತ್ರ ಕುರ್‌ಆನ್, 8 : 9,10)**

## ಸತ್ಯ-ಮಿಥ್ಯಗಳ ಸಂಘರ್ಷ

ಅರಬ್ ಸಂಪ್ರದಾಯದಂತೆ ಮೂರು ಮಂದಿ ಪರಾಕ್ರಮಿಗಳಾದ ಶೀಬಾ, ಉತ್ಬಾ ಮತ್ತು ವಲೀದ್ ತಮ್ಮ ಸೇನೆಯಿಂದ ಹೊರಬಂದು ತಮ್ಮನ್ನು ಎದುರಿಸುವಂತೆ ಮುಸ್ಲಿಮರಿಗೆ ಆಹ್ವಾನ ನೀಡುತ್ತಾರೆ. ಮುಸ್ಲಿಮ್ ಯೋಧರ ಪೈಕಿ ಔಫ್ ಬಿನ್ ಅಫ್ರಾ, ಮಊದ್ ಬಿನ್ ಅಫ್ರಾ ಮತ್ತು ಅಬ್ದುಲ್ಲಾ ಬಿನ್ ರವಾಹ ಶೀಘ್ರಗತಿಯಿಂದ ಅವರನ್ನು ಎದುರಿಸಲು ಮುಂದಾಗುತ್ತಾರೆ. ಈ ಮೂವರೂ ಅನ್ಸಾರ್‌ಗಳಾಗಿದ್ದುದರಿಂದ ಮುಹಮ್ಮದ್(ಸ)

ಅವರನ್ನು ತಡೆಯುತ್ತಾರೆ. ಅವರು ಯುದ್ಧದ ಆರಂಭವನ್ನು ತಮ್ಮದೇ ಗೋತ್ರದ ಪರಾಕ್ರಮಿಗಳ ಮೂಲಕ ಮಾಡಬಯಸಿದ್ದರು.

ಮುಹಮ್ಮದ್‌ರ(ಸ) ಆದೇಶದಂತೆ ಅವರ ಗೋತ್ರಕ್ಕೆ ಸೇರಿದ ಹಮ್‌ಝಾ, ಅಲೀ ಮತ್ತು ಉಬೈದ(ರ) ತಕ್ಬೀರ್ (ಅಲ್ಲಾಹು ಅಕ್ಬರ್ ಅರ್ಥಾತ್ ಅಲ್ಲಾಹನೇ ದೊಡ್ಡವನು ಎಂಬ ಘೋಷಣೆ) ಮೊಳಗಿಸುತ್ತಾ ವೈರಿಗಳೊಂದಿಗೆ ಕಾಳಗಕ್ಕೆ ಧುಮುಕು ತ್ತಾರೆ. ತನ್ಮೂಲಕ ಕುರೈಶ್ ಗೋತ್ರದವರೇ ಪರಸ್ಪರ ಯುದ್ಧದಲ್ಲಿ ನಿರತರಾಗಿದ್ದಾರೆ.

ಸ್ವಲ್ಪ ಹೊತ್ತಿನಲ್ಲೇ ತಮ್ಮ ಮೂವರು ಜಟ್ಟಿಗಳು ವಿಲವಿಲನೆ ಒದ್ದಾಡಿ ಸಾಯುತ್ತಿರು ವುದನ್ನು ಕಂಡು ಕುರೈಶರು ದಂಗಾದರು. ಹಮ್‌ಝಾ ಮತ್ತು ಅಲೀ(ರ) ತೀವ್ರವಾಗಿ ಗಾಯಗೊಂಡಿರುವ ತಮ್ಮ ಸಂಗಾತಿ ಉಬೈದರನ್ನು(ರ) ಎತ್ತಿಕೊಂಡು ತಮ್ಮ ಸೇನೆಯ ಬಳಿ ತಲುಪಿದರು. ಕುರೈಶರಿಗೆ ತಮ್ಮ ಈ ಮೂರು ಮಂದಿ ಪರಾಕ್ರಮಿಗಳ ಬಗ್ಗೆ ಬಹಳ ಹೆಮ್ಮೆ ಇತ್ತು. ಆದರೆ ಕೆಲವೇ ಕ್ಷಣಗಳಲ್ಲಿ ಅವರ ದರ್ಪವೆಲ್ಲಾ ಮಣ್ಣುಗೂಡಿತು. ಈಗ ಭೀಕರ ಯುದ್ಧ ಆರಂಭವಾಯಿತು. ಪ್ರವಾದಿ(ಸ) ತಮ್ಮ ಸಂಗಾತಿಗಳನ್ನುದ್ದೇಶಿಸಿ ಹೀಗೆ ಹೇಳಿದರು:

"ಯಾರ ಕೈಯಲ್ಲಿ ನನ್ನ ಪ್ರಾಣವಿದೆಯೋ ಆ ಅಲ್ಲಾಹನ ಆಣೆ! ಮುಸ್ಲಿಮರ ಪೈಕಿ ಯಾರು ಇಂದು ಸತ್ಯನಿಷೇಧಿಗಳ ವಿರುದ್ಧ ಹೋರಾಡುವರೋ ಯಾರು ದೃಢಚಿತ್ತತೆ ಮತ್ತು ಸ್ಥೈರ್ಯದೊಂದಿಗೆ ಮುಂದುವರಿದು ಕಾದಾಡುತ್ತಾರೋ ಯಾವ ಸಂದರ್ಭದಲ್ಲೂ ಹಿಮ್ಮೆಟ್ಟದೆ ದಿಟ್ಟವಾಗಿ ಹೋರಾಡಿ ಮಡಿಯುತ್ತಾರೋ ಅವರನ್ನು ಅಲ್ಲಾಹನು ಖಂಡಿತ ವಾಗಿಯೂ ಸ್ವರ್ಗದಲ್ಲಿ ಪ್ರವೇಶಗೊಳಿಸುವನು."

ಇದನ್ನು ಕೇಳುತ್ತಲೇ ಖರ್ಜೂರ ತಿನ್ನುತ್ತಿದ್ದ ಉಮೈರ್ ಬಿನ್ ಅಲ್ ಹಮ್ಮಾಮ್ ಅನ್ಸಾರಿಯವರ ಮನದಿಂದ ಒಂದು ಸ್ವರವೇಳುತ್ತದೆ: "ಸತ್ಯನಿಷೇಧಕರು ನನ್ನನ್ನು ಹುತಾತ್ಮರನ್ನಾಗಿ ಮಾಡುವಷ್ಟೇ ನನ್ನ ಮತ್ತು ಸ್ವರ್ಗದ ಮಧ್ಯೆ ಅಂತರವಿದೆ."

ಅವರು ಖರ್ಜೂರದ ಚೀಲವನ್ನು ನೆಲಕ್ಕೆಸೆಯುತ್ತಾರೆ. ತಮ್ಮ ಖಡ್ಗವನ್ನು ಒರೆಯಿಂದ ಹೊರ ತೆಗೆಯುತ್ತಾರೆ. 'ಅಲ್ಲಾಹು ಅಕ್ಬರ್' ಎನ್ನುತ್ತಾ ವೈರಿ ಸೇನೆಯ ಪಂಕ್ತಿಗಳ ಒಳಗೆ ನುಗ್ಗುತ್ತಾರೆ. ಅವರಿಗೆ ಸ್ವರ್ಗ ಪ್ರವೇಶದ ಆಕಾಂಕ್ಷೆಯಿತ್ತು. ಅತ್ಯಂತ ಪರಾಕ್ರಮದೊಂದಿಗೆ ಹೋರಾಡುತ್ತಾರೆ. ತಮ್ಮ ಆಶೆಯನ್ನು ಈಡೇರಿಸಿ ಕೊಳ್ಳುತ್ತಾರೆ.

ಬದ್ರ್ ಯುದ್ಧದ ಪ್ರಥಮ ಹುತಾತ್ಮ ಹ. ಮಹಜಅ್(ರ) ಆಗಿದ್ದರು. ಅವರು ಶತ್ರು ಸೇನೆಯಿಂದ ಬಂದ ಒಂದು ಬಾಣ ತಾಗಿ ಹುತಾತ್ಮರಾದರು. ಅವರು ಉಮರ್‌ರ(ರ) ಸೇವಕರಾಗಿದ್ದರು.

ಯುದ್ಧದ ಮಧ್ಯೆ ಅಬ್ದುರ್ರಹ್ಮಾನ್ ಬಿನ್ ಔಫ್(ರ) ಇಬ್ಬರು ಯುವಕರ ಜತೆ ಮಾತುಕತೆಯಲ್ಲಿ ನಿರತರಾಗಿರುವರು. ಇವರು ಅಫ್ರಾರ ಪುತ್ರರಾದ ಮುಆದ್ ಮತ್ತು

ಮಊದ್ ಆಗಿದ್ದಾರೆ. ಅವರಿಬ್ಬರು ಅಬೂಜಹಲನ ಬಗ್ಗೆ ವಿಚಾರಿಸುತ್ತಿದ್ದಾರೆ. ಅಷ್ಟರಲ್ಲಿ ಅಬೂಜಹಲ್ ದೂರದಲ್ಲಿ ಕಂಡು ಬರುತ್ತಾನೆ. "ಅದೋ ಅಲ್ಲಿ ಆ ನೀಳ ಕಾಯದ ವ್ಯಕ್ತಿಯೇ ಅಬೂಜಹಲ್" ಎನ್ನುತ್ತಾರೆ ಅಬ್ದುರ್ರಹ್ಮಾನ್ ಬಿನ್ ಔಫ್. ಇದನ್ನು ಕೇಳುತ್ತಲೇ ಆ ಇಬ್ಬರು ಯುವಕರು ಪಂಕ್ತಿಗಳನ್ನು ಭೇದಿಸುತ್ತಾ ಶೀಘ್ರ ಗತಿಯಿಂದ ಅವನೆಡೆಗೆ ಧಾವಿಸಿ ಅವನಿಗೆ ಬಲವಾದ ಏಟು ಕೊಡುತ್ತಾರೆ. ಆದರೆ ಮರುಕ್ಷಣದಲ್ಲೇ ಅಬೂಜಹಲನ ಪುತ್ರ ಇಕ್ರಿಮಾ ಹಿಂದಿನಿಂದ ಮುಆದ್‌ರ ತೋಳಿಗೆ ತಲವಾರಿನಿಂದ ಬಲವಾಗಿ ಪ್ರಹಾರ ಮಾಡುತ್ತಾನೆ. ಮುಆದ್‌ರ ತೋಳು ಕಡಿದು ನೇತಾಡುತ್ತದೆ. ಯುದ್ಧ ಮುಂದುವರಿಸಲು ತೊಡಕಾಗದಿರಲೆಂದು ಮುಆದ್ ನೇತಾಡುತ್ತಿದ್ದ ಕೈಯನ್ನು ತನ್ನ ಕಾಲಿನಡಿ ಒತ್ತಿ ಹಿಡಿದು ಬೇರ್ಪಡಿಸುತ್ತಾರೆ.

ಮುಹಮ್ಮದ್(ಸ) ಚಪ್ಪರದಲ್ಲಿ ಪ್ರಾರ್ಥನಾ ನಿರತರಾಗಿದ್ದಾರೆ. ಹ. ಅಲೀ(ರ) ಎರಡು ಮೂರು ಸಲ ಅಲ್ಲಿಗೆ ಬಂದು ಯುದ್ಧದ ಅಹವಾಲು ತಿಳಿಸುತ್ತಾರೆ. ಚಪ್ಪರದಿಂದ ಹೊರಗೆ ಪ್ರವಾದಿವರ್ಯರು(ಸ) ಅತ್ಯಂತ ಕಳವಳದೊಂದಿಗೆ "ಯಾ ಹಯ್ಯು ಯಾ ಕಯ್ಯೂಮ್" (ಓ ಚಿರಂತನನೇ ಓ ಸರ್ವಾಧಾರಕನೇ) ಎಂದು ಪ್ರಾರ್ಥಿಸುತ್ತಿರುವುದು ಮಾತ್ರ ಕೇಳಿ ಬರುತ್ತದೆ.

ಮುಂಜಾನೆ ಆರಂಭವಾದ ಯುದ್ಧವು ಮಧ್ಯಾಹ್ನದ ವೇಳೆಯಾಗುವಾಗ ಮುಗಿಯುವ ಲಕ್ಷಣಗಳು ಗೋಚರಿಸುತ್ತಿವೆ. ಕುರೈಶ್ ಸೇನೆಯು ತನ್ನ ಎಪ್ಪತ್ತು ಮಂದಿ ಮಲ್ಲರನ್ನು ತೊರೆದು ಮಕ್ಕಾದ ಕಡೆ ಓಟಕ್ಕಿತ್ತಿದೆ. ಮುಸ್ಲಿಮ್ ಸೇನೆಯು ಜಯಶೀಲವಾಗಿ ರಣರಂಗ ದಲ್ಲಿಯೇ ಇದೆ. ಶತ್ರು ಸೇನೆಯ ಸಮರಾರ್ಜಿತ ಸೊತ್ತಿನ ರಾಶಿಯೇ ಅವರ ಮುಂದಿದೆ. ಜೊತೆಗೆ 70 ಮಂದಿ ಕುರೈಶ್ ಸೈನಿಕರು ಕೈದಿಗಳ ರೂಪದಲ್ಲಿ ಅವರ ಮುಂದೆ ಶಿರಬಾಗಿ ನಿಂತಿದ್ದಾರೆ.

ಮುಹಮ್ಮದ್(ಸ) ಅಬೂಜಹಲನನ್ನು ಹುಡುಕಲು ಆಜ್ಞಾಪಿಸಿರುವರು. ಅವನು ರಣಾಂಗಣದಲ್ಲಿ ಒಂದೆಡೆ ಕೊನೆಯುಸಿರೆಳೆಯುತ್ತಿರುವುದನ್ನು ಅಬ್ದುಲ್ಲಾ ಬಿನ್ ಮಸ್‌ಊದ್(ರ) ನೋಡುತ್ತಾರೆ. ಅವರು ಅವನ ಕೊರಳ ಮೇಲೆ ಕಾಲಿಟ್ಟಾಗ ಆತ ಕ್ಷೀಣ ಸ್ವರದಲ್ಲಿ ಹೀಗೆ ಹೇಳುತ್ತಾನೆ: "ನಾನು ಕುರೈಶರ ಸರದಾರ. ನನ್ನ ಕೊರಳನ್ನು ಹೆಗಲಿನ ಬಳಿಯಿಂದ ಕತ್ತರಿಸಿ ಇತರರಿಂದ ನನ್ನ ತಲೆಯು ಪ್ರತ್ಯೇಕಿಸಿ ಗುರುತಿಸಲ್ಪಡುವಂತಾಗಲಿ."

ಅವನ ಈ ಅಂತಿಮ ಆಶೆಯನ್ನು ಅಬ್ದುಲ್ಲಾ ಬಿನ್ ಮಸ್‌ಊದ್(ರ) ಈಡೇರಿಸುತ್ತಾರೆ. ಅವನ ತಲೆಯನ್ನು ಮುಹಮ್ಮದ್‌ರ(ಸ) ಬಳಿ ತಂದಾಗ ಪ್ರವಾದಿ(ಸ) ಹೀಗೆ ಹೇಳುತ್ತಾರೆ: "ಈತ ತನ್ನ ಜನಾಂಗದ ಫಿರ್‌ಔನ್ ಆಗಿದ್ದ. ಸತ್ಯನಿಷೇಧವೆಂಬ ಸೌಧದ ಮುಕುಟವಾಗಿದ್ದ."

ಅನಂತರ ಮುಹಮ್ಮದ್(ಸ) ಮೂರು ಸಲ ಹೀಗೆ ಹೇಳುತ್ತಾರೆ: "ಲಾ ಇಲಾಹ ಇಲ್ಲಲ್ಲಾಹ್." (ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ.) ತರುವಾಯ ಹೀಗೆ ಹೇಳುತ್ತಾರೆ:

"ಸ್ತುತಿಯೂ ವಂದನೆಯೂ ಅಲ್ಲಾಹನಿಗೆ ಮೀಸಲು. ಅವನು ತನ್ನ ವಾಗ್ದಾನವನ್ನು ಪೂರ್ಣಗೊಳಿಸಿದನು. ತನ್ನ ದಾಸನಿಗೆ ನೆರವಾದನು. ಎಲ್ಲ ತಂಡಗಳನ್ನೂ ಆ ಏಕೈಕನು ಸೋಲಿಸಿ ಬಿಟ್ಟನು."

## ಬದ್ರ್ ಯುದ್ಧದ ನಂತರ

ಬದ್ರ್‌ನ ಯುದ್ಧ ಕಣದಲ್ಲಿ ಹದಿನಾಲ್ಕು ಮಂದಿ ಮುಸ್ಲಿಮ್ ಯೋಧರ ಮೃತ ದೇಹಗಳಿವೆ. ಈ ಪೈಕಿ ಆರು ಮಂದಿ ಮುಹಾಜಿರ್‌ಗಳು ಮತ್ತು ಎಂಟು ಮಂದಿ ಅನ್ಸಾರ್‌ಗಳು. ಮುಹಮ್ಮದ್(ಸ) ಅವರೆಲ್ಲರ ದಫನದ ವ್ಯವಸ್ಥೆ ಮಾಡಿಸಿದರು. ಶತ್ರುಗಳ ಎಪ್ಪತ್ತು ಮೃತದೇಹಗಳನ್ನು ಒಂದೇ ದೊಡ್ಡ ಹೊಂಡದಲ್ಲಿ ಹಾಕಿ ಹೂಳಿಬಿಡಲಾಯಿತು. ಅವರ ಬಂಧುಗಳು ಅವರ ಮೃತ ದೇಹಗಳನ್ನು ಅನಾಥ ಸ್ಥಿತಿಯಲ್ಲಿ ಬಿಟ್ಟು ತಮ್ಮ ಪ್ರಾಣ ಉಳಿಸಿಕೊಂಡು ಓಡಿ ಹೋಗಿರುವರು. ಅವರು ಇಸ್ಲಾಮಿನ ದೀಪವನ್ನು ಆರಿಸಲು ಬಂದಿದ್ದರು. ಆದರೆ ತಮ್ಮದೇ ದೀಪವನ್ನು ಆರಿಸಿ ಅಂಧಕಾರಗಳಲ್ಲಿ ಮಾಯವಾದರು. ಉಮಯ್ಯ ಬಿನ್ ಖಲಫ್‌ನ ಮೃತ ದೇಹವು ಅವನದೇ ಯುದ್ಧ ಉಡುಪಿನ ಒಳಗೆ ಉಬ್ಬಿ ಹೋಗಿತ್ತು. ಆದ್ದರಿಂದ ಅದು ಬಿದ್ದಿರುವಲ್ಲಿಗೇ ಅದರ ಮೇಲೆ ಮಣ್ಣು ಹಾಕಿ ಬಿಡಲಾಯಿತು.

ಬದ್ರ್‌ನ ಮೈದಾನದಲ್ಲಿ ಪ್ರವಾದಿ(ಸ) ಮತ್ತು ಸಂಗಾತಿಗಳು ಮೂರು ದಿನಗಳ ಕಾಲ ಇದ್ದು ಅಲ್ಲಿಂದ 70 ಮಂದಿ ಕೈದಿಗಳನ್ನು ಜತೆಯಲ್ಲಿ ತೆಗೆದುಕೊಂಡು ಮದೀನಾದ ಕಡೆಗೆ ಹೊರಡುತ್ತಾರೆ. ವಿಜಯದ ಸುದ್ದಿಯನ್ನು ಮದೀನಾ ಮತ್ತು ಪರಿಸರ ಪ್ರದೇಶಗಳಿಗೆ ಮೊದಲೇ ತಲುಪಿಸಲಾಗಿತ್ತು.

ಮದೀನಾ ತಲುಪಿ ಕೈದಿಗಳನ್ನು ಮಸ್ಜಿದುನ್ನಬವಿಯಲ್ಲಿಡಲಾಗುತ್ತದೆ. ಮರುದಿನ ಪ್ರವಾದಿ(ಸ) ತಮ್ಮ ಸಂಗಾತಿಗಳೊಂದಿಗೆ ಸಮಾಲೋಚಿಸಿದ ಬಳಿಕ ಯುದ್ಧಕೈದಿಗಳನ್ನು ಪರಿಹಾರ ಧನ ಸ್ವೀಕರಿಸಿ ಬಿಟ್ಟು ಬಿಡುವ ಘೋಷಣೆ ಮಾಡಲಾಗುತ್ತದೆ. ಅವರು ತಂತಮ್ಮ ಪರಿಹಾರ ಧನವನ್ನು ಪಾವತಿ ಮಾಡಿ ಬಂಧಮುಕ್ತರಾಗುವ ತನಕ ಅವರ ಅನ್ನಪಾನೀಯಗಳ ವ್ಯವಸ್ಥೆ ಮಾಡಲು ಅವರನ್ನು ಮದೀನಾದ ಅನೇಕ ಮಂದಿಯ ಮನೆಗಳಿಗೆ ಕಳುಹಿಸಲಾಗುತ್ತದೆ. ಆಗ ಮದೀನಾದಲ್ಲಿ ಕಾರಾಗೃಹದ ವ್ಯವಸ್ಥೆ ಆಗಿರಲಿಲ್ಲ.

ಯುದ್ಧಕೈದಿಗಳಿಂದ ಪರಿಹಾರ ಧನ ಪಡೆಯುವ ಕುರಿತು ಈ ಕೆಳಗಿನ ತೀರ್ಮಾನಗಳಾದುವು:

1. ಕೈದಿಗಳಿಂದ ಪರಿಹಾರ ಧನ ಸ್ವೀಕರಿಸಿ ಅವರನ್ನು ಬಿಟ್ಟು ಬಿಡಲಾಗುವುದು.

2. ಪರಿಹಾರ ಧನವು ಹೆಚ್ಚೆಂದರೆ ನಾಲ್ಕುಸಾವಿರ ದಿರ್ಹಮ್‌ಗಳಾಗಿರುವುದು.

3. ಕೆಲವರನ್ನು ಮೂರು ಸಾವಿರ, ಎರಡು ಸಾವಿರ ಮತ್ತು ಒಂದು ಸಾವಿರ ದಿರ್ಹಮ್‌ಗಳನ್ನು ಪಡೆದೂ ಬಿಟ್ಟು ಬಿಡಲಾಗುವುದು.

4. ಪರಿಹಾರ ಧನ ನೀಡಲು ಸಮರ್ಥರಲ್ಲದ ಕೈದಿಗಳು - ಅವರು ಓದು ಬರಹ

ಬಲ್ಲವರಾಗಿದ್ದರೆ - ಮುಸ್ಲಿಮ್ ಮಕ್ಕಳಿಗೆ ಓದು ಬರಹ ಕಲಿಸಿದರೆ ಅವರನ್ನು ಬಿಟ್ಟು ಬಿಡಲಾಗುವುದು.

5. ಏನನ್ನೂ ನೀಡಲು ಸಾಧ್ಯವಿಲ್ಲದೆ ಇರುವವರನ್ನು ಕೇವಲ ಔದಾರ್ಯದ ಮೇಲೆ ಬಿಟ್ಟು ಬಿಡಲಾಗುವುದು.

ಬದ್ರ್ ಯುದ್ಧವು ಶತ್ರು ಪಾಳಯದಲ್ಲಿ ಮುಸ್ಲಿಮರ ಬಗ್ಗೆ ಭೀತಿ ಹುಟ್ಟಿಸಿದೆ. ನಿನ್ನೆಯ ತನಕ ಯಾವ ಗಣನೆಗೂ ಬಾರದ ಮುಸ್ಲಿಮರು ಈಗ ಒಂದು ಪ್ರಬಲ ಶಕ್ತಿಯಾಗಿ ಹೊರ ಹೊಮ್ಮಿರುವರು. ಅನೇಕ ಯಹೂದಿಗಳೂ ಇಸ್ಲಾಮ್ ಸ್ವೀಕರಿಸಿದ್ದಾರೆ. ಕಪಟವಿಶ್ವಾಸಿಗಳ ಸರದಾರನೆನಿಸಿದ ಅಬ್ದುಲ್ಲಾ ಬಿನ್ ಉಬೈ ಕೂಡಾ ತಾನು ಇಸ್ಲಾಮ್ ಸ್ವೀಕರಿಸಿರುವುದಾಗಿ ಘೋಷಿಸುತ್ತಾನೆ.

## ಕುರೈಶರ ಸೆರೆಯಾಳುಗಳು

ಇದು ಮದೀನಾದ ಓರ್ವ ಬಡ ಅನ್ಸಾರಿಯ ಮನೆ. ಮನೆಯಲ್ಲಿ ಹೇಳತಕ್ಕ ಸಾಮಾನುಗಳೇನೂ ಇಲ್ಲ. ಬಡತನದಿಂದಾಗಿ ಕೇವಲ ಖರ್ಜೂರವೇ ದಿನದ ಆಹಾರವಾಗಿದೆ. ಆದರೆ ಮನೆಯ ಜಗಲಿಯಲ್ಲಿ ಮಕ್ಕಾದ ಓರ್ವ ಶ್ರೀಮಂತನ ಪುತ್ರನಿದ್ದಾನೆ. ಆತ ಮುಸ್ಲಿಮರನ್ನು ಸರ್ವನಾಶ ಮಾಡಿಬಿಡುವ ಉದ್ದೇಶದಿಂದ ಕುರೈಶ್ ಸೈನಿಕರ ಜತೆಗೆ ಓರ್ವ ಯೋಧನ ನೆಲೆಯಲ್ಲಿ ಬಂದಿದ್ದ. ಈಗ ಓರ್ವ ಮುಸ್ಲಿಮನ ಮನೆಯಲ್ಲೆ ಸೆರೆಯಿದ್ದು ತನ್ನ ದೌರ್ಭಾಗ್ಯಕ್ಕಾಗಿ ಪರಿತಪಿಸುತ್ತಿದ್ದಾನೆ. ಏಕೆಂದರೆ ಇಲ್ಲಿಂದ ಓಡಿ ಹೋಗುವ ಎಲ್ಲ ಮಾರ್ಗಗಳೂ ಮುಚ್ಚಲ್ಪಟ್ಟಿವೆ. ಜೀವನದ ಯಾವ ಸೌಕರ್ಯವೂ ಅವನಿಗೆ ಈಗ ಲಭ್ಯವಿಲ್ಲ. ಆದರೆ ಅವನಿಗೆ ಮುಸ್ಲಿಮರ ವರ್ತನೆಯನ್ನು ಕಂಡು ಆಶ್ಚರ್ಯವಾಗುತ್ತದೆ. ಮನೆಯಾತ ಸ್ವಯಂ ಖರ್ಜೂರ ತಿಂದು ದಿನ ಕಳೆದರೂ ಆತನಿಗೆ ಗೋಧಿಯ ರೊಟ್ಟಿಯನ್ನು ಒದಗಿಸುತ್ತಿದ್ದಾನೆ. ಅವನು ಅದನ್ನು ಮರಳಿಸಿದರೂ ಸ್ವೀಕರಿಸು ವುದಿಲ್ಲ. ಅವನಿಗೆ ಬಹಳ ಸಂಕೋಚವಾಗುತ್ತಿದೆ. ನಾಚಿಕೆಯಿಂದ ತಲೆತಗ್ಗಿಸಿಕೊಂಡಿರುತ್ತಾನೆ. ಇದೆಂತಹ ವಿಚಿತ್ರ ಆತಿಥ್ಯವೆಂದು ಅವನಿಗೆ ಎಲ್ಲಿಲ್ಲದ ಸೋಜಿಗ! ಪ್ರಾಣಶತ್ರುವಿನೊಂದಿಗೆ ಈ ರೀತಿ ವರ್ತಿಸುವವರು ಅವನ ಸಮಾಜದಲ್ಲಂತೂ ಯಾರೂ ಇರಲಿಲ್ಲ. ತನ್ನ ರಕ್ತದಾಹಿಗಳೊಂದಿಗೆ ಈ ರೀತಿ ಪ್ರೀತಿಯಿಂದ ವರ್ತಿಸುವವರ ಬಗ್ಗೆ ಅವನಿಗೆ ಊಹಿಸಲೂ ಸಾಧ್ಯವಿರಲಿಲ್ಲ. ಅವನಿಗೆ ತಿನ್ನಿಸಲಾಗುತ್ತಿರುವ ರೊಟ್ಟಿಯು ಆ ಬಡವನು ಬೆವರಿಳಿಸಿ ದುಡಿದು ತಂದದ್ದು ಎಂಬುದನ್ನು ಊಹಿಸುವಾಗಲೇ ಅವನಿಗೆ ರೋಮಾಂಚನವಾಗುತ್ತಿತ್ತು. "ನಾನು ಈ ವ್ಯಕ್ತಿಗೆ ಇದರ ಪ್ರತಿಫಲ ನೀಡಬಲ್ಲೆನೇ?" ಎಂದು ಅವನ ಅಂತರಾತ್ಮವು ಅವನನ್ನು ಪ್ರಶ್ನಿಸುತ್ತದೆ. ಅವನು ಈ ರೀತಿಯ ವಿಚಾರಗಳಲ್ಲಿ ಮುಳುಗಿರುವಾಗ ಅವನ ಸೋದರನು ಮನೆಯವರನ್ನುದ್ದೇಶಿಸಿ ಹೀಗೆ ಹೇಳುತ್ತಿರುವುದು ಅವನಿಗೆ ಕೇಳಿಸುತ್ತದೆ: "ಅನ್ಸಾರಿ ಸೋದರಾ! ಇವನನ್ನು ಚೆನ್ನಾಗಿ ಬಿಗಿದು ಕಟ್ಟಿಡು. ಇವನ ತಾಯಿ ಅತ್ಯಂತ ಶ್ರೀಮಂತಳು. ಆಕೆ ಅವನ ಪರಿಹಾರ ಧನ ನೀಡಿ ಬಿಡಿಸಿಕೊಳ್ಳಬಹುದೇನೋ."

ಇದು ಮುಸ್‌ಅಬ್ ಬಿನ್ ಉಮೈರ್. ಮದೀನಾದಲ್ಲಿ ಇಸ್ಲಾಮಿನ ಪ್ರಪ್ರಥಮ ಪ್ರಚಾರಕ. ಅವರನ್ನು ಪ್ರವಾದಿ(ಸ) ಹಿಜ್ರತ್‌ಗಿಂತ ಮೊದಲು ದ್ವಿತೀಯ ಅಕಬಾ ಒಡಂಬಡಿಕೆಯ ವೇಳೆ ಧರ್ಮ ಪ್ರಚಾರಕ್ಕಾಗಿ ಅನ್ಸಾರ್‌ಗಳ ಜೊತೆಗೆ ಇಲ್ಲಿಗೆ ಕಳುಹಿಸಿದ್ದರು.

ಅನ್ಸಾರಿಯ ಸೆರೆಯಾಳು ಅಬೂ ಉಝೈರ್ ಬಿನ್ ಉಮೈರ್ ತನ್ನ ಸೋದರನ ಬಾಯಿಯಿಂದ ಈ ಮಾತು ಕೇಳಿ ಬೆಚ್ಚಿಬೀಳುತ್ತಾನೆ. ಅವನು ಏರಿದ ಧ್ವನಿಯಲ್ಲಿ ಹೀಗೆ ಹೇಳುತ್ತಾನೆ:

"ಸೋದರಾ! ನಿಮಗೆ ನನ್ನ ಬಗ್ಗೆ ಈ ಉಪದೇಶವೇ ಸೂಕ್ತವೆಂದು ಕಂಡಿತೇ? ನಾನು ನಿಮ್ಮಿಂದ ಇದನ್ನು ನಿರೀಕ್ಷಿಸಿಯೇ ಇರಲಿಲ್ಲ. ಇದೆಂತಹ ವರ್ತನೆ?"

ಮುಸ್‌ಅಬ್: "ನೀನು ನನ್ನ ಸೋದರನಲ್ಲ, ಈ ಜನರೇ ನನ್ನ ಸೋದರರು."

ಮುಹಮ್ಮದ್‌ರ(ಸ) ಕೈಯಲ್ಲಿ ಒಂದು ಸರವಿದೆ ಮತ್ತು ಅವರ ಕಣ್ಣುಗಳಿಂದ ಅಶ್ರುಧಾರೆ ಹರಿಯುತ್ತಿದೆ. ಇದನ್ನು ಕಂಡ ಸಹಾಬಿಗಳೂ ದುಃಖಿತರಾಗುತ್ತಾರೆ. ಅಬುಲ್ ಆಸ್ ಬಿನ್ ರಬೀಅ್ ಪ್ರವಾದಿವರ್ಯರನ್ನು(ಸ) ಮೌನವಾಗಿ ಬೇಜಾರಿನಿಂದ ನೋಡುತ್ತಾರೆ. ಸ್ವಲ್ಪ ಸಮಯದ ನಂತರ ಮುಹಮ್ಮದ್(ಸ) ಸಾವರಿಸಿಕೊಂಡು ತಮ್ಮ ಸಂಗಾತಿಗಳನ್ನುದ್ದೇಶಿಸಿ ಹೀಗೆ ಹೇಳುತ್ತಾರೆ:

"ನಿಮ್ಮ ಅನುಮತಿಯಿದ್ದರೆ ಮಗಳಿಗೆ ತಾಯಿಯ ಸರವನ್ನು ಮರಳಿಸುವೆ."

ನಾಯಕರು ತಮ್ಮ ಆತ್ಮೀಯ ಅನುಯಾಯಿಗಳಿಂದ ಅವರ ಇಚ್ಛೆಯನ್ನು ಕೇಳುತ್ತಿದ್ದಾರೆ. ದಂಡನಾಯಕರು ತಮ್ಮ ಯೋಧರಿಂದ ಅವರ ಅಭಿಪ್ರಾಯವನ್ನು ಕೇಳುತ್ತಿದ್ದಾರೆ. ವಾಸ್ತವದಲ್ಲಿ ಮುಸ್ಲಿಮರಿಗೆ ಅವರ ತೀರ್ಮಾನವನ್ನು ಒಪ್ಪಿಕೊಳ್ಳುವುದು ಸೌಭಾಗ್ಯ ಮತ್ತು ಸಂತೋಷದ ಸಂಗತಿಯಾಗಿದೆ. ಆದರೆ ಮಾನವಕುಲದ ಶಿಕ್ಷಕರು ತಮ್ಮ ಅನುಯಾಯಿಗಳ ಮೇಲೆ ತಮ್ಮ ನಿರ್ಧಾರವನ್ನು ಹೇರುವ ಬದಲು ಅವರ ಅಭಿಪ್ರಾಯವನ್ನು ತಿಳಿಯ ಬಯಸುತ್ತಾರೆ. ತಮ್ಮ ವೈಯಕ್ತಿಕ ಲಾಭದ ವಿಷಯದಲ್ಲಿ ತಮ್ಮ ತೀರ್ಮಾನವನ್ನು ಇತರರ ಮೇಲೆ ಹೇರುವ ಪ್ರವೃತ್ತಿ ನಾಯಕರಲ್ಲಿ ಬೆಳೆಯಬಾರದೆಂಬುದೇ ಅವರ ಇಂಗಿತವಾಗಿತ್ತು.

ಪ್ರವಾದಿವರ್ಯರ(ಸ) ಅನುಯಾಯಿಗಳಲ್ಲಿ ಅವರ ಅಭಿಪ್ರಾಯವನ್ನು ಮೀರುವ ಒಬ್ಬ ವ್ಯಕ್ತಿಯೂ ಇರಲಿಲ್ಲ. ಎಲ್ಲರೂ ಸಮ್ಮತಿ ಸೂಚಿಸುತ್ತಾರೆ. ಸರವನ್ನು ನಿಸ್ಸಂಕೋಚವಾಗಿ ಮರಳಿಸಲಾಗುತ್ತದೆ. ಅದು ಪ್ರವಾದಿಯ ಪುತ್ರಿ ಹ. ಝೈನಬ್‌ರ ಸರವಾಗಿತ್ತು. ಅವರು ಅದನ್ನು ತಮ್ಮ ಪತಿ ಅಬುಲ್ ಆಸ್ ಬಿನ್ ರಬೀಅ್‌ರ ಬಿಡುಗಡೆಗಾಗಿ ಮಕ್ಕಾದಿಂದ ಪರಿಹಾರ ಧನದ ರೂಪದಲ್ಲಿ ಕಳುಹಿಸಿಕೊಟ್ಟಿದ್ದರು. ಆ ಸರವನ್ನು ಪ್ರವಾದಿವರ್ಯರ(ಸ) ಪ್ರಥಮ ಪತ್ನಿ ಹ. ಖದೀಜಾ(ರ) ತಮ್ಮ ಮಗಳ ಮದುವೆಯ ಸಮಯದಲ್ಲಿ ಅವರಿಗೆ ಉಡುಗೊರೆಯಾಗಿ ನೀಡಿದ್ದರು. ಆ ಸರವನ್ನು ಕಂಡೊಡನೆ ಪ್ರವಾದಿವರ್ಯರಿಗೆ(ಸ) ತಮ್ಮ ಬಾಳಸಂಗಾತಿಯ ನೆನಪು ಹಸಿರಾಯಿತು. ತಮ್ಮ ಅತ್ಯಂತ ಪ್ರೀತಿಯ ಪತ್ನಿಯ ಈ

ಚಿಹ್ನೆಯನ್ನು ಕಂಡು ದುಃಖ ತಡೆಯಲಾರದೆ ಕಣ್ಣೀರಿಳಿಸಿದರು.

ಇದು ಹ. ಝೈನಬ್‌ರ(ರ) ತಾಯಿಯ ನೆನಪಿನ ಕಾಣಿಕೆಯಾಗಿತ್ತು. ಇದು ಅವರ ಬಳಿಯಲ್ಲೇ ಇರಬೇಕು ಎಂಬುದು ಪ್ರವಾದಿವರ್ಯರ(ಸ) ಇಚ್ಛೆಯಾಗಿತ್ತು. ಆದರೆ ಅದನ್ನು ಮರಳಿಸುವ ಮೊದಲು ತಮ್ಮ ಸಂಗಾತಿಗಳೊಂದಿಗೆ ಸಮಾಲೋಚಿಸುವುದು ಅಗತ್ಯವೆಂದು ಪ್ರವಾದಿವರ್ಯರು(ಸ) ಮನಗಂಡರು. ತಮ್ಮ ಇಚ್ಛೆಯಿಂದ ಅದನ್ನು ಪುತ್ರಿಗೆ ಮರಳಿಸುವುದು ನ್ಯಾಯಸಮ್ಮತವಲ್ಲವಾದುದರಿಂದ ಅದನ್ನವರು ಸಮಂಜಸವೆಂದು ಪರಿಗಣಿಸಲಿಲ್ಲ. ಸಹಾಬಿಗಳು ಸಂತೋಷದಿಂದ ಅದಕ್ಕೆ ಒಪ್ಪಿಗೆ ನೀಡಿದರು. ಅಬುಲ್ ಆಸ್ ಮಕ್ಕಾಕ್ಕೆ ಹಿಂದಿರುಗಿದ ಬಳಿಕ ಹ. ಝೈನಬ್‌ರನ್ನು ಮದೀನಾಕ್ಕೆ ರವಾನಿಸಬೇಕೆಂಬ ಶರತ್ತಿನೊಂದಿಗೆ ಅವರನ್ನು ಬಿಡುಗಡೆಗೊಳಿಸಿ ಮರಳಿಸಲಾಯಿತು.

ಮುಹಮ್ಮದ್(ಸ) ಮಸ್ಜಿದುನ್ನಬವಿಯಲ್ಲಿ ಆಸೀನರಾಗಿದ್ದಾರೆ. ಅಷ್ಟರಲ್ಲಿ ಉಮೈರ್ ಬಿನ್ ವಹಬ್ ತಮ್ಮ ಒಂಟೆಯ ಮೇಲೆ ಸವಾರಿ ಮಾಡುತ್ತಾ ಅಲ್ಲಿಗೆ ತಲುಪಿದನು. ಆತ ಮಕ್ಕಾದ ಕಿಡಿಗೇಡಿಗಳ ನಾಯಕನಾಗಿದ್ದ. ಅವನ ಪುತ್ರ ವಹಬ್ ಬಿನ್ ಉಮೈರ್ ಮುಸ್ಲಿಮರ ಸೆರೆಯಲ್ಲಿದ್ದ. ಆತ ಖಡ್ಗವನ್ನು ತನ್ನ ಕೊರಳಲ್ಲಿ ನೇತಾಡಿಸಿದ್ದನು. ಅವನು ಒಂಟೆಯಿಂದ ಇಳಿಯುವುದಕ್ಕೆ ಮೊದಲೇ ಹ. ಉಮರ್‌ರ(ರ) ದೃಷ್ಟಿ ಆತನ ಮೇಲೆ ಬೀಳುತ್ತದೆ. ಅವರು ಕೂಡಲೇ ಮಸೀದಿಯೊಳಗೆ ಪ್ರವೇಶಿಸಿ ಪ್ರವಾದಿವರ್ಯರನ್ನು ಉದ್ದೇಶಿಸಿ(ಸ) ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೇ(ಸ)! ಅಲ್ಲಾಹನ ಶತ್ರು ಉಮೈರ್ ಬಿನ್ ವಹಬ್ ಖಡ್ಗ ಹಿಡಿದು ಬರುತ್ತಿದ್ದಾನೆ."

ಮುಹಮ್ಮದ್(ಸ): "ಆತನನ್ನು ಒಳಗೆ ಕರೆತನ್ನಿ."

ಉಮರ್(ರ) ಮೊದಲು ಕೆಲವು ಸಹಾಬಿಗಳಿಗೆ ಅಪಾಯದ ಮುನ್ಸೂಚನೆ ನೀಡುತ್ತಾರೆ ಮತ್ತು ಅವರನ್ನು ಮಸೀದಿಗೆ ಕಳುಹಿಸುತ್ತಾರೆ. ಅನಂತರ ಉಮೈರ್‌ನನ್ನು ಹಿಡಿದು ಪ್ರವಾದಿವರ್ಯರ(ಸ) ಮುಂದೆ ತರುತ್ತಾರೆ.

ಇದನ್ನು ಕಂಡು ಪ್ರವಾದಿ(ಸ) ಉಮರ್‌ರನ್ನುದ್ದೇಶಿಸಿ(ರ) "ಆತನನ್ನು ಬಿಟ್ಟು ಬಿಡಿ" ಎನ್ನುತ್ತಾರೆ.

ಅನಂತರ ಉಮೈರ್‌ರನ್ನು ತಮ್ಮ ಹತ್ತಿರ ಕರೆಯುತ್ತಾರೆ.

ಉಮೈರ್: "ನಿಮಗೆ ಸುಪ್ರಭಾತ."

ಮುಹಮ್ಮದ್(ಸ): "ಅಲ್ಲಾಹನು ನಮಗೆ ನಿಮ್ಮ ಅಭಿವಂದನೆಗಿಂತ ಉತ್ತಮವಾದ ಅಭಿವಂದನೆಯನ್ನು ಕಲಿಸಿದ್ದಾನೆ. ನಮಗೆ ಪರಸ್ಪರ "ಅಸ್ಸಲಾಮು ಅಲೈಕುಮ್" (ನಿಮ್ಮ ಮೇಲೆ ಶಾಂತಿಯಿರಲಿ) ಎನ್ನಲು ಆಜ್ಞಾಪಿಸಲಾಗಿದೆ. ಅದಿರಲಿ ಉಮೈರ್! ಇಲ್ಲಿಗೆ ಬಂದ ಉದ್ದೇಶವೇನು?"

ಉಮೈರ್: "ನನ್ನ ಪುತ್ರ ನಿಮ್ಮ ಸೆರೆಯಲ್ಲಿದ್ದಾನೆ. ಅವನ ಬಗ್ಗೆ ನನ್ನೊಂದಿಗೆ ಸದ್ವ್ಯವಹಾರ ಮಾಡಿರಿ."

ಮುಹಮ್ಮದ್(ಸ) "ನೀನು ಕುತ್ತಿಗೆಗೆ ತೂಗಾಡಿಸಿರುವ ಈ ಖಡ್ಗದ ಉದ್ದೇಶ ವೇನು?"

ಉಮೈರ್: "ಈ ಖಡ್ಗಗಳನ್ನು ಅಲ್ಲಾಹನು ನಾಶ ಮಾಡಲಿ. ಅವು ನಮ್ಮನ್ನು ರಕ್ಷಿಸಿದವೇ?"

ಮುಹಮ್ಮದ್(ಸ): "ನೀನು ಬಂದಿರುವ ಉದ್ದೇಶವನ್ನು ನೇರವಾಗಿ ಹೇಳು."

ಉಮೈರ್: "ನಾನಂತೂ ನನ್ನ ಮಗನ ಬಿಡುಗಡೆ ಮಾಡಿಸಲು ಬಂದಿರುವೆನು."

ಮುಹಮ್ಮದ್(ಸ): ನೀನು ಹೇಳುತ್ತಿರುವುದು ಸುಳ್ಳು. ನೀನು ಮತ್ತು ಸಫ್ವಾನ್ ಬಿನ್ ಉಮಯ್ಯ 'ಮಕಾಮು ಹಿಜ್ರ್'ನಲ್ಲಿ ಕುಳಿತು ಬದ್ರ್‌ನಲ್ಲಿ ಕೊಲ್ಲಲ್ಪಟ್ಟ ಕುರೈಶ್ ಯೋಧರ ಕುರಿತು ಮಾತನಾಡುತ್ತಿದ್ದಿರಿ. ಅನಂತರ ನೀನು: ಅಲ್ಲಾಹನಾಣೆ! ನನ್ನ ಮೇಲೆ ಸಾಲದ ಹೊರೆ ಹಾಗೂ ಕುಟುಂಬದ ಪೋಷಣೆಯ ಭಾರವಿಲ್ಲದಿರುತ್ತಿದ್ದರೆ ನಾನು ಮದೀನಾಕ್ಕೆ ಹೋಗಿ ಮುಹಮ್ಮದ್‌ರನ್ನು(ಸ) ಕೊಂದುಬಿಡುತ್ತಿದ್ದೆ ಎಂದಿದ್ದೆ. ಆಗ ಸಫ್ವಾನ್ ನನ್ನನ್ನು ಕೊಲ್ಲುವ ಶರತ್ತಿನ ಮೇಲೆ ನಿನ್ನ ಎಲ್ಲ ಸಾಲಗಳನ್ನು ತೀರಿಸುವ ಮತ್ತು ನಿನ್ನ ಮನೆಯವರ ಯೋಗಕ್ಷೇಮ ನೋಡಿಕೊಳ್ಳುವ ಹೊಣೆ ವಹಿಸಿದ್ದನು. ಆದರೆ ನನ್ನನ್ನು ಅಲ್ಲಾಹನು ನಿನ್ನಿಂದ ರಕ್ಷಿಸಿದನು.

ಈ ಮಾತು ಕೇಳಿ ಉಮೈರ್ ದಿಘ್ಮೂಢನಾದ. ಅವನ ರಕ್ತ ಹೆಪ್ಪುಗಟ್ಟಿತು. ಬಾಯಿಗೆ ಬೀಗ ಜಡಿದಂತಾಯಿತು. ನಿರಾಳವಾಗಿ ಉಸಿರಾಡುವುದು ಕೂಡಾ ಅವನಿಗೆ ಕಷ್ಟವಾಯಿತು. ಆತ ಅತ್ಯಂತ ರಹಸ್ಯವಾಗಿ ಮಕ್ಕಾದಲ್ಲಿ ಸಫ್ವಾನ್‌ನಿಗೆ ಹೇಳಿದ ಮಾತು ಮುನ್ನೂರು ಮೈಲಿ ದೂರದಲ್ಲಿರುವ ಮುಹಮ್ಮದ್‌ರಿಗೆ(ಸ) ಹೇಗೆ ತಿಳಿಯಿತೆಂಬುದು ಅವನಿಗೆ ತೋಚಲಿಲ್ಲ.

ಅವನು ಸ್ವಲ್ಪ ಹೊತ್ತು ಕಲ್ಲಿನ ಮೂರ್ತಿಯಂತೆ ನಿಂತಲ್ಲೇ ನಿಂತಿದ್ದ. ಅವನಿಗೆ ಪ್ರಜ್ಞೆ ಮರಳಿದಾಗ "ತಾವು ಖಂಡಿತವಾಗಿಯೂ ಅಲ್ಲಾಹನ ಪ್ರವಾದಿಯಾಗಿರುವಿರೆಂದು ನಾನು ಸಾಕ್ಷ್ಯವಹಿಸುತ್ತೇನೆ" ಎಂದು ಉದ್ಗರಿಸಿದನು.

ಅವನು ಮುಂದುವರಿಯುತ್ತಾ "ಪ್ರವಾದಿವರ್ಯರೇ! ತಮ್ಮ ಮೇಲೆ ಅವತೀರ್ಣ ಗೊಳ್ಳುತ್ತಿದ್ದ ದಿವ್ಯವಾಣಿ ಮತ್ತು ತಾವು ವಿವರಿಸುತ್ತಿದ್ದ ಅಲೌಕಿಕ ವಿಷಯಗಳನ್ನು ನಾವು ನಿರಾಕರಿಸುತ್ತಿದ್ದೆವು. ಆದರೆ ಈ ವಿಷಯವಂತೂ ನನ್ನ ಮತ್ತು ಸಫ್ವಾನ್‌ನ ಹೊರತು ಯಾರಿಗೂ ತಿಳಿಯಲು ಸಾಧ್ಯವೇ ಇರಲಿಲ್ಲ. ಅಲ್ಲಿ ಬೇರೊಬ್ಬ ವ್ಯಕ್ತಿ ಇರಲೇ ಇಲ್ಲ. ಅಲ್ಲಾಹನಾಣೆ! ಈ ಸುದ್ದಿಯನ್ನು ತಮಗೆ ಅಲ್ಲಾಹನೇ ಮುಟ್ಟಿಸಿರುವನೆಂಬುದು ನನಗೆ ಖಾತ್ರಿಯಾಯಿತು. ಸರ್ವ ಸ್ತುತಿಯೂ ಅಲ್ಲಾಹನಿಗೇ ಮೀಸಲು. ಅವನು ನಮಗೆ ಇಸ್ಲಾಮಿನ ಕಡೆಗೆ ಮಾರ್ಗದರ್ಶನ ಮಾಡಿದನು ಮತ್ತು ನನ್ನನ್ನು ಆ ದಾರಿಗೆ ತಂದನು" ಎನ್ನುತ್ತಾನೆ.

ಆತ ಪವಿತ್ರ ವಚನದ ಸಾಕ್ಷ್ಯ ಹೇಳಿದ ಕೂಡಲೇ ಪ್ರವಾದಿ(ಸ) ತಮ್ಮ

ಸಂಗಾತಿಗಳನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ನಿಮ್ಮ ಈ ಸೋದರನಿಗೆ ಧರ್ಮದ ಶಿಕ್ಷಣ ನೀಡಿರಿ. ಅವನ ಕೈದಿಗಳನ್ನು ಬಿಡುಗಡೆಗೊಳಿಸಿರಿ."

## ಮತ್ತೆ ಯುದ್ಧ ಸನ್ನಾಹ

ಕಲಿಬಾದ ಬಳಿ ದಾರುನ್ನದ್ವಾದಲ್ಲಿ ಕುರೈಶರ ಒಂದು ತುರ್ತು ಸಭೆ ನಡೆಯುತ್ತಿದೆ. ಸಭೆಯಲ್ಲಿ ಅಬ್ದುಲ್ಲಾ ಬಿನ್ ರಬೀಅ, ಇಕ್ರಿಮಾ ಬಿನ್ ಅಬೂಜಹಲ್ ಮತ್ತು ಸಫ್ವಾನ್ ಬಿನ್ ಉಮಯ್ಯ ಬಹಳ ಸಕ್ರಿಯವಾಗಿದ್ದರು. ಇತರ ಅನೇಕ ಯುವಕರೂ ಬಹಳ ಕ್ರುದ್ಧರಾಗಿರುವಂತೆ ಕಾಣುತ್ತಾರೆ. ಅವರ ಪೈಕಿ ಒಬ್ಬರ ಪುತ್ರ, ಒಬ್ಬರ ಸೋದರ, ಒಬ್ಬರ ತಂದೆ ಬದ್ರ್‌ನಲ್ಲಿ ಮುಸ್ಲಿಮರಿಂದ ಹತ್ಯೆಗೀಡಾಗಿದ್ದರು. ಆದ್ದರಿಂದಲೇ ಅವರು ಪ್ರತೀಕಾರದ ಅಗ್ನಿಯಲ್ಲಿ ಬೇಯುತ್ತಿದ್ದರು. ಅಬೂ ಸುಫ್‌ಯಾನ್ ಸಭಾಧ್ಯಕ್ಷತೆ ವಹಿಸಿರುವನು. ಸಿರಿಯಾದಿಂದ ಮರಳಿದ ವ್ಯಾಪಾರೀ ತಂಡವೂ ಬದ್ರ್‌ನಿಂದ ಪಾರಾಗಿ ಬಂದಿದೆ. ಒಂಟೆಗಳೂ ವ್ಯಾಪಾರೀ ಸರಕುಗಳೂ ಇನ್ನೂ ಇಳಿದಾಣದಲ್ಲೇ ಇವೆ. ಈ ವ್ಯಾಪಾರೀ ತಂಡದ ರಕ್ಷಣೆಗೆ ಹೋಗಿ ಬದ್ರ್‌ನಲ್ಲಿ ಹತ್ಯೆಗೀಡಾದವರ ಪ್ರತೀಕಾರಕ್ಕಾಗಿ ಆಯುಧಗಳನ್ನು ಖರೀದಿಸಲು ಈ ವ್ಯಾಪಾರದ ಲಾಭವನ್ನು ತೊಡಗಿಸುವ ಬಗ್ಗೆ ಸಮಾಲೋಚನೆ ನಡೆಸುವುದೇ ಸಭೆಯ ಮುಖ್ಯ ಉದ್ದೇಶವಾಗಿತ್ತು.

ಅಬ್ದುಲ್ಲಾ ಬಿನ್ ರಬೀಅ ಹೀಗೆ ಹೇಳುತ್ತಾನೆ: "ಮುಹಮ್ಮದ್‌ರು(ಸ) ನಿಮ್ಮ ಮೇಲೆ ಅನ್ಯಾಯವೆಸಗಿರುವರು. ನಿಮ್ಮ ಅತ್ಯುತ್ತಮ ಯೋಧರನ್ನು ಕೊಲೆಗೈದಿರುವರು. ಆದ್ದರಿಂದ ಮುಹಮ್ಮದ್‌ರ(ಸ) ವಿರುದ್ಧ ಯುದ್ಧ ಮಾಡಲು ಈ ವ್ಯಾಪಾರದ ಲಾಭವನ್ನು ನೀಡಿ ಸಹಕರಿಸಿರಿ. ತನ್ಮೂಲಕ ನಾವು ನಮ್ಮ ಮೃತರ ಪ್ರತೀಕಾರ ತೀರಿಸಿ ಸಂತುಷ್ಟರಾಗುವೆವು. ನೀವು ಈ ವ್ಯಾಪಾರದ ಲಾಭವನ್ನು ಪೂರ್ಣವಾಗಿ ಶಸ್ತ್ರ ಖರೀದಿ ಯಲ್ಲಿ ತೊಡಗಿಸಿದರೆ ಮಾತ್ರ ನಮಗೆ ತೃಪ್ತಿಯಾಗುವುದು."

ಅಬೂಸುಫ್‌ಯಾನ್: "ನನಗೆ ನಿನ್ನೊಂದಿಗೆ ಪೂರ್ಣ ಸಹಮತವಿದೆ. ನಾವು ಸಿರಿಯಾದ ಕಡೆಗೆ ವ್ಯಾಪಾರೀ ತಂಡವನ್ನು ಕಳುಹಿಸುವಾಗಲೇ ಅದರ ಲಾಭವನ್ನು ಮುಸ್ಲಿಮರ ವಿರುದ್ಧ ನಿರ್ಣಾಯಕ ಯುದ್ಧ ನಡೆಸಲು ಬಳಸುವುದೆಂದು ನಿರ್ಧರಿಸಿದ್ದೆವು. ನಾನು ಮೊತ್ತ ಮೊದಲು ನನ್ನ ಪಾಲಿನ ಮತ್ತು ಅಬ್ದ್ ಮನಾಫ್ ಗೋತ್ರದ ಪಾಲಿನ ಲಾಭವನ್ನು ನೀಡುತ್ತೇನೆ."

ಅಬೂಸುಫ್‌ಯಾನ್‌ನ ಈ ಕೊಡುಗೆಯಿಂದ ಪ್ರಭಾವಿತರಾಗಿ ಎಲ್ಲರೂ ತಮ್ಮ ತಮ್ಮ ಪಾಲಿನ ಲಾಭವನ್ನು ಯುದ್ಧನಿಧಿಗೆ ಅರ್ಪಿಸುತ್ತಾರೆ. ಲೆಕ್ಕ ಮಾಡಿದಾಗ ವ್ಯಾಪಾರದಲ್ಲಿ ಬಂದ ಲಾಭವು 50 ಸಾವಿರ ದೀನಾರ್ ಆಗಿತ್ತು. ಈ ದೊಡ್ಡ ಮೊತ್ತದಿಂದ ಕುರೈಶರು ಮತ್ತು ಅವರ ಬೆಂಬಲಿಗರಾದ ಕಿನಾನ ಮತ್ತು ತಹಾಮ ಗೋತ್ರಗಳು ಸಂಪೂರ್ಣ ಶಸ್ತ್ರ ಸಜ್ಜಿತವಾದುವು. ವ್ಯಾಪಾರೀ ತಂಡದಲ್ಲಿ ಹೋಗಿದ್ದ ಒಂದು ಸಾವಿರ ಒಂಟೆಗಳನ್ನೂ ಯುದ್ಧ ನಿಧಿಗೆ ಸೇರಿಸಲಾಯಿತು. ತನ್ಮೂಲಕ ಯೋಧರ ಸವಾರಿಯ ಸಮಸ್ಯೆಯೂ ನಿವಾರಣೆಯಾದಂತಾಯಿತು.

ಅಂದು ಶವ್ವಾಲ್ ತಿಂಗಳ 3ನೇ ದಿನಾಂಕ. ಹಿಜ್ರತ್‌ನ 3ನೇ ವರ್ಷ. ಮಕ್ಕಾದಿಂದ ಓರ್ವ ಗಿಫ್ಫಾರ್ ಗೋತ್ರದವನು ಮುಖ ಮರೆಸಿಕೊಂಡು ಅತ್ಯಂತ ವೇಗ ವಾಗಿ ಮದೀನಾದ ಕಡೆಗೆ ಬರುತ್ತಿದ್ದಾನೆ. ಆತನು ಯಾವುದೋ ಪ್ರಮುಖ ಕಾರ್ಯಕ್ಕಾಗಿ ಕಳುಹಿಸಲ್ಪಟ್ಟವನಂತೆ ಕಾಣುತ್ತಿದ್ದನು. ಆತ ಸುತ್ತಲೂ ದೃಷ್ಟಿ ಹಾಯಿಸುತ್ತಾ ಒಂಟೆಯನ್ನು ಇನ್ನಷ್ಟು ವೇಗವಾಗಿ ಓಡಿಸುತ್ತಾ ಸಾಗುತ್ತಿದ್ದಾನೆ. ಆಗಾಗ ತನ್ನ ಕಿಸೆಯ ಮೇಲೆ ಕೈಯಾಡಿಸುತ್ತಾ ಯಾವುದೋ ವಸ್ತುವಿನ ಇರುವಿಕೆಯನ್ನು ಖಾತ್ರಿ ಪಡಿಸುತ್ತಾ ಮುಂದೆ ಸಾಗುತ್ತಿದ್ದಾನೆ. ಮೂರು ದಿನ ರಾತ್ರಿಗಳ ನಿರಂತರ ಯಾತ್ರೆಯ ಬಳಿಕ ಅವನು ಮುಹಮ್ಮದ್‌ರ(ಸ) ಬಳಿ ಹಾಜರಾಗುತ್ತಾನೆ. ಪ್ರವಾದಿ(ಸ) ಆಗ ಕುಬಾದಲ್ಲಿದ್ದರು. ಆತ ಅತ್ಯಂತ ವಿನಮ್ರತೆಯೊಂದಿಗೆ ಅವರಿಗೆ ಒಂದು ಪತ್ರವನ್ನು ಅರ್ಪಿಸುತ್ತಾ ಹೀಗೆ ಹೇಳುತ್ತಾನೆ: "ಮುಹಮ್ಮದರೇ! ಈ ಪತ್ರವನ್ನು ನಿಮ್ಮ ತಂದೆಯ ಸೋದರ ಅಬ್ಬಾಸ್ ಬಿನ್ ಅಬ್ದುಲ್ ಮುತ್ತಲಿಬ್ ಕಳುಹಿಸಿರುವರು. ನಾನು ಅವರ ದೂತನಾಗಿದ್ದೇನೆ. ನನ್ನನ್ನು ಅವರು ಸಂಬಳಕ್ಕೆ ನೇಮಿಸಿ ಮೂರು ದಿನ ರಾತ್ರಿ ನಿರಂತರ ಪ್ರಯಾಣ ಮಾಡಿ ಇದನ್ನು ನಿಮಗೆ ಮುಟ್ಟಿಸಬೇಕೆಂದು ನನಗೆ ಆಜ್ಞಾಪಿಸಿದ್ದರು."

ಮುಹಮ್ಮದ್(ಸ) ಆತನ ಕಡೆಗೆ ವಾತ್ಸಲ್ಯಮಯ ದೃಷ್ಟಿ ಬೀರುತ್ತಾ ಪತ್ರವನ್ನು ಉಬೈ ಬಿನ್ ಕಅಬ್‌ರಿಗೆ(ರ) ನೀಡುತ್ತಾರೆ. ಅವರು ಅದನ್ನು ತೆರೆದು ಓದಲಾರಂಭಿಸು ತ್ತಾರೆ: "ಪ್ರೀತಿಯ ಭ್ರಾತೃಜ! ಕುರೈಶರು ಬದ್ರ್‌ನ ಪ್ರತೀಕಾರ ತೀರಿಸಲು ದೊಡ್ಡ ಸಿದ್ಧತೆ ಮಾಡಿಕೊಂಡಿರುವರು. ಸಿರಿಯಾದಿಂದ ಮರಳಿದ ವ್ಯಾಪಾರೀ ತಂಡದ ಪೂರ್ತಿ ಲಾಭ ವನ್ನು ಶಸ್ತ್ರ ಖರೀದಿಗಾಗಿ ವ್ಯಯಿಸಿರುವರು. ಸದ್ಯವೇ ಮೂರು ಸಾವಿರ ಸಶಸ್ತ್ರ ಯೋಧರು ಮದೀನಾದ ಮೇಲೆ ಆಕ್ರಮಣ ಮಾಡಲಿದ್ದಾರೆ. ಆ ಪೈಕಿ 700 ಮಂದಿ ಯುದ್ಧ ಕವಚ ಹೊಂದಿದ್ದಾರೆ. ಇನ್ನೂರು ಮಂದಿ ಕುದುರೆ ಸವಾರರಿದ್ದಾರೆ. ಉಳಿದವರು ಒಂಟೆ ಸವಾರ ರಾಗಿದ್ದಾರೆ. ಅಬೂಸುಫ್ಯಾನ್ ಸೇನೆಯ ದಂಡನಾಯಕರಾಗಿದ್ದಾರೆ. 17 ಮಂದಿ ಮಹಿಳೆಯರೂ ಸೇನೆಯ ಜೊತೆಗಿದ್ದು ಅವರನ್ನು ಯುದ್ಧಕ್ಕೆ ಹುರಿದುಂಬಿಸುವರು. ಹಾಡು ನರ್ತನಗಳಿಗೂ ಒಂದು ತಂಡ ಅದರ ಜೊತೆಗಿದೆ. ಉತ್‌ಬಾರ ಮಗಳು ಹಿಂದ್, ಇಕ್ರಿಮಾನ ಮಡದಿ ಉಮ್ಮು ಹಕೀಮ್, ವಲೀದ್‌ರ ಪುತ್ರಿ ಫಾತಿಮ, ಸಫ್ವಾನ್‌ನ ಪತ್ನಿ ಬರ್‌ಝ ಹಾಗೂ ಮುಸ್‌ಅಬ್ ಬಿನ್ ಉಮೈರ್‌ರ ತಾಯಿ ಹನ್ನಾಸ್ ಕೂಡಾ ಸೇನೆಯ ಜತೆಗಿದ್ದಾರೆ. ಅವರೆಲ್ಲರೂ ಪ್ರತೀಕಾರದ ಅಗ್ನಿಯಲ್ಲಿ ಬೇಯುತ್ತಿದ್ದಾರೆ. ಈ ಸೇನೆಯು ಇಲ್ಲಿಂದ ಶವ್ವಾಲ್ 5ರಂದು ಹೊರಡಲಿದೆ.

ಮುಹಮ್ಮದ್‌ರು(ಸ) ಪತ್ರವನ್ನು ಬಹಳ ಶಾಂತಚಿತ್ತದಿಂದ ಆಲಿಸುತ್ತಾರೆ. ತರುವಾಯ ಉಬೈ ಬಿನ್ ಕಅಬ್‌ರನ್ನುದ್ದೇಶಿಸಿ "ಈ ವಿಷಯ ರಹಸ್ಯವಾಗಿಯೇ ಇರಲಿ. ಮುಸ್ಲಿಮರು ಗಾಬರಿಗೊಳ್ಳದಿರಲಿ" ಎನ್ನುತ್ತಾರೆ.

ಕುರೈಶ್ ಸೇನೆಯು ಹಿಜರಿ ಶಕೆ 3ರ ಶವ್ವಾಲ್ 12ರಂದು ಮದೀನಾದ ಹತ್ತಿರ

ತಲುಪುತ್ತದೆ. ದುಲ್ ಹಲೀಫಾದಲ್ಲಿ ಉಹುದ್ ಪರ್ವತದ ಉತ್ತರ ದಿಕ್ಕಿಗೆ ಇರುವ ಕಣಿವೆಯಲ್ಲಿ ಬಿಡಾರ ಹೂಡುತ್ತದೆ.

## ಉಹುದ್‌ನಲ್ಲಿ ಮುಸ್ಲಿಮ್ ಸೇನೆ

ಮದೀನಾದ ಪೂರ್ವ, ದಕ್ಷಿಣ ಮತ್ತು ಪಶ್ಚಿಮದಲ್ಲಿ ಖರ್ಜೂರದ ದಟ್ಟವಾದ ತೋಟಗಳಿವೆ. ಅವುಗಳ ಮೂಲಕ ಯಾವುದೇ ಸೇನೆಯು ನುಗ್ಗಿ ಬರಲು ಸಾಧ್ಯವಿಲ್ಲ. ಸೈನಿಕರು ಒಬ್ಬೊಬ್ಬರಾಗಿ ಅಥವಾ ಇಬ್ಬಿಬ್ಬರಾಗಿ ಮಾತ್ರ ಅದರ ಮೂಲಕ ಹಾದು ಬರಬಹುದಾಗಿದೆ. ಆದರೆ ಹಾಗೆ ಬಂದರೆ ಸುಲಭವಾಗಿ ಅವರನ್ನು ಬಾಣಗಳಿಗೆ ಗುರಿಪಡಿಸಬಹುದಾಗಿತ್ತು. ಆದರೆ ನೈರುತ್ಯ ದಿಕ್ಕಿನಲ್ಲಿ ತೋಟಗಳು ವಿರಳವಾಗಿದ್ದುವು. ಆದ್ದರಿಂದ ಕುರೈಶರು ಕೂಡಾ ನೈರುತ್ಯ ದಿಕ್ಕಿನಲ್ಲಿ ಬಿಡಾರ ಹೂಡಿರುವರು. ಮದೀನಾ ಒಂದು ನಗರದಂತೆ ದಟ್ಟವಾದ ಜನಸಾಂದ್ರತೆಯನ್ನು ಹೊಂದಿಲ್ಲ. ಗುಡ್ಡಗಳ ಮಧ್ಯೆ ಹರಡಿಕೊಂಡಿರುವ ವಿಶಾಲ ಮೈದಾನದಲ್ಲಿ ಅಲ್ಲಲ್ಲಿ ಜನರು ಚದುರಿಕೊಂಡಿದ್ದಾರೆ. ಅನೇಕ ಬಡಾವಣೆಗಳು ಮತ್ತು ಮೊಹಲ್ಲಾಗಳಿವೆ. ಅನೇಕ ಗೋತ್ರಗಳು ತಮ್ಮ ಹೊಲಗಳಲ್ಲಿ ಅಥವಾ ತೋಟಗಳಲ್ಲಿಯೇ ವಾಸದ ವ್ಯವಸ್ಥೆ ಮಾಡಿಕೊಂಡಿರುವರು. ಪ್ರತಿಯೊಂದು ತೋಟದಲ್ಲೂ ಎರಡಂತಸ್ತಿನ ಕೋಟೆಗಳನ್ನು ರಚಿಸಿಕೊಂಡು ಅಪಾಯದ ಸಂದರ್ಭದಲ್ಲಿ ಮನೆಮಂದಿಯನ್ನು ಅದರಲ್ಲಿ ಬಿಟ್ಟು ಶತ್ರುಗಳನ್ನು ಎದುರಿಸಲು ಹೊರಡುತ್ತಿದ್ದರು. ಕುರೈಶ್ ಸೇನೆಯ ಕುರಿತು ಮಾಹಿತಿಯನ್ನು ಸಂಗ್ರಹಿಸಲು ಪ್ರವಾದಿ(ಸ) ಮೊದಲು ಫುರ್ಝಾಲರ ಪುತ್ರರಾದ ಅನಸ್ ಮತ್ತು ಮೂನಿಸ್‌ರನ್ನು ಕಳುಹಿಸಿದರು. ಆ ಬಳಿಕ ಹಬ್ಬಾಬ್ ಬಿನ್ ಮುಂದಿರ್‌ರನ್ನು ರವಾನಿಸಿದರು. ಅವರು ಕುರೈಶ್ ಸೇನೆಯೊಳಗೆ ನುಗ್ಗಿ ಅವರ ಸಂಖ್ಯಾಬಲದ ಸರಿಯಾದ ಅಂದಾಜು ಮಾಡಿಕೊಂಡು ಬಂದರು. ಕುರೈಶರ ಸೇನೆಯು ಬರ್‌ರೂಮ ಮತ್ತು ಗಾಬದ ನಡುವೆ ಬಿಡಾರ ಹೂಡಿದೆ. ಅಲ್ಲಿ ಅವರಿಗೆ ನೀರು ಧಾರಾಳವಾಗಿ ಸಿಗಬಹುದು ಹಾಗೂ ಅವರ ಜಾನುವಾರುಗಳನ್ನು ಮೇಯಿಸಲು ವಿಶಾಲ ಹುಲ್ಲುಗಾವಲು ಕೂಡಾ ಅಲ್ಲಿದೆ ಎಂದು ಅವರು ತಿಳಿಸಿದರು.

ಮುಹಮ್ಮದ್(ಸ) ತಮ್ಮ ಸಂಗಾತಿಗಳನ್ನು ಸಮಾಲೋಚನೆಗಾಗಿ ಕರೆಸಿದರು. ಯುದ್ಧದ ಸಿದ್ಧತೆಯೇ ಚರ್ಚಾ ವಿಷಯವಾಗಿತ್ತು. ಸಮಾಲೋಚನೆಯ ಬಳಿಕ ಮದೀನಾದಿಂದ ಹೊರ ಹೋಗಿಯೇ ಶತ್ರು ಸೇನೆಯನ್ನು ಎದುರಿಸಬೇಕೆಂದು ಬಹುಮತದ ಆಧಾರದಲ್ಲಿ ತೀರ್ಮಾನ ಮಾಡಲಾಯಿತು. ಪ್ರವಾದಿ(ಸ), ಅನ್ಸಾರ್ ಮತ್ತು ಮುಹಾಜಿರ್‌ಗಳ ಪ್ರಮುಖರೆಲ್ಲಾ ಮದೀನಾದಲ್ಲಿದ್ದುಕೊಂಡೇ ಶತ್ರುವು ನಗರದೊಳಗೆ ನುಗ್ಗಿದರೆ ಅವರನ್ನು ಎದುರಿಸುವುದು ಎಂಬ ಅಭಿಪ್ರಾಯ ಹೊಂದಿದ್ದರು. ಆದರೆ ಹೆಚ್ಚಿನ ಯುವ ಯೋಧರು ಅದನ್ನು ತಮ್ಮ ಪ್ರತಿಷ್ಠೆಗೆ ಕುಂದೆಂದು ಭಾವಿಸಿದರು. ಕೊನೆಗೆ ಪ್ರವಾದಿ(ಸ) ಬಹುಮತದ ಅಭಿಪ್ರಾಯವನ್ನೇ ಅಂಗೀಕರಿಸಿದರು. ಜನರು ಯುದ್ಧದ ಸಿದ್ಧತೆಯಲ್ಲಿ ತೊಡಗಿದರು. ಅಂದು ಶುಕ್ರವಾರ ವಾಗಿತ್ತು. ಜುಮಾ ಖುತ್‌ಬಾ(ಪ್ರವಚನ)ದಲ್ಲಿ ಪ್ರವಾದಿವರ್ಯರು(ಸ) ತಮ್ಮ ಅನುಯಾಯಿ

ಗಳಿಗೆ ಸಹನೆ ಮತ್ತು ಸ್ಥೈರ್ಯದ ಉಪದೇಶ ನೀಡಿದರು.

ಜುಮಾ ನಮಾಝ್‌ನ ಬಳಿಕ ಯುದ್ಧದ ಸಿದ್ಧತೆ ಮಾಡಲು ಆಜ್ಞಾಪಿಸಿದರು. ಪ್ರವಾದಿ ವರ್ಯರು(ಸ) ಅಸರ್ ನಮಾಝ್ ಮುಗಿಸಿ ತಮ್ಮ ಕೋಣೆಗೆ ಹೋದರು. ಪ್ರವಾದಿವರ್ಯರ(ಸ) ಇಬ್ಬರು ಆಪ್ತ ಸಂಗಾತಿಗಳಾದ ಅಬೂಬಕರ್ ಮತ್ತು ಉಮರ್(ರ) ಅವರ ಜೊತೆಗಿದ್ದರು. ಪ್ರವಾದಿ(ಸ) ಯುದ್ಧ ಕವಚ ತೊಟ್ಟು, ತಲೆಗೆ ಶಾಲು ಹೊದ್ದು ಸೊಂಟಕ್ಕೆ ಗುರಾಣಿಯನ್ನು ನೇತಾಡಿಸಿದರು. ಕೈಯಲ್ಲಿ ಒಂದು ಭರ್ಜಿ ಹಿಡಿದು ಖಡ್ಗವನ್ನು ಭುಜದಿಂದ ನೇತಾಡಿಸಿದರು. ಅವರು ಸಿದ್ಧರಾಗಿ ಕೋಣೆಯಿಂದ ಹೊರಬಂದಾಗ ಯೋಧರು ಅವರನ್ನು ಕಾಯುತ್ತಾ ಕುಳಿತಿದ್ದರು.

ಈಗ ಸೇನೆಯು ಹೊರಡುವ ವೇಳೆಯಾಯಿತು. ಮದೀನಾದ ಬೀದಿ ಕೇರಿಗಳಲ್ಲಿ ಸೇನೆಗೆ ವಿದಾಯ ಹೇಳಲು ಜನ ಜಂಗುಳಿಯೇ ಸೇರಿದೆ. ಮದೀನಾವಾಸಿಗಳ ಮುಗಿಲು ಮುಟ್ಟುವ ತಕ್ಬೀರ್ ಧ್ವನಿಗಳ ಮಧ್ಯೆ ಮುಸ್ಲಿಮ್ ಸೇನೆಯು ಹೊರಡುತ್ತದೆ. ಸೇನೆಯಲ್ಲಿ ಒಂದು ಸಾವಿರ ಯೋಧರಿದ್ದಾರೆ. ಓರ್ವ ಅಂಧ ಸಹಾಬಿ ಹ. ಇಬ್ನ್ ಉಮ್ಮು ಮಕ್ತೂಮ್‌ರನ್ನು(ರ) ಪ್ರವಾದಿ(ಸ) ತಮ್ಮ ಸ್ಥಾನದಲ್ಲಿ ಮದೀನಾದ ಆಡಳಿತ ಗಾರರಾಗಿ ನೇಮಿಸುತ್ತಾರೆ. ಸೇನೆಗೆ ಮೂರು ಧ್ವಜಗಳನ್ನು ನೀಡಲಾಗಿದೆ. ಔಸ್ ಗೋತ್ರದ ಧ್ವಜವಾಹಕರಾಗಿ ಉಸೈದ್ ಬಿನ್ ಹುದೈಕ, ಖಝ್ರಜ್ ಗೋತ್ರದ ಧ್ವಜ ವಾಹಕರಾಗಿ ಹಬ್ಬಾಬ್ ಬಿನ್ ಮುಂದಿರ್ ಮತ್ತು ಮುಹಾಜಿರ್‌ಗಳ ಧ್ವಜವಾಹಕರಾಗಿ ಹ. ಅಲೀಯ ವರನ್ನು(ರ) ಪ್ರವಾದಿ(ಸ) ನೇಮಿಸಿರುವರು. ಒಂದು ಸಾವಿರ ಯೋಧರ ಪೈಕಿ ನೂರು ಮಂದಿಗೆ ಮಾತ್ರ ಯುದ್ಧ ಕವಚವಿದೆ. ಮುಹಮ್ಮದ್‌ರ(ಸ) ಸವಾರಿಯ ಸುತ್ತ ಸಅದ್ ಬಿನ್ ಮುಆದ್ ಮತ್ತು ಸಅದ್ ಬಿನ್ ಉಬಾದ(ರ) ಯುದ್ಧ ಕವಚ ತೊಟ್ಟು ವೇಗವಾಗಿ ನಡೆಯುತ್ತಿದ್ದಾರೆ. ಹದಿನೇಳು ಮಂದಿ ಯೋಧರನ್ನು ಪ್ರವಾದಿವರ್ಯರು(ಸ) ಅವರ ಎಳೆಪ್ರಾಯದ ಕಾರಣ ಮರಳಿಸುತ್ತಾರೆ.

ಹುರ್ರವಾಕುಮ್‌ನ ಕಣಿವೆಗೆ ಇಸ್ಲಾಮೀ ಸೇನೆಯು ತಲುಪಿದಾಗ ಅಬ್ದುಲ್ಲಾ ಬಿನ್ ಉಬೈ ಮತ್ತು ಅವನ ಮುನ್ನೂರು ಮಂದಿ ಸಂಗಾತಿಗಳು "ಮದೀನಾದಲ್ಲೇ ಇದ್ದು ಶತ್ರುಗಳನ್ನು ಎದುರಿಸಬೇಕು" ಎಂಬ ತಮ್ಮ ಸಲಹೆಯನ್ನು ಸ್ವೀಕರಿಸದ ಕಾರಣ ತಾವು ಮರಳುತ್ತಿದ್ದೇವೆಂದು ಹೇಳಿ ಮದೀನಾಕ್ಕೆ ಮರಳಿ ಹೋಗುತ್ತಾರೆ.

ಈಗ ಇಸ್ಲಾಮೀ ಸೇನೆಯಲ್ಲಿ ಉಳಿದಿರುವುದು ಕೇವಲ 700 ಮಂದಿ ಯೋಧರು. ಅವರ ಬಳಿ ಇರುವುದು ಕೇವಲ 2 ಕುದುರೆಗಳು. ಸೇನೆಯು ಹಿ. ಶ. 3ರ ಶವ್ವಾಲ್ ತಿಂಗಳ 15ರಂದು ಶನಿವಾರ ಬೆಳಿಗ್ಗೆ ಉಹುದ್ ಪರ್ವತದ ಕಣಿವೆಗೆ ತಲುಪಿತು. ಅಲ್ಲಿ ಒಂದು ಸ್ಥಳವನ್ನು ಪ್ರವಾದಿ(ಸ) ಆಯ್ಕೆ ಮಾಡಿ ಸೇನೆಯನ್ನು ಅಣಿಗೊಳಿಸಿದರು. ಪರ್ವತವು ಸೇನೆಯ ಹಿಂದುಗಡೆ ಇತ್ತು. ಎದುರಿನಲ್ಲಿ ಒಂದು ಸಣ್ಣ ಗುಡ್ಡವಿದೆ. ಅದನ್ನು 'ಜಬಲ್ ಐನೈನ್' ಎನ್ನುತ್ತಾರೆ. ಆ ಗುಡ್ಡದ ಮೇಲೆ ಪ್ರವಾದಿವರ್ಯರು(ಸ) 50 ಮಂದಿ ಬಿಲ್ಲಾಳುಗಳನ್ನು

ನೇಮಿಸಿದರು. ಆ ಸೇನಾ ತುಕಡಿಯ ನಾಯಕತ್ವವನ್ನು ಅಬ್ದುಲ್ಲಾ ಬಿನ್ ಜುಬೈರ್‌ರಿಗೆ(ರ) ವಹಿಸಿ ಕೊಡಲಾಯಿತು. "ನಮಗೆ ವಿಜಯವಾದರೂ ಸೋಲಾದರೂ ನೀವು ಮಾತ್ರ ನಿಮ್ಮ ಸ್ಥಾನದಿಂದ ಕದಲಬಾರದು" ಎಂದು ಆ ಸೇನಾ ತುಕಡಿಗೆ ಆಜ್ಞಾಪಿಸಲಾಯಿತು.

ಇಸ್ಲಾಮೀ ಸೇನೆಯ ಹಿಂದಿನ ಭಾಗವು ಉಹುದ್ ಪರ್ವತದ ಕಾರಣ ಸುರಕ್ಷಿತ ವಾಗಿತ್ತು. ಐನೈನ್ ಎಂಬ ಒಂದು ಸಣ್ಣ ಗುಡ್ಡದಲ್ಲಿ ಮಾತ್ರ ಒಂದು ದಾರಿಯಿತ್ತು. ಅಲ್ಲಿಂದ ಕುರೈಶ್ ಸೇನೆಯು ನುಗ್ಗಿ ಬಂದು ಆಕ್ರಮಣ ಮಾಡುವ ಭಯವಿತ್ತು. ಆದ್ದರಿಂದಲೇ ಅಲ್ಲಿ ಐವತ್ತು ಮಂದಿ ಬಿಲ್ಲುಗಾರರನ್ನು ನೇಮಿಸಲಾಗಿತ್ತು. ಮುಸ್ಲಿಮ್ ಸೇನೆಯ ಮೇಲೆ ಹಿಂದಿನಿಂದ ಆಗಬಹುದಾದ ಯಾವುದೇ ಆಕ್ರಮಣವನ್ನು ತಡೆಯುವುದೇ ಅವರ ಉದ್ದೇಶವಾಗಿತ್ತು. ಒಂದು ವೇಳೆ ಯುದ್ಧ ರಂಗದಲ್ಲಿ ಕುರೈಶರು ಮೇಲುಗೈ ಸಾಧಿಸುವ ಲಕ್ಷಣವಿದ್ದು ಸೇನೆಯು ಹಿಂದಿನ ದಾರಿಯಿಂದ ಧಾಳಿ ಮಾಡಲು ನಿರ್ಬಂಧಿತವಾದರೆ ಕುರೈಶ್ ಸೇನೆಯನ್ನು ಸದೆಬಡಿಯಲು ಈ ಬಿಲ್ಲುಗಾರರ ತುಕಡಿಯು ನೆರವಾಗಬೇಕು. ಈ ಎರಡೂ ಉದ್ದೇಶಗಳು ಈಡೇರಬೇಕಾದರೆ ಅವರು ಸ್ಥೈರ್ಯ ದೊಂದಿಗೆ ತಮ್ಮ ಸ್ಥಾನದಲ್ಲಿ ನಿಂತಿರಬೇಕಾಗಿದೆ. ಯಾವ ಪರಿಸ್ಥಿತಿಯಲ್ಲೂ ಅವರು ತಮ್ಮ ಸ್ಥಾನವನ್ನು ಬಿಡುವಂತಿರಲಿಲ್ಲ.

ಆದ್ದರಿಂದ ಮುಹಮ್ಮದ್(ಸ) ಆ ತುಕಡಿಗೆ ಇನ್ನೊಮ್ಮೆ ಈ ರೀತಿ ತಾಕೀತು ಮಾಡಿದರು: "ನಮಗೆ ಸಮರಾರ್ಜಿತ ಸೊತ್ತು ಸಿಗುವುದನ್ನು ನೀವು ಕಂಡರೂ ನಮ್ಮ ಜತೆ ಬಂದು ಸೇರಬಾರದು. ನಾವು ಕೊಲ್ಲಲ್ಪಡುತ್ತಿರುವುದನ್ನು ನೀವು ಕಂಡರೂ ನಮ್ಮ ಸಹಾಯಕ್ಕೆ ಬರಬಾರದು."

ತರುವಾಯ ಹೀಗೆ ಪ್ರಾರ್ಥಿಸಿದರು:

"ಓ ಅಲ್ಲಾಹ್! ನೀನೇ ನನ್ನ ಕೈ ಮತ್ತು ತೋಳು. ನೀನೇ ನನ್ನ ಸಹಾಯಕ. ನಾನು ನಿನ್ನ ನೆರವಿನಿಂದಲೇ ರಕ್ಷಣೆ ಮಾಡುತ್ತೇನೆ. ನಿನ್ನ ನೆರವಿನಿಂದಲೇ ಆಕ್ರಮಣ ಮಾಡುತ್ತೇನೆ ಮತ್ತು ನಿನ್ನ ನೆರವಿನಿಂದಲೇ ಯುದ್ಧ ಮಾಡುತ್ತೇನೆ."

## ಘೋರ ಸಂಘರ್ಷ

ಇನ್ನೂರು ಮಂದಿ ಕುದುರೆ ಸವಾರ ಸೈನಿಕರನ್ನೊಳಗೊಂಡ ಕುರೈಶ್ ತಂಡವು ಕಾರ್ಯಾಚರಣೆಯಲ್ಲಿ ತೊಡಗುತ್ತದೆ. ನೂರು ಮಂದಿ ಕುದುರೆ ಸವಾರರನ್ನೊಳಗೊಂಡ ಬಲಭಾಗದ ಸೇನೆಯ ನೇತೃತ್ವವನ್ನು ಖಾಲಿದ್ ಬಿನ್ ವಲೀದ್ ವಹಿಸಿದ್ದಾರೆ. ನೂರು ಮಂದಿ ಕುದುರೆ ಸವಾರರನ್ನೊಳಗೊಂಡ ಎಡಭಾಗದ ಸೇನೆಯ ನಾಯಕತ್ವವನ್ನು ಇಕ್ರಿಮಾ ಬಿನ್ ಅಬೂಜಹಲ್ ವಹಿಸಿದ್ದಾರೆ. ನೂರು ಮಂದಿ ಬಿಲ್ಲುಗಾರರ ದಂಡನಾಯಕರಾಗಿ ಅಬ್ದುಲ್ಲಾ ಬಿನ್ ರಬೀಅ ನೇಮಕಗೊಂಡಿದ್ದಾರೆ. ಮಧ್ಯದಲ್ಲಿರುವ ಸೇನಾ ತುಕಡಿಯು ಮುಂದುವರಿಯುವಾಗ ಹಿಂದಿನಿಂದ ಮಹಿಳೆಯರು ದಫ್ ಬಾರಿಸಿ ಹಾಡುತ್ತಾ ಪುರುಷರನ್ನು ಯುದ್ಧಕ್ಕೆ ಹುರಿದುಂಬಿಸುತ್ತಿದ್ದಾರೆ.

"ನಾವು ಆಕಾಶದ ತಾರೆಯರ ಪುತ್ರಿಯರು.
ನಾವು ರತ್ನಗಂಬಳಿಯ ಮೇಲೆ ನಡೆಯುವವರು.
ಮುಂದುವರಿದು ಶತ್ರುವನ್ನು ಎದುರಿಸಿದರೆ ನಾವು ನಿಮ್ಮನ್ನು ಆಲಂಗಿಸುವೆವು.
ಬೆನ್ನು ತಿರುಗಿಸಿದರೆ ನಿಮ್ಮಿಂದ ಬೇರ್ಪಡುವೆವು.
ನಮ್ಮ ವಿರಹವು ದ್ವೇಷಿಸುವವರ ವಿರಹವಾಗಿರುವುದು."

ಕುರೈಶರ ಧ್ವಜವನ್ನು ತಲ್‌ಹಾ ಬಿನ್ ಅಬೂ ತಲ್‌ಹಾರ ಕೈಯಲ್ಲಿ ಕೊಡಲಾಗಿದೆ. ಅವರು ಅಬ್ದುದ್ದಾರ್ ಗೋತ್ರದ ಪ್ರತಿಷ್ಠಿತ ವ್ಯಕ್ತಿ.

ಅಬೂ ಆಮಿರ್ ಫಾಸಿಕ್ ಎಂಬವನು ಮೊದಲ ದಿನವೇ ಯುದ್ಧರಂಗದ ವಿವಿಧ ಕಡೆಗಳಲ್ಲಿ ಗುಂಡಿಗಳನ್ನು ತೋಡಿ ಮೇಲಿಂದ ಹುಲ್ಲು ಹಾಕಿ ಅವನ್ನು ಅಡಗಿಸಿರುವನು. ಇದು ಮುಸ್ಲಿಮ್ ಸೈನಿಕರನ್ನು ಮೋಸದಿಂದ ಬೀಳಿಸಲು ಮಾಡಿದ ಉಪಾಯವಾಗಿತ್ತು. ಆತ ಮುಸ್ಲಿಮರ ಸೇನೆಯ ಮುಂದಿದ್ದರೆ ಅವನ ಗೋತ್ರದವರು ಅವನನ್ನು ಕಂಡು ಪ್ರವಾದಿ ಮುಹಮ್ಮದ್‌ರನ್ನು(ಸ) ತೊರೆದು ಬಿಡುವರೆಂಬುದು ಅವನ ಭಾವನೆಯಾಗಿತ್ತು.

ಮುಹಮ್ಮದ್(ಸ) ಅಬ್ದುದ್ದಾರ್ ಗೋತ್ರಕ್ಕೆ ಸೇರಿದ ಮುಸ್‌ಅಬ್ ಬಿನ್ ಉಮೈರ್‌ರನ್ನು ಇಸ್ಲಾಮೀ ಸೇನೆಯ ಧ್ವಜವಾಹಕರಾಗಿ ನೇಮಿಸುತ್ತಾರೆ.

ಈಗ ಯುದ್ಧ ಆರಂಭವಾಗಿದೆ. ಮುಸ್ಲಿಮ್ ಬಿಲ್ಲುಗಾರರು ವೇಗವಾಗಿಯೂ ತೀವ್ರವಾಗಿಯೂ ಬಾಣಗಳ ಆಕ್ರಮಣವನ್ನು ಆರಂಭಿಸುತ್ತಾರೆ. ಕುರೈಶ್ ಸೇನೆಯಲ್ಲಿ ಕೋಲಾಹಲವೇಳುತ್ತದೆ. ಈ ದುರವಸ್ಥೆಯನ್ನು ಕಂಡು ಕುರೈಶರ ಧ್ವಜವಾಹಕ ತಲ್‌ಹಾ ಬಿನ್ ಅಬೂ ತಲ್‌ಹಾ ಆವೇಶಭರಿತರಾಗಿ ಮುಂದುವರಿಯುತ್ತಾ ಮುಸ್ಲಿಮ್ ಸೈನ್ಯಕ್ಕೆ ಪಂಥಾಹ್ವಾನ ನೀಡುತ್ತಾನೆ:

"ಮುಸ್ಲಿಮರೇ! ನನ್ನನ್ನು ಎದುರಿಸಬಲ್ಲವರು ನಿಮ್ಮಲ್ಲಿ ಯಾರಿದ್ದಾರೆ ಬನ್ನಿ."

ಈ ಪಂಥಾಹ್ವಾನವನ್ನು ಕೇಳಿ ಹ. ಅಲೀ(ರ) ಮುಂದೆ ಬಂದು ಖಡ್ಗದಿಂದ ಆತನ ತಲೆಗೆ ಬಲವಾದ ಏಟು ಕೊಡುತ್ತಾರೆ. ತಲ್‌ಹಾನ ತಲೆ ಬುರುಡೆ ಒಡೆದು ಹೋಗುತ್ತದೆ. ಅವನು ನೆಲಕ್ಕುರುಳಿ ಚಡಪಡಿಸತೊಡಗುತ್ತಾನೆ. ತನ್ನ ಸೋದರನ ಈ ಸ್ಥಿತಿಯನ್ನು ಕಂಡು ಉಸ್ಮಾನ್ ಬಿನ್ ಅಬೂ ತಲ್‌ಹಾ ಮುಂದೆ ಬರುತ್ತಾನೆ. ಆದರೆ ಆತ ಹಮ್‌ಝಾರ(ರ) ಒಂದೇ ಏಟಿಗೆ ಕುಸಿದು ಬಿದ್ದು ಕೊನೆಯುಸಿರೆಳೆಯುತ್ತಾನೆ. ಈಗ ತಲ್‌ಹಾನ ಮತ್ತೊಬ್ಬ ಸೋದರ ಅಬೂ ಸಈದ್ ಮುಂದೆ ಬಂದು ಗರ್ಜಿಸುತ್ತಾನೆ. ಸಅದ್ ಬಿನ್ ಅಬೀ ವಕ್ಕಾಸ್(ರ) ಅವನನ್ನೂ ಮುಗಿಸಿಬಿಡುತ್ತಾರೆ. ಅನಂತರ ತಲ್‌ಹಾನ ಮೂವರು ಪುತ್ರರಾದ ಮಸಾಫಿಅ್, ಕಿಲಾಬ್ ಮತ್ತು ಜಿಲಾಸ್ ಕುರೈಶ್ ಸೇನೆಯ ಧ್ವಜವನ್ನು ಎತ್ತಿ ಹಿಡಿಯಲು ಮುಂದಾಗಿ ಪ್ರಾಣ ತೆರುತ್ತಾರೆ.

ಇದೀಗ ಘೋರ ಯುದ್ಧ ಆರಂಭವಾಗಿದೆ. ಯುದ್ಧ ಗರ್ಜನೆಗಳ ಮಧ್ಯೆ ಇತರ

ಯಾವುದೇ ಶಬ್ದವು ಕೇಳಿಸುತ್ತಿಲ್ಲ. ಕುದುರೆಯ ಕೆನೆಯುವಿಕೆ ಮತ್ತು ಖಡ್ಗಗಳ ಶಬ್ದವು ಮುಗಿಲು ಮುಟ್ಟಿದೆ. ಬಾಣಗಳ ಸುರಿಮಳೆಯಾಗುತ್ತಿದೆ. ಮನುಷ್ಯರ ಅವಯವಗಳು ತುಂಡು ತುಂಡಾಗಿ ಬೀಳುತ್ತಿವೆ. ಕೆಲವೇ ಸಮಯದ ನಂತರ, ಅತ್ಯಂತ ಘನಗರ್ಜನೆಯೊಂದಿಗೆ ಬಂದಿದ್ದ ಕುರೈಶ್ ಸೇನೆಯು ಮೈದಾನ ಬಿಟ್ಟು ಓಟಕ್ಕಿತ್ತಿತು. ಮುಸ್ಲಿಮರು ಅವರನ್ನು ಬೆನ್ನಟ್ಟಿ ಮೈದಾನದಿಂದ ಹೊರ ಹಾಕುತ್ತಿದ್ದಾರೆ.

ಐನೈನ್ ಬೆಟ್ಟದಲ್ಲಿದ್ದ ಸೇನಾ ತುಕಡಿಯವರು ಕುರೈಶ್ ಸೈನಿಕರು ಮೈದಾನ ಬಿಟ್ಟು ಓಡುತ್ತಿರುವುದನ್ನು ಕಂಡು ಮುಸ್ಲಿಮರ ಜತೆ ಸೇರಿ ಸಮರಾರ್ಜಿತ ಸೊತ್ತು ಸಂಗ್ರಹಿಸಲು ಹೊರಡುತ್ತಾರೆ. ಅವರ ದಂಡನಾಯಕರು ಎಷ್ಟು ತಡೆದರೂ ಈಗ ಯುದ್ಧ ಕೊನೆಗೊಂಡಿದೆ ಇನ್ನು ಇಲ್ಲಿ ನಿಂತು ಯಾವ ಪ್ರಯೋಜನವೂ ಇಲ್ಲ ಎನ್ನುತ್ತಾ ಅವರು ಬೆಟ್ಟದಿಂದ ಕೆಳಗಿಳಿಯುತ್ತಾರೆ. ಈಗ ಅಲ್ಲಿ ಉಳಿದಿರುವುದು ಅಬ್ದುಲ್ಲಾ ಬಿನ್ ಜುಬೈರ್(ರ) ಮತ್ತು ಅವರ ಹತ್ತು ಮಂದಿ ಸಂಗಾತಿಗಳು ಮಾತ್ರ. ನಾನಂತೂ ಪ್ರವಾದಿವರ್ಯರ(ಸ) ಮಾತನ್ನು ಮೀರಲಾರೆನೆನ್ನುತ್ತಾ ಅವರು ತಮ್ಮ ಸ್ಥಾನದಲ್ಲಿ ಸ್ಥಿರವಾಗಿ ನಿಲ್ಲುತ್ತಾರೆ.

ಇತರ ಯೋಧರಿಗೂ ಪ್ರವಾದಿ ಮುಹಮ್ಮದ್‌ರ(ಸ) ಆಜ್ಞೆಯನ್ನು ಮೀರುವ ಉದ್ದೇಶವೇ ಇರಲಿಲ್ಲ. ಅವರು "ಶತ್ರುಗಳು ಯುದ್ಧ ರಂಗವನ್ನು ಬಿಟ್ಟು ಓಡಿ ಹೋದ ಮೇಲೂ ನಾವು ಇಲ್ಲೇ ನಿಂತಿರಬೇಕೆಂಬುದು ಪ್ರವಾದಿವರ್ಯರ(ಸ) ಇಂಗಿತವಾಗಿರಲಿಲ್ಲ" ಎನ್ನುತ್ತಾ ತಮ್ಮ ಕೃತ್ಯವನ್ನು ಸಮರ್ಥಿಸಿಕೊಳ್ಳುತ್ತಾರೆ.

ಕುರೈಶ್ ಸೇನೆಯ ಬಲಭಾಗದ ತುಕಡಿಯ ನಾಯಕರಾದ ಖಾಲಿದ್ ಬಿನ್ ವಲೀದ್ ಐನೈನ್ ಬೆಟ್ಟದಿಂದ ಸೈನಿಕರು ತೆರಳುತ್ತಿರುವುದನ್ನು ನೋಡುತ್ತಾರೆ. ಅವರು ತಮ್ಮ ಸೇನಾ ತುಕಡಿಯೊಂದಿಗೆ ವೇಗವಾಗಿ ಉಹುದ್ ಪರ್ವತದ ಉತ್ತರ ದಿಕ್ಕಿನಿಂದ ಬಂದು ಐನೈನ್ ಬೆಟ್ಟ ಮತ್ತು ಯುದ್ಧರಂಗದ ಮಧ್ಯೆ ನಿಂತು ಮುಸ್ಲಿಮ್ ಬಿಲ್ಲಾಳುಗಳ ಮೇಲೆ ಧಾಳಿ ಆರಂಭಿಸುತ್ತಾರೆ. ಅಷ್ಟರಲ್ಲಿ ಇಕ್ರಿಮಾ ಬಿನ್ ಅಬೂಜಹಲ್ ಕೂಡಾ ತನ್ನ ಸೇನಾ ತುಕಡಿಯೊಂದಿಗೆ ಬಂದು ಖಾಲಿದ್‌ರಿಗೆ ನೆರವಾಗುತ್ತಾನೆ. ಖಾಲಿದ್‌ರ ಈ ಅನಿರೀಕ್ಷಿತ ಮತ್ತು ತೀವ್ರ ಧಾಳಿಯನ್ನು ಎದುರಿಸಲು ಸಿದ್ಧವಾಗುವುದಕ್ಕೆ ಮುಂಚೆಯೇ ಮುಸ್ಲಿಮರು ಅವರ ಖಡ್ಗಗಳಿಗೆ ಎರೆಯಾಗುತ್ತಾರೆ.

ಈ ಸಂದರ್ಭವನ್ನು ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಪರಾಮರ್ಶಿಸಲಾಗಿದೆ:

"ಅಲ್ಲಾಹನು ನಿಮ್ಮೊಡನೆ ಮಾಡಿದ್ದ (ಬೆಂಬಲ ಮತ್ತು ಸಹಾಯದ) ವಾಗ್ದಾನವನ್ನಂತು ನೆರವೇರಿಸಿದನು. ಆರಂಭದಲ್ಲಿ ಅವನ ಅಪ್ಪಣೆಯಿಂದ ನೀವೇ ಅವರನ್ನು ವಧಿಸುತ್ತಿದ್ದಿರಿ. ಆದರೆ, ನೀವು ದೌರ್ಬಲ್ಯ ತೋರಿದಾಗ ಮತ್ತು ನಿಮ್ಮ ಕಾರ್ಯದಲ್ಲಿ ಪರಸ್ಪರ ಮತಭೇದ ತಾಳಿದಾಗ ಮತ್ತು ನೀವು ಮೋಹಿತರಾಗಿದ್ದ ಆ ವಸ್ತುವನ್ನು (ಅರ್ಥಾತ್ ಸಮರಾರ್ಜಿತ ಸೊತ್ತನ್ನು) ಅಲ್ಲಾಹ್ ನಿಮಗೆ ಹಠಾತ್ತನೆ ತೋರಿಸಿದಾಗ ನೀವು ನಿಮ್ಮ

ನಾಯಕನ ಅಪ್ಪಣೆಯನ್ನು ಉಲ್ಲಂಘಿಸಿ ನಡೆದುಬಿಟ್ಟಿರಿ. - ಏಕೆಂದರೆ ನಿಮ್ಮಲ್ಲಿ ಕೆಲವರು ಇಹಲೋಕಾಕಾಂಕ್ಷಿಗಳಿದ್ದರು ಮತ್ತೆ ಕೆಲವರು ಪರಲೋಕಾಕಾಂಕ್ಷೆ ಯನ್ನಿರಿಸಿಕೊಂಡಿದ್ದರು. ಆಗ ಅಲ್ಲಾಹನು ಪರೀಕ್ಷಾರ್ಥವಾಗಿ ಸತ್ಯನಿಷೇಧಿಗಳೆದುರು ನಿಮ್ಮನ್ನು ಹಿಮ್ಮೆಟ್ಟಿಸಿ ಬಿಟ್ಟನು. ಆದರೂ ನಿಜವಾಗಿ ಅಲ್ಲಾಹ್ ನಿಮ್ಮನ್ನು ಕ್ಷಮಿಸಿದನು. ಏಕೆಂದರೆ ಅಲ್ಲಾಹ್ ಸತ್ಯವಿಶ್ವಾಸಿಗಳ ಮೇಲೆ ಬಹಳ ಕೃಪಾಕಟಾಕ್ಷವನ್ನಿರಿಸುವವನಾಗಿರುತ್ತಾನೆ." **(ಪವಿತ್ರ ಕುರ್‌ಆನ್, 3:152)**

ಹಮ್‌ಝಾ(ರ) ಅರ್‌ತಾತ್ ಬಿನ್ ಶರ್ಬೀಲ್‌ರನ್ನು ವಧಿಸಿ ಸಬಾಲ್ ಬಿನ್ ಅಬ್ದುಲ್ ಉಝ್ಝಾರ ಕಡೆಗೆ ಧಾವಿಸುತ್ತಿದ್ದರು. ಯುದ್ಧಾವೇಶದಲ್ಲಿ ತಮ್ಮ ಪರಿಸರದ ಬಗ್ಗೆ ನಿರ್ಲಕ್ಷ್ಯರಾಗಿದ್ದರು. ವಹ್‌ಶೀ ದೂರದಿಂದ ಅವರನ್ನು ನೋಡುತ್ತಿದ್ದನು. ಮುಸ್ಲಿಮ್ ಸೇನೆಯಲ್ಲುಂಟಾದ ಗೊಂದಲದಿಂದ ಅವನು ಪೂರ್ಣ ಪ್ರಯೋಜನ ಪಡೆಯುತ್ತಾನೆ. ಐನೈನ್ ಬೆಟ್ಟದ ಬಳಿ ಆತ ಹ. ಹಮ್‌ಝಾರಿಗಾಗಿ(ರ) ಹೊಂಚು ಹಾಕಿ ಕುಳಿತುಕೊಳ್ಳುತ್ತಾನೆ. ಹಮ್‌ಝಾರ(ರ) ಸಮೀಪ ತಲುಪುತ್ತಲೇ ವಹ್‌ಶೀ ಭರ್ಜಿಯನ್ನು ಎಸೆಯುತ್ತಾನೆ. ಅದು ನಾಭಿಯ ಮೇಲಿನಿಂದ ಅವರ ಉದರವನ್ನು ಹೊಕ್ಕು ಹಿಂದಿನಿಂದ ಹೊರ ಬರುತ್ತದೆ. ಅವರು ಕಂಪಿಸುತ್ತಾ ನೆಲಕ್ಕುರುಳುತ್ತಾರೆ. ಕೆಲವೇ ಕ್ಷಣಗಳಲ್ಲಿ ಅವರ ಆತ್ಮವು ಹಾರಿ ಹೋಗುತ್ತದೆ. ವಹ್‌ಶೀ ಸಂತೋಷಾತಿರೇಕದಲ್ಲಿ ತನ್ನ ಯಜಮಾನನಾದ ಜುಬೈರ್ ಬಿನ್ ಮುತ್‌ಇಮ್‌ರ ಬಳಿ ಹೋಗುತ್ತಾನೆ. ತನ್ನ ಕೃತ್ಯವನ್ನು ಆತ ಅವನಿಗೆ ವಿವರಿಸಿದಾಗ ಜುಬೈರ್ ಸಂತೋಷದಿಂದ ಅವನನ್ನು ದಾಸ್ಯ ಮುಕ್ತಗೊಳಿಸುತ್ತಾನೆ. ಹಮ್‌ಝಾರ(ರ) ಪಾರ್ಥಿವ ಶರೀರವನ್ನು ಕಂಡ ಹಿಂದ್ ಅದರ ಕಿವಿ ಮೂಗುಗಳನ್ನು ಕತ್ತರಿಸುತ್ತಾಳೆ. ಅದರ ಕರುಳನ್ನು ಎಳೆದು ಜಗಿಯತೊಡಗುತ್ತಾಳೆ. ಆಕೆ ಈ ಮೂಲಕ ತನ್ನ ತಂದೆಯ ಕೊಲೆಗೆ ಪ್ರತೀಕಾರವೆಸಗುತ್ತಾಳೆ.

ಮುಸ್ಲಿಮ್ ಸೇನೆಯ ಧ್ವಜವಾಹಕರಾದ ಮುಸ್‌ಅಬ್ ಬಿನ್ ಉಮೈರ್‌ರನ್ನು(ರ) ಶತ್ರುಗಳು ಸುತ್ತುವರಿದಿರುವರು. ಅವರು ಬಹಳ ಪೌರುಷದಿಂದ ಏಕಾಂತಗಿಯಾಗಿ ಅವರನ್ನು ಎದುರಿಸುತ್ತಿದ್ದರು. ಕೊನೆಗೆ ಅವರ ಬಲಕೈ ಕಡಿದು ಬಿತ್ತು. ಆಗ ಅವರು ಧ್ವಜವನ್ನು ಎಡಕೈಯಲ್ಲಿ ಎತ್ತುತ್ತಾರೆ. ಆ ಕೈಯನ್ನೂ ಶತ್ರುಗಳು ಕಡಿದು ಹಾಕಿದಾಗ ಅವರು ಧ್ವಜವನ್ನು ಕೊರಳಿನಿಂದ ಎದೆಯ ಮೇಲೆ ಒತ್ತಿ ಹಿಡಿಯುತ್ತಾರೆ. ಅವರು ತಮ್ಮ ಉಸಿರು ಇರುವ ತನಕ ಅದನ್ನು ಬೀಳಲು ಬಿಡಲಿಲ್ಲ. ಮುಸ್‌ಅಬ್ ಬಿನ್ ಉಮೈರ್(ರ) ರೂಪದಲ್ಲಿ ಪ್ರವಾದಿ ಮುಹಮ್ಮದ್‌ರನ್ನು(ಸ) ಹೋಲುತ್ತಿದ್ದರು. ಆದ್ದರಿಂದ ಇಬ್ನು ಕುಮಯ್ಯ ಎಂಬವನು ಅವರನ್ನು ಮುಹಮ್ಮದ್(ಸ) ಎಂದು ಭಾವಿಸಿ ಈ ಅಸಹಾಯಕ ಸ್ಥಿತಿಯಲ್ಲಿ ಕಂಡು ವೇಗವಾಗಿ ಅವರ ಮೇಲೆ ಎರಗಿ ಅವ ರನ್ನು ಮುಗಿಸಿ ಬಿಡುತ್ತಾನೆ. ವಾಸ್ತವದಲ್ಲಿ ಆತ ಮಕ್ಕಾದಲ್ಲಿಯೇ 'ಪ್ರವಾದಿ ಮುಹಮ್ಮದ್ ರನ್ನು ತನ್ನ ಖಡ್ಗಕ್ಕೆ ಎರೆಮಾಡುವೆನೆಂದು' ಆಣೆ ಹಾಕಿ ಹೇಳುತ್ತಿದ್ದ. ಮುಹಮ್ಮದ್‌ರನ್ನು(ಸ) ನಾನು ಮುಗಿಸಿ ಬಿಟ್ಟಿರುವೆನೆಂದು ಬೊಬ್ಬಿಡುತ್ತಾ ಆತ ತನ್ನ ಸೇನೆಯತ್ತ ಮರಳುತ್ತಾನೆ.

ಈ ಶಬ್ದವು ಮುಸ್ಲಿಮ್ ಸೇನೆಯ ಮೇಲೆ ಸಿಡಿಲಾಗಿ ಎರಗುತ್ತದೆ. ಅವರ ಕಣ್ಣ ಮುಂದಿನ ಜಗತ್ತೆಲ್ಲಾ ಅಂಧಕಾರಮಯವಾಗಿ ಕಾಣಿಸತೊಡಗುತ್ತದೆ.

## ಆತಂಕದ ಕ್ಷಣಗಳು

ಖಾಲಿದ್‌ರ ಹಠಾತ್ ಧಾಳಿಯು ಮುಸ್ಲಿಮರಲ್ಲಿ ಗೊಂದಲವನ್ನುಂಟುಮಾಡಿದೆ. ಇಬ್ನು ಕುಮಯ್ಯರ ಬೊಬ್ಬೆಯಿಂದ ಅವರಲ್ಲಿದ್ದ ಎಲ್ಲ ಧೈರ್ಯವೂ ಮುರಿದಿದೆ. ಒಂದು ತಂಡವು ರಣರಂಗವನ್ನು ತೊರೆದು ಮದೀನಾದ ಕಡೆಗೆ ಪಲಾಯನ ಮಾಡಿದೆ. ಅದು ಮದೀನಾ ತಲುಪುತ್ತಲೇ ಮುಸ್ಲಿಮರ ಸೋಲು ಮತ್ತು ಪ್ರವಾದಿವರ್ಯರ(ಸ) ಹುತಾತ್ಮತೆಯ ಸುದ್ದಿ ಹರಡಿದೆ. ಇದರಿಂದಾಗಿ ಮದೀನಾ ವಾಸಿಗಳಲ್ಲಿ ದುಃಖದ ಮೋಡ ಕವಿದಿದೆ. ಕುರೈಶ್ ಸೇನೆಯ ಅಪಾಯದ ಕುರಿತು ಅವರು ಅತಿಶಯೋಕ್ತ ವರದಿಗಳನ್ನು ಹರಡಿರುವರು. ತನ್ಮೂಲಕ ಮದೀನಾದ ಮುಸ್ಲಿಮರಲ್ಲಿ ಭಯ ಭೀತಿಯು ವ್ಯಾಪಕವಾಗಿದೆ.

ಮುಸ್ಲಿಮರ ಇನ್ನೊಂದು ತಂಡವು ಪ್ರವಾದಿವರ್ಯರ(ಸ) ಹುತಾತ್ಮತೆಯ ಸುದ್ದಿ ಕೇಳಿ ದಿಗ್ಮೂಢವಾಗಿದೆ. ಯಾವುದೇ ಹೆಜ್ಜೆ ಇಡುವುದು ಅದರ ಪಾಲಿಗೆ ಅಸಾಧ್ಯವೆನಿಸಿದೆ. ಈಗ ಏನು ಮಾಡಬೇಕೆಂಬ ಬಗ್ಗೆ ಅವರು ಯಾವುದೇ ತೀರ್ಮಾನ ಮಾಡುವ ಸ್ಥಿತಿ ಯಲ್ಲಿರಲಿಲ್ಲ. ಈ ಸನ್ನಿವೇಶದ ಕುರಿತು ಅಲ್ಲಾಹನು ಈ ರೀತಿ ಹೇಳಿರುವನು: "ಮುಹಮ್ಮದ್‌ರು ಓರ್ವ ಸಂದೇಶವಾಹಕರೇ ವಿನಾ ಇನ್ನೇನೂ ಆಗಿರುವುದಿಲ್ಲ. ಅವರಿಗಿಂತ ಮುಂಚೆ ಇತರ ಸಂದೇಶವಾಹಕರೂ ಗತಿಸಿ ಹೋಗಿದ್ದಾರೆ. ಹಾಗಿರುವಾಗ ಅವರು ಮರಣ ಹೊಂದಿದರೆ ಅಥವಾ ವಧಿಸಲ್ಪಟ್ಟರೆ ನೀವು ಮರಳಿ ಹೋಗುವಿರಾ? ನೆನಪಿಡಿರಿ! ಹಿಂದಕ್ಕೆ ಮರಳುವವನು ಅಲ್ಲಾಹನಿಗೇನೂ ನಷ್ಟವುಂಟು ಮಾಡಲಾರ. ಅಲ್ಲಾಹನ ಕೃತಜ್ಞ ದಾಸರಾಗಿರುವವರಿಗೆ ಅವನು ಅದರ ಪ್ರತಿಫಲ ನೀಡುವನು." **(ಪವಿತ್ರ ಕುರ್‌ಆನ್: 3: 114)**

ಮುಸ್ಲಿಮ್ ಸೇನೆಯ ಮೂರನೆಯ ತಂಡವು ಪತಂಗಗಳಂತೆ ಪ್ರವಾದಿತ್ವದ ದೀಪದ ಮೇಲೆ ಪ್ರಾಣ ಅರ್ಪಿಸಲು ಸಿದ್ಧವಾಗಿತ್ತು. ಈ ತಂಡದಲ್ಲಿ ಸುಮಾರು ಹದಿನಾಲ್ಕು ಮಂದಿ ಪ್ರಮುಖ ಸಹಾಬಿಗಳಿದ್ದರು.

ಮುಹಮ್ಮದ್(ಸ) ಉಹುದ್ ಯುದ್ಧದ ವೇಳೆ ಶತ್ರುಗಳ ಮೇಲೆ ನಿರಂತರ ಬಾಣಗಳ ಮಳೆಗರೆಯುತ್ತಿದ್ದರು. ಕೊನೆಗೆ ಅವರ ಎಡ-ಬಲಗಳಲ್ಲಿದ್ದ ಸೇನಾ ತುಕಡಿಯು ಚದುರಿ ಹೋಯಿತು. ಶತ್ರುಗಳು ಪ್ರವಾದಿವರ್ಯರನ್ನು(ಸ) ನಾಲ್ಕೂ ಕಡೆ ಗಳಿಂದ ಸುತ್ತುವರಿದರು. ಸಅದ್ ಬಿನ್ ಅಬೀ ವಕ್ಕಾಸ್‌ರ ಸೋದರ ಉತ್‌ಬಾ ಬಿನ್ ಅಬೀ ವಕ್ಕಾಸ್ ಮುಸ್ಲಿಮ್ ಆಗಿರಲಿಲ್ಲ. ಆತ ಕಲ್ಲು ಹೊಡೆದು ಪ್ರವಾದಿವರ್ಯರ(ಸ) ಕೆಳದವಡೆಯ ಹಲ್ಲನ್ನು ಉದುರಿಸಿದ. ಆ ಏಟಿನಿಂದಲೇ ಅವರ ತುಟಿಗೂ ಗಾಯವಾಗಿತ್ತು. ಅಬ್ದುಲ್ಲಾ ಬಿನ್ ಶಿಹಾಬ್ ಎಂಬವನು ಪ್ರವಾದಿವರ್ಯರ(ಸ) ಮುಖಾರವಿಂದವನ್ನು ಗಾಯಗೊಳಿಸಿದನು. ಮುಖದಿಂದ ರಕ್ತಧಾರೆ ಹರಿಯತೊಡಗಿತು. ಅಮ್ರ್ ಬಿನ್ ಕಮಿಯ್ಯ ಪ್ರವಾದಿ ವರ್ಯರ(ಸ)

ಮುಖಕ್ಕೆ ಬಲವಾದ ಕಲ್ಲೇಟು ಹೊಡೆದ. ಅದರಿಂದಾಗಿ ಅವರ ಶಿರಸ್ತ್ರಾಣದ ಎರಡು ಕೊಂಡಿಗಳು ಮುಖಕ್ಕೆ ನಾಟಿದುವು. ಆಗ ಪ್ರವಾದಿವರ್ಯರ(ಸ) ಬಾಯಿಯಿಂದ ಈ ಕೆಳಗಿನ ಮಾತುಗಳು ಹೊರಟವು:

"ತನ್ನ ಪ್ರವಾದಿಯ ಮುಖವನ್ನು ರಕ್ತರಂಜಿತಗೊಳಿಸುವ ಜನಾಂಗವು ವಿಜಯ ಹೊಂದುವುದಾದರೂ ಹೇಗೆ? ಅವನಂತೂ ಅವರನ್ನು ಅಲ್ಲಾಹನ ಕಡೆಗೆ ಕರೆಯುತ್ತಿದ್ದಾನೆ."

ಈ ಸಂದರ್ಭದಲ್ಲಿ ಅಲ್ಲಾಹನು ಹೀಗೆ ಹೇಳುತ್ತಾನೆ: "(ಓ ಪೈಗಂಬರರೇ,) ತೀರ್ಮಾನದ ಅಧಿಕಾರದಲ್ಲಿ ನಿಮ್ಮ ಪಾಲೇನೂ ಇಲ್ಲ. ಅವರು ಅಕ್ರಮಿಗಳಾಗಿರುವುದರಿಂದ, ತನಗೆ ಇಷ್ಟಬಂದವರನ್ನು ಕ್ಷಮಿಸುವ ಮತ್ತು ಇಷ್ಟ ಬಂದವರನ್ನು ಶಿಕ್ಷಿಸುವ ಅಧಿಕಾರ ಅಲ್ಲಾಹನಿಗಿದೆ." **(ಪವಿತ್ರ ಕುರ್‌ಆನ್, 3:128)**

ಆ ಬಳಿಕ ಪ್ರವಾದಿ(ಸ) ಸದಾ ಈ ರೀತಿ ಪ್ರಾರ್ಥಿಸುತ್ತಿದ್ದರು: "ಓ ಅಲ್ಲಾಹ್! ನನ್ನ ಜನಾಂಗಕ್ಕೆ ಸನ್ಮಾರ್ಗವನ್ನು ತೋರಿಸು. ತಾವೇನು ಮಾಡುತ್ತಿದ್ದೇವೆಂಬುದು ಅವರಿಗೆ ತಿಳಿದಿಲ್ಲ ಅಥವಾ ಅವರನ್ನು ಕ್ಷಮಿಸಿಬಿಡು."

ಪ್ರವಾದಿವರ್ಯರ(ಸ) ಈ ಸ್ಥಿತಿಯನ್ನು ಕಂಡು ಆ ಶತ್ರುಗಳನ್ನು ಶಪಿಸುವಂತೆ ಸಹಾಬಿಗಳು ವಿನಂತಿಸುತ್ತಾರೆ. ಆಗ ಪ್ರವಾದಿವರ್ಯರು ಹೀಗೆ ಹೇಳುತ್ತಾರೆ: "ನಾನು ಯಾರನ್ನೂ ಶಪಿಸಲಿಕ್ಕಾಗಿ ನೇಮಿಸಲ್ಪಟ್ಟವನಲ್ಲ. ನನ್ನನ್ನು ಒಳಿತು ಮತ್ತು ಕರುಣೆಯ ಸಂದೇಶವಾಹಕರಾಗಿ ನಿಯೋಗಿಸಲಾಗಿದೆ. ಓ ಅಲ್ಲಾಹ್! ನನ್ನ ಜನಾಂಗದವರನ್ನು ಕ್ಷಮಿಸಿ ಬಿಡು. ಏಕೆಂದರೆ ಈ ಜನರಿಗೆ ತಿಳುವಳಿಕೆ ಇಲ್ಲ."

ಅಮ್ರ್ ಬಿನ್ ಕಮಿಯ್ಯ ಕಲ್ಲೇಟು ಬಾರಿಸಿದ ನಂತರ ಮತ್ತೆ ಮುಂದುವರಿಯ ಲೆತ್ನಿಸುತ್ತಾನೆ. ಆದರೆ ಮುಹಮ್ಮದ್‌ರ(ಸ) ಸನಿಹದಲ್ಲಿದ್ದ ಉಮ್ಮುಅಮ್ಮಾರ(ರ) ಎಂಬ ಮಹಿಳಾ ಸಹಾಬಿ ತಮ್ಮ ಖಡ್ಗದಿಂದ ಅವನಿಗೆ ಹಲವು ಏಟುಗಳನ್ನು ಕೊಡು ತ್ತಾರೆ. ಆದರೆ ಅವನು ಎರಡು ಯುದ್ಧ ಕವಚಗಳನ್ನು ತೊಟ್ಟಿದ್ದರಿಂದ ಗಾಯಗಳಿಲ್ಲದೆ ಪಾರಾಗುತ್ತಾನೆ. ಮಾತ್ರವಲ್ಲ ಸಂದರ್ಭ ಸಾಧಿಸಿ ಉಮ್ಮುಅಮ್ಮಾರರ(ರ) ಹೆಗಲಿಗೆ ತಲವಾರಿನಿಂದ ಬಲವಾದ ಏಟು ಕೊಡುತ್ತಾನೆ. ಅದರಿಂದ ಆಳವಾದ ಗಾಯವಾಗುತ್ತದೆ. ಈ ಗಾಯದ ಚಿಹ್ನೆಯು ಬಹಳ ಕಾಲ ಉಳಿದಿರುತ್ತದೆ.

ಉಮ್ಮು ಅಮ್ಮಾರ(ರ) ಗಾಯಗೊಂಡ ಬಳಿಕ ಅಮ್ರ್ ಬಿನ್ ಕಮಿಯ್ಯ ತನ್ನ ತಲವಾರಿನಿಂದ ಮುಹಮ್ಮದ್‌ರ(ಸ) ಮೇಲೆ ದಾಳಿ ಮಾಡುತ್ತಾನೆ. ಆದರೆ ಆ ಧಾಳಿಯನ್ನು ತಲ್‌ಹಾ(ರ) ತಮ್ಮ ಬರಿಕೈಯಿಂದ ತಡೆಯುತ್ತಾರೆ. ಅವರ ಕೈ ಬೆರಳು ಕಡಿದು ಬೀಳುತ್ತದೆ. ಈ ದಾಳಿಯ ನಂತರ ಪ್ರವಾದಿವರ್ಯರು(ಸ) ಆಕಸ್ಮಿಕವಾಗಿ ಅಬೂ ಆಮಿರ್ ಫಾಸಿಕ್ ತೋಡಿದ ಒಂದು ಹೊಂಡಕ್ಕೆ ಬಿದ್ದು ಬಿಡುತ್ತಾರೆ.

ಮುಹಮ್ಮದ್‌ರು(ಸ) ಹೊಂಡಕ್ಕೆ ಬೀಳುತ್ತಿರುವುದನ್ನು ಕಂಡ ಅಮ್ರ್ ಬಿನ್ ಕಮಿಯ್ಯ ಬೊಬ್ಬಿಡುತ್ತಾ ತನ್ನ ಸೇನೆಯತ್ತ ಓಡುತ್ತಾನೆ. ಅವನು ಓಡುತ್ತಿರುವಾಗ ಹೀಗೆ ಹೇಳುತ್ತಾನೆ: "ನಾನು ಮುಹಮ್ಮದ್‌ರನ್ನು(ಸ) ಕೊಂದು ಬಿಟ್ಟಿದ್ದೇನೆ."

ಈ ಬೊಬ್ಬೆ ಕೇಳಿ ಮುಸ್ಲಿಮ್ ಸೇನೆಯಲ್ಲಿ ನಿರಾಶೆ ಕವಿಯಿತು. ಅದೇ ವೇಳೆ ಅನಸ್ ಬಿನ್ ಮಾಲಿಕ್‌ರ ಚಿಕ್ಕಪ್ಪ ಅನಸ್ ಬಿನ್ ನದರ್(ರ) ನಿರಾಶರಾಗಿ ರಣರಂಗದಿಂದ ಸರಿಯುತ್ತಿರುವ ಕೆಲವು ಸಹಾಬಿಗಳನ್ನು ಕಾಣುತ್ತಾರೆ. ಆಗ ಅವರು:

"ನೀವೇಕೆ ಇಷ್ಟು ನಿರಾಶರಾಗಿ ಕಾಣುತ್ತಿರುವಿರಿ?" ಎಂದು ಪ್ರಶ್ನಿಸುತ್ತಾರೆ.

"ಅಲ್ಲಾಹನ ಪ್ರವಾದಿ(ಸ) ಹುತಾತ್ಮರಾಗಿರುವರು" ಎಂಬ ಉತ್ತರ ಸಿಗುತ್ತದೆ.

ಆಗ ಅನಸ್(ರ) ಹೀಗೆ ಹೇಳುತ್ತಾರೆ: "ಅವರು ಹುತಾತ್ಮರಾದ ಬಳಿಕ ನಾವಿನ್ನು ಜೀವಿಸಿ ಏನು ಫಲ? ಎದ್ದೇಳಿರಿ! ಯಾವ ಉದ್ದೇಶಕ್ಕಾಗಿ ಅವರು ಪ್ರಾಣಾರ್ಪಣೆಗೈದಿರು ವರೋ ಆ ಉದ್ದೇಶಕ್ಕಾಗಿ ಹೋರಾಡಿ ಮಡಿಯಿರಿ."

ಇಷ್ಟು ಹೇಳಿ ಅವರು ವೇಗವಾಗಿ ಶತ್ರು ಸೇನೆಯೊಳಗೆ ನುಗ್ಗಿ ಹೋರಾಡುತ್ತಾರೆ. ಕೆಲವೇ ಕ್ಷಣಗಳಲ್ಲಿ 70 ಮಂದಿಯೊಂದಿಗೆ ಹುತಾತ್ಮರಾಗುತ್ತಾರೆ.

ಅದೇ ವೇಳೆಗೆ ಕಅಬ್ ಬಿನ್ ಮಾಲಿಕ್ ಮುಹಮ್ಮದ್‌ರನ್ನು(ಸ) ಗಾಯಗೊಂಡ ಸ್ಥಿತಿಯಲ್ಲಿ ಕಂಡು ಗುರುತಿಸುತ್ತಾರೆ. ಅವರು ಮುಸ್ಲಿಮರನ್ನು ಕೂಗಿ ಕರೆದು ಈ ರೀತಿ ಹೇಳುತ್ತಾರೆ: "ಮುಸ್ಲಿಮರೇ! ನಿಮಗೆ ಶುಭವಾಗಲಿ ಪ್ರವಾದಿವರ್ಯರು(ಸ) ಸುರಕ್ಷಿತವಾಗಿದ್ದಾರೆ."

ನಿರಾಶರಾಗಿ ಕಳೆಗುಂದಿದ್ದ ಸಹಾಬಿಗಳಲ್ಲಿ ಮತ್ತೆ ಜೀವಕಳೆ ಗೋಚರಿಸುತ್ತದೆ. ಎಲ್ಲರೂ ಪ್ರವಾದಿವರ್ಯರ(ಸ) ಕಡೆಗೆ ಧಾವಿಸಿ ಬರುತ್ತಾರೆ.

ಅಷ್ಟರಲ್ಲಿ ಕುರೈಶ್ ಸೇನೆಯ ಒಂದು ತುಕಡಿಯು ಮರಳಿ ಆಕ್ರಮಣ ಮಾಡುತ್ತದೆ. ಅವರು ಹತ್ತಿರ ಬರುತ್ತಿರುವುದನ್ನು ಕಂಡು ಪ್ರವಾದಿ(ಸ) ಹೀಗೆ ಪ್ರಾರ್ಥಿಸುತ್ತಾರೆ: "ಓ ಅಲ್ಲಾಹ್! ಇವರು ನಮ್ಮ ಮೇಲೆ ಜಯಗಳಿಸದಿರಲಿ.

ಓ ಅಲ್ಲಾಹ್! ನಿನ್ನ ಹೊರತು ನಮಗೆ ಯಾವ ಸಾಮರ್ಥ್ಯವೂ ಇಲ್ಲ."

ಕುರೈಶ್ ಸೇನೆಯ ಈ ತುಕಡಿಯು ಹತ್ತಿರ ಬರುತ್ತಲೇ ಉಮರ್(ರ) ಕೆಲವು ಸಹಾಬಿಗಳೊಂದಿಗೆ ಸೇರಿ ಶತ್ರು ಸೇನೆಯನ್ನು ಬಲವಾಗಿ ಎದುರಿಸುತ್ತಾರೆ. ಕೆಲವೇ ಕ್ಷಣಗಳಲ್ಲಿ ಅದು ಸಂಪೂರ್ಣವಾಗಿ ಸೋತು ಹೋಗುತ್ತದೆ.

## ಮನಕರಗಿಸುವ ದೃಶ್ಯಗಳು

ಯುದ್ಧವು ಕೊನೆಗೊಂಡಿದೆ. ಮುಸ್ಲಿಮರ ಗೆಲುವು ಅವರ ಪರಾಜಯದಲ್ಲಿ ಪರ್ಯವಸಾನಗೊಂಡಿದೆ. ಆದರೆ ಕುರೈಶ್ ಸೇನೆ ಕೂಡಾ ವಿಜಯಿಯಾಗಲಿಲ್ಲ. ಅದು ಸೋಲುಂಡವರಂತೆ ಮಕ್ಕಾದ ಕಡೆಗೆ ಪಲಾಯನ ಮಾಡಿದೆ. ಇತ್ತಂಡಗಳಲ್ಲಿ ಯಾರಿಗೂ

ಸೋಲಾಗಲೀ ಗೆಲುವಾಗಲೀ ಆಗಲಿಲ್ಲ. ಆದರೆ ಇಬ್ಬರೂ ಪರಸ್ಪರರಿಂದ ಬಹಳಷ್ಟು ಕಲಿತು ಕೊಂಡರು. ಈ ಯುದ್ಧವು ಎರಡೂ ಕಡೆಯವರ ಕಣ್ಣು ತೆರೆಸಿದೆ.

ಯುದ್ಧದ ದುಃಖದಾಯಕ ಸುದ್ದಿಗಳನ್ನು ಕೇಳಿ ಅನೇಕ ಗೌರವಾನ್ವಿತ ಮಹಿಳೆಯರು ಮದೀನಾದಿಂದ ರಣರಂಗದ ಕಡೆಗೆ ಧಾವಿಸಿ ಬರುತ್ತಿದ್ದಾರೆ. ಅವರಲ್ಲಿ ಪ್ರವಾದಿವರ್ಯರ(ಸ) ಪುತ್ರಿ ಫಾತಿಮಾ(ರ) ಕೂಡಾ ಸೇರಿದ್ದಾರೆ. ಅವರು ರಣರಂಗಕ್ಕೆ ತಲುಪುತ್ತಲೇ ತಮ್ಮ ಪ್ರೀತಿಯ ತಂದೆಯನ್ನು ರಕ್ತರಂಜಿತವಾಗಿ ಕಂಡು ನಿಟ್ಟುಸಿರು ಬಿಡುತ್ತಾ ಅವರನ್ನು ಆಲಂಗಿಸುತ್ತಾರೆ.

ಹ. ಅಲೀ(ರ) ಗುರಾಣಿಯಲ್ಲಿ ನೀರು ತುಂಬಿಸಿ ತರುತ್ತಾರೆ. ಫಾತಿಮಾ(ರ) ತಮ್ಮ ತಂದೆಯವರ ಗಾಯಗಳನ್ನು ತೊಳೆಯುತ್ತಾರೆ. ಆದರೆ ರಕ್ತ ಹರಿಯುವುದು ನಿಲ್ಲುವುದಿಲ್ಲ. ಆದ್ದರಿಂದ ಫಾತಿಮಾ ಖರ್ಜೂರದ ಚಾಪೆಯ ಒಂದು ತುಂಡನ್ನು ಹೊತ್ತಿಸಿ ಅದರ ಬೂದಿಯನ್ನು ಗಾಯದ ಮೇಲೆ ಸವರುತ್ತಾರೆ. ಈ ರೀತಿ ರಕ್ತ ಹರಿಯುವುದು ನಿಲ್ಲುತ್ತದೆ.

ರಣರಂಗದಲ್ಲಿ 70 ಮಂದಿ ಹುತಾತ್ಮರ ಮೃತ ದೇಹಗಳಿವೆ. ಪ್ರವಾದಿವರ್ಯರ(ಸ) ಪ್ರೀತಿಯ ಚಿಕ್ಕಪ್ಪ ಹಮ್‌ಝಾರ(ರ) ಪಾರ್ಥಿವ ಶರೀರದ ಕಿವಿ ಮೂಗುಗಳನ್ನು ಶತ್ರುಗಳು ಕತ್ತರಿಸಿ ಹಾಕಿರುವರು. ತಮ್ಮ ಚಿಕ್ಕಪ್ಪನ ಈ ಸ್ಥಿತಿಯನ್ನು ಕಂಡು ಪ್ರವಾದಿವರ್ಯರಿಗೆ(ಸ) ದುಃಖ ಉಮ್ಮಳಿಸಿ ಬರುತ್ತದೆ. ಸ್ವಲ್ಪ ಹೊತ್ತಿನ ನಂತರ ತಮ್ಮನ್ನು ಸಾವರಿಸಿಕೊಂಡು ಹೀಗೆ ಹೇಳುತ್ತಾರೆ: "ಚಿಕ್ಕಪ್ಪಾ! ಅಲ್ಲಾಹನು ನಿಮ್ಮ ಮೇಲೆ ಕರುಣೆ ತೋರಲಿ. ನೀವು ಬಂಧುತ್ವದ ಹಕ್ಕುಗಳನ್ನು ಚೆನ್ನಾಗಿ ಪಾಲಿಸಿದ್ದೀರಿ ಮತ್ತು ಅತ್ಯಧಿಕ ಪುಣ್ಯಗಳನ್ನು ಗಳಿಸಿರುವಿರಿ."

ಹಮ್‌ಝಾರ(ರ) ಮೃತ ದೇಹದ ಬಳಿಯಲ್ಲೇ ಅಬ್ದುಲ್ಲಾ ಬಿನ್ ಜಹಶ್ ಮತ್ತು ಮುಸ್‌ಅಬ್ ಬಿನ್ ಉಮೈರ್‌ರ(ರ) ಮೃತದೇಹಗಳೂ ವಿಕೃತಗೊಳಿಸಲ್ಪಟ್ಟ ಸ್ಥಿತಿಯಲ್ಲಿ ಬಿದ್ದುಕೊಂಡಿವೆ. ಈ ಆಪ್ತ ಸಂಗಾತಿಗಳ ಸ್ಥಿತಿಯನ್ನು ಕಂಡು ಪ್ರವಾದಿ ವರ್ಯರು(ಸ) ಅತ್ಯಂತ ದುಃಖಿತರಾಗಿದ್ದಾರೆ. ಮುಸ್‌ಅಬ್ ಬಿನ್ ಉಮೈರ್(ರ) ಮಕ್ಕಾದ ಅತ್ಯಂತ ಶ್ರೀಮಂತ ಮನೆತನದ ತರುಣರಾಗಿದ್ದರು. ಅವರು ಮದೀನಾಕ್ಕೆ ಇಸ್ಲಾಮ್ ಧರ್ಮದ ಪ್ರಚಾರಕ್ಕಾಗಿ ಕಳುಹಿಸಲ್ಪಟ್ಟವರಲ್ಲಿ ಮೊದಲಿಗರಾಗಿದ್ದರು. ಅವರು ಮುಸ್ಲಿಮ್ ಸೇನೆಯ ಧ್ವಜವಾಹಕ ರಾಗಿದ್ದರು. ಅವರ ಮೃತದೇಹವು ಎರಡೂ ಕೈಗಳು ಮತ್ತು ಭುಜ ಕಡಿಯಲ್ಪಟ್ಟು ಸೊಂಟವು ಎರಡು ಭಾಗಗಳಾಗಿ ಬಿಟ್ಟ ಸ್ಥಿತಿಯಲ್ಲಿದೆ.

ಅಮ್ಮಾರ ಬಿನ್ ಝಿಯಾದ್(ರ) ಗಾಯಗಳಿಂದ ಜರ್ಝರಿತರಾಗಿದ್ದಾರೆ. ಅವರು ತಮ್ಮ ಅಂತಿಮ ಉಸಿರುಗಳನ್ನು ಎಳೆಯುತ್ತಿದ್ದಾರೆ. ಆದರೂ ಬಹಳ ಧೈರ್ಯದಿಂದ ತಮ್ಮ ಕೆನ್ನೆಯನ್ನು ಪ್ರವಾದಿವರ್ಯರ(ಸ) ಪಾದಗಳ ಮೇಲೆ ಇಡುತ್ತಾರೆ. ಮುಹಮ್ಮದ್‌ರ(ಸ) ಚರಣಗಳಲ್ಲಿಯೇ ಅಂತಿಮ ಶ್ವಾಸವನ್ನು ಎಳೆಯುವುದನ್ನು ಅವರು ತಮ್ಮ ಸೌಭಾಗ್ಯವೆಂದು ಪರಿಗಣಿಸುತ್ತಾರೆ.

ಮುಹಮ್ಮದ್‌ರ(ಸ) ಎದುರು ನಿಂತು ಶತ್ರುಗಳ ಬಾಣಗಳನ್ನು ತಡೆಯುತ್ತಿದ್ದ ಕತಾದಃ ಬಿನ್ ನೂಮಾನ್‌ರ(ರ) ಒಂದು ಕಣ್ಣಿಗೆ ಬಾಣ ತಾಗಿದೆ. ಕಣ್ಣುಗೊಂಬೆಯು ಹೊರಬಂದು ನೇತಾಡುತ್ತಿದೆ. ಆದರೂ ಅವರು ಮುಹಮ್ಮದ್‌ರ(ಸ) ಮುಂದೆ ಗುರಾಣಿಯಂತೆ ನಿಂತು ಕೊಂಡಿದ್ದರು. ಅವರು ಒಂದು ಕೈಯಿಂದ ತಮ್ಮ ಕಣ್ಣುಗೊಂಬೆಯನ್ನು ಹಿಡಿದುಕೊಂಡಿರುವರು. ಆತಂಕದ ಕ್ಷಣಗಳು ಕಳೆದ ಬಳಿಕ ಪ್ರವಾದಿವರ್ಯರು(ಸ) ಅವರ ಕಣ್ಣುಗೊಂಬೆಯನ್ನು ಸರಿಪಡಿಸುತ್ತಾರೆ. ಅಲ್ಲಾಹನ ಅನುಗ್ರಹದಿಂದ ಕಣ್ಣು ಮತ್ತೆ ಯಥಾಸ್ಥಿತಿಗೆ ಮರಳಿತು.

## ಉಹುದ್‌ನಿಂದ ಹಮ್ರಾ ಉಲ್ ಅಸದ್ ತನಕ

ಮುಹಮ್ಮದ್(ಸ) ಈಗ ಮದೀನಾಕ್ಕೆ ಮರಳಿ ಹೋಗುವ ನಿರ್ಧಾರ ಮಾಡಿರುವರು. ಅವರು ತಮ್ಮ ಕುದುರೆಯನ್ನೇರಿದ್ದಾರೆ. ಮುಸ್ಲಿಮರು ಅವರ ಜತೆಗಿದ್ದಾರೆ. ಅನೇಕ ಗಾಯಾಳುಗಳೂ ಜತೆಗಿದ್ದಾರೆ. 14 ಮಂದಿ ಮಹಿಳೆಯರೂ ಜೊತೆಗಿದ್ದಾರೆ. ಈ ತಂಡವು ಉಹುದ್ ಕಣಿವೆಯನ್ನು ತಲುಪಿದಾಗ ಪ್ರವಾದಿ(ಸ) ಹೀಗೆ ಆದೇಶಿಸುತ್ತಾರೆ: "ಜನರೇ! ಇಲ್ಲಿ ಪಂಕ್ತಿಬದ್ಧರಾಗಿ ನಿಂತುಕೊಳ್ಳಿರಿ. ನಾನು ನನ್ನ ಪ್ರಭುವಿಗೆ ವಂದನೆಗಳನ್ನು ಸಲ್ಲಿಸಬೇಕಾಗಿದೆ."

ಪ್ರವಾದಿವರ್ಯರ(ಸ) ಹಿಂದೆ ಎಲ್ಲರೂ ಪಂಕ್ತಿಬದ್ಧವಾಗಿ ನಿಂತುಕೊಳ್ಳುತ್ತಾರೆ. ಮುಹಮ್ಮದ್(ಸ) ಈ ರೀತಿ ಪ್ರಾರ್ಥಿಸುತ್ತಾರೆ: "ಓ ನನ್ನ ಪ್ರಭೂ! ಸರ್ವಸ್ತುತಿಗಳೂ ನಿನಗೊಬ್ಬನಿಗೇ ಮೀಸಲು. ನೀನು ಯಾರಿಗೆ ವಿಶಾಲತೆಯನ್ನು ದಯಪಾಲಿಸುತ್ತಿಯೋ ಅವನಿಗಾರೂ ಸಂಕೀರ್ಣತೆಯನ್ನುಂಟುಮಾಡಲಾರ. ನೀನು ಯಾರಿಗೆ ಸಂಕೀರ್ಣತೆಯನ್ನು ಉಂಟು ಮಾಡುತ್ತೀಯೋ ಅವನಿಗಾರೂ ವಿಶಾಲತೆ ಯನ್ನು ನೀಡುವವನಿಲ್ಲ. ನೀನು ಯಾರನ್ನು ಪಥಭ್ರಷ್ಟಗೊಳಿಸಿದ್ದಿಯೋ ಅವನಿಗೆ ಯಾರೂ ಮಾರ್ಗದರ್ಶನ ಮಾಡುವ ವನಿಲ್ಲ. ನೀನು ಯಾರಿಗೆ ಮಾರ್ಗದರ್ಶನ ಮಾಡಿರುವಿಯೋ ಅವನನ್ನು ಯಾರೂ ಪಥಭ್ರಷ್ಟಗೊಳಿಸಲಾರ. ನೀನು ಯಾರನ್ನು ಅನುಗ್ರಹಗಳಿಂದ ವಂಚಿಸಿರುವಿಯೋ ಅವನಿಗೆ ಯಾರೂ ನೀಡುವವನಿಲ್ಲ. ನೀನು ಯಾರಿಗೆ ಐಶ್ವರ್ಯವನ್ನು ದಯಪಾಲಿಸಿರು ವಿಯೋ ಅವನಿಂದ ಅದನ್ನು ತಡೆಯುವವನು ಯಾರೂ ಇಲ್ಲ. ಯಾರನ್ನು ನೀನು ನಿನ್ನಿಂದ ದೂರ ಮಾಡಿರುವಿಯೋ ಅವನನ್ನು ನಿನಗೆ ನಿಕಟಗೊಳಿಸುವವನೂ ಯಾರೂ ಇಲ್ಲ. ಯಾರನ್ನು ನೀನು ನಿನಗೆ ನಿಕಟಗೊಳಿಸಿರುವಿಯೋ ಅವನನ್ನು ಯಾರೂ ನಿನ್ನಿಂದ ದೂರಗೊಳಿಸುವವನಿಲ್ಲ."

ಉಹುದ್ ಯುದ್ಧವು ಶನಿವಾರ ನಡೆದಿತ್ತು. ಸಂಜೆ ನಗರಕ್ಕೆ ಮರಳಿದ ಬಳಿಕ ನಗರದ ಸಂರಕ್ಷಣೆಗಾಗಿ ಬಲವಾದ ಪಹರೆಯ ವ್ಯವಸ್ಥೆ ಮಾಡಲಾಯಿತು. ಕುರೈಶ್ ಸೇನೆಯು ಎಲ್ಲಾದರೂ ಮರಳಿ ನಿಶಾಕ್ರಮಣ ಮಾಡುವ ಭಯವಿತ್ತು. ಮುಹಮ್ಮದ್‌ರ(ಸ) ನಿವಾಸದ ಹೊರಗೂ ಕಾವಲಿನ ವ್ಯವಸ್ಥೆ ಮಾಡಲಾಗಿತ್ತು.

ಆದಿತ್ಯವಾರ ಬೆಳಿಗ್ಗೆ ಮದೀನಾದಲ್ಲಿ ಬಿಲಾಲ್‌ರ(ರ) ಅದಾನ್ ಕರೆ ಮೊಳಗುತ್ತದೆ. ನಮಾಝ್‌ನ ಬಳಿಕ ಮುಸ್ಲಿಮರಲ್ಲಿ ಈ ರೀತಿ ಘೋಷಣೆ ಮಾಡಲು ಬಿಲಾಲ್‌ರಿಗೆ(ರ)

ಪ್ರವಾದಿವರ್ಯರು(ಸ) ಆದೇಶಿಸುತ್ತಾರೆ: "ಉಹುದ್ ಯುದ್ಧದಲ್ಲಿ ಭಾಗವಹಿಸಿದವರೆಲ್ಲರೂ ಶತ್ರುಗಳನ್ನು ಬೆನ್ನಟ್ಟಲು ಹೊರಡಬೇಕು."

ಪ್ರವಾದಿವರ್ಯರ(ಸ) ಆದೇಶ ದೊರೆಯುತ್ತಲೇ ಗಾಯಾಳುಗಳು ಮತ್ತು ಸೈನಿಕರು ಕೂಡಲೇ ಅಸ್ತ್ರಗಳನ್ನು ಹಿಡಿದು ಪ್ರವಾದಿವರ್ಯರ(ಸ) ಸನ್ನಿಧಾನದಲ್ಲಿ ಹಾಜರಾಗುತ್ತಾರೆ. ಸೇನೆಯು ಕುರೈಶ್ ಸೇನೆಯನ್ನು ಬೆನ್ನಟ್ಟಲು ಹೊರಡುತ್ತದೆ. ಸ್ವಯಂ ಪ್ರವಾದಿವರ್ಯರ(ಸ) ಮುಖದ ಮೇಲೂ ಗಾಯಗಳಿವೆ. ಎರಡು ಹಲ್ಲುಗಳು ಉದುರಿವೆ. ಕೆಳತುಟಿಯ ಒಳಬದಿಯು ಗಾಯಗೊಂಡಿದೆ. ಬಲ ಭುಜವು ಅಮ್ರ್ ಬಿನ್ ಕಮಿಯ್ಯನ ತಲವಾರಿನ ಏಟಿನಿಂದ ಭಾರವಾಗಿದೆ. ಎರಡೂ ಮೊಣಕಾಲುಗಳ ಚರ್ಮ ಜಾರಿದೆ. ಆದರೂ ಪ್ರವಾದಿ(ಸ) ಅತ್ಯಂತ ಶಾಂತಚಿತ್ತರಾಗಿ ಅಲ್ಲಾಹನ ಸ್ತುತಿ-ಸ್ತೋತ್ರಗೈಯುತ್ತಾ ಪ್ರಯಾಣ ಹೊರಟಿರುವರು.

ಮುಸ್ಲಿಮ್ ಸೇನೆಯು ಬಹಳ ವೇಗವಾಗಿ 'ಹಮ್ರಾ ಉಲ್ ಅಸದ್" ಎಂಬಲ್ಲಿಗೆ ತಲುಪುತ್ತದೆ. ಇದು ಮದೀನಾದಿಂದ ಮಕ್ಕಾದ ಹಾದಿಯಲ್ಲಿ ಎಂಟು ಮೈಲಿಗಳ ದೂರದಲ್ಲಿದೆ. ಇಲ್ಲಿ ಬಂದು ಸೇನೆಯು ಬಿಡಾರ ಹೂಡುತ್ತದೆ. ರಾತ್ರಿಯ ಹೊತ್ತು ಅಲ್ಲಲ್ಲಿ ಒಲೆ ಉರಿಸಲಾಗುತ್ತದೆ. ಇದರಿಂದ ಹೊರಗಿನಿಂದ ನೋಡುವವರಿಗೆ ಒಂದು ದೊಡ್ಡ ಸೇನೆಯು ಬೀಡು ಬಿಟ್ಟಿರುವಂತೆ ಕಾಣಿಸುತ್ತದೆ. ಇಲ್ಲಿ ಖುಝಾಅ ಗೋತ್ರದ ಸರದಾರ ಮುಅ್‌ಬದ್ ಖುಝಾಈ ಪ್ರವಾದಿವರ್ಯರನ್ನು(ಸ) ಭೇಟಿಯಾಗುತ್ತಾರೆ. ಅವರು ಇನ್ನೂ ಇಸ್ಲಾಮ್ ಧರ್ಮ ಸ್ವೀಕರಿಸದಿದ್ದರೂ ಅವರಲ್ಲಿ ಮುಸ್ಲಿಮರ ಬಗ್ಗೆ ಸಹಾನುಭೂತಿಯಿತ್ತು.

ಅತ್ತ ಕುರೈಶ್ ಸೇನೆಯು 'ರೂಮಾ' ಎಂಬಲ್ಲಿಗೆ ತಲುಪಿ ಬಿಡಾರ ಹೂಡುತ್ತದೆ. ಅಬೂಸುಫ್ಯಾನ್ ಪರಿಸ್ಥಿತಿಯ ಅವಲೋಕನ ನಡೆಸಿ ಅತ್ಯಂತ ಕಳವಳಗೊಂಡು ಈ ರೀತಿ ಯೋಚಿಸುತ್ತಾರೆ: "ಉಹುದ್‌ನ ವಿಜಯದ ಕಿರೀಟವನ್ನಂತೂ ನಾನು ನನ್ನ ಅವಸರದಲ್ಲಿ ಉಹುದ್ ಮೈದಾನದಲ್ಲೇ ಬಿಟ್ಟು ಬಂದಿರುವೆನು. ಮದೀನಾದ ಎಲ್ಲ ಶಕ್ತಿ-ಸಾಮರ್ಥ್ಯಗಳನ್ನೂ ನುಚ್ಚು ನೂರುಗೊಳಿಸುವ ಕಾರ್ಯವು ಅಪೂರ್ಣವಾಗಿದೆ. ಈಗೇನು ಮಾಡಲಿ! ಮತ್ತೆ ಮರಳಿ ಮುಸ್ಲಿಮರ ಮೇಲೆ ಧಾಳಿ ಮಾಡಬಾರದೇಕೆ? ಅವರ ಪೈಕಿ ಹೆಚ್ಚಿನವರು ಗಾಯ ಗೊಂಡಿರುವರು. ಅವರು ಇನ್ನು ಯುದ್ಧ ಮಾಡುವ ಸ್ಥಿತಿಯಲ್ಲಿರಲಾರರು."

ಅಬೂಸುಫ್‌ಯಾನ್ ಈ ರೀತಿ ಯೋಚಿಸುತ್ತಿರುವಾಗಲೇ ಮುಅ್‌ಬದ್ ಖುಝಾಈ ಅಲ್ಲಿಗೆ ತಲುಪುತ್ತಾರೆ. ಅಬೂಸುಫ್ಯಾನ್‌ನನ್ನು ಈ ರೀತಿ ಚಿಂತಾಮಗ್ನನಾಗಿ ಕಂಡು ಹೀಗೆ ಪ್ರಶ್ನಿಸುತ್ತಾರೆ: "ಅಬೂಸುಫ್ಯಾನ್! ಯಾಕಿಷ್ಟು ಚಿಂತಿತರಾಗಿದ್ದೀರಿ?"

ಅಬೂಸುಫ್ಯಾನ್: "ನಾವು ಉಹುದ್‌ನಲ್ಲಿ ನಮ್ಮ ವಿಜಯವನ್ನು ಪೂರ್ಣಗೊಳಿಸುವ ಮೊದಲೇ ಯಾಕೆ ಮರಳಿದೆವು ಎಂದು ಯೋಚಿಸುತ್ತಿದ್ದೇನೆ."

ಖುಝಾಈ: "ಇದನ್ನು ನೀವು ರಣರಂಗದಿಂದ ಹೊರಡುವುದಕ್ಕೆ ಮುಂಚೆಯೇ ಯೋಚಿಸಬೇಕಾಗಿತ್ತು."

ಅಬೂಸುಫ್ಯಾನ್: "ಮುಸ್ಲಿಮರನ್ನು ಪೂರ್ಣವಾಗಿ ಸದೆಬಡಿಯುವ ಮೊದಲೇ ರಣರಂಗವನ್ನು ತೊರೆದು ನಾವು ನಮ್ಮ ಶತ್ರುಗಳಿಗೆ ಚೇತರಿಸಿಕೊಳ್ಳುವ ಅವಕಾಶ ಒದಗಿಸಿ ಕೊಟ್ಟೆವು. ಈಗ ಮರಳಿ ಒಂದು ಬಲವಾದ ಧಾಳಿ ಮಾಡಿ ಈ ಸಮಸ್ಯೆಯನ್ನು ಶಾಶ್ವತವಾಗಿ ನೀಗಿಸಬಯಸುತ್ತೇನೆ."

ಖಿಝಾಈ (ಅತ್ಯಂತ ಗಂಭೀರ ಸ್ವರದಲ್ಲಿ): "ನಾನು ನಿನ್ನಲ್ಲಿ ಸತ್ಯ ಹೇಳಲೇ? ನಾನು ಇಷ್ಟೊಂದು ಭಯಾನಕ ಸೇನೆಯನ್ನು ಹಿಂದೆಂದೂ ಕಂಡಿಲ್ಲ. ಮುಹಮ್ಮದ್‌ರ(ಸ) ಸೇನೆಯು ಈಗ ಹಮ್ರಾ ಉಲ್ ಅಸದ್‌ನಲ್ಲಿದೆ. ನಾನು ಅಲ್ಲಿಂದಲೇ ಬರುತ್ತಿರುವೆನು. ನಾನು ಅವರನ್ನು ಕಣ್ಣಾರೆ ನೋಡಿದ್ದೇನೆ. ಅವರು ಅತ್ಯಂತ ಶಕ್ತಿಶಾಲಿಯಾಗಿ ನಿಮ್ಮನ್ನು ಬೆನ್ನಟ್ಟಿ ಬರುತ್ತಿರುವರು."

ಈ ಮಾತು ಕೇಳುತ್ತಲೇ ಅಬೂಸುಫ್ಯಾನ್ ಗಾಬರಿಗೊಳ್ಳುತ್ತಾರೆ. ಅವರ ಹುಮ್ಮಸ್ಸು-ಧೈರ್ಯ ಉಡುಗಿ ಹೋಗುತ್ತದೆ. ಕುರೈಶ್ ಸೇನೆಯು ಸದ್ದಿಲ್ಲದೆ ಮಕ್ಕಾದ ಕಡೆಗೆ ರವಾನೆಯಾಗುತ್ತದೆ.

ಮುಹಮ್ಮದ್(ಸ) ತಮ್ಮ ಸೇನೆಯ ಜೊತೆ ಸೋಮವಾರ ಮತ್ತು ಮಂಗಳವಾರ ಅಂದರೆ ಶವ್ವಾಲ್ 17 ಮತ್ತು 18ರಂದು ಹಮ್ರಾ ಉಲ್ ಅಸದ್‌ನಲ್ಲಿ ತಂಗಿದ ಬಳಿಕ ಶವ್ವಾಲ್ 19ರಂದು ಬುಧವಾರ ಮದೀನಾದ ಕಡೆಗೆ ಮರಳುತ್ತದೆ.

## ಧರ್ಮ ಪ್ರಚಾರಕರ ಕೊಲೆ

ಉಹುದ್ ಯುದ್ಧ ಮುಗಿದು ನಾಲ್ಕು ತಿಂಗಳು ಕಳೆದಿವೆ. ಹಿ. ಶ. 4ರ ಸಫರ್ ತಿಂಗಳು. ಪ್ರಖ್ಯಾತ ಬಿಲ್ಲುಗಾರ ಮತ್ತು ಯುದ್ಧಪಟು ಅಬೂಬರಾಅ್ ಮಸ್ಜಿದುನ್ನಬವಿಯಲ್ಲಿ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹಾಜರಾಗಿರುವನು. ಮುಹಮ್ಮದ್(ಸ) ಆತನಿಗೆ ಇಸ್ಲಾಮ್ ಧರ್ಮವನ್ನು ಬೋಧಿಸಿ ಅದರೆಡೆಗೆ ಕರೆ ನೀಡುತ್ತಾರೆ. ಆತನು ಆ ಕರೆಯನ್ನು ಸ್ವೀಕರಿಸುವುದೂ ಇಲ್ಲ ನಿರಾಕರಿಸುವುದೂ ಇಲ್ಲ. ಆತನು ಪ್ರವಾದಿವರ್ಯರಲ್ಲಿ ಹೀಗೆ ನಿವೇದಿಸಿಕೊಳ್ಳುತ್ತಾನೆ: "ಓ ಮುಹಮ್ಮದರೇ! ನಾನು ತಮ್ಮ ಈ ಇಸ್ಲಾಮೀ ಆಂದೋಲನವನ್ನು ಉತ್ತಮ ಮತ್ತು ಸಭ್ಯವೆಂದು ಪರಿಗಣಿಸುತ್ತೇನೆ. ನನ್ನ ಜನಾಂಗವು ನನಗೆ ವಿಧೇಯವಾಗಿದೆ. ತಾವು ನನ್ನ ಜೊತೆ ತಮ್ಮ ಕೆಲವು ಸಂಗಾತಿಗಳನ್ನು ಕಳುಹಿಸಿ ಕೊಡಿ. ಅವರು ನನ್ನ ಜನಾಂಗಕ್ಕೆ ಇಸ್ಲಾಮ್ ಧರ್ಮದ ಸಂದೇಶ ನೀಡಿದರೆ ಅವರು ಅದನ್ನು ಸ್ವೀಕರಿಸುವರೆಂಬ ನಂಬಿಕೆ ನನಗಿದೆ."

ಮುಹಮ್ಮದ್: "ನಜ್ದ್‌ನವರಿಂದ ನನ್ನ ಸಂಗಾತಿಗಳ ಪ್ರಾಣಕ್ಕೆ ಅಪಾಯವಿದೆಯೆಂದು ನಾನು ಭಾವಿಸುತ್ತೇನೆ."

ಅಬೂಬರಾಅ್: "ತಾವು ನಿಶ್ಚಿಂತರಾಗಿರಿ. ಇವರು ನನ್ನ ಆಶ್ರಯದಲ್ಲಿರುವರು."

ಪ್ರವಾದಿವರ್ಯರು(ಸ) ಎಪ್ಪತ್ತು ಮಂದಿ ಕುರ್‌ಆನ್ ಪ್ರವಚನಕಾರರನ್ನು ಮುಂದಿರ್

ಬಿನ್ ಉಮರ್‌ರ(ರ) ನಾಯಕತ್ವದಲ್ಲಿ ಅಬೂಬರಾಅ್‌ನ ಜೊತೆ ಕಳುಹಿಸಿ ಕೊಡುತ್ತಾರೆ. ಕುರ್‌ಆನ್ ಪ್ರವಚನಕಾರರ ಈ ತಂಡವು 'ಮಊನಾ' ಬಾವಿಯ ಬಳಿ ತಲುಪಿದಾಗ ಹರಾಮ್ ಬಿನ್ ಮಲ್‌ಹಾನ್‌ರಿಗೆ ಪ್ರವಾದಿವರ್ಯರ(ಸ) ಪತ್ರವನ್ನು ನೀಡಿ ಅಬುಲ್ ಬರಾಅ್‌ನ ಸೋದರ ಪುತ್ರ ಆಮಿರ್ ಬಿನ್ ಅಕೀಲ್‌ರ ಬಳಿ ಕಳುಹಿಸಲಾಗುತ್ತದೆ. ಆತ ಆ ಪತ್ರವನ್ನು ತೆರೆದು ಓದುವುದಕ್ಕೆ ಮುಂಚೆಯೇ ತನ್ನ ಓರ್ವ ಸೇವಕ ಜಬ್ಬಾರ್ ಬಿನ್ ಸಲ್‌ಮಿೂ ಎಂಬವನಿಗೆ ಅವರನ್ನು ಮುಗಿಸಿ ಬಿಡು ವಂತೆ ಸೂಚನೆ ನೀಡುತ್ತಾನೆ. ಆತ ಹರಾಮ್ ಬಿನ್ ಮಲ್‌ಹಾನ್‌ರ ಹಿಂದಿನಿಂದ ಭರ್ಜಿಯಿಂದ ಆಕ್ರಮಣ ಮಾಡುತ್ತಾನೆ. ಭರ್ಜಿಯು ಅವರ ದೇಹವನ್ನು ದಾಟಿ ಹೊಟ್ಟೆಯ ಮೂಲಕ ಹೊರ ಬಂದಾಗ ಅವರು ತಮ್ಮ ರಕ್ತವನ್ನು ಮುಖಕ್ಕೆ ಸವರುತ್ತಾ: "ಕಅಬಾದ ಒಡೆಯನ ಆಣೆ! ನಾನು ಯಶಸ್ವಿಯಾದೆ" ಎನ್ನುತ್ತಾರೆ ಮತ್ತು ಅಲ್ಲೇ ಕುಸಿದು ಬಿದ್ದು ಹುತಾತ್ಮರಾಗುತ್ತಾರೆ. ಅವರ ಈ ಮಾತು ಹಂತಕನ ಹೃದಯಕ್ಕೆ ಬಾಣದಂತೆ ನಾಟುತ್ತದೆ. ಅವನು ಸ್ವಲ್ಪ ಸಮಯದ ಬಳಿಕ ಮದೀನಾಕ್ಕೆ ತೆರಳಿ ಇಸ್ಲಾಮ್ ಧರ್ಮ ಸ್ವೀಕಾರ ಮಾಡುತ್ತಾನೆ.

ಆಮಿರ್ ಕೇವಲ ಇಷ್ಟಕ್ಕೇ ತೃಪ್ತನಾಗುವುದಿಲ್ಲ. ಆ ದುಷ್ಟನು ಆಮಿರ್ ಗೋತ್ರದವರನ್ನು ಮುಸ್ಲಿಮರ ವಿರುದ್ಧ ದಾಳಿ ಮಾಡಲು ಆಹ್ವಾನಿಸುತ್ತಾನೆ. ಆದರೆ ಅವರು "ನಿನ್ನ ಚಿಕ್ಕಪ್ಪ ಅವರಿಗೆ ಆಶ್ರಯ ನೀಡಿರುವರು. ಅದನ್ನು ನಾವು ಉಲ್ಲಂಘಿಸುವಂತಿಲ್ಲ" ಎನ್ನುತ್ತಾ ನಿರಾಕರಿಸುತ್ತಾರೆ. ಆಮಿರ್ ತನ್ನ ಗೋತ್ರದ ಬಗ್ಗೆ ನಿರಾಶನಾಗಿ ಉಸಯ್ಯ, ರಅಲ್ ಮತ್ತು ಝಕ್ವಾನ್ ಗೋತ್ರಗಳ ಬಳಿ ಹೋಗುತ್ತಾನೆ. ಅವರಿಗೆ ಸಮರಾರ್ಜಿತ ಸೊತ್ತಿನ ಆಶೆ ಹುಟ್ಟಿಸಿ ಅವರ ಅನೇಕ ಯೋಧರನ್ನು ಕರೆದುಕೊಂಡು ವೇಗವಾಗಿ ಮಊನಾ ಬಾವಿಯ ಬಳಿಗೆ ತಲುಪುತ್ತಾನೆ.

ಇಸ್ಲಾಮ್ ಧರ್ಮದ ಪ್ರಚಾರಕ್ಕೆಂದು ಹೊರಟಿದ್ದ 70 ಮಂದಿ ಕುರ್‌ಆನ್ ಪ್ರವಚನಕಾರರು. ಈಗ ಆ ಅಕ್ರಮಿಗಳಿಂದ ಸುತ್ತುವರಿಯಲ್ಪಟ್ಟಿದ್ದಾರೆ. ಅವರಿಗೆ ರಾಯಭಾರಿಗಳನ್ನೂ ಪ್ರತಿನಿಧಿಗಳನ್ನೂ ಧರ್ಮ ಪ್ರಚಾರಕರನ್ನೂ ಕೊಲ್ಲಲು ಸ್ವಲ್ಪವೂ ಅಳುಕಿರಲಿಲ್ಲ. ಮುಸ್ಲಿಮರು ಯುದ್ಧಕ್ಕೆ ಸಿದ್ಧರಾಗಿ ಬಂದಿರಲಿಲ್ಲ. ಅವರೊಂದಿಗೆ ಈ ರೀತಿಯ ವರ್ತನೆ ಆಗುವುದೆಂದು ಅವರು ಕನಸು ಮನಸ್ಸಿನಲ್ಲೂ ಎಣಿಸಿರಲಿಲ್ಲ. ಆದರೂ ಅವರು ಶತ್ರುಗಳನ್ನು ಎದುರಿಸಲು ಸಜ್ಜಾಗುತ್ತಾರೆ. ಶಸ್ತ್ರ ಮತ್ತು ಸಂಖ್ಯಾಬಲದ ಕೊರತೆ ಇದ್ದಾಗ್ಯೂ ವೀರಾವೇಶದಿಂದ ಶತ್ರುಗಳೊಂದಿಗೆ ಹೋರಾಡಿ ಮಡಿಯುತ್ತಾರೆ. ಆ ಪೈಕಿ ಕಅಬ್ ಬಿನ್ ಝೈದ್(ರ) ತೀವ್ರ ಗಾಯಗಳೊಂದಿಗೆ ಕುಸಿದು ಬೀಳುತ್ತಾರೆ. ಅವರೂ ತೀರಿಕೊಂಡಿರುವ ರೆಂದು ಶತ್ರುಗಳು ಅವರನ್ನು ಬಿಟ್ಟು ಬಿಡುತ್ತಾರೆ. ಆ ದುಷ್ಟರು ಹೊರಟು ಹೋದ ಬಳಿಕ ಕಅಬ್(ರ) ಹೇಗಾದರೂ ಮದೀನಾ ತಲುಪುತ್ತಾರೆ. ತಮ್ಮ ರಕ್ತಸಿಕ್ತ ಸ್ಥಿತಿಯಲ್ಲೇ ಪ್ರವಾದಿಯವರ(ಸ) ಸನ್ನಿಧಿಯಲ್ಲಿ ಹಾಜರಾಗಿ ಇಡೀ ವೃತ್ತಾಂತವನ್ನು ವಿವರಿಸುತ್ತಾರೆ. ಪ್ರವಾದಿ(ಸ) ತೀವ್ರ ದುಃಖಿತರಾಗುತ್ತಾರೆ. ಮದೀನಾದ ಮುಸ್ಲಿಮರಲ್ಲಿ ತಮ್ಮ 69 ಮಂದಿ ಕುರ್‌ಆನ್ ಪ್ರವಚನಕಾರರ ಕಗ್ಗೊಲೆಯಿಂದ ದುಃಖದ ಕಾರ್ಮೋಡ ಕವಿಯುತ್ತದೆ.

ಈ ಹುತಾತ್ಮರ ಪೈಕಿ ಆಮಿರ್ ಬಿನ್ ಫುಹೈರಾ ಕೂಡಾ ಸೇರಿದ್ದಾರೆ. ಅವರು ಮೊದಲು ಹ. ಅಬೂಬಕರ್‌ರ(ರ) ಗುಲಾಮರಾಗಿದ್ದು ಅವರಿಂದ ದಾಸ್ಯಮುಕ್ತಿ ಪಡೆದಿದ್ದರು. ಪ್ರವಾದಿ ಮುಹಮ್ಮದ್(ಸ) ಹಿಜ್ರತ್ ಮಾಡಿ ಮದೀನಾಕ್ಕೆ ಬಂದಾಗ ಆಮಿರ್ ಬಿನ್ ಫುಹೈರಾರ(ರ) ಜೊತೆಗಿದ್ದರು. ಆಮಿರ್ ಬಿನ್ ತುಫೈಲ್ ಎಂಬವನು ಅವರನ್ನು ವಧಿಸಿದಾಗ ಅವರ ದೇಹದಿಂದ ಒಂದು ಜ್ಯೋತಿಯು ಹೊರಬರುವುದನ್ನು ಮತ್ತು ಅದು ಅಂತರಿಕ್ಷದಲ್ಲಿ ಲೀನವಾದುದನ್ನು ಕಂಡು ಅತ್ಯಧಿಕ ಪ್ರಭಾವಿತರಾಗಿದ್ದಾನೆ. ಆತ ಕೆಲವು ಸಮಯದ ಬಳಿಕ ಮದೀನಾಕ್ಕೆ ಬಂದು ಇಸ್ಲಾಮ್ ಧರ್ಮ ಸ್ವೀಕರಿಸುತ್ತಾನೆ.

## ಝೈದ್ ಮತ್ತು ಝೈನಬ್(ರ)

ಅರಬ್ ಸಮಾಜದಲ್ಲಿ ದತ್ತುಪುತ್ರನನ್ನು ನೈಜ ಪುತ್ರನೆಂದೇ ಪರಿಗಣಿಸಲಾಗುತ್ತಿತ್ತು. ನೈಜ ಪುತ್ರನಿಗಿರುವ ಎಲ್ಲ ಹಕ್ಕುಗಳೂ ಅವನಿಗೂ ಪ್ರಾಪ್ತವಾಗುತ್ತಿತ್ತು. ಈ ಸಂಪ್ರದಾಯವು ಹಲವು ಸಮಸ್ಯೆಗಳಿಗೆ ಜನ್ಮ ನೀಡಿತ್ತು. ಈ ಸಂಪ್ರದಾಯವನ್ನು ಮುರಿಯಲು ಅಲ್ಲಾಹನು ತನ್ನ ಅಂತಿಮ ಪ್ರವಾದಿಯನ್ನೇ ಆರಿಸಿದನು. ಪ್ರವಾದಿವರ್ಯರ(ಸ) ದತ್ತುಪುತ್ರರಾದ ಝೈದ್ ಬಿನ್ ಹಾರಿಸ್ ತಮ್ಮ ಪತ್ನಿ ಝೈನಬ್‌ರಿಗೆ ತಲಾಕ್ ನೀಡಲಿರುವರೆಂಬ ಸೂಚನೆಯನ್ನು ಅಲ್ಲಾಹನು ಅವರಿಗೆ ನೀಡಿದ್ದನು. ದತ್ತುಪುತ್ರನನ್ನು ನೈಜ ಪುತ್ರನೆಂದು ಪರಿಗಣಿಸುವ ಅರಬ್ ಸಂಪ್ರದಾಯವನ್ನು ಮುರಿಯಲಿಕ್ಕಾಗಿ ಝೈದ್‌ರ ವಿಚ್ಛೇದಿತ ಪತ್ನಿಯನ್ನು ಪ್ರವಾದಿ(ಸ) ಮದುವೆಯಾಗಬೇಕೆಂದು ಅವರಿಗೆ ದೇವಾಜ್ಞೆಯಾಗುತ್ತದೆ. ತನ್ಮೂಲಕ ದತ್ತುಪುತ್ರನು ನೈಜ ಪುತ್ರನಲ್ಲ, ಆತನ ವಿಚ್ಛೇದಿತ ಪತ್ನಿಯನ್ನು ವಿವಾಹವಾಗುವುದು ಧರ್ಮ ಸಮ್ಮತವೆಂಬ ನಿಯಮವು ಪ್ರಳಯ ಕಾಲದ ವರೆಗೆ ಶಾಶ್ವತವಾಗಿ ಜಾರಿಗೊಳ್ಳಬೇಕೆಂಬುದೇ ಉದ್ದೇಶವಾಗಿತ್ತು.

ಅರೇಬಿಯಾದ ಪರಿಸ್ಥಿತಿಯು ಪ್ರವಾದಿವರ್ಯರ(ಸ) ಮಟ್ಟಿಗೆ ಬಹಳ ಚಿಂತಾಜನಕವೂ ಕಳವಳಕಾರಿಯೂ ಆಗಿತ್ತು. ಸೀಮಿತ ಸಂಖ್ಯೆಯ ಮುಸ್ಲಿಮರ ಹೊರತು ಇಡೀ ಅರೇಬಿಯಾ ಪ್ರವಾದಿವರ್ಯರ(ಸ) ಬಗ್ಗೆ ದ್ವೇಷ ಭಾವನೆಯನ್ನಿರಿಸಿಕೊಂಡಿತ್ತು. ಸ್ವತಃ ಮುಸ್ಲಿಮ್ ಸಮಾಜದಲ್ಲಿ ನುಸುಳಿಕೊಂಡಿದ್ದ ಕಪಟವಿಶ್ವಾಸಿಗಳು ತರತರದ ಕ್ಷೋಭೆಗಳನ್ನು ಸೃಷ್ಟಿಸುತ್ತಿದ್ದರು. ಆದ್ದರಿಂದ ಪ್ರವಾದಿ(ಸ) ಈ ಹೊಸ ಪರೀಕ್ಷೆಗೆ ತಮ್ಮನ್ನು ಗುರಿಪಡಿಸಲು ಸಿದ್ಧರಿರಲಿಲ್ಲ. ಇದರಿಂದಾಗಿ ತರತರದ ಅಣಕ-ವ್ಯಂಗ್ಯ-ಲೇವಡಿಗಳ ಸುರಿಮಳೆಯಾಗುವುದು ಖಚಿತವಾಗಿತ್ತು.

ತನ್ಮಧ್ಯೆ ಹಿ. ಶ. 5ರ ಸಫರ್ ತಿಂಗಳಲ್ಲಿ ಒಂದು ಅತ್ಯಧಿಕ ಸೆಖೆಯ ಸಂಜೆ ಝೈದ್ ಬಿನ್ ಹಾರಿಸ್(ರ) ಪ್ರವಾದಿವರ್ಯರ(ಸ) ಬಳಿಗೆ ಬಂದು ಈ ರೀತಿ ಅರಿಕೆ ಮಾಡಿಕೊಳ್ಳುತ್ತಾರೆ: "ಪ್ರವಾದಿವರ್ಯರೇ! ಝೈನಬ್‌ರಿಗೆ ತನ್ನ ಉನ್ನತ ವಂಶಪರಂಪರೆಯ ಬಗ್ಗೆ ಗರ್ವವಿದೆ. ಆದ್ದರಿಂದ ಆಕೆ ನನ್ನನ್ನು ತನಗೆ ಸಮಾನಳೆಂದು ಪರಿಗಣಿಸುವುದಿಲ್ಲ. ಸದಾ ತನ್ನ ದೊಡ್ಡಸ್ಥಿಕೆಯ ಕುರಿತು ಹೇಳುತ್ತಿರುತ್ತಾಳೆ. ಈ ಮುಂಚೆಯೂ ಅನೇಕ ಸಲ ನಾನು ಈ

ಸ್ಥಿತಿಯನ್ನು ತಮ್ಮ ಮುಂದೆ ವಿವರಿಸಿರುವೆನು. ಇನ್ನು ಆಕೆಯೊಂದಿಗೆ ಸಹಬಾಳ್ವೆ ನಡೆಸುವುದು ನನ್ನಿಂದ ಸಾಧ್ಯವಿಲ್ಲ."[1]

ಇದಕ್ಕೆ ಉತ್ತರವಾಗಿ ಪ್ರವಾದಿ(ಸ) "ಝೈದ್! ಅಲ್ಲಾಹನ ಬಗ್ಗೆ ಭಯಪಡು ಮತ್ತು ಝೈನಬ್‌ರಿಗೆ ತಲಾಕ್ ನೀಡುವಲ್ಲಿ ದುಡುಕಬೇಡ" ಎಂದು ಹೇಳಿದರು.

ಆದರೆ ಅಲ್ಲಾಹನು ಒಂದು ನಿರ್ಧಾರವನ್ನು ಮೊದಲೇ ಮಾಡಿದ್ದನು. ಆದ್ದರಿಂದ ಅಲ್ಲಾಹನು ತನ್ನ ದಿವ್ಯವಾಣಿಯನ್ನು ಪ್ರವಾದಿವರ್ಯರ(ಸ) ಮೇಲೆ ಅವತೀರ್ಣ ಗೊಳಿಸುತ್ತಾನೆ: "ಪೈಗಂಬರರೇ, ಅಲ್ಲಾಹನೂ ನೀವೂ ಯಾರಿಗೆ ಉಪಕಾರ ಮಾಡಿದ್ದಿರೋ ಆ ವ್ಯಕ್ತಿಯೊಡನೆ ನೀವು, 'ನಿನ್ನ ಪತ್ನಿಯನ್ನು ಬಿಡಬೇಡ ಮತ್ತು ಅಲ್ಲಾಹನನ್ನು ಭಯಪಡು' ಎಂದು ಹೇಳುತ್ತಿದ್ದ ಸಂದರ್ಭವನ್ನು ಸ್ಮರಿಸಿರಿ. ಆ ವೇಳೆ ಅಲ್ಲಾಹ್ ಬಹಿರಂಗಗೊಳಿಸಲು ಇಚ್ಛಿಸಿದ್ದ ವಿಷಯವನ್ನು ನೀವು ನಿಮ್ಮ ಹೃದಯದೊಳಗೆ ಬಚ್ಚಿ ಟ್ಟಿದ್ದಿರಿ. ನೀವು ಜನರಿಗೆ ಹೆದರುತ್ತಿದ್ದಿರಿ. ನಿಜವಾಗಿ ಭಯಪಡಲು ಅಲ್ಲಾಹ್ ಅಧಿಕ ಹಕ್ಕುದಾರನಾಗಿದ್ದಾನೆ. ತರುವಾಯ ಝೈದ್ ಅವಳಿಂದ ತನ್ನ ಅಪೇಕ್ಷೆಯನ್ನು ಪೂರ್ತಿ ಗೊಳಿಸಿಕೊಂಡ ಬಳಿಕ ನಾವು ಅವಳ ವಿವಾಹವನ್ನು ನಿಮ್ಮೊಂದಿಗೆ ಮಾಡಿದೆವು. (ಇದು) ದತ್ತುಪುತ್ರರು ತಮ್ಮ ಪತ್ನಿಯರೊಂದಿಗೆ ತಮ್ಮ ಅಪೇಕ್ಷೆ ಪೂರ್ತಿಗೊಳಿಸಿಕೊಂಡ ಬಳಿಕ ಅವರ (ವಿಚ್ಛೇದಿತೆಯರ) ವಿಷಯದಲ್ಲಿ ಸತ್ಯವಿಶ್ವಾಸಿಗಳಿಗೆ ಯಾವುದೇ ಅಡಚಣೆ ಇಲ್ಲದಂತಾಗಲಿಕ್ಕಾಗಿ (ಆಗಿದೆ). ಅಲ್ಲಾಹನ ಆಜ್ಞೆಯಂತು ಜಾರಿಗೆ ಬಂದೇ ತೀರಬೇಕಿತ್ತು. ಅಲ್ಲಾಹನು ಪ್ರವಾದಿಗಾಗಿ ನಿಶ್ಚಯಿಸಿ ಬಿಟ್ಟಿರುವಂತಹ ಕಾರ್ಯದಲ್ಲಿ ಪ್ರವಾದಿಗೆ ಯಾವ ಅಡಚಣೆಯೂ ಇಲ್ಲ. ಅಲ್ಲಾಹನ ಇದೇ ನಿಯಮವು ಹಿಂದೆ ಗತಿಸಿ ಹೋಗಿದ್ದ ಪ್ರವಾದಿಗಳ ವಿಷಯದಲ್ಲೂ ಜಾರಿಯಲ್ಲಿತ್ತು. ಅಲ್ಲಾಹನ ಆಜ್ಞೆಯು ಒಂದು ಖಚಿತ ವಾಗಿ ನಿರ್ಧರಿಸಿದ ತೀರ್ಪಾಗಿರುತ್ತದೆ. ಅಲ್ಲಾಹನ ಸಂದೇಶಗಳನ್ನು ತಲುಪಿಸುವ ಅವನನ್ನೇ ಭಯಪಡುವ ಮತ್ತು ಒಬ್ಬ ದೇವನ ಹೊರತು ಯಾರನ್ನೂ ಭಯಪಡದವರಿಗೆ (ಇರುವ, ಅಲ್ಲಾಹನ ನಿಯಮವಿದು) ಮತ್ತು ವಿಚಾರಣೆ ನಡೆಸಲು ಅಲ್ಲಾಹನೇ ಸಾಕು." **(ಪವಿತ್ರ ಕುರ್‌ಆನ್, 33: 37-39)**

ಹ. ಝೈದ್(ರ) ತಮ್ಮ ಪತ್ನಿಯಾದ ಝೈನಬ್‌ರಿಗೆ ತಲಾಕ್ ನೀಡಿರುವರು. ಇದ್ದತ್[2]ನ ಕಾಲಾವಧಿಯು ಕಳೆದು ಹೋಗಿದೆ. ಆದ್ದರಿಂದ ಪ್ರವಾದಿ ಮುಹಮ್ಮದ್‌ರು(ಸ)

1 ಪ್ರವಾದಿವರ್ಯರು(ಸ) ಕುರೈಶರಲ್ಲಿರುವ ಜನಾಂಗ ಮೇಲ್ಮೆಯನ್ನು ಕೊನೆಗಾಣಿಸಿ ಇಸ್ಲಾಮಿನ ಸಮಾನತೆಯ ಕಲ್ಪನೆಯನ್ನು ಅವರಲ್ಲಿ ಉದ್ದೀಪನಗೊಳಿಸುವ ಸಲುವಾಗಿ ಅನೇಕ ಉಪಾಯಗಳನ್ನು ಹೂಡಿದ್ದರು. ಆ ಪೈಕಿ ಕುರೈಶ್ ಮಹಿಳೆಯರನ್ನು ಇತರ ಗೋತ್ರಗಳೊಂದಿಗೆ ಅಗೂಅರಬ್ ಸಮಾಜದಲ್ಲಿ ನಿಕೃಷ್ಟರೆಂದು ಪರಿಗಣಿಸಲ್ಪಡುತ್ತಿದ್ದಂತಹ ಜನರೊಂದಿಗೆ ವಿವಾಹ ಬಂಧನದಲ್ಲಿ ಏರ್ಪಡಿಸಿದ್ದರು. ಆ ಪೈಕಿ ತಮ್ಮ ಸೋದರತ್ತೆಯ ಮಗಳಾದ ಝೈನಬ್‌ರ ವಿವಾಹವನ್ನು ತಮ್ಮ ಗುಲಾಮ ಮತ್ತು ದತ್ತು ಪುತ್ರನಾದ ಝೈದ್‌ರೊಂದಿಗೆ ಮಾಡಿರುವುದೂ ಒಂದಾಗಿತ್ತು.

2. ವಿವಾಹ ವಿಚ್ಛೇದಿತ ಮಹಿಳೆಯ ದೀಕ್ಷಾ ಕಾಲ.

ಅಲ್ಲಾಹನ ಆಜ್ಞೆಯ ಪ್ರಕಾರ ಅವರನ್ನು ವಿವಾಹ ಮಾಡಿಕೊಂಡಿರು ವರು. ಇಂದು ವಲೀಮ (ಮದುವೆಯ ಔತಣ ಕೂಟ). ಅತಿಥಿಗಳೆಲ್ಲರಿಗೂ ರೊಟ್ಟಿ ಮತ್ತು ಮಾಂಸವನ್ನು ಸಿದ್ಧಗೊಳಿಸಲಾಗಿದೆ. ಜನರು ಔತಣ ಮುಗಿಸಿ ಹೊರಟು ಹೋಗಿ ರುವರು. ಆದರೆ ಒಂದೆರಡು ಮಂದಿ ಪ್ರವಾದಿ ವರ್ಯರ(ಸ) ಕೋಣೆಯಲ್ಲೇ ಕುಳಿತು ಹರಟೆ ಹೊಡೆಯುತ್ತಿದ್ದಾರೆ. ಇದು ಅರಬ್ ಸಮಾಜದ ಒಂದು ಕೆಟ್ಟ ಸಂಪ್ರದಾಯ. ಅವರು ಎಲ್ಲಾದರೂ ಔತಣ ಕೂಟಕ್ಕೆ ಹೋದರೆ ಊಟವಾದ ಬಳಿಕ ಅಲ್ಲೇ ಕುಳಿತು ಹರಟೆ ಹೊಡೆಯಲಾರಂಭಿಸುತ್ತಾರೆ. ಅವರು ಈಗಲೂ ಮಾತುಕತೆಯಲ್ಲಿ ನಿರತ ರಾಗಿದ್ದರು. ಮುಹಮ್ಮದ್(ಸ) ಬೇಸರಗೊಂಡು ಅಲ್ಲಿಂದ ಎದ್ದು ಬಿಡುತ್ತಾರೆ. ತಮ್ಮ ಪತ್ನಿಯರ ಕೋಣೆಗಳಿಗೆ ಹೋಗಿ ಹಿಂದಿರುಗುತ್ತಾರೆ. ಆ ಜನರು ಈಗಲೂ ತಮ್ಮ ಹರಟೆಯಲ್ಲೇ ನಿರತರಾಗಿರುವುದನ್ನು ಕಂಡು ಪ್ರವಾದಿವರ್ಯರಿಗೆ(ಸ) ಬಹಳ ಬೇಸರ ವಾಗುತ್ತದೆ. ಪ್ರವಾದಿ(ಸ) ಮತ್ತೆ ಮರಳುತ್ತಾರೆ. ಈ ಸಲ ಅವರು ಹ. ಆಯಿಶಾರ(ರ) ಕೋಣೆಯಲ್ಲಿ ಹೋಗಿ ಅರ್ಧ ರಾತ್ರಿಯ ತನಕ ಅಲ್ಲಿರುತ್ತಾರೆ. ಆ ಜನರು ಹೊರಟು ಹೋದಾಗ ಪ್ರವಾದಿವರ್ಯರ(ಸ) ಸೇವಕ ಅನಸ್ ಬಿನ್ ಮಾಲಿಕ್(ರ) ಬಂದು ಪ್ರವಾದಿವರ್ಯರಿಗೆ(ಸ) ಸುದ್ದಿ ಮುಟ್ಟಿಸುತ್ತಾರೆ. ಆ ಬಳಿಕ ಪ್ರವಾದಿ(ಸ) ಝೈನಬ್‌ರ(ರ) ಕೋಣೆಗೆ ಹೋಗುತ್ತಾರೆ.

ಇತರರಿಗೆ ಕಿರುಕುಳ ಕೊಡುವಂತಹ ಅತಿಥಿಗಳ ಈ ವರ್ತನೆಯು ಅಲ್ಲಾಹನಿಗೆ ಇಷ್ಟವಾಗಲಿಲ್ಲ. ಮುಹಮ್ಮದ್(ಸ) ತಮ್ಮ ಸೌಜನ್ಯ ಪೂರ್ಣ ನಡವಳಿಕೆ ಯಿಂದಾಗಿ ಅದನ್ನು ಸಹಿಸಿಕೊಂಡಿದ್ದರು. ಆದರೆ ಅಲ್ಲಾಹನು ಆ ಬಗ್ಗೆ ದಿವ್ಯವಾಣಿ ಅವತೀರ್ಣ ಗೊಳಿಸುತ್ತಾನೆ: "ಸತ್ಯವಿಶ್ವಾಸಿಗಳೇ, ಪ್ರವಾದಿಯ ಮನೆಗಳೊಳಗೆ ಅನುಮತಿಯಿಲ್ಲದೆ ಪ್ರವೇಶಿಸಬೇಡಿರಿ. ಊಟದ ಸಮಯವನ್ನು ಕಾದುಕೊಂಡಿರಲೂ ಬೇಡಿರಿ. ನಿಮ್ಮನ್ನು ಊಟಕ್ಕೆ ಕರೆದರೆ ಖಂಡಿತ ಹೋಗಿರಿ. ಆದರೆ ಊಟ ಮಾಡಿಯಾದೊಡನೆ ಚದುರಿ ಬಿಡಿರಿ, ಮಾತಾಡುತ್ತ ಕುಳಿತಿರಬೇಡಿರಿ. ನಿಮ್ಮ ಈ ವರ್ತನೆಗಳು ಪ್ರವಾದಿಗೆ ತೊಂದರೆ ಕೊಡುತ್ತಿವೆ. ಆದರೆ ಅವರು ಸಂಕೋಚದಿಂದ ಏನೂ ಹೇಳುವುದಿಲ್ಲ ಮತ್ತು ಅಲ್ಲಾಹ್ ಸತ್ಯಸಂಗತಿಯನ್ನು ಹೇಳಲು ನಾಚುವುದಿಲ್ಲ."

(ಪವಿತ್ರ ಕುರ್‌ಆನ್: **33: 53**)

ಒಂದು ದಿನ ಬೆಳಿಗ್ಗೆ ಪ್ರವಾದಿವರ್ಯರ(ಸ) ಬಳಿಗೆ ಓರ್ವ ಯಹೂದಿ ಬರುತ್ತಾರೆ. ಆಗ ಅಲ್ಲಿ ಹ. ಉಮರ್(ರ) ಮತ್ತು ಕೆಲವು ಮಂದಿ ಸಹಾಬಿಗಳು ಇದ್ದರು. ಮುಹಮ್ಮದ್‌ರು(ಸ) ಆ ಯಹೂದಿಯಿಂದ ಸ್ವಲ್ಪ ಸಾಲ ಪಡೆದಿದ್ದರು. ಪ್ರವಾದಿವರ್ಯರು(ಸ) ಸಂಕಷ್ಟದಲ್ಲಿರು ವವರು ಮತ್ತು ಬಡವರ ನೆರವಿಗಾಗಿ ಸಾಮಾನ್ಯವಾಗಿ ಅಂತಹ ಸಾಲ ಪಡೆಯುತ್ತಿದ್ದರು. ಯಾವ ಅಪೇಕ್ಷಿತನೂ ಪ್ರವಾದಿ ವರ್ಯರ(ಸ) ಬಳಿಯಿಂದ ಬರಿಕೈಯಲ್ಲಿ ಮರಳುತ್ತಿರಲಿಲ್ಲ. ಆ ಯಹೂದಿಯ ಸಾಲದ ಮರುಪಾವತಿಗೆ ಇನ್ನೂ ಮೂರು ದಿನಗಳ ಅವಧಿ ಉಳಿದಿತ್ತು. ಆದರೆ ಆ ಧನ ಮೋಹಿಯು ಈಗಲೇ ಕಳವಳಗೊಂಡಿದ್ದ. ಆತ ಬಹಳ

ಒರಟಾಗಿ ಪ್ರವಾದಿಯವರಿಂದ(ಸ) ಸಾಲದ ಹಣ ಕೇಳುತ್ತಿದ್ದ. ಪ್ರವಾದಿವರ್ಯರ(ಸ) ಸೌಜನ್ಯ ಮತ್ತು ಕ್ಷಮಾಶೀಲತೆಯನ್ನು ಕಂಡು ಅವನು ಇನ್ನಷ್ಟು ಒರಟಾಗಿ "ನನಗೆ ಅಬ್ದುಲ್ ಮುತ್ತಲಿಬ್‌ರ ಸಂತತಿಯ ಬಗ್ಗೆ ಚೆನ್ನಾಗಿ ತಿಳಿದಿದೆ. ಅವರು ಸಾಲ ಮರುಪಾವತಿ ಮಾಡುವವರಲ್ಲ" ಎನ್ನುತ್ತಾರೆ. ಇದನ್ನು ಕೇಳಿ ಹ.ಉಮರ್(ರ) ಕೆರಳುತ್ತಾರೆ. ಅವರು ಆ ಯಹೂದಿಯನ್ನು ಗದರಿಸುತ್ತಾ ಹೀಗೆ ಹೇಳಿದರು: "ಇನ್ನೊಮ್ಮೆ ಇಂತಹ ಮಾತು ಹೇಳಿದರೆ ಜಾಗ್ರತೆ!"

ಮುಹಮ್ಮದ್(ಸ) ಮುಗುಳ್ನಗುತ್ತಾ: "ಉಮರ್! ನೀವು ನನ್ನೊಂದಿಗೆ ಮತ್ತು ಆ ವ್ಯಕ್ತಿಯೊಂದಿಗೆ ಇನ್ನಷ್ಟು ಉತ್ತಮವಾಗಿ ವ್ಯವಹರಿಸಬಹುದಾಗಿತ್ತು. ನನ್ನಲ್ಲಿ ಸಾಲ ಮರುಪಾವತಿ ಚೆನ್ನಾಗಿ ಮಾಡಲು ಮತ್ತು ಆತನಲ್ಲಿ ಸಾಲ ಮರುಪಾವತಿಗಾಗಿ ಉತ್ತಮ ರೀತಿಯಲ್ಲಿ ಕೇಳಲು ಹೇಳಬೇಕಾಗಿತ್ತು. ಸಾಲ ಮರುಪಾವತಿಗೆ ಇನ್ನೂ ಮೂರು ದಿನಗಳ ಅವಧಿ ಬಾಕಿಯಿದೆ. ಆದರೂ ಅವರ ಸಾಲವನ್ನು ಈಗಲೇ ತೀರಿಸಿ ಬಿಡಿ. ನೀವು ಅವರನ್ನು ಜರೆದುದಕ್ಕಾಗಿ ಅವರಿಗೆ 20 ಸಾಅ್* ಹೆಚ್ಚು ನೀಡಿರಿ."

ಪ್ರವಾದಿವರ್ಯರ(ಸ) ಈ ಸೌಜನ್ಯ ಮತ್ತು ಕ್ಷಮಾಶೀಲತೆಯೇ ಆ ಯಹೂದಿಯ ಇಸ್ಲಾಮ್ ಸ್ವೀಕಾರಕ್ಕೆ ಹೇತುವಾಯಿತು. ಆತ ಪ್ರವಾದಿವರ್ಯರ(ಸ) ಚಾರಿತ್ರ್ಯದ ಪರೀಕ್ಷೆ ನಡೆಸುವ ಸಲುವಾಗಿಯೇ ಆ ರೀತಿ ಒರಟಾಗಿ ವರ್ತಿಸಿದ್ದ.

## ಮುಸ್ತಲಿಕ್ ಗೋತ್ರದ ಧರ್ಮ ಸ್ವೀಕಾರ

ಮದೀನಾದಿಂದ 96 ಮೈಲಿ ದೂರದಲ್ಲಿ 'ಮರ್ಯಸೀಅ್' ಎಂಬ ಚಿಲುಮೆಯ ಬಳಿ ಖುಝಾಅ ಗೋತ್ರದ ಶಾಖೆಯಾದ ಅಲ್ ಮುಸ್ತಲಿಕ್‌ನ ಸರದಾರ ಹಾರಿಸ್ ಬಿನ್ ಅಬೀ ಝುರಾರ್ ಅತ್ಯಂತ ಭಾವಾವೇಶದಿಂದ ಒಂದು ಗುಂಪನ್ನು ಉದ್ದೇಶಿಸಿ ಹೀಗೆ ಹೇಳುತ್ತಿದ್ದಾನೆ:

"ದಿನದಿಂದ ದಿನಕ್ಕೆ ಬೆಳೆಯುತ್ತಿರುವ ಮುಹಮ್ಮದ್‌ರ(ಸ) ಶಕ್ತಿಯನ್ನು ಈಗಿಂದೀಗಲೇ ಮುರಿಯದಿದ್ದರೆ ನಾವು ಇಲ್ಲಿ ಜೀವಿಸುವುದು ಕಷ್ಟಸಾಧ್ಯವಾಗುವಂತಹ ದಿನಗಳು ಬರುವುದು ಖಚಿತ. ಮಕ್ಕಾದ ಕುರೈಶರು ಕೂಡಾ ಅವರನ್ನು ಉಹುದ್ ಯುದ್ಧದಲ್ಲಿ ಪೂರ್ಣವಾಗಿ ಸೋಲಿಸಲು ಶಕ್ತರಾಗಲಿಲ್ಲ. ಆದ್ದರಿಂದ ಅವರ ಶಕ್ತಿಯು ದಿನ ಕಳೆದಂತೆ ವರ್ಧಿಸುತ್ತಿದೆ. ಈ ಅಪಾಯವನ್ನು ಮನಗಂಡೇ ನಾನು ನಿಮ್ಮೆಲ್ಲರನ್ನು ಇಲ್ಲಿ ಸೇರಿಸಿರುವೆನು. ನಾವು ಕೂಡಾ ಮುಸ್ಲಿಮರನ್ನು ಕಡೆಗಣಿಸಿದರೆ ನಾವು ಅವರ ಗುಲಾಮರಾಗಿ ಮಾರ್ಪಡುವುದು ಖಂಡಿತ. ಆದ್ದರಿಂದ ಬನ್ನಿ ಮುಸ್ಲಿಮರನ್ನು ಶಾಶ್ವತವಾಗಿ ಮುಗಿಸಿ ಬಿಡುವ ಉಪಾಯ ಹೂಡೋಣ."

"ಮುಂದುವರಿಯಿರಿ ನಾವು ನಿಮ್ಮ ಜೊತೆಗಿದ್ದೇವೆ" ಎಂದು ಹಲವರು ಏಕ ಸ್ವರದಲ್ಲಿ ಹೇಳುತ್ತಾರೆ.

ಹಾರಿಸ್ ತನ್ನ ಮಾತನ್ನು ಮುಂದುವರಿಸುತ್ತಾ, "ನೀವೆಲ್ಲರೂ ನಿಮ್ಮ ನಿಮ್ಮ ಮನೆತನಗಳ ಸರದಾರರಾಗಿರುವಿರಿ. ಪರಾಕ್ರಮಿಗಳಾದ ನೀವು ಮುಸ್ಲಿಮರಾಗುವುದನ್ನು

* 234 ತೊಲೆ ಬಂಗಾರದ ಒಂದು ಅಳತೆ ಮಾನ

ಅಥವಾ ದಾಸ್ಯದ ಜೀವನವನ್ನು ಇಷ್ಟ ಪಡುತ್ತೀರಾ?"

"ಎಷ್ಟು ಮಾತ್ರಕ್ಕೂ ಇಲ್ಲ" ಎನ್ನುತ್ತಾ ಹಲವರು ಆವೇಶದೊಂದಿಗೆ ಎದ್ದು ನಿಲ್ಲುತ್ತಾರೆ. "ನಾವು ನಮ್ಮ ಶೂರ-ವೀರ ಸಂಗಾತಿಗಳೊಂದಿಗೆ ಹತ್ತು ದಿನಗಳೊಳಗೆ 'ಮರ್ಯಸೀಅ್' ತಲಪುತ್ತೇವೆ. ನೀವು ಚಿಂತಿಸಬೇಡಿ. ನಾವು ನಿಮ್ಮ ಧ್ವಜದಡಿ ಸೇರಿ ಉಕ್ಕಿನ ಗೋಡೆಯಂತೆ ಮುಸ್ಲಿಮರ ವಿರುದ್ಧ ಹೋರಾಡುವೆವು."

"ಶಹಭಾಸ್! ನಾನು ನಿಮ್ಮಿಂದ ಇದನ್ನೇ ನಿರೀಕ್ಷಿಸುತ್ತಿದ್ದೆ" ಹಾರಿಸ್ ಹರ್ಷ ಚಿತ್ತನಾಗಿ ನುಡಿಯುತ್ತಾನೆ.

ಹಾರಿಸ್‌ನ ಈ ಯುದ್ಧ ಸನ್ನಾಹದ ಸುದ್ದಿ ಪ್ರವಾದಿವರ್ಯರಿಗೂ(ಸ) ತಲಪುತ್ತದೆ. ಅವರು ತಮ್ಮ ಸ್ಥಾನದಲ್ಲಿ ಝೈದ್ ಬಿನ್ ಹಾರಿಸ್‌ರನ್ನು(ರ) ಮದೀನಾದ ನಾಯಕನಾಗಿ ನೇಮಿಸಿ ಹಿ. ಶ. 5ರ ಶಅಬಾನ್ ತಿಂಗಳ 2ರಂದು ಮದೀನಾದಿಂದ ಹೊರಡುತ್ತಾರೆ. ಈ ತನಕ ಯಾವುದೇ ಯುದ್ಧದಲ್ಲಿ ಭಾಗವಹಿಸದ ಅನೇಕ ಮುನಾಫಿಕ್(ಕಪಟವಿಶ್ವಾಸಿ) ಗಳು ಕೂಡಾ ಈ ಸಲ ಪ್ರವಾದಿವರ್ಯರ(ಸ) ಜತೆ ಹೊರಟಿದ್ದರು. ಪ್ರವಾದಿಪತ್ನಿ ಹ. ಆಯಿಶಾ(ರ) ಜೊತೆಗಿದ್ದಾರೆ.

ಮುಹಮ್ಮದ್(ಸ) ಕುದೈದ್ ಮಾರ್ಗವಾಗಿ ಅತಿ ಶೀಘ್ರ 'ಮರ್ಯಸೀಅ್' ತಲಪಿ ಯೋಧರನ್ನು ಪಂಕ್ತಿಬದ್ಧಗೊಳಿಸುತ್ತಾರೆ. ಮುಹಾಜಿರ್‌ಗಳ ಧ್ವಜವನ್ನು ಹ. ಅಬೂ ಬಕರ್‌ರಿಗೆ ಮತ್ತು ಅನ್ಸಾರ್‌ಗಳ ಪತಾಕೆಯನ್ನು ಹ. ಸಅದ್ ಬಿನ್ ಉಬಾದಾರಿಗೂ(ರ) ನೀಡುತ್ತಾರೆ. ತರುವಾಯ ಶತ್ರುಗಳ ಮೇಲೆ ಹಠಾತ್ ದಾಳಿ ಮಾಡುತ್ತಾರೆ. ಈ ಆಕಸ್ಮಿಕ ಧಾಳಿಯಿಂದ ದಿಕ್ಕೆಟ್ಟ ಅನೇಕ ಗೋತ್ರಗಳು ರಣರಂಗವನ್ನು ಬಿಟ್ಟು ಓಡು ತ್ತವೆ. ಅವರ ನಾಯಕ ಹಾರಿಸ್ ಬಿನ್ ಅಬೂ ಝಿರಾರ್ ಕೂಡಾ ಪಲಾಯನಗೈಯುತ್ತಾನೆ. ಮುಸ್ಲಿಮರೊಂದಿಗೆ ಹೋರಾಟಕ್ಕಿಳಿದ ಮಂದಿಯಲ್ಲಿ ಹತ್ತು ಜನರು ಹತ್ಯೆಗೀಡಾಗಿ ಉಳಿದ 700 ಮಂದಿ ಬಂಧನಕ್ಕೊಳಗಾಗುತ್ತಾರೆ. ಈ ಕೈದಿಗಳಲ್ಲಿ ಹಾರಿಸ್‌ರ ಮಗಳು ಬರ್ರ ಕೂಡಾ ಸೇರಿದ್ದಾರೆ. ಅವರ ಪತಿ ಮುಸಾಫಿಲ್ ಬಿನ್ ಸಫ್ವಾನ್ ಯುದ್ಧದಲ್ಲಿ ಮಡಿದವರಲ್ಲಿ ಸೇರಿದ್ದರು.

ಮುಹಮ್ಮದ್(ಸ) ಆ ಮಹಿಳೆಯೊಂದಿಗೆ ವಿವಾಹ ಮಾಡಿಕೊಳ್ಳುವ ಮೂಲಕ ಎಲ್ಲ ಕೈದಿಗಳ ಬಿಡುಗಡೆಗೆ ನಾಂದಿ ಹಾಕುತ್ತಾರೆ. ಪ್ರವಾದಿವರ್ಯರ(ಸ) ಪತ್ನಿಯ ಗೋತ್ರದವರನ್ನು ಕೈದಿಯಾಗಿಡಲು ಯಾವ ಪ್ರವಾದಿ ಸಂಗಾತಿಯೂ ಸಿದ್ಧವಾಗುವುದಿಲ್ಲ. ಎಲ್ಲರನ್ನೂ ಬಂಧ ಮುಕ್ತಗೊಳಿಸಲಾಗುತ್ತದೆ.

ಈ ಕುರಿತು ಹ. ಆಯಿಶಾರು(ರ) ಹೀಗೆ ಹೇಳುತ್ತಾರೆ: "ಜುವೈರಿಯಾ[ಬರ್ರರಿಗೆ ಪ್ರವಾದಿ(ಸ) ನೀಡಿದ ಹೊಸ ಹೆಸರು]ರ ಹೊರತು ಯಾವ ಮಹಿಳೆಯಿಂದಲೂ ಅವರ ಗೋತ್ರಕ್ಕೆ ಇಷ್ಟು ಲಾಭವಾಗಲಿಲ್ಲ. ಅವರಿಂದಾಗಿ ನೂರಾರು ಮನೆತನಗಳಿಗೆ ಬಂಧನದಿಂದ ಮುಕ್ತಿ ದೊರೆಯಿತು."

ಜುವೈರಿಯಾರ ವಿವಾಹದ ನಂತರ ಅಲ್ ಮುಸ್ತಲಿಕ್ ಗೋತ್ರದ ಹೆಚ್ಚಿನ ಜನರು ಇಸ್ಲಾಮ್ ಸ್ವೀಕರಿಸಿದರು. ಸ್ವತಃ ಅವರ ತಂದೆ ಹಾರಿಸ್ ಕೂಡಾ ಮುಸ್ಲಿಮರಾದರು.

## ಕಾಪಟ್ಯದ ರೋಗ

ಮರ್ಯಸೀಅ್ ಯುದ್ಧಕ್ಕೆ ಕೆಲವೇ ದಿನಗಳು ಸಂದಿವೆ. ಇಸ್ಲಾಮೀ ಸೇನೆಯು ಇನ್ನೂ ಆ ಚಿಲುಮೆಯ ಬಳಿಯೇ ಬೀಡು ಬಿಟ್ಟಿದೆ. ಚಿಲುಮೆಯಿಂದ ನೀರು ಪಡೆಯುವವರ ಸಂದಣಿ ಹೆಚ್ಚುತ್ತಲೇ ಇವೆ. ಹ. ಉಮರ್‌ರ(ರ) ಗೋತ್ರಕ್ಕೆ ಸೇರಿದ ಓರ್ವ ಕಾರ್ಮಿಕ ಜಹ್‌ಜಾಹ್ ಬಿನ್ ಸಈದ್ ಉಮರ್‌ರ(ರ) ಕುದುರೆಗೆ ನೀರು ಕುಡಿಸುವ ಸಲುವಾಗಿ ಅಲ್ಲಿದ್ದಾರೆ. ಅಲ್ಲೇ ಔಫ್ ಬಿನ್ ಖಝ್ರಜ್ ಗೋತ್ರದ ಓರ್ವ ಬೆಂಬಲಿಗ ಸಿನಾನ್ ಜುಹನಿಯೂ ನಿಂತಿದ್ದಾರೆ. ಇಬ್ಬರಲ್ಲಿ ಯಾವುದೋ ವಿಷಯಕ್ಕೆ ಸಂಬಂಧಿಸಿ ವಿವಾದ ಉಂಟಾಗುತ್ತದೆ. ಜಗಳವು ಪ್ರಕೋಪಕ್ಕೆ ಹೋಗಿ ಇಬ್ಬರೂ ತಂತಮ್ಮ ಬೆಂಬಲಿಗರನ್ನು ಕರೆಯುವ ಹಂತಕ್ಕೆ ತಲುಪುತ್ತದೆ.

ಜುಹನಿ, 'ಓ ಅನ್ಸಾರ್‌ಗಳೇ!' ಎಂದು ಕರೆದರೆ, ಜಹ್‌ಜಾಹ್ 'ಓ ಮುಹಾಜಿರ್‌ಗಳೇ' ಎಂದು ಕರೆಯುತ್ತಾರೆ.

ಈ ಸ್ವರವು ಅಲ್ಲಿ ಸೇರಿದ ಗುಂಪಿನಲ್ಲಿ ಗಾಬರಿ ಹುಟ್ಟಿಸುತ್ತದೆ. ಅಲ್ಲೇ ಕಪಟವಿಶ್ವಾಸಿಗಳ ನಾಯಕ ಅಬ್ದುಲ್ಲಾ ಬಿನ್ ಉಬೈ ತನ್ನ ಕೆಲವು ಮಂದಿ ಸಂಗಾತಿಗಳೊಂದಿಗೆ ಮಾತುಕತೆಯಲ್ಲಿ ನಿರತನಾಗಿದ್ದಾನೆ. ಖಝ್ರಜ್ ಗೋತ್ರದವರನ್ನು ಕರೆಯುತ್ತಿರುವ ಸ್ವರ ಕೇಳಿ ಅವನ ಕುಲಮಹಿಮೆಯ ಪಕ್ಷಪಾತ ಜಾಗೃತಗೊಳ್ಳುತ್ತದೆ. ಅವನು ತನ್ನ ಮಿತ್ರರನ್ನುದ್ದೇಶಿಸಿ ಹೀಗೆ ಹೇಳುತ್ತಾನೆ: "ನೋಡಿ! ಇವರು ನಮ್ಮ ನಗರಕ್ಕೆ ಬಂದು ನಮ್ಮನ್ನೇ ನಿಕೃಷ್ಟರಾಗಿ ಕಾಣತೊಡಗಿದ್ದಾರೆ. ಅವರಿಗೆ ತಮ್ಮ ಕುಲ ಮಹಿಮೆಯ ಹುಚ್ಚು ನೆತ್ತಿಗೇರಿದೆ. ಕುರೈಶ್ ಗೋತ್ರದ ಈ ಜಗಳಗಂಟಿಗಳು ನಮ್ಮನ್ನು ಎಷ್ಟು ದ್ವೇಷಿಸುತ್ತಾರೆಂದರೆ 'ನಿಮ್ಮ ನಾಯಿಯನ್ನು ತಿನ್ನಿಸಿ ದಷ್ಟ ಪುಷ್ಟ ಮಾಡಿ ಆ ಬಳಿಕ ಅದು ನಿಮ್ಮನ್ನೇ ಕಡಿದು ತಿನ್ನಲಿ' ಎಂದಂತಾಯಿತು."

ಜನರು ಆವರ ಸುತ್ತ ಗುಂಪು ಕೂಡಿದರು. ಅವರು ಬಹಳ ಗಮನವಿಟ್ಟು ಆತನ ಮಾತುಗಳನ್ನು ಆಲಿಸುತ್ತಿದ್ದರು. ಅವನು ಮುಂದುವರಿಸುತ್ತಾ ಈ ರೀತಿ ಹೇಳಿದ: "ಅಲ್ಲಾಹನಾಣೆ! ನಾವು ಮದೀನಾಕ್ಕೆ ಮರಳಿದ ಬಳಿಕ ನಮ್ಮಲ್ಲಿ ಗೌರವಾನ್ವಿತರು ನೀಚರನ್ನು ಹೊರಗಟ್ಟಬೇಕು."

ಈ ಸಂದರ್ಭದ ಕುರಿತು ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಿರುವನು:

"ಸಂದೇಶವಾಹಕರ ಸಂಗಾತಿಗಳಿಗಾಗಿ ಖರ್ಚು ಮಾಡುವುದನ್ನು ನಿಲ್ಲಿಸಿ ಬಿಡಿರಿ; ಇವರು ಚದುರಿ ಹೋಗಲಿ- ಎಂದು ಹೇಳುವವರು ಇವರೇ. ವಸ್ತುತಃ ಭೂಮಿ-ಆಕಾಶಗಳ ಭಂಡಾರಗಳ ಒಡೆತನ ಅಲ್ಲಾಹನ ಕೈಯಲ್ಲಿದೆ. ಆದರೆ ಈ ಕಪಟವಿಶ್ವಾಸಿಗಳು ಗ್ರಹಿಸುವುದಿಲ್ಲ. ನಾವು ಮದೀನಾಕ್ಕೆ ಹಿಂದಿರುಗಿದಾಗ ಗೌರವಾನ್ವಿತನು ನಿಂದ್ಯನನ್ನು ಅಲ್ಲಿಂದ ಹೊರಕ್ಕಟ್ಟಿ ಬಿಡುವನೆಂದು ಇವರು ಹೇಳುತ್ತಾರೆ. ವಾಸ್ತವದಲ್ಲಿ ಗೌರವವಂತೂ

ಅಲ್ಲಾಹ್, ಅವನ ಸಂದೇಶವಾಹಕರು ಮತ್ತು ಸತ್ಯವಿಶ್ವಾಸಿಗಳಿಗಾಗಿಯೇ ಇದೆ. ಆದರೆ ಕಪಟವಿಶ್ವಾಸಿಗಳು ತಿಳಿಯುವುದಿಲ್ಲ." (ಪವಿತ್ರ ಕುರ್‌ಆನ್, 63:7,8)

ಅಬ್ದುಲ್ಲಾ ಬಿನ್ ಉಬೈಯ ಮಾತನ್ನು ಕೇಳುತ್ತಾ ನಿಂತವರಲ್ಲಿ ಓರ್ವ ಎಳೆಯ ಬಾಲಕ ಝೈದ್ ಬಿನ್ ಅರ್ಕಮ್ ಕೂಡಾ ಇದ್ದನು. ಆತನಿಗೆ ಅಬ್ದುಲ್ಲಾನ ಮಾತು ಬಹಳ ಅರೋಚಕವೆನಿಸುತ್ತದೆ. ಆದರೂ ಆತ ಮೌನವಾಗಿ ನಿಂತು ಆಲಿಸುತ್ತಿದ್ದಾನೆ. ಅಬ್ದುಲ್ಲಾ ಮುಂದುವರಿಯುತ್ತಾನೆ: "ನಾವು ನಮ್ಮ ನಗರದಲ್ಲಿ ಅವರಿಗೆ ಆಶ್ರಯ ನೀಡಿ ನಮ್ಮ ಕಾಲಿಗೇ ಕೊಡಲಿ ಏಟು ಹಾಕಿದ್ದೇವೆ. ನೀವು ನಿಮ್ಮ ಹಣ ಮತ್ತು ಸೊತ್ತುಗಳನ್ನು ಇವರ ಮೇಲೆ ಖರ್ಚು ಮಾಡದಿರುತ್ತಿದ್ದರೆ ಇವರು ಬೇಸತ್ತು ಬೇರೆಲ್ಲಿಗಾದರೂ ಹೋಗಿ ಬಿಡುತ್ತಿದ್ದರು. ನೀವು ಮಾಡಿದ್ದು ಬಹಳ ಕೆಟ್ಟದಾಯಿತು. ಈಗ ಅದರ ಪರಿಣಾಮವನ್ನು ಅನುಭವಿಸುತ್ತಿದ್ದೀರಿ."

ಅಬ್ದುಲ್ಲಾ ತನ್ನ ಮಾತನ್ನು ಮುಗಿಸಿದ ಕೂಡಲೇ ಜನರು ಚದುರಿ ಹೋಗುತ್ತಾರೆ. ಝೈದ್ ಬಿನ್ ಅರ್ಕಮ್ ಮುಹಮ್ಮದ್‌ರ(ಸ) ಬಳಿ ಹೋಗುತ್ತಾರೆ. ಆಗ ಪ್ರವಾದಿ ವರ್ಯರ(ಸ) ಜತೆ ಹ. ಉಮರ್‌ರೂ(ರ) ಇದ್ದರು. ಝೈದ್ ಬಹಳ ಸಾವಧಾನದಿಂದ ನಡೆದ ಘಟನೆಯನ್ನೆಲ್ಲಾ ಅವರ ಮುಂದೆ ವಿವರಿಸುತ್ತಾನೆ. ಅದನ್ನು ಕೇಳುತ್ತಲೇ ಉಮರ್(ರ) ಕೆರಳಿ ಕೆಂಡವಾಗುತ್ತಾರೆ: "ಪ್ರವಾದಿವರ್ಯರೇ! ಅವನನ್ನು ವಧಿಸಿ ಬಿಡಲು ಆಜ್ಞಾಪಿಸಿರಿ" ಎನ್ನುತ್ತಾರೆ.

ಮುಹಮ್ಮದ್‌ರು(ಸ) ಕೂಡಾ ಈ ಘಟನೆಯ ಕುರಿತು ಕೇಳಿ ಬಹಳ ನೊಂದುಕೊಂಡಿದ್ದರು. ಆದರೂ ಅವರು ಶಾಂತಚಿತ್ತರಾಗಿ ಹೀಗೆ ಹೇಳುತ್ತಾರೆ: "ಉಮರ್! ಮುಹಮ್ಮದ್‌ರು(ಸ) ತಮ್ಮ ಸಂಗಾತಿಗಳನ್ನೇ ಕೊಲೆ ಮಾಡಿಸುತ್ತಿದ್ದಾರೆಂದು ಜನರಾಡಿಕೊಳ್ಳಬೇಕೆಂದು ನೀವು ಬಯಸುತ್ತೀರಾ?"

ಇದನ್ನು ಕೇಳಿ ಹ. ಉಮರ್(ರ) ಸುಮ್ಮನಾಗುತ್ತಾರೆ. ಅಬ್ದುಲ್ಲಾ ಬಿನ್ ಉಬೈರ ಮಗ ಅಬ್ದುಲ್ಲಾ ಬಿನ್ ಅಬ್ದುಲ್ಲಾರಿಗೆ(ರ) ಈ ವಿಷಯ ತಿಳಿದಾಗ ತಮ್ಮ ತಂದೆಯ ಬಗ್ಗೆ ಅವರಲ್ಲಿ ಜಿಗುಪ್ಸೆ ಮೂಡುತ್ತದೆ. ಅವರು ಪ್ರವಾದಿವರ್ಯರ(ಸ) ಬಳಿ ಹೋಗಿ: "ಪ್ರವಾದಿವರ್ಯರೇ! ತಮಗೆ ನನ್ನ ತಂದೆಯ ಅಸಂಬದ್ಧ ಮಾತಿನಿಂದ ಬೇಸರವಾಗಿದೆ. ಅದಕ್ಕಾಗಿ ಅವರನ್ನು ವಧಿಸಬೇಕಿದ್ದರೆ ನನಗೆ ಹೇಳಿ. ನಾನೇ ಅವರ ತಲೆ ಕಡಿದು ತಮ್ಮ ಮುಂದೆ ಹಾಜರುಗೊಳಿಸುವೆನು. ಖಝ್ರಜ್ ಗೋತ್ರದವರಿಗೆ ನಮ್ಮ ಬಗ್ಗೆ ಚೆನ್ನಾಗಿ ತಿಳಿದಿದೆ. ಅವರ ಪೈಕಿ ಯಾರೂ ತಮ್ಮ ತಂದೆಯೊಂದಿಗೆ ನನ್ನಷ್ಟು ಸೌಜನ್ಯ ದಿಂದ ವರ್ತಿಸುವುದಿಲ್ಲ. ನನ್ನ ಹೊರತು ಯಾರಾದರೂ ಅವರನ್ನು ವಧಿಸಿದರೆ ನನ್ನ ತಂದೆಯ ಕೊಲೆಗಾರನು ಜನರ ಮಧ್ಯೆ ನಡೆದಾಡುತ್ತಿರುವುದನ್ನು ಕಂಡು ನನ್ನಿಂದ ಸಹಿಸಲು ಸಾಧ್ಯವಾಗದು. ಆದ್ದರಿಂದ ನಾನು ಅವನನ್ನು ಕೊಲೆ ಮಾಡಿ ಬಿಡಲೂ ಬಹುದು."

ಪ್ರವಾದಿವರ್ಯರು(ಸ) ತಮ್ಮ ನಿಷ್ಠಾವಂತ ಅನುಯಾಯಿಯಾದ ಅಬ್ದುಲ್ಲಾರ(ರ) ಈ ಮಾತು ಕೇಳಿ ಹೀಗೆನ್ನುತ್ತಾರೆ: "ಅವರನ್ನು ಕೊಲ್ಲುವುದು ನಮಗಿಷ್ಟವಿಲ್ಲ. ಅವರು ನಮ್ಮ

ಜೊತೆ ಇರುವ ತನಕ ಅವರೊಂದಿಗೆ ಚೆನ್ನಾಗಿಯೇ ವರ್ತಿಸಲಾಗುವುದು."

ಅಷ್ಟರಲ್ಲಿ ಅಬ್ದುಲ್ಲಾ ಬಿನ್ ಉಬೈನಿಗೂ ತನ್ನ ಮಾತು ಮುಹಮ್ಮದ್‌ರಿಗೆ(ಸ) ತಲುಪಿ ತನ್ನ ಕೊಲೆಯ ಬಗ್ಗೆ ಸಮಾಲೋಚನೆ ನಡೆಯುತ್ತಿದೆ ಎಂದು ತಿಳಿದು ಬಿಡುತ್ತದೆ. ಅವನು ಪ್ರವಾದಿವರ್ಯರ(ಸ) ಬಳಿಗೆ ಬಂದು ಈ ರೀತಿ ಹೇಳುತ್ತಾನೆ:

"ಪ್ರವಾದಿವರ್ಯರೇ! ಝೈದ್ ನಿಮ್ಮಲ್ಲಿ ಹೇಳಿರುವ ವಿಷಯವನ್ನು ನಾನು ಹೇಳಿಯೇ ಇಲ್ಲ. ಅವನು ಹೇಳುತ್ತಿರುವುದೆಲ್ಲವೂ ಹಸಿ ಸುಳ್ಳಾಗಿದೆ."

ಆಗ ಕೆಲವು ಅನ್ಸಾರ್‌ಗಳು ಅವನನ್ನು ಬೆಂಬಲಿಸುತ್ತಾ ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೇ! ಝೈದ್‌ಗೆ ಅಬ್ದುಲ್ಲಾ ಬಿನ್ ಉಬೈಯವರ ಮಾತು ಕೇಳಿಸಿಕೊಳ್ಳುವಲ್ಲಿ ಏನೋ ಪ್ರಮಾದ ಆಗಿರಬೇಕು."

ಮುಹಮ್ಮದ್(ಸ) ಮೌನ ವಹಿಸುತ್ತಾರೆ. ಕೆಲವೇ ಕ್ಷಣಗಳಲ್ಲಿ ಹಠಾತ್ತನೆ ಸೇನೆಗೆ ಹೊರಡಲು ಆಜ್ಞೆ ನೀಡುತ್ತಾರೆ. ಎಲ್ಲರೂ ಹೊರಡಲು ಸಿದ್ಧತೆ ನಡೆಸುತ್ತಾರೆ. ತನ್ಮಧ್ಯೆ ಉಸೈದ್ ಬಿನ್ ಹುದೈರ್ ಪ್ರವಾದಿವರ್ಯರ(ಸ) ಬಳಿ ಬಂದು ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೇ! ತಾವಿಂದು ವಾಡಿಕೆಗೆ ವಿರುದ್ಧವಾಗಿ ಬಹಳ ಮುಂಚಾವಿಗೇ ಹೊರಡುವ ಆಜ್ಞೆ ಹೊರಡಿಸಿರುವಿರಿ?"

ಮುಹಮ್ಮದ್(ಸ): "ನಿಮ್ಮ ಸಂಗಾತಿ ಏನು ಹೇಳಿದ್ದಾನೆಂಬುದು ನಿಮಗೆ ತಿಳಿಯದೇ?"

ಉಸೈದ್: "ಯಾವ ಸಂಗಾತಿ?"

ಮುಹಮ್ಮದ್(ಸ): "ಅಬ್ದುಲ್ಲಾ ಬಿನ್ ಉಬೈ."

ಉಸೈದ್: "ಅವನೇನು ಹೇಳಿದ?"

ಮುಹಮ್ಮದ್(ಸ): "ಅಬ್ದುಲ್ಲಾ ಹೇಳುತ್ತಾನೆ: ಮದೀನಾಕ್ಕೆ ಮರಳಿದ ಬಳಿಕ ಅಲ್ಲಿನ ಗೌರವಾನ್ವಿತ ವರ್ಗವು ನೀಚ ವರ್ಗದವರನ್ನು ಹೊರಗಟ್ಟುವುದಂತೆ."

ಉಸೈದ್: "ಪ್ರವಾದಿವರ್ಯರೇ! ತಾವು ಬಯಸಿದರೆ ಆತನನ್ನೇ ಅಲ್ಲಿಂದ ಹೊರಗಟ್ಟಬಹುದು. ಅಲ್ಲಾಹನಾಣೆ ಅವನೇ ನೀಚನಾಗಿದ್ದು ತಾವು ಗೌರವಾನ್ವಿತರಾಗಿರುವಿರಿ. ಆದರೂ ಅವನ ಜೊತೆ ಮೆದುವಾಗಿ ವರ್ತಿಸುವುದು ಒಳ್ಳೆಯದು. ಏಕೆಂದರೆ ಅವನಿಗಾಗಿ ಅವನ ಜನಾಂಗವು ವಜ್ರಗಳ ಕಿರೀಟವನ್ನು ಸಿದ್ಧಗೊಳಿಸಿ ಅವನ ಪಟ್ಟಾಭಿಷೇಕ ಮಾಡಬೇಕೆಂದಿದ್ದಾಗ ಅಲ್ಲಾಹನು ತಮ್ಮನ್ನು ಅಲ್ಲಿಗೆ ರವಾನಿಸಿದನು. ಅಂದಿನಿಂದ ತಾವು ಬಂದು ಅವನ ದೊರೆತನವನ್ನು ಕಸಿದುಕೊಂಡಿರುವಿರಿ ಎಂಬ ಭಾವನೆ ಅವನಲ್ಲಿ ಒಡ ಮೂಡಿದೆ."

ಮುಹಮ್ಮದ್‌ರು(ಸ) ಉಸೈದ್‌ರ ಮಾತಿಗೆ ಪ್ರತಿಕ್ರಿಯಿಸದೆ ಹೊರಡುತ್ತಾರೆ. ಇಡೀ ಸೇನೆಯು ಅವರ ಜೊತೆಗೆ ಹೊರಡುತ್ತದೆ. ಇಡೀ ದಿನ ಪ್ರಯಾಣ ಮುಂದುವರಿಯುತ್ತದೆ.

ರಾತ್ರಿಯೂ ಸೇನೆಗೆ ಪ್ರವಾದಿ(ಸ) ತಂಗುವ ಅನುಮತಿ ಕೊಡುವುದಿಲ್ಲ. ಪ್ರಯಾಣದಲ್ಲೇ ಬೆಳಗಾಗುತ್ತದೆ. ನಮಾಝ್‌ನ ನಂತರ ಎರಡನೆಯ ದಿನವೂ ಪ್ರಯಾಣ ಮುಂದುವರಿಯುತ್ತದೆ. ಜನರು ದಣಿವು ಮತ್ತು ಸೆಖೆಯಿಂದ ಬಳಲಿ ಬೆಂಡಾಗಿದ್ದಾರೆ. ಆದರೂ ಪ್ರವಾದಿ(ಸ) ಜನರ ಮನಸ್ಸಿನಿಂದ ಅಬ್ದುಲ್ಲಾನ ಮಾತು ಮರೆಯಾಗಲಿ ಮತ್ತು ಅದರಿಂದಾಗಿ ಯಾವುದೇ ಕ್ಷೋಭೆ ಉಂಟಾಗದಿರಲಿ ಎಂಬ ಕಾರಣಕ್ಕಾಗಿ ಪ್ರಯಾಣವನ್ನು ಮುಂದುವರಿಸುತ್ತಲೇ ಇದ್ದರು. ಮೂರನೆಯ ದಿನ ಸೈನ್ಯವು ಹಿಜಾಝ್ ಪ್ರದೇಶದ 'ನಕ್‌ಅ' ಎಂಬ ಬಾವಿಯ ಬಳಿ ಇಳಿಯುತ್ತದೆ. ನಮಾಝ್ ಮುಗಿಸಿ ಎಲ್ಲರೂ ಗಾಢನಿದ್ರೆ ಮಾಡುತ್ತಾರೆ.

## ಮಹಾ ಅಪವಾದ

ಇಸ್ಲಾಮೀ ಸೈನ್ಯವು ನಿರಂತರ ಪ್ರಯಾಣ ಮಾಡಿ ಈಗ ಮದೀನಾದ ಬಳಿ ತಲುಪಿದೆ. ದಣಿವಾರಿಸಲಿಕ್ಕಾಗಿ ಒಂದೆಡೆ ತಂಗಿದೆ. ಜನರು ತಮ್ಮ ಆಯುಧಗಳನ್ನು ಸೊಂಟದಿಂದ ಕಳಚಿಡುವ ಮೊದಲೇ ದೂರದಿಂದ ಪರ್ದಾಧಾರಿ ಮಹಿಳೆಯೊಬ್ಬಳು ಒಂಟೆಯ ಮೇಲೇರಿ ಬರುತ್ತಿರುವುದು ಕಾಣಿಸುತ್ತದೆ. ಓರ್ವ ವ್ಯಕ್ತಿ ಅದರ ಲಗಾಮು ಹಿಡಿದು ಮುಂದಿನಿಂದ ನಡೆಯುತ್ತಿದ್ದಾನೆ. ಒಂಟೆಯು ಹತ್ತಿರ ಬಂದಾಗ ಅಬ್ದುಲ್ಲಾ ಬಿನ್ ಉಬೈಯ ಮುಖದಲ್ಲಿ ಒಂದು ಪೈಶಾಚಿಕ ನಗೆ ಗೋಚರಿಸುತ್ತದೆ. ಆತ ತನ್ನ ಸಂಗಾತಿಗಳನ್ನುದ್ದೇಶಿಸಿ: "ನೋಡಿರಲ್ಲಿ! ಆ ಒಂಟೆಯ ಮೇಲೆ ಮುಹಮ್ಮದ್‌ರ(ಸ) ಪತ್ನಿ ಆಯಿಶಾ ಕುಳಿತಿದ್ದಾರೆ ಮತ್ತು ಸಫ್ವಾನ್ ಲಗಾಮು ಹಿಡಿದು ಬರುತ್ತಿದ್ದಾನೆ.... ನೋಡಿರಿ! ನಿಮ್ಮ ಪ್ರವಾದಿಯ ಪತ್ನಿಯು ರಾತ್ರಿಯನ್ನು ಇನ್ನೊಬ್ಬನೊಂದಿಗೆ ಕಳೆದಿದ್ದಾರೆ. ಈಗ ಆತ ಅವರನ್ನು ಬಹಿರಂಗವಾಗಿ ಕರೆದುಕೊಂಡು ಬರುತ್ತಿದ್ದಾನೆ."

ಕಪಟವಿಶ್ವಾಸಿಗಳಿಗೆ ಗೊಂದಲವೆಬ್ಬಿಸಲು ಅವಕಾಶ ಸಿಕ್ಕಿತು. ಅವರು ಈ ಆರೋಪವನ್ನು ಚೆನ್ನಾಗಿ ಹರಡುತ್ತಾರೆ. ಮದೀನಾ ತಲಪುತ್ತಲೇ ಈ ಮಿಥ್ಯಾರೋಪವು ನಗರದ ಬೀದಿ ಬೀದಿಗಳಿಗೆ ಹರಡುತ್ತದೆ.

ಹ. ಆಯಿಶಾರು(ರ) ಈ ಕುರಿತು ಹೇಳಿದ ವೃತ್ತಾಂತವು ಹೀಗಿದೆ: "ಪ್ರವಾದಿ ವರ್ಯರು(ಸ) ಪ್ರಯಾಣಕ್ಕೆ ಹೊರಡುವಾಗ ಅದೃಷ್ಟ ಚೀಟಿ ಎತ್ತುವ ಮೂಲಕ ಯಾವ ಪತ್ನಿ ತಮ್ಮ ಜೊತೆಗಿರಬೇಕೆಂಬುದನ್ನು ನಿರ್ಧರಿಸುತ್ತಿದ್ದರು. ಅಲ್ ಮುಸ್ತಲಿಕ್ ಗೋತ್ರದ ವಿರುದ್ಧ ಸೈನಿಕ ಕಾರ್ಯಾಚರಣೆಗಾಗಿ ಹೊರಟಾಗ ಅದೃಷ್ಟ ಚೀಟಿಯು ನನ್ನ ಹೆಸರಿಗೆ ಬಂತು. ನಾನು ಪ್ರವಾದಿವರ್ಯರ(ಸ) ಜೊತೆ ಹೊರಟೆ. ಅಲ್ಲಿಂದ ಹಿಂದಿರುಗಿ ಬರುತ್ತಿರುವಾಗ ಮದೀನಾ ಪಟ್ಟಣಕ್ಕೆ ಸಮೀಪವೇ ಒಂದು ಕಡೆ ಪ್ರವಾದಿವರ್ಯರು(ಸ) ತಂಗಿದರು. ಬೆಳಗಾಗಲಿಕ್ಕೆ ಇನ್ನೂ ತುಂಬಾ ಹೊತ್ತಿರುವಾಗಲೇ ಪ್ರಯಾಣ ಮುಂದು ವರಿಸುವ ಸಿದ್ಧತೆಗಳಾಗ ತೊಡಗಿದುವು. ನಾನು ಎದ್ದು ಶೌಚಕ್ಕಾಗಿ ಹೊರಗೆ ಹೋದೆ. ಅಲ್ಲಿಂದ ಮರಳಿ ಶಿಬಿರದ ಹತ್ತಿರ ಬರುತ್ತಿದ್ದಂತೆ ನನ್ನ ಕತ್ತಿನ ಸರವು ಎಲ್ಲೋ ಜಾರಿ ಬಿದ್ದಿದೆಯೆಂಬುದು

ನನ್ನ ಗಮನಕ್ಕೆ ಬಂತು. ನಾನು ಅದನ್ನು ಹುಡುಕು ವುದರಲ್ಲಿ ನಿರತಳಾಗಿದ್ದೆ. ಅಷ್ಟರಲ್ಲಿ ನಮ್ಮ ಸೈನ್ಯವು ಹೊರಟು ಹೋಗಿ ಬಿಟ್ಟಿತು. ಸಾಮಾನ್ಯವಾಗಿ ಪ್ರಯಾಣ ಆರಂಭಿಸುವಾಗ ನಾನು ನನ್ನ ಪಲ್ಲಕ್ಕಿಯಲ್ಲಿ ಕುಳಿತಿರುವುದು ರೂಢಿಯಾಗಿತ್ತು. ನಾಲ್ಕು ಮಂದಿ ಅದನ್ನೆತ್ತಿ ಒಂಟೆಯ ಮೇಲೆ ಇಟ್ಟು ಬಿಡುತ್ತಿದ್ದರು. ಆ ಕಾಲದಲ್ಲಿ ಮಹಿಳೆಯರಾದ ನಾವು ಆಹಾರದ ಅಭಾವದಿಂದಾಗಿ ತುಂಬಾ ಹಗುರವಾಗಿರುತ್ತಿದ್ದೆವು. ನನ್ನ ಪಲ್ಲಕ್ಕಿಯನ್ನು ಎತ್ತಿ ಇಡುವವರಿಗೆ ನಾನು ಅದರಲ್ಲಿ ಇಲ್ಲವೆಂಬುದು ತಿಳಿಯದೇ ಹೋಯಿತು. ಅವರು ಪಲ್ಲಕ್ಕಿಯನ್ನು ಒಂಟೆಯ ಮೇಲಿಟ್ಟು ಹೊರಟು ಹೋದರು. ನಾನು ಸರವನ್ನು ಹುಡುಕಿ ತರುವಷ್ಟರಲ್ಲಿ ಎಲ್ಲರೂ ಹೋಗಿ ಆಗಿತ್ತು. ಅಲ್ಲಿ ಯಾರೂ ಉಳಿದಿರಲಿಲ್ಲ. ಅವರು ಮುಂದೆ ಹೋಗಿ ನಾನಿಲ್ಲದಿರುವುದನ್ನು ಕಂಡು ನನಗಾಗಿ ಹುಡುಕುತ್ತಾ ಬಂದೇ ಬರುವರೆಂಬ ಭರವಸೆಯೊಂದಿಗೆ ನಾನು ನನ್ನ ಚಾದರವನ್ನು ಹೊದ್ದುಕೊಂಡು ಅಲ್ಲೇ ಒಂದೆಡೆ ಮಲಗಿ ಬಿಟ್ಟೆ. ನನಗೆ ನಿದ್ದೆ ಬಂತು. ಬೆಳಗಿನ ಜಾವ 'ಸಫ್ವಾನ್ ಬಿನ್ ಮುಅತ್ತಲ್ ಸುಲ್ಲಮಿ'* ಆ ದಾರಿಯಾಗಿ ಬಂದರು. ಅವರು ಪರ್ದಾದ ಆದೇಶವು ಬರುವುದಕ್ಕೆ ಮುಂಚೆ ಅನೇಕ ಸಲ ನನ್ನನ್ನು ಕಂಡಿದ್ದರು. ಆದ್ದರಿಂದ ನನ್ನನ್ನು ಕಂಡೊಡನೆ ಗುರುತಿಸಿಕೊಂಡು ತಮ್ಮ ಒಂಟೆಯನ್ನು ನಿಲ್ಲಿಸಿದರು. ಅವರ ಬಾಯಿಯಿಂದ ತಾನಾಗಿಯೇ, "ಇನ್ನಾ ಲಿಲ್ಲಾಹಿ ವ ಇನ್ನಾ ಇಲೈಹಿ ರಾಜಿಊನ್ ಪ್ರವಾದಿವರ್ಯರ(ಸ) ಪತ್ನಿ ಇಲ್ಲೆ ಉಳಿದು ಹೋದರಲ್ಲ" ಎಂಬ ಉದ್ಗಾರ ಹೊರಟಿತು. ಈ ಧ್ವನಿ ಕೇಳಿ ನಾನು ಎಚ್ಚರ ಗೊಂಡೆ. ಕೂಡಲೇ ನನ್ನ ಮುಖದ ಮೇಲೆ ಚಾದರ ಹಾಕಿಕೊಂಡೆ. ಅವರು ನನ್ನಲ್ಲಿ ಏನೂ ಮಾತಾಡಲಿಲ್ಲ. ಒಂಟೆಯನ್ನು ತಂದು ನನ್ನ ಬಳಿ ಕೂರಿಸಿ ಸ್ವತಃ ದೂರ ಸರಿದು ನಿಂತರು. ನಾನು ಒಂಟೆಯನ್ನೇರಿದೆ. ಅವರು ಅದರ ಕಡಿವಾಣ ಹಿಡಿದು ನಡೆಯತೊಡಗಿದರು. ಮಧ್ಯಾಹ್ನದ ಸಮೀಪ ನಾವು ಸೈನ್ಯವನ್ನು ಹೋಗಿ ಸೇರಿದೆವು. ಆಗ ಅದು ಒಂದು ಕಡೆ ಬೀಡುಬಿಟ್ಟಿತ್ತು. ನಾನು ಹಿಂದೆ ಉಳಿದು ಬಿಟ್ಟಿದ್ದೇನೆಂಬ ವಿಷಯ ಸೈನ್ಯದವರಿಗೆ ಆ ತನಕವೂ ತಿಳಿದಿರಲಿಲ್ಲ.

ಇಷ್ಟಕ್ಕೇ ಸುಳ್ಳಾರೋಪ ಹೊರಿಸುವವರು ಅಪಪ್ರಚಾರ ಮಾಡತೊಡಗಿದರು. ಅವರಲ್ಲಿ ಅಬ್ದುಲ್ಲಾ ಬಿನ್ ಉಬೈ ಮುಂಚೂಣಿಯಲ್ಲಿದ್ದನು. ಆದರೆ ನನಗೆ ಇದಾವುದೂ ತಿಳಿದಿರಲಿಲ್ಲ.

ಮದೀನಾ ತಲುಪಿದ ಮೇಲೆ ನಾನು ಕಾಯಿಲೆ ಬಿದ್ದೆ. ಒಂದು ತಿಂಗಳ ತನಕ ಹಾಸಿಗೆ ಹಿಡಿದಿದ್ದೆ. ನಗರದಲ್ಲಿ ಈ ಸುಳ್ಳಾರೋಪದ ಸುದ್ದಿ ಹರಡುತ್ತಿತ್ತು. ಪ್ರವಾದಿವರ್ಯರ(ಸ) ಕಿವಿಗೂ ಅದು ಬಿತ್ತು. ಆದರೆ ನನಗೆ ಆ ಬಗ್ಗೆ ಏನೂ ತಿಳಿದಿರಲಿಲ್ಲ. ಆದರೂ ಸಾಮಾನ್ಯ ವಾಗಿ ನಾನು ಕಾಯಿಲೆ ಬಿದ್ದಾಗ ಪ್ರವಾದಿವರ್ಯರು(ಸ) ವಹಿಸುತ್ತಿದ್ದ ಕಾಳಜಿ ಈ ಸಲ ವಹಿಸುತ್ತಿರಲಿಲ್ಲವೆಂಬುದು ನನ್ನ ಮನಸ್ಸನ್ನು ಬಹಳವಾಗಿ ಕಾಡುತ್ತಿತ್ತು. ಕೊನೆಗೆ ನನ್ನ ತವರು

* ಇವರು ಬದ್ರ್ ಯುದ್ಧದಲ್ಲಿ ಪಾಲ್ಗೊಂಡಿದ್ದ ಓರ್ವ ಸಹಾಬಿ. ಅವರಿಗೆ ಬೆಳಿಗ್ಗೆ ಬಹಳ ಹೊತ್ತಿನ ತನಕ ನಿದ್ದೆ ಮಾಡುವ ಅಭ್ಯಾಸವಿತ್ತು. ಆದ್ದರಿಂದ ಸೇನಾ ಶಿಬಿರದಲ್ಲೆಲ್ಲೋ ಒಂದು ಕಡೆ ಮಲಗಿದ್ದವರು ಈಗ ಎದ್ದು ಮದೀನದ ಕಡೆಗೆ ಹೊರಟಿದ್ದರು.

ಮನೆಯವರು ನನಗೆ ಔಷಧೋಪಚಾರ ಮಾಡುವರೆಂದು ಬಗೆದು ಪ್ರವಾದಿವರ್ಯರ(ಸ) ಅನುಮತಿ ಪಡೆದು ತವರಿಗೆ ಹೋದೆ.

ಒಂದು ರಾತ್ರಿ ನಾನು ಶೌಚಕ್ಕಾಗಿ ಹೊರಗೆ ಹೋಗಿದ್ದೆ. ಅಂದು ನಮ್ಮ ಮನೆಗಳಲ್ಲಿ ಶೌಚಾಲಯಗಳಿರಲಿಲ್ಲ. ನಾವು ಮಲ-ಮೂತ್ರ ವಿಸರ್ಜನೆಗಾಗಿ ಕಾಡಿಗೇ ಹೋಗುತ್ತಿದ್ದೆವು. ನನ್ನ ಜೊತೆ ಮಿಸ್ತಹ್ ಬಿನ್ ಉಸಾಸಾರ ತಾಯಿ ಕೂಡಾ ಇದ್ದರು. ಸುಳ್ಳು ಸೃಷ್ಟಿಸುವವರು ನನ್ನ ಕುರಿತು ಏನೆಲ್ಲ ಪ್ರಚಾರ ಮಾಡಿದ್ದಾರೆಂಬುದು ಅವರಿಂದ ನನಗೆ ತಿಳಿಯಿತು. ಈ ವೃತ್ತಾಂತ ವನ್ನು ಕೇಳಿ ನನಗೆ ತೀವ್ರ ಆಘಾತವಾಯಿತು. ನಾನು ಯಾವ ಕಾರ್ಯಕ್ಕಾಗಿ ಹೋಗಿದ್ದೆನೋ ಅದನ್ನೂ ಮರೆತು ಸೀದಾ ಮನೆಯ ಕಡೆಗೆ ಮರಳಿ ರಾತ್ರಿಯಿಡೀ ಅಳುತ್ತಲೇ ಕಳೆದೆ.

ನನ್ನ ಗೈರು ಹಾಜರಿಯಲ್ಲಿ ಪ್ರವಾದಿವರ್ಯರು(ಸ) ಅಲೀ ಮತ್ತು ಉಸಾಮಾ ರನ್ನು(ರ) ಕರೆದು ಸಮಾಲೋಚಿಸಿದರು. ಉಸಾಮಾ ನನ್ನ ಕುರಿತು ಸದಭಿಪ್ರಾಯವನ್ನು ವ್ಯಕ್ತಪಡಿಸಿದರು: "ಪ್ರವಾದಿವರ್ಯರೇ! ತಮ್ಮ ಪತ್ನಿಯ ಕುರಿತು ಒಳಿತಿನ ಹೊರತು ಬೇರೇನನ್ನೂ ನಾವು ಕಂಡಿಲ್ಲ. ಇದೆಲ್ಲವೂ ಸುಳ್ಳು ಮತ್ತು ವದಂತಿಯಾಗಿದೆ."

ಅಲೀ(ರ): "ಪ್ರವಾದಿವರ್ಯರೇ! ಮಹಿಳೆಯರಿಗೇನೂ ಕೊರತೆಯಿಲ್ಲ. ತಾವು ಬಯಸುವು ದಾದರೆ ಅವರ ಸ್ಥಾನದಲ್ಲಿ ಬೇರೆ ಪತ್ನಿಯನ್ನು ವರಿಸಿಕೊಳ್ಳಿರಿ. ಒಂದು ವೇಳೆ ತಾವು ಆ ಕುರಿತು ವಿಚಾರಣೆ ನಡೆಸ ಬಯಸುವುದಾದರೆ ಸೇವಕಿ ಮಹಿಳೆಯನ್ನು ಕರೆದು ವಿಚಾರಿಸಿಕೊಳ್ಳಿ" ಎಂದರು. ಸೇವಕಿಯನ್ನು ಕರೆಸಿ ವಿಚಾರಿಸಲಾಯಿತು. ಆಕೆ ಹೀಗೆ ಹೇಳಿದರು: "ತಮ್ಮನ್ನು ಸತ್ಯದೊಂದಿಗೆ ರವಾನಿಸಿರುವ ಅಲ್ಲಾಹನ ಆಣೆ! ನಾನು ಅವರಲ್ಲಿ ಹೇಳತಕ್ಕ ಯಾವುದೇ ಕೆಡುಕನ್ನು ಕಂಡಿಲ್ಲ. ನಾನು ಅವರಲ್ಲಿ ಕಂಡಿರುವ ಕೊರತೆ ಕೇವಲ ಒಂದೇ. ಕೆಲವೊಮ್ಮೆ ನಾನು ಹಿಟ್ಟು ಕಲಸಿಟ್ಟು ಬೇರಾವುದಾದರೂ ಕೆಲಸಕ್ಕೆ ಹೋಗುತ್ತಾ 'ಸ್ವಲ್ಪ ಹಿಟ್ಟನ್ನು ನೋಡಿಕೊಳ್ಳಿ' ಎಂದು ಹೇಳಿ ಹೋಗುತ್ತಿದ್ದೆ. ಆದರೆ ಅವರು ಕುಳಿತಲ್ಲೇ ನಿದ್ರೆ ಹೋಗುತ್ತಿದ್ದರು. ಆಡು ಬಂದು ಹಿಟ್ಟನ್ನು ತಿಂದು ಬಿಡುತ್ತಿತ್ತು."

ಆ ದಿನವೇ ಪ್ರವಾದಿ(ಸ) ಮುಸ್ಲಿಮರನ್ನುದ್ದೇಶಿಸಿ ಒಂದು ಉಪನ್ಯಾಸ ನೀಡಿದರು: "ಮುಸ್ಲಿಮರೇ! ನನ್ನ ಮನೆಯವರ ಮೇಲೆ ಸುಳ್ಳಾರೋಪವನ್ನು ಹೊರಿಸಿ, ಹದಮೀರಿ ನನಗೆ ನೋವುಂಟು ಮಾಡಿದವನಿಂದ ನನ್ನನ್ನು ರಕ್ಷಿಸುವವರು ಯಾರಿದ್ದಾರೆ? ನಾನು ನನ್ನ ಪತ್ನಿಯಲ್ಲಾಗಲೀ ಸುಳ್ಳಾರೋಪಕ್ಕೆ ಗುರಿಯಾದ ಆ ವ್ಯಕ್ತಿಯಲ್ಲಾಗಲೀ ಯಾವುದೇ ದೋಷವನ್ನು ಕಂಡಿಲ್ಲ. ಅವರೆಂದೂ ನನ್ನ ಅನುಪಸ್ಥಿತಿಯಲ್ಲಿ ನನ್ನ ಮನೆಗೆ ಬಂದ ವರಲ್ಲ." ಆಗ ಔಸ್ ಗೋತ್ರದ ನಾಯಕ ಉಸೈದ್ ಬಿನ್ ಹುದೈರ್(ರ) ಎದ್ದು ನಿಂತು, "ಪ್ರವಾದಿವರ್ಯರೇ! ಅವನು ನಮ್ಮ ಗೋತ್ರಕ್ಕೆ ಸೇರಿದವನಾಗಿದ್ದರೆ ನಾವು ಅವನ ರುಂಡವನ್ನು ಹಾರಿಸಿ ಬಿಡುವೆವು. ಅವನು ನಮ್ಮ ಸೋದರರಾದ ಖಝ್ರಜ್ ಗೋತ್ರಕ್ಕೆ ಸೇರಿದವನಾಗಿದ್ದರೆ ತಾವು ಏನು ಅಪ್ಪಣೆ ಕೊಡುತ್ತೀರೋ ಅದನ್ನು ಪಾಲಿಸುವೆವು" ಎಂದು ಹೇಳಿದರು.

ಅಷ್ಟರಲ್ಲಿ ಖಝ್ರುಜ್ ಗೋತ್ರದ ಸರದಾರ ಸಅದ್ ಬಿನ್ ಉಬಾದಾ ಎದ್ದು ನಿಂತು: "ನೀವು ಸುಳ್ಳು ಹೇಳುತ್ತಿರುವಿರಿ. ನೀವು ಅವನನ್ನು ಎಷ್ಟು ಮಾತ್ರಕ್ಕೂ ಕೊಲ್ಲಲಾರಿರಿ" ಎನ್ನುತ್ತಾರೆ. ಇದಕ್ಕೆ ಉತ್ತರವಾಗಿ ಉಸೈದ್ ಬಿನ್ ಹುದೈರ್(ರ): "ನೀವು ಕಪಟ ವಿಶ್ವಾಸಿ ಯಾಗಿರುವಿರಿ. ಆದ್ದರಿಂದಲೇ ಕಪಟವಿಶ್ವಾಸಿಗಳನ್ನು ಸಮರ್ಥಿಸುತ್ತಿರುವಿರಿ" ಎಂದು ಹೇಳಿದರು.

ಆಗ ಮಸ್ಜಿದುನ್ನಬವಿಯಲ್ಲಿ ಗೊಂದಲದ ವಾತಾವರಣ ನಿರ್ಮಾಣವಾಯಿತು. ಪ್ರವಾದಿ ವರ್ಯರು(ಸ) ಇನ್ನೂ ವೇದಿಕೆಯ ಮೇಲೆಯೇ ಇದ್ದರು. ಔಸ್ ಮತ್ತು ಖಝ್ರುಜ್ ಗೋತ್ರ ದವರು ಮಸೀದಿಯಲ್ಲೇ ಪರಸ್ಪರ ಕಾದಾಡುವುದರಲ್ಲಿದ್ದರು. ಆದರೆ ಪ್ರವಾದಿವರ್ಯರು(ಸ) ಅವರನ್ನು ಸಮಾಧಾನ ಪಡಿಸಿ ವೇದಿಕೆಯಿಂದ ಕೆಳಗಿಳಿದರು.

ಈ ರೀತಿ ಅಬ್ದುಲ್ಲಾ ಬಿನ್ ಉಬೈ ಈ ವದಂತಿಯನ್ನು ಸೃಷ್ಟಿಸುವ ಮೂಲಕ ಒಂದೇ ಏಟಿಗೆ ಹಲವು ಉದ್ದೇಶಗಳನ್ನು ಸಾಧಿಸ ಬಯಸಿದ್ದನು. ಒಂದೆಡೆ ಆತ ಪ್ರವಾದಿ(ಸ) ಮತ್ತು ಹ. ಅಬೂಬಕರ್‌ರವರ(ರ) ಚಾರಿತ್ರ್ಯದ ಮೇಲೆ ಹಲ್ಲೆ ನಡೆಸಿದನು. ಇನ್ನೊಂದೆಡೆ ಇಸ್ಲಾಮೀ ಆಂದೋಲನದ ಅತ್ಯುನ್ನತ ನೈತಿಕ ಮಟ್ಟವನ್ನು ಕಳಂಕಿತಗೊಳಿಸಬಯಸಿದ್ದನು. ಮತ್ತೊಂದೆಡೆ ಆತ ಔಸ್ ಮತ್ತು ಖಝ್ರುಜ್‌ರ ಮಧ್ಯೆ ಗಲಭೆ ಎಬ್ಬಿಸಲು ಪ್ರಯತ್ನಿಸಿದನು. ಮುಹಮ್ಮದ್‌ರ(ಸ) ಪಾಲಿಗೆ ಅದು ಅತ್ಯಂತ ಆತಂಕದ ಕ್ಷಣಗಳಾಗಿದ್ದುವು. ಆದರೂ ಅವರು ಶಾಂತಿ ಮತ್ತು ಸಂಯಮದೊಂದಿಗೆ ವರ್ತಿಸುತ್ತಿದ್ದರು. ಅತ್ತ ಹ. ಆಯಿಶಾರು(ರ) ಕೂಡಾ ಅತ್ಯಂತ ದುಃ ಖಿತರೂ ವ್ಯಾಕುಲಚಿತ್ತರೂ ಆಗಿದ್ದರು. ಅವರ ಅಂದಿನ ಸ್ಥಿತಿಯ ಕುರಿತು ಅವರ ಮಾತುಗಳಲ್ಲೇ ಹೇಳುವುದಾದರೆ:

"ಈ ಸುಳ್ಳಾರೋಪದ ವದಂತಿಗಳು ಸುಮಾರು ಒಂದು ತಿಂಗಳ ಕಾಲ ನಗರದಲ್ಲಿ ಹರಡುತ್ತಲೇ ಇದ್ದುವು. ಪ್ರವಾದಿವರ್ಯರು(ಸ) ಅತ್ಯಧಿಕ ಕಳವಳ ಗೊಂಡಿದ್ದರು. ನಾನು ಅಳುತ್ತಲೇ ಇದ್ದೆ. ನನ್ನ ತಂದೆ ತಾಯಿಗಳೂ ದುಃಖಕ್ಕೀಡಾಗಿದ್ದರು. ಕೊನೆಗೆ ಒಂದು ದಿನ ಪ್ರವಾದಿವರ್ಯರು(ಸ) ಮನೆಗೆ ಬಂದು ನನ್ನ ಬಳಿ ಕುಳಿತು ಕೊಂಡರು. ಈ ಅವಧಿಯಲ್ಲಿ ಅವರು ಎಂದೂ ನನ್ನ ಬಳಿ ಕುಳಿತಿರಲಿಲ್ಲ. ಹ. ಅಬೂಬಕರ್(ರ) ಮತ್ತು ಉಮ್ಮು ರೂಮಾನ್(ರ) (ಆಯಿಶಾರ ತಾಯಿ) ಇಂದು ಯಾವುದಾದರೊಂದು ತೀರ್ಮಾನ ಆಗುತ್ತ ದೆಂದು ಭಾವಿಸಿದ್ದರು. ಆದ್ದರಿಂದ ಅವರೂ ನಮ್ಮ ಹತ್ತಿರ ಬಂದು ಕುಳಿತುಕೊಂಡರು.

ಪ್ರವಾದಿ(ಸ) ನನ್ನನ್ನುದ್ದೇಶಿಸಿ ಹೇಳಿದರು: "ಆಯಿಶಾ! ನನಗೆ ನಿನ್ನ ಬಗ್ಗೆ ಈ ರೀತಿಯ ಸುದ್ದಿ ಸಿಕ್ಕಿದೆ. ನೀನು ನಿರ್ದೋಷಿ ಯಾಗಿದ್ದರೆ ಅಲ್ಲಾಹನು ನಿನ್ನನ್ನು ದೋಷ ಮುಕ್ತಗೊಳಿಸುವನೆಂಬ ನಂಬಿಕೆ ನನಗಿದೆ. ಒಂದು ವೇಳೆ ನಿನ್ನಿಂದ ಏನಾದರೂ ತಪ್ಪು ಆಗಿದ್ದರೆ ಅಲ್ಲಾಹನಲ್ಲಿ ಪಶ್ಚಾತ್ತಾಪ ಪಟ್ಟು ಮರಳಿ ಅವನ ಕ್ಷಮೆ ಯಾಚಿಸು. ದಾಸನು ತನ್ನ ತಪ್ಪನ್ನು ಒಪ್ಪಿಕೊಂಡು ಪಶ್ಚಾತ್ತಾಪ ಪಟ್ಟರೆ ಅಲ್ಲಾಹನು ಕ್ಷಮಿಸಿ ಬಿಡುತ್ತಾನೆ."

ಇದನ್ನು ಕೇಳಿ ನನ್ನ ಕಣ್ಣೀರು ಬತ್ತಿ ಹೋಯಿತು. ನಾನು ಪ್ರವಾದಿವರ್ಯರ(ಸ) ಈ

ಮಾತಿಗೆ ಉತ್ತರ ಕೊಡುವಂತೆ ನನ್ನ ತಂದೆಯವರನ್ನು ಕೇಳಿಕೊಂಡೆ. 'ನನಗೆ ಏನು ಹೇಳಬೇಕೆಂದೇ ತೋಚುವುದಿಲ್ಲ' ಎಂದು ಅವರು ಉತ್ತರಿಸಿದರು. ನಾನು ನನ್ನ ತಾಯಿಯವರಲ್ಲಿ 'ನೀವೇ ಏನಾದರೂ ಹೇಳಿ' ಎಂದು ಕೇಳಿಕೊಂಡೆ. 'ನಾನು ಗಾಬರಿಗೊಂಡಿದ್ದೇನೆ. ನನಗೇನೂ ಹೇಳಲು ಹೊಳೆಯುತ್ತಿಲ್ಲ' ಎಂದು ಅವರು ಉತ್ತರಿ ಸಿದರು. ಆಗ ನಾನು ನಿಮ್ಮ ಕಿವಿಗೆ ಒಂದು ಮಾತು ಬಿದ್ದು ಅದು ಮನದಲ್ಲಿ ಇಳಿದು ಬಿಟ್ಟಿದೆ. ಈಗ ನಾನು ನಿರ್ದೋಷಿ ಎಂದರೆ - ಅಲ್ಲಾಹನಾಣೆ ನಾನು ನಿರ್ದೋಷಿ ಯಾಗಿರುವೆನು - ನೀವು ಅದನ್ನು ಒಪ್ಪಲಾರಿರಿ. ಒಂದು ವೇಳೆ ನಾನು ಮಾಡಿಯೇ ಇಲ್ಲದ ಒಂದು ವಿಷಯವನ್ನು ಒಪ್ಪಿಕೊಂಡರೆ - ನಾನು ಅದನ್ನು ಮಾಡಿಲ್ಲವೆಂಬುದಕ್ಕೆ ಅಲ್ಲಾಹನೇ ಸಾಕ್ಷಿಯಾಗಿದ್ದಾನೆ - ಅದನ್ನು ನೀವು ನಂಬುವಿರಿ. ನಾನು ಆಗ ಯಅ್‌ಕೂಬ್‌ರ(ಅ) ಹೆಸರನ್ನು ಜ್ಞಾಪಿಸಲು ಪ್ರಯತ್ನಿಸಿದೆ ಆದರೆ ನನಗದು ನೆನಪು ಬರಲಿಲ್ಲ. ಈ ಸ್ಥಿತಿಯಲ್ಲಿ ಯೂಸುಫ್‌ರ(ಅ) ತಂದೆ ಹೇಳಿದುದನ್ನೇ ಹೇಳುತ್ತೇನೆ:

"ಫಸಬ್ರುನ್ ಜಮೀಲ್" (ನಾನು ಉತ್ತಮ ಸಹನೆ ಕೈಗೊಳ್ಳುವೆನು) ಎನ್ನುತ್ತಾ ನಾನು ಆಚೆ ಮುಖ ಮಾಡಿ ಮಲಗಿದೆ. ಆಗ ನನ್ನ ಮನದಲ್ಲಿ 'ಅಲ್ಲಾಹನು ನನ್ನ ನಿರ್ದೋಷಿತ್ವವನ್ನು ಬಲ್ಲನು. ಅವನು ಖಂಡಿತ ಅದರ ವಾಸ್ತವಿಕತೆಯನ್ನು ಅನಾವರಣ ಗೊಳಿಸುವನು' ಎಂಬ ಧೈರ್ಯ ಉಂಟಾಯಿತು. ಆದರೆ ಅಲ್ಲಾಹನು ವಹ್ಯ್ - ದಿವ್ಯ ವಾಣಿಯ ಮೂಲಕ ನನ್ನ ನಿರ್ದೋಷಿತ್ವವನ್ನು ಸಾರುವನು ಮತ್ತು ಅದು ಪ್ರಳಯ ಕಾಲದವರೆಗೆ ಓದಲ್ಪಡಲಿದೆ ಎಂದು ನಾನು ಕನಸು ಮನಸ್ಸಿನಲ್ಲೂ ಎಣಿಸಿರಲಿಲ್ಲ. ಅಲ್ಲಾಹನು ನನ್ನ ವತಿಯಿಂದ ಹೇಳುವಷ್ಟು ಉನ್ನತ ವ್ಯಕ್ತಿತ್ವ ನನ್ನದಲ್ಲವೆಂದೇ ನಾನು ಭಾವಿಸಿದ್ದೆ. ನನ್ನ ನಿರ್ದೋಷಿತ್ವವನ್ನು ತಿಳಿಸುವಂತಹ ಯಾವುದಾದರೊಂದು ಕನಸು ಪ್ರವಾದಿವರ್ಯರಿಗೆ(ಸ) ಬೀಳಬಹುದೆಂದು ನಾನು ಬಗೆದಿದ್ದೆ.

ಅಷ್ಟರಲ್ಲಿ ಹಠಾತ್ತನೆ ಪ್ರವಾದಿವರ್ಯರಿಗೆ(ಸ) ದಿವ್ಯವಾಣಿ ಅವತೀರ್ಣವಾಗುವಾಗ ಉಂಟಾಗುವ ಅನುಭವವಾಗಲಾರಂಭಿಸಿತು. ಅದು ಅತ್ಯಂತ ಚಳಿಯ ಕಾಲವಾಗಿದ್ದರೂ ಕೂಡಾ ಅವರ ಮುಖದಲ್ಲಿ ಬೆವರಿನ ಹನಿಗಳು ಕಾಣಿಸಿಕೊಂಡವು. ನಾವೆಲ್ಲರೂ ಮೌನ ವಹಿಸಿದೆವು. ನಾನಂತೂ ನಿಶ್ಚಿಂತಳಾಗಿದ್ದೆ. ಆದರೆ ನನ್ನ ತಂದೆ ತಾಯಿಗಳ ಸ್ಥಿತಿಯು ಬಹಳ ಚಿಂತಾಜನಕ ವಾಗಿತ್ತು. ಅಲ್ಲಾಹನು ಯಾವ ವಿಷಯವನ್ನು ಬಯಲುಗೊಳಿಸುತ್ತಾನೋ ಎಂದು ಅವರು ಗಾಬರಿಗೊಂಡಿದ್ದರು. ಆ ಸ್ಥಿತಿಯು ಕೊನೆ ಗೊಂಡಾಗ ಪ್ರವಾದಿವರ್ಯರು(ಸ) ಬಹಳ ಪುಳಕಿತರಾಗಿದ್ದರು. ಅವರು ಮುಗುಳ್ನಗುತ್ತಾ "ಆಯಿಶಾ! ನಿಮಗೆ ಶುಭವಾಗಲಿ! ಅಲ್ಲಾಹನು ನಿನ್ನ ನಿರ್ದೋಷಿತ್ವವನ್ನು ಪ್ರಕಟಗೊಳಿಸಿರು ವನು" ಎನ್ನುತ್ತಾ ಪ್ರವಾದಿವರ್ಯರು(ಸ) 'ಅನ್ನೂರ್' ಅಧ್ಯಾಯದ 11ರಿಂದ 21ರ ವರೆಗಿನ ಸೂಕ್ತಗಳನ್ನು ಪಠಿಸಿದರು. ನನ್ನ ತಂದೆ ತಾಯಿಗಳು ಎದ್ದು ಪ್ರವಾದಿವರ್ಯರಿಗೆ(ಸ) ಕೃತಜ್ಞತೆ ಸಲ್ಲಿಸುವಂತೆ ನನಗೆ ಸೂಚಿಸಿದರು. "ನಾನು ಅವರಿಗೂ ಕೃತಜ್ಞತೆ ಸಲ್ಲಿಸುವುದಿಲ್ಲ. ನಿಮಗಿಬ್ಬರಿಗೂ ಕೃತಜ್ಞತೆ ಸಲ್ಲಿಸುವುದಿಲ್ಲ.

ನಾನಂತು ಅಲ್ಲಾಹನಿಗೆ ಮಾತ್ರ ವಂದಿಸುತ್ತೇನೆ. ಅವನೇ ನನ್ನ ನಿರ್ದೋಷಿತ್ವ ವನ್ನು ದಿವ್ಯವಾಣಿಯ ಮೂಲಕ ಅವತೀರ್ಣಗೊಳಿಸಿರುವನು. ನೀವಂತೂ ನನ್ನ ಮೇಲಿನ ಆರೋಪವನ್ನು ನಿರಾಕರಿಸಲಿಕ್ಕೂ ಸಿದ್ಧರಿರಲಿಲ್ಲ" ಎಂದು ಹೇಳಿದೆ.

ಅಲ್ಲಾಹನು ಈ ಕುರಿತು ಅವತೀರ್ಣಗೊಳಿಸಿದ ಸೂಕ್ತಗಳು ಹೀಗಿವೆ:

"ಈ ಸುಳ್ಳಾರೋಪವನ್ನು ರಚಿಸಿ ತಂದವರು ನಿಮ್ಮೊಳಗೇ ಇರುವ ಒಂದು ಕೂಟವಾಗಿದ್ದಾರೆ. ಈ ಘಟನೆಯನ್ನು ನಿಮ್ಮ ಪಾಲಿಗೆ ಕೆಟ್ಟದೆಂದು ಭಾವಿಸಬೇಡಿ. ನಿಜವಾಗಿ ಇದು ನಿಮಗೆ ಹಿತಕರವಾಗಿಯೇ ಇದೆ. ಅದರಲ್ಲಿ ಯಾರು ಎಷ್ಟು ಭಾಗವಹಿಸಿದನೋ ಅಷ್ಟೇ ಪಾಪವನ್ನು ಶೇಖರಿಸಿಕೊಂಡನು. ಈ ಹೊಣೆಗಾರಿಕೆಯ ಪ್ರಮುಖ ಪಾಲು ವಹಿಸಿಕೊಂಡವನಿ ಗಂತೂ ಮಹಾಯಾತನೆ ಇದೆ. ನೀವೆಲ್ಲರೂ ಅದನ್ನು ಕೇಳಿದಾಗ ಸತ್ಯವಿಶ್ವಾಸಿ ಸ್ತ್ರೀ-ಪುರುಷರು ತಮ್ಮ ಬಗ್ಗೆ ಸದ್ಭಾವನೆಯನ್ನೇಕೆ ತಾಳಲಿಲ್ಲ ಮತ್ತು ಇದು ಅಪ್ಪಟ ಸುಳ್ಳಾರೋಪವೆಂದೇಕೆ ಹೇಳಲಿಲ್ಲ. ಅವರು (ತಮ್ಮ ಆರೋಪಕ್ಕೆ ಆಧಾರವಾಗಿ) ನಾಲ್ಕು ಸಾಕ್ಷಿದಾರರನ್ನೇಕೆ ತರಲಿಲ್ಲ? ಅವರೀಗ ಸಾಕ್ಷಿಗಳನ್ನು ತಾರದಿರುವುದರಿಂದ ಅಲ್ಲಾಹನ ಬಳಿ ಅವರೇ ಸುಳ್ಳುಗಾರರಾಗಿರುತ್ತಾರೆ. ನಿಮ್ಮ ಮೇಲೆ ಇಹಲೋಕದಲ್ಲೂ ಪರಲೋಕದಲ್ಲೂ ಅಲ್ಲಾಹನ ಅನುಗ್ರಹವೂ ಕೃಪೆಯೂ ಇಲ್ಲದಿರು ತ್ತಿದ್ದರೆ, ನೀವು ಸಿಲುಕಿದಂತಹ ವಿಷಯಗಳ ಫಲವಾಗಿ ಅತಿ ದೊಡ್ಡ ಯಾತನೆ ನಿಮ್ಮ ಮೇಲೆ ಎರಗುತ್ತಿತ್ತು. ನಿಮ್ಮ ಒಂದು ನಾಲಿಗೆಯು ಇನ್ನೊಂದು ನಾಲಿಗೆಯಿಂದ ಈ ಸುಳ್ಳನ್ನೆತ್ತಿಕೊಂಡು ಹೋಗುತ್ತಿರುವಾಗ ಮತ್ತು ನಿಮಗೇನೂ ತಿಳಿಯದಂತಹ ವಿಷಯ ವನ್ನು ನಿಮ್ಮ ಬಾಯಿಯಿಂದ ಹೇಳುತ್ತ ಸಾಗುತ್ತಿದ್ದಾಗ (ನೀವೆಷ್ಟು ದೊಡ್ಡ ತಪ್ಪು ಮಾಡುತ್ತಿದ್ದೀರೆಂದು ಯೋಚಿಸಿರಿ). ನೀವು ಅದನ್ನು ಒಂದು ಸಣ್ಣ ವಿಷಯವೆಂದು ಭಾವಿಸುತ್ತಿದ್ದಿರಿ. ವಸ್ತುತಃ ಅಲ್ಲಾಹನ ಬಳಿ ಇದು ಅತ್ಯಂತ ಗಂಭೀರ ವಿಷಯವಾಗಿತ್ತು.

ನೀವು ಅದನ್ನು ಕೇಳಿದೊಡನೆಯೇ "ಇಂತಹ ಮಾತನ್ನುಚ್ಚರಿಸುವುದು ನಮಗೆ ಭೂಷಣ ವಲ್ಲ. ಅಲ್ಲಾಹ್ ಪರಮ ಪಾವನನು. ಇದಂತೂ ಒಂದು ಮಹಾ ಸುಳ್ಳಾರೋಪ ವಾಗಿದೆ" ಎಂದೇಕೆ ಹೇಳಲಿಲ್ಲ? ನೀವು ಸತ್ಯವಿಶ್ವಾಸಿಗಳಾಗಿದ್ದರೆ ಮುಂದೆಂದೂ ಇಂತಹ ಕೃತ್ಯವೆಸಗ ಬಾರದೆಂದು ಅಲ್ಲಾಹ್ ನಿಮಗೆ ಉಪದೇಶ ಮಾಡುತ್ತಾನೆ. ಅಲ್ಲಾಹ್ ನಿಮಗೆ ಸುಸ್ಪಷ್ಟ ಆದೇಶಗಳನ್ನೀಯುತ್ತಾನೆ ಮತ್ತು ಅವನು ಸರ್ವಜ್ಞನೂ ಯುಕ್ತಿಪೂರ್ಣನೂ ಆಗಿರುತ್ತಾನೆ. ಸತ್ಯವಿಶ್ವಾಸ ಸ್ವೀಕರಿಸಿಕೊಂಡವರ ಸಮೂಹದಲ್ಲಿ ಅಶ್ಲೀಲತೆ ಹರಡಬೇಕೆಂದು ಬಯಸು ವವರು ಇಹಲೋಕದಲ್ಲೂ ಪರಲೋಕದಲ್ಲೂ ವೇದನಾಯುಕ್ತ ಶಿಕ್ಷೆಗೆ ಅರ್ಹರಾಗಿದ್ದಾರೆ. ಅಲ್ಲಾಹ್ ಬಲ್ಲವನು; ನೀವು ಬಲ್ಲವರಲ್ಲ; ನಿಮ್ಮ ಮೇಲೆ ಅಲ್ಲಾಹನ ಅನುಗ್ರಹ ಮತ್ತು ಅವನ ಕೃಪೆ ಇಲ್ಲದಿರುತ್ತಿದ್ದರೆ ಮತ್ತು ಅಲ್ಲಾಹನು ಮಹಾ ವತ್ಸಲನೂ ಕರುಣಾನಿಧಿಯೂ ಆಗಿಲ್ಲದಿರುತ್ತಿದ್ದರೆ (ಈಗ ತಾನೇ ನಿಮ್ಮ ಮಧ್ಯೆ ಹರಡಲ್ಪಟ್ಟ ವಿಷಯವು ಅತ್ಯಂತ ಕೆಟ್ಟ ಪರಿಣಾಮಗಳನ್ನು ತೋರಿಸಿ ಬಿಡುತ್ತಿತ್ತು). ಸತ್ಯವಿಶ್ವಾಸಿಗಳೇ, ಶೈತಾನನ ಹೆಜ್ಜೆ ಗುರುತು ಗಳನ್ನು ಅನುಸರಿಸಿ ನಡೆಯಬೇಡಿರಿ. ಯಾರಾದರೂ ಅವನನ್ನನುಸರಿಸಿದರೆ, ಅವನು ಆತನಿಗೆ

ಅಶ್ಲೀಲ ಹಾಗೂ ಪಾಪದ ಆಜ್ಞೆಯನ್ನೇ ಕೊಡುವನು. ನಿಮ್ಮ ಮೇಲೆ ಅಲ್ಲಾಹನ ಅನುಗ್ರಹ ಮತ್ತು ಕೃಪೆಯಿಲ್ಲದಿರುತ್ತಿದ್ದರೆ, ನಿಮ್ಮ ಪೈಕಿ ಒಬ್ಬನೂ ಪರಿಶುದ್ಧನಾಗಲಾರ. ಆದರೆ ಅಲ್ಲಾಹನೇ ತಾನಿಚ್ಛಿಸಿದವರನ್ನು ಪರಿಶುದ್ಧಗೊಳಿಸುತ್ತಾನೆ ಮತ್ತು ಅಲ್ಲಾಹ್ ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ." **(ಪವಿತ್ರ ಕುರ್‌ಆನ್: 24: 11-21)**

ಇಸ್ಲಾಮಿನ ಕವಿ ಎಂದೇ ಖ್ಯಾತರಾದ ಹಸ್ಸಾನ್ ಬಿನ್ ಸಾಬಿತ್ ಕೂಡಾ ಮಾನವ ಸಹಜ ದೌರ್ಬಲ್ಯದಿಂದ ಈ ವದಂತಿಯಿಂದ ಪ್ರಭಾವಿತರಾಗಿದ್ದರು. ಅವರೂ ವದಂತಿ ಹರಡುವಲ್ಲಿ ಪಾತ್ರ ವಹಿಸಿದ್ದರು. ಸಫ್ವಾನ್ ಬಿನ್ ಮುಅತ್ತಲ್‌ರಿಗೆ ಈ ವದಂತಿಗಳ ಬಗ್ಗೆ ಬಹಳ ನೋವಾಯಿತು. ಅವರ ಪಾಲಿಗೆ ಹ. ಆಯಿಶಾ(ರ) ತಾಯಿ ಸಮಾನರಾಗಿ ದ್ದರು. ಒಂದೆಡೆ ಆಯಿಶಾರ(ರ) ಮೇಲೆ ಸುಳ್ಳಾರೋಪ ಹೊರಿಸಲಾಗುತ್ತಿತ್ತು. ಇನ್ನೊಂದೆಡೆ ಸ್ವತಃ ಅವರನ್ನೂ ಅದರಲ್ಲಿ ಸಿಲುಕಿಸಲಾಗಿತ್ತು. ಅವರು ಬದ್ರ್ ಯುದ್ಧದಲ್ಲಿ ಪ್ರಾಣದ ಹಂಗು ತೊರೆದು ಹೋರಾಡಿದ ಓರ್ವ ಯೋಧರಾಗಿದ್ದರು. ಓರ್ವ ನಾಚಿಕೆ ಸ್ವಭಾವದ ಮಗನಂತೆ ಹ. ಆಯಿಶಾರನ್ನು(ರ) ಅವರು ಕಣ್ಣೆತ್ತಿಯೂ ನೋಡದೆ ಹಾಗೂ ದಾರಿಯ ಲ್ಲಿಡೀ ಅವರನ್ನು ಮಾತಾಡಿಸದೆ ಬಹಳ ಜಾಗರೂಕತೆಯಿಂದ ಸೇನೆಯ ಬಳಿ ತಲುಪಿಸಿ ದ್ದರು. ಹಸ್ಸಾನ್ ಬಿನ್ ಸಾಬಿತ್ ಅವರ ಕುರಿತು ರಚಿಸಿದ ಕವಿತೆಯನ್ನು ಕೇಳಿ ಅವರ ರಕ್ತ ಕುದಿಯತೊಡಗಿತು. ಒಂದು ದಿನ ಸಂದರ್ಭ ಸಾಧಿಸಿ ಅವರು ಹಸ್ಸಾನ್‌ರ ಮೇಲೆ ಖಡ್ಗದಿಂದ ದಾಳಿ ಮಾಡಿದರು. ತೀವ್ರ ಗಾಯ ಆಗಿರಲಿಲ್ಲ. ಸಾಬಿತ್ ಬಿನ್ ಕೈಸ್ ಮಧ್ಯಸ್ಥಿಕೆ ಮಾಡಿ ಅವರನ್ನು ಬಿಡಿಸಿದರು. ಪ್ರವಾದಿವರ್ಯರಿಗೆ(ಸ) ಈ ಸುದ್ದಿ ಮುಟ್ಟಿ ದಾಗ ಇಬ್ಬರನ್ನೂ ಕರೆ ಕಳುಹಿಸಿದರು. ಸಫ್ವಾನ್ ಅವರು ಹಸ್ಸಾನ್‌ರ ಸುಳ್ಳಾರೋಪದಿಂದ ತಮಗಾದ ನೋವು ಮತ್ತು ಅಪಮಾನದಿಂದ ತಾವು ಕೋಪದಿಂದ ಕೆರಳಿ ಹಾಗೆ ಮಾಡಿರುವುದಾಗಿ ಹೇಳಿದರು.

ಅವರಿಗೆ ಪರಿಹಾರ ಧನ ನೀಡುವಂತೆ ಸಫ್ವಾನ್‌ರಿಗೆ(ರ) ಪ್ರವಾದಿ(ಸ) ಸೂಚಿಸಿದರು. ಹಸ್ಸಾನ್ ಕೂಡಾ ಅದಕ್ಕೆ ಒಪ್ಪಿಕೊಂಡರು. ಕೊನೆಗೆ ಪವಿತ್ರ ಕುರ್‌ಆನಿನಲ್ಲಿ ಸುಶೀಲೆ ಯರಾದ ಸತ್ಯವಿಶ್ವಾಸಿ ಮಹಿಳೆಯರ ಮೇಲೆ ವ್ಯಭಿಚಾರದ ಆರೋಪ ಹೊರಿಸುವವರು ತಮ್ಮ ಪರವಾಗಿ ನಾಲ್ಕು ಮಂದಿ ಸಾಕ್ಷಿಗಳನ್ನು ತರಬೇಕೆಂದೂ ಅನ್ಯಥಾ ಅವರಿಗೆ ಆ ಸುಳ್ಳಾರೋಪದ ಕಾರಣ 80 ಛಡಿಯೇಟುಗಳನ್ನು ಬಾರಿಸಬೇಕೆಂದೂ ಆಜ್ಞಾಪಿಸಲಾ ಯಿತು. ಆ ಪ್ರಕಾರ ಈ ಸುಳ್ಳಾರೋಪದಲ್ಲಿ ಭಾಗವಹಿಸಿದ ಹಸ್ಸಾನ್‌ರಿಗೂ 80 ಛಡಿ ಯೇಟುಗಳ ಶಿಕ್ಷೆ ಸಿಕ್ಕಿತು. ತರುವಾಯ ಅವರು ತಮ್ಮ ಕೃತ್ಯದ ಬಗ್ಗೆ ಪಶ್ಚಾತ್ತಾಪ ಪಟ್ಟು ಆಯಿಶಾರ(ರ) ಶೀಲ ಮತ್ತು ಚಾರಿತ್ರ್ಯದ ಗುಣಗಾನ ಮಾಡುವ ಒಂದು ಕವಿತೆ ಯನ್ನು ರಚಿಸಿದರು.

## ಯಹೂದಿಗಳ ವಂಚನೆ

ಹಿ. ಶ. 5ರ ಶವ್ವಾಲ್ ತಿಂಗಳ ಕೊನೆಯ ದಿನಗಳು. ಖೈಬರ್‌ನ ಒಂದು ಕೋಟೆಯಲ್ಲಿ ಯಹೂದಿಗಳ ನದೀರ್ ಗೋತ್ರದ ಸರದಾರರಾದ ಸಲ್ಲಾಮ್ ಬಿನ್ ಅಬಿಲ್

ಹಕೀಕ್, ಹಯ್ಯಿ ಬಿನ್ ಅಖ್ತಬ್, ಕಿನಾನಾ ಬಿನ್ ರಬೀಲ್, ಹೌಝ ಬಿನ್ ಕೈಸ್ ವಾಯಿಲಿ ಮತ್ತು ಅಬೂ ಅಮ್ಮಾರ ವಾಯಿಲಿ ಇದ್ದಾರೆ. ಇವರು ಒಂದು ಒಳ ಸಂಚಿನಲ್ಲಿ ನಿರತ ರಾಗಿದ್ದಾರೆ. ಯಾರಿಗೂ ಕೋಟೆಯೊಳಗೆ ಪ್ರವೇಶಿಸುವ ಅನುಮತಿಯಿಲ್ಲ. ಸಲ್ಲಾಮ್ ತನ್ನ ಸಂಗಾತಿಗಳನ್ನುದ್ದೇಶಿಸಿ ಹೀಗೆ ಹೇಳುತ್ತಾನೆ: "ಮುಹಮ್ಮದ್‌ರು(ಸ) ಯಸ್ರಿಬ್‌ಗೆ ಬಂದ ಮೇಲೆ ಆಗಾಗ ನಮಗಾಗುತ್ತಿರುವ ಅಪಮಾನದ ಬಗ್ಗೆ ಪ್ರತಿಯೊಂದು ಮಗುವಿಗೂ ತಿಳಿದಿದೆ. ಮುಸ್ಲಿಮರ ಒತ್ತಡದ ಮೇರೆಗೆ ನಮಗೆ ಮದೀನಾವನ್ನು ತೊರೆಯಬೇಕಾಗಿ ಬಂದುದು ನಮ್ಮ ಅವಮಾನದ ದೀರ್ಘ ಮತ್ತು ಪಾಠಾರ್ಹ ಕಥೆ ಯಾಗಿದೆ. ಈಗ ನಮ್ಮ ಸೋದರರಾದ ಕುರೈಝಾ ಗೋತ್ರದವರು ಈ ಅಪಮಾನಕ್ಕೆ ಒಳಗಾಗಲಿರುವರು. ಮುಸ್ಲಿಮರ ಏರುತ್ತಿರುವ ಈ ಚಟುವಟಿಕೆಗಳನ್ನು ತಡೆಯದಿದ್ದರೆ ಖೈಬರ್‌ನ ಈ ಕೋಟೆಗಳನ್ನೂ ನಾವು ಕಳಕೊಳ್ಳುವ ದಿನ ದೂರವಿಲ್ಲ. ಯಹೂದಿಗಳ ನಾಮಾವಶೇಷವಾಗಲೂ ಬಹುದು. ಆದ್ದರಿಂದ ನಮ್ಮ ಉಳಿವಿಗಾಗಿ ಏನಾದರೂ ಉಪಾಯ ಹೂಡಲೇ ಬೇಕು."

ಇದನ್ನು ಸಮರ್ಥಿಸುತ್ತಾ ಹಯ್ಯಿ ಬಿನ್ ಅಖ್ತಬ್ ಹೀಗೆ ಹೇಳುತ್ತಾನೆ: "ಮುಸ್ಲಿ ಮರ ವಿರುದ್ಧ ನಿರ್ಣಾಯಕ ಹೋರಾಟ ನಡೆಸುವುದಕ್ಕೆ ಮುಂಚೆ ನಾವು ಕುರೈಶರ ಜೊತೆ ಒಪ್ಪಂದ ಮಾಡಿಕೊಳ್ಳಬೇಕು. ಅವರು ಅಲ್ಲಿಂದ ಮದೀನಾದ ಮೇಲೆ ಆಕ್ರ ಮಣ ಮಾಡಬೇಕು. ನಾವು ಇಲ್ಲಿಂದ ನಮ್ಮ ಸೇನೆಯೊಂದಿಗೆ ಅವರಿಗೆ ನೆರವಾಗಬೇಕು. ಮದೀನಾದೊಳಗೆ ಕುರೈಝಾ ಗೋತ್ರದವರು ಮುಸ್ಲಿಮರನ್ನು ಒಳಗಿಂದಲೇ ಶಿಥಿಲ ಗೊಳಿಸಲು ಪ್ರಯತ್ನಿಸಬೇಕು. ನಮ್ಮ ತೋಟಗಳು, ಕೋಟೆಗಳು ಮತ್ತು ಗದ್ದೆಗಳನ್ನೂ ಮುಸ್ಲಿಮರಿಂದ ಮರಳಿ ಪಡೆಯಬೇಕು. ಇದು ಯುದ್ಧವಿಲ್ಲದೆ ಸಾಧ್ಯವೇ ಇಲ್ಲ."

ಇದನ್ನು ಕೇಳಿ ಕಿನಾನಾ ಹೀಗೆ ಹೇಳುತ್ತಾನೆ: "ಅತ್ಯುತ್ತಮ! ನಿನ್ನ ಸಲಹೆಯು ಅತ್ಯುತ್ತಮವಾಗಿದೆ. ನಾವು ಪರಿಸರದ ಗೋತ್ರ ಗಳನ್ನೂ ನಮ್ಮ ಜೊತೆ ಸೇರಿಸಿಕೊಳ್ಳಬೇಕು. ಮುಸ್ಲಿಮರು ನಮ್ಮೆಲ್ಲರ ಸಮಾನ ಶತ್ರುಗಳಾಗಿ ರುವುದರಿಂದ ಅವರ ವಿರುದ್ಧ ಸಂಘಟಿತ ಹೋರಾಟದ ಅಗತ್ಯವನ್ನು ಅವರಿಗೆ ಮನಗಾಣಿಸಬೇಕು."

ಈ ರಹಸ್ಯ ಸಭೆಯ ಮರುದಿನವೇ ಸಲ್ಲಾಮ್‌ನ ನೇತೃತ್ವದಲ್ಲಿ ಯಹೂದಿಗಳ ಒಂದು ಪ್ರತಿನಿಧಿ ತಂಡ ಕುರೈಶರೊಂದಿಗೆ ಸಂಚು ನಡೆಸಲು ಮಕ್ಕಾದ ಕಡೆಗೆ ತೆರಳುತ್ತದೆ.

ದಾರುನ್ನದ್‌ವಾದಲ್ಲಿ ಮಕ್ಕಾದ ಕುರೈಶರ ಎಲ್ಲ ಹಿರಿಯರೂ ಸೇರಿದ್ದಾರೆ. ಸಲ್ಲಾಮ್ ಅವರನ್ನುದ್ದೇಶಿಸಿ ಹೀಗೆ ಹೇಳುತ್ತಾನೆ: "ಮುಸ್ಲಿಮರು ನಮ್ಮೆಲ್ಲರ ಪಾಲಿಗೆ ಶಾಶ್ವತ ಅಪಾಯವಾಗಿದ್ದಾರೆ. ನಾವು ಅವರನ್ನು ಸಂಘಟಿತರಾಗಿ ಎದುರಿಸದಿದ್ದರೆ ನಾವೆಲ್ಲರೂ ಒಂದೊಂದಾಗಿ ನಾಶವಾಗಲಿದ್ದೇವೆ. ನೀವು ಮದೀನಾದ ಮೇಲೆ ಒಂದು ಪ್ರಬಲ ಧಾಳಿ ಮಾಡುವುದಾದರೆ ನಾವು ನಿಮ್ಮ ಜೊತೆ ಸೇರಿ ಮುಸ್ಲಿಮರ ವಿರುದ್ಧ ಧೀರ ಹೋರಾಟ ನಡೆಸುವೆವು ಎಂಬ ಭರವಸೆಯನ್ನು ನಿಮಗೆ ಕೊಡಲಿಕ್ಕಾಗಿ ನಾವಿಲ್ಲಿಗೆ ಬಂದಿದ್ದೇವೆ."

ಅಷ್ಟರಲ್ಲಿ ಅಬೂಸುಫ್ಯಾನ್‌ನ ಹಿಂದಿನಿಂದ ಯಾರೋ ಅವರನ್ನು ಮುಟ್ಟಿ ಕರೆಯುತ್ತಾನೆ. ಆತ ಅವರನ್ನುದ್ದೇಶಿಸಿ ಹೀಗೆ ಪಿಸು ನುಡಿಯುತ್ತಾನೆ: "ಈ ಜನರು ಧಾರ್ಮಿಕವಾಗಿ ಮುಸ್ಲಿಮರಿಗೆ ಹೆಚ್ಚು ನಿಕಟರಾಗಿರುವರು. ಎಲ್ಲಾದರೂ ಇವರು ನಮ್ಮನ್ನು ವಂಚಿಸುವರೋ ಏನೋ ಎಂಬುದನ್ನು ಸರಿಯಾಗಿ ಪರೀಕ್ಷಿಸಿ ತಿಳಿದು ಕೊಳ್ಳಿರಿ."

ಅಬೂಸುಫ್ಯಾನ್‌ಗೆ ಅವನ ಮಾತು ಸರಿಯೆನಿಸಿತು ಅವರು ಸಲ್ಲಾಮ್‌ರನ್ನುದ್ದೇಶಿಸಿ: "ಓ ಯಹೂದಿಗಳೇ! ನೀವೂ ಹಿಂದಿನ ದೈವಿಕ ಗ್ರಂಥಗಳನ್ನು ನಂಬುವವರು ಮುಹಮ್ಮದ್‌ರೂ(ಸ) ಅದನ್ನು ನಂಬುತ್ತಾರೆ. ಈಗ ಹೇಳಿ ನಮ್ಮ ಧರ್ಮ ಉತ್ತಮವೋ ಮುಹಮ್ಮದ್‌ರ(ಸ) ಧರ್ಮವೋ?" ಎಂದು ಕೇಳುತ್ತಾರೆ.

ಯಾವುದೇ ಧರ್ಮದ ನೈಜ ಅನುಯಾಯಿಗಳಾಗಿರದಿದ್ದು ಧರ್ಮವನ್ನು ಕೇವಲ ತಮ್ಮ ಸ್ವಾರ್ಥ ಹಿತಾಸಕ್ತಿಗಾಗಿ ಬಳಸುವವರು ತಮ್ಮ ಧ್ಯೇಯ ಸಾಧನೆಗಾಗಿ ಸುಳ್ಳು ಹೇಳುವುದಕ್ಕೆ ಹೇಸುವುದಿಲ್ಲ. ಆದ್ದರಿಂದ ಅಬೂಸುಫ್ಯಾನ್‌ರ ಮಾತಿಗೆ ಉತ್ತರವಾಗಿ ಸಲ್ಲಾಮ್ ಹೀಗೆ ಹೇಳುತ್ತಾನೆ:

"ನಿಮ್ಮ ಧರ್ಮವು ಮುಹಮ್ಮದ್‌ರ(ಸ) ಧರ್ಮಕ್ಕಿಂತ ಉತ್ತಮವಾಗಿದೆ. ನೀವು ಮುಹಮ್ಮದ್‌ರಿಗಿಂತ(ಸ) ಹೆಚ್ಚು ಸತ್ಯಸಂಧರಾಗಿದ್ದೀರಿ."

ಮೂರ್ತಿ ಪೂಜೆ ಮಾಡದ ಓರ್ವ ಯಹೂದಿಯ ಬಾಯಿಯಿಂದ ಈ ಮಾತುಗಳನ್ನು ಕೇಳಿ ಆ ಮೂರ್ತಿ ಪೂಜಕರ ಮುಖವು ಸಂತೋಷದಿಂದ ಅರಳಿತು. ಯಹೂದಿಗಳ ನೆರವಿನಿಂದ ಮುಸ್ಲಿಮರ ವಿರುದ್ಧ ಯುದ್ಧ ಹೂಡಲು ಸರ್ವಾನುಮತದಿಂದ ನಿರ್ಣಯಿಸಲಾಗುತ್ತದೆ.

ಈ ಕುರಿತು ಪವಿತ್ರ ಕುರ್‌ಆನ್ ಮಾಡಿರುವ ವಿಮರ್ಶೆಯು ಹೀಗಿದೆ:"ಗ್ರಂಥ ಜ್ಞಾನದಿಂದ ಒಂದಂಶ ನೀಡಲ್ಪಟ್ಟವರನ್ನು ನೀವು ಕಾಣಲಿಲ್ಲವೇ? ಅವರು 'ಜಿಬ್ತ್' ಮತ್ತು 'ತಾಗೂತ್'ಗಳನ್ನು ನಂಬುತ್ತಾರೆ. ಅವರು ಸತ್ಯನಿಷೇಧಿಗಳ ಕುರಿತು, ಸತ್ಯವಿಶ್ವಾಸಿಗಳಿಗಿಂತ ಇವರೇ ಹೆಚ್ಚು ನೇರಮಾರ್ಗದಲ್ಲಿದ್ದಾರೆಂದು ಹೇಳುತ್ತಾರೆ. ಅಲ್ಲಾಹನು ಶಪಿಸಿರುವುದು ಇಂತಹವರನ್ನೇ. ಅಲ್ಲಾಹ್ ಯಾರನ್ನಾದರೂ ಶಪಿಸಿಬಿಟ್ಟರೆ ನೀವು ಅವನಿಗೆ ಯಾವ ಸಹಾಯಕನನ್ನೂ ಕಾಣಲಾರಿರಿ." **(ಪವಿತ್ರ ಕುರ್‌ಆನ್: 4: 51-52)**

ನದೀರ್ ಗೋತ್ರದ ಈ ಪ್ರತಿನಿಧಿ ತಂಡವು ತನ್ನ ವಿಜಯದ ಕುರಿತು ಸಂತೋಷ ಮತ್ತು ಹೆಮ್ಮೆಯೊಂದಿಗೆ ಗತ್‌ಫಾನ್ ಗೋತ್ರದವರ ಬಳಿ ತಲಪುತ್ತದೆ. ಸ್ವಲ್ಪ ಚರ್ಚೆಯ ಬಳಿಕ ಅವರನ್ನೂ ಮುಸ್ಲಿಮರ ವಿರುದ್ಧ ಯುದ್ಧಕ್ಕೆ ಪ್ರೇರೇಪಿಸಲಾಗುತ್ತದೆ.

## ಸೈನ್ಯಗಳು ಮತ್ತು ಕಂದಕ

ಈ ಸುದ್ದಿಯು ಪ್ರವಾದಿ ಮುಹಮ್ಮದ್‌ರಿಗೆ(ಸ) ತಲುಪುತ್ತದೆ. ಸತ್ಯನಿಷೇಧಿಗಳು ನಾಲ್ಕೂ ದಿಕ್ಕುಗಳಿಂದ ಮದೀನಾದ ಮೇಲೆ ದಾಳಿ ಮಾಡಲಿದ್ದಾರೆಂಬುದು ಪ್ರವಾದಿವರ್ಯರಿಗೆ(ಸ) ಖಾತ್ರಿಯಾಗುತ್ತದೆ. ಅವರು ತಮ್ಮ ಸಂಗಾತಿಗಳನ್ನು ಸಮಾಲೋಚನೆಗಾಗಿ ಒಟ್ಟು

ಗೂಡಿಸುತ್ತಾರೆ. ಮುಸ್ಲಿಮರ ಗಣ್ಯರೆಲ್ಲಾ ಒಂದೆಡೆ ಸಭೆ ಸೇರಿದಾಗ ಪ್ರವಾದಿವರ್ಯರ(ಸ) ಮುಂದೆ ಯುದ್ಧದ ಎಲ್ಲ ಸಂಭವನೀಯ ವಿಧಾನಗಳನ್ನು ಇಡುತ್ತಾರೆ. ಮದೀನಾದ ರಕ್ಷಣೆಗೆ ಹಲವು ಸಲಹೆಗಳು ಬರುತ್ತವೆ. ನಗರದ ಪೂರ್ವ ಮತ್ತು ದಕ್ಷಿಣ ಭಾಗದಲ್ಲಿ ಖರ್ಜೂರದ ದಟ್ಟವಾದ ತೋಟಗಳಿರುವುದರಿಂದ ಅಲ್ಲಿಂದ ಆಕ್ರಮಣದ ಸಾಧ್ಯತೆಯು ಬಹಳ ಕಡಿಮೆಯಾಗಿತ್ತು. ಏಕೆಂದರೆ ಆ ತೋಟಗಳ ಮೂಲಕ ಸೈನ್ಯವು ಬರುವುದು ಬಹಳ ಕಷ್ಟ ಸಾಧ್ಯವಾಗಿತ್ತು. ಅಲ್ಲಿಂದ ಒಂದೊಂದು ಸಾಲು ಸೈನಿಕರು ಮಾತ್ರ ಬರಬಹುದಾಗಿತ್ತು. ಹಾಗೆ ಅವರು ಬಂದರೆ ಅವರನ್ನು ಸುಲಭದಲ್ಲಿ ಮುಗಿಸಿ ಬಿಡ ಬಹುದಿತ್ತು. ಆದರೆ ನಗರದ ಉತ್ತರ ಭಾಗದಿಂದ ಶತ್ರು ಸೇನೆಯನ್ನು ತಡೆಯುವ ಸೂಕ್ತ ವ್ಯವಸ್ಥೆ ಇರಲಿಲ್ಲ.

ಈ ಬಗ್ಗೆ ಎಲ್ಲರೂ ತಮ್ಮ ಕಳವಳವನ್ನು ವ್ಯಕ್ತ ಪಡಿಸಿದಾಗ ಹ. ಸಲ್ಮಾನ್ ಫಾರ್ಸಿಯವರು(ರ) ಹೀಗೆ ಹೇಳಿದರು: "ಪ್ರವಾದಿವರ್ಯರೇ! ಮದೀನಾದ ಉತ್ತರದಲ್ಲಿರುವ ಸ್ಥಿತಿಯು ಇರಾನಿಗಳಿಗೆ ಮುಂದಾದರೆ ಅವರು ಶತ್ರುಗಳನ್ನು ಎದುರಿಸಲಿಕ್ಕಾಗಿ ಕಂದಕಗಳನ್ನು ತೋಡುತ್ತಿದ್ದರು. ಆದ್ದರಿಂದ ಅಲ್ಲಿಯೂ ಕಂದಕವನ್ನು ತೋಡುವ ಮೂಲಕ ಆ ದಿಕ್ಕನ್ನೂ ಸುರಕ್ಷಿತಗೊಳಿಸ ಬಹುದೆಂಬುದು ನನ್ನ ಭಾವನೆ."

ಯುದ್ಧ ಸಾಮಗ್ರಿಗಳ ಕೊರತೆಯಿಂದಾಗಿ ಈ ಸಲಹೆಯನ್ನು ಎಲ್ಲರೂ ಮೆಚ್ಚುತ್ತಾರೆ. ಇದರಿಂದ ರಾತ್ರಿಯ ವೇಳೆ ಶತ್ರುಗಳು ಹಠಾತ್ತನೆ ಆಕ್ರಮಣ ಮಾಡುವ ಭಯವೂ ಇರುವುದಿಲ್ಲ. ಪ್ರವಾದಿ(ಸ) ಈ ಸಲಹೆಯನ್ನು ಸ್ವೀಕರಿಸಿ ಹತ್ತು-ಹತ್ತು ಮಂದಿಯ ತಂಡಗಳನ್ನು ರೂಪಿಸುತ್ತಾರೆ. ಪ್ರತಿಯೊಂದು ತಂಡದ ಪಾಲಿಗೆ 20 ಗಜಗಳಷ್ಟು ನೆಲವನ್ನು ಅಗೆಯುವ ಕೆಲಸ ಬರುತ್ತದೆ. ತನ್ಮೂಲಕ 10 ಅಡಿ ಆಳ, 13½ ಅಡಿ ಅಗಲ ಮತ್ತು ಸುಮಾರು ಒಂದು ಮೈಲಿ ಮತ್ತು 700 ಗಜದಷ್ಟು ಉದ್ದದ ಒಂದು ಕಂದಕ ನಿರ್ಮಿಸುವ ಯೋಜನೆ ಮಾಡಲಾಗುತ್ತದೆ.

ಶತ್ರು ಸೇನೆಯು ದಿನದಿಂದ ದಿನಕ್ಕೆ ಹತ್ತಿರ ಬರುತ್ತಾ ಇದೆ. ಚಳಿಯೂ ವಿಪರೀತವಾಗುತ್ತಿದೆ. ಆಹಾರದ ಕೊರತೆಯಿಂದ ಕಳವಳ ಉಂಟಾಗಿದೆ. ಹಸಿವು ವ್ಯಾಪಿಸಿದೆ. ಮುಸ್ಲಿಮರು ಬಹಳ ನಿತ್ರಾಣರಾಗಿದ್ದಾರೆ. ಪ್ರವಾದಿ(ಸ) ಹಸಿವಿನಿಂದಾಗಿ ಹೊಟ್ಟೆಯ ಮೇಲೆ ಮೂರು ಕಲ್ಲುಗಳನ್ನು ಬಿಗಿದು ಕಟ್ಟಿದ್ದಾರೆ.

ಮುಹಮ್ಮದ್‌ರ(ಸ) ಡೇರೆಯನ್ನು ಝುಬಾಬ್ ಬೆಟ್ಟದ ಮೇಲೆ ಹಾಕಲಾಗಿದೆ. ಅಲ್ಲಿಂದ ಅವರು ಕಂದಕ ತೋಡುವ ಕಾರ್ಯದ ಮೇಲ್ನೋಟ ಸುಲಭದಿಂದ ಮಾಡ ಬಹುದಾಗಿತ್ತು. ಪ್ರವಾದಿ(ಸ) ಕೇವಲ ಮೇಲ್ನೋಟ ವಹಿಸುತ್ತಿದ್ದುದಲ್ಲ, ಬದಲಾಗಿ ಸ್ವತಃ ಕಂದಕ ತೋಡುವ ಕಾರ್ಯದಲ್ಲಿಯೂ ಭಾಗವಹಿಸುತ್ತಿದ್ದರು. ತಮ್ಮ ಸಂಗಾತಿಗಳ ಜೊತೆಯಲ್ಲಿ ಅವರು ಓರ್ವ ಕಾರ್ಮಿಕನಂತೆ ಪಿಕ್ಕಾಸು ಬಳಸಿ ಹೊಂಡ ತೋಡುತ್ತಿದ್ದರು. ಒಂದೆಡೆ ಒಂದು ಬಂಡೆಕಲ್ಲು ಸಿಕ್ಕಿ ಬಿಡುತ್ತದೆ. ಪ್ರವಾದಿ ಸಂಗಾತಿಗಳ ಪೈಕಿ ಯಾರೂ ಅದನ್ನು

ಒಡೆಯಲು ಶಕ್ತರಾಗುವುದಿಲ್ಲ. ಆಗ ಪ್ರವಾದಿ(ಸ) ಸ್ವತಃ ಅಲ್ಲಿಗೆ ತಲುಪುತ್ತಾರೆ. ಮೂರೇ ಏಟುಗಳೊಂದಿಗೆ ಅದನ್ನು ನುಚ್ಚುನೂರುಗೊಳಿಸಿ ಬಿಡುತ್ತಾರೆ. ಆಗಲೂ ಹಸಿವೆಯ ಕಾರಣದಿಂದ ಪ್ರವಾದಿವರ್ಯರ(ಸ) ಉದರದ ಮೇಲೆ ಕಲ್ಲು ಕಟ್ಟಲ್ಪಟ್ಟಿತ್ತು.

ಕಂದಕ ತೋಡುವ ಕೆಲಸ ಬಹಳ ಶೀಘ್ರ ಗತಿಯಿಂದ ಸಾಗುತ್ತಿದೆ. ಕೆಲವರು ಗಾರೆ ಮತ್ತು ಪಿಕ್ಕಾಸು ಬಳಸಿ ಅಗೆಯುವ ಕೆಲಸ ಮಾಡಿದರೆ ಇನ್ನು ಕೆಲವರು ಮಣ್ಣನ್ನು ಹೊತ್ತು ಕೊಂಡು ಹೋಗಿ ದೂರ ಎಸೆಯುತ್ತಿದ್ದಾರೆ. ಸಹಾಬಿಗಳ ವಿಭಿನ್ನ ತಂಡಗಳು ಕವಿತೆಗಳನ್ನು ಹಾಡುತ್ತಾ ಕೆಲಸದಲ್ಲಿ ನಿರತವಾಗಿವೆ. ಒಂದು ತಂಡವು "ನಾವು ಜೀವನದುದ್ದಕ್ಕೂ ಜಿಹಾದ್ ಮಾಡುವ ವಾಗ್ದಾನವನ್ನು ಪ್ರವಾದಿವರ್ಯರ(ಸ) ಕೈಯಲ್ಲಿ ಮಾಡಿರುವೆವು" ಎಂದರೆ, ಇನ್ನೊಂದು ತಂಡವು "ಶತ್ರುಗಳು ನಮ್ಮ ಮೇಲೆ ಎರಗಲು ಬರುತ್ತಿದ್ದಾರೆ. ಅವರು ನಮ್ಮನ್ನು ಸತ್ಯ ಮಾರ್ಗದಿಂದ ಹಿಂಜರಿಸ ಬಯಸುತ್ತಾರೆ. ಆದರೆ ನಾವೆಂದೂ ಈ ಮಾರ್ಗ ದಿಂದ ಹಿಂಜರಿಯುವವರಲ್ಲ."

ಇತ್ತ ಮುಸ್ಲಿಮರು ರಾತ್ರಿ ಹಗಲೆನ್ನದೆ ಕೆಲಸ ಮಾಡಿ ಕಂದಕ ತೋಡುವ ಕಾರ್ಯ ಪೂರ್ತಿಗೊಳಿಸಿದರೆ ಅತ್ತ ಕುರೈಶರ ಸೇನೆಯು ಬಂದು ಮುಟ್ಟಿದೆ. ಅಬೂಸುಫ್ಯಾನ್ ಆ ಸೇನೆಯ ದಂಡನಾಯಕನಾಗಿದ್ದಾನೆ. ಕುರೈಶ್ ಮತ್ತು ಅವರ ಮಿತ್ರ ಗೋತ್ರಗಳ ಒಟ್ಟು ನಾಲ್ಕು ಸಾವಿರ ಯೋಧರು ಸೈನ್ಯದಲ್ಲಿದ್ದಾರೆ. ಮುನ್ನೂರು ಕುದುರೆ ಮತ್ತು ಸಾವಿರದ ಐನೂರು ಒಂಟೆಗಳಿವೆ. ಅರೇಬಿಯಾದ ವಿಭಿನ್ನ ಗೋತ್ರಗಳ ಸೇನೆಯೂ ಅವರ ಜೊತೆ ಸೇರುತ್ತದೆ. ಹೀಗೆ ಅದರ ಸಂಖ್ಯಾಬಲವು ಹತ್ತು ಸಾವಿರಕ್ಕಿಂತಲೂ ಹೆಚ್ಚಾಗುತ್ತದೆ. ಮದೀನಾದ ಬಳಿ ತಲುಪಿ ಸೇನೆಯು ಎರಡು ಭಾಗಗಳಲ್ಲಿ ವಿಂಗಡನೆಯಾಗುತ್ತದೆ. ಕುರೈಶರು ರೂಮ ಎಂಬ ಬಾವಿಯ ಬಳಿ ಠಿಕಾಣಿ ಹೂಡುತ್ತಾರೆ. ಉಹುದ್ ಯುದ್ಧದ ವೇಳೆಯೂ ಅವರು ಅಲ್ಲಿಯೇ ಬಿಡಾರ ಹೂಡಿದ್ದರು. ಇನ್ನುಳಿದ ಸೇನೆಯು ಉಹುದ್ ಪರ್ವತದ ಪಶ್ಚಿಮ ಭಾಗದಲ್ಲಿರುವ ಕನಾತ್ ಮತ್ತು ಬತ್‌ಹಾನ್ ಕಣಿವೆಗಳ ಸಂಗಮದಲ್ಲಿ ತಂಗುತ್ತದೆ. ಈ ರೀತಿ ಎರಡೂ ಸೇನೆಗಳು ಸಮೀಪವೇ ಇದ್ದು ಪರಸ್ಪರ ಸಮಾಲೋಚನೆಯ ಅನುಕೂಲತೆಯಿದೆ. ಮಾತ್ರವಲ್ಲ ಬೇರೆ ಬೇರೆ ಇದ್ದು ಎಲ್ಲ ರೀತಿಯ ಗೊಂದಲ ಮತ್ತು ತಪ್ಪು ಕಲ್ಪನೆಗಳಿಂದಲೂ ಸುರಕ್ಷಿತವಾಗಿದ್ದುವು.

ಮದೀನಾದ ಪರಿಸರದಲ್ಲಿ ಇಷ್ಟು ದೊಡ್ಡ ಸೇನೆಯು ಈ ಹಿಂದೆ ಎಂದೂ ನೆರೆದಿರಲಿಲ್ಲ. ಮಾತ್ರವಲ್ಲ ಅರೇಬಿಯಾದ ಯಾವುದೇ ಒಂದು ಭಾಗದಲ್ಲಿ ಇಷ್ಟು ದೊಡ್ಡ ಸೇನೆಯು ಸೇರಿರಲಿಲ್ಲ. ಈ ಬೃಹತ್ ಸೇನೆಯನ್ನು ಎದುರಿಸಲು ಮದೀನಾದಲ್ಲಿರುವ ಸೈನಿಕರ ಸಂಖ್ಯೆ ಕೇವಲ ಮೂರು ಸಾವಿರವಾಗಿತ್ತು. ಆ ಸೇನೆಯು ನಿರಂತರ ಹಸಿವು ಮತ್ತು ಶ್ರಮದಿಂದಾಗಿ ಬಹಳ ಬಲಹೀನವಾಗಿದೆ. ಅವರು ತಮ್ಮ ಮಕ್ಕಳು ಮಡದಿಗಳನ್ನು ಕೋಟೆಯಂತಹ ಮನೆಗಳಿಗೆ ತಲುಪಿಸಿದ್ದಾರೆ. ಅವರಿಗೆ ಕುರೈಝಾ ಗೋತ್ರದ ಯಹೂದಿಗಳಿಂದ ಯಾವ ಸಮಯದಲ್ಲೂ ಆಕ್ರಮಣವಾಗುವ ಭಯವಿದೆ. ಈ ಯಹೂದಿ ಗೋತ್ರವು ಯಾವ

ಕ್ಷಣದಲ್ಲಿಯೂ ತನ್ನ ವಾಗ್ದಾನವನ್ನು ಮುರಿದು ದಾಳಿ ಮಾಡುವ ಸಾಧ್ಯತೆಯಿತ್ತು.

ತೀವ್ರ ಚಳಿ, ಆಹಾರದ ಕೊರತೆ, ಪ್ರತಿಕೂಲ ಪರಿಸ್ಥಿತಿ, ಶತ್ರು ಸೇನೆಯ ಆಧಿಕ್ಯ, ನಗರದೊಳಗೆ ಯಹೂದಿಗಳ ಆಕ್ರಮಣದ ಭಯ ಮತ್ತು ಇಂತಹುದೇ ಹಲವಾರು ಕಠಿಣ ಪರಿಸ್ಥಿತಿಯಲ್ಲಿ ಮುಸ್ಲಿಮ್ ಯೋಧರು ತಮ್ಮ ಪ್ರಾಣದ ಹಂಗು ತೊರೆದು ಯುದ್ಧಕ್ಕೆ ಅಣಿಯಾಗಿದ್ದಾರೆ.

ಶತ್ರು ಸೇನೆಯು ಸಾಕಷ್ಟು ಆಹಾರ ಸಾಮಗ್ರಿಗಳನ್ನು ಜತೆಗೆ ತಂದಿದೆ. ಆಹಾರದ ಕುಮ್ಮಕ್ಕಿನ ವ್ಯವಸ್ಥೆಯನ್ನೂ ಮಾಡಿಕೊಂಡಿದೆ. ಆದ್ದರಿಂದ ತನ್ನ ಮುತ್ತಿಗೆಯನ್ನು ಬಹಳ ಕಾಲದವರೆಗೆ ಮುಂದುವರಿಸಲು ಶಕ್ತವಾಗಿದೆ. ಅದರ ಎದುರಿಗೆ ಮುಸ್ಲಿಮರ ಮಟ್ಟಿಗೆ ಹೆಚ್ಚಿನ ಕಾಲ ಮುತ್ತಿಗೆಗೊಳಗಾಗುವುದು ಅಪಾಯಕಾರಿಯಾಗಿತ್ತು. ಮುಸ್ಲಿಮರು ಎದುರಿಸುತ್ತಿದ್ದ ಸಂಕಷ್ಟಗಳಲ್ಲದೆ ಯಹೂದಿಗಳ ಒಳಸಂಚೂ ಒಂದು ಪ್ರಮುಖ ತೊಡಕಾಗಿತ್ತು.

ನದೀರ್ ಗೋತ್ರದ ಸರದಾರ ಹಯ್ಯಿ ಬಿನ್ ಅಖ್ತಬ್ ಕುರೈಝಾ ಗೋತ್ರದ ಸರದಾರನಾದ ಕಅಬ್ ಬಿನ್ ಅಸದ್‌ರ ಬಳಿಗೆ ಹೋಗುತ್ತಾರೆ. ಕಅಬ್ ಈ ಮೊದಲು ಕುರೈಝಾ ಗೋತ್ರದ ವತಿಯಿಂದ ಮುಸ್ಲಿಮರೊಂದಿಗೆ ಶಾಂತಿಯುತ ಸಹಬಾಳ್ವೆಯ ಒಪ್ಪಂದ ಮಾಡಿಕೊಂಡಿದ್ದ. ಆದರೆ ಹಯ್ಯಿ ಬಿನ್ ಅಖ್ತಬ್ ಧರ್ಮ, ಗೋತ್ರ ಮತ್ತು ಕುಲ ಸಂಬಂಧದ ಆಣೆ ಹಾಕಿ ಅವನನ್ನು ಬಲೆಗೆ ಹಾಕಿಕೊಳ್ಳುತ್ತಾನೆ. ಮೊದ ಮೊದಲು ಮುಹಮ್ಮದ್‌ರ(ಸ) ಸತ್ಯಸಂಧತೆ ಮತ್ತು ವಚನ ಪಾಲನೆಯ ಕುರಿತು ಮುಕ್ತ ಕಂಠ ದಿಂದ ಪ್ರಶಂಸಿಸುತ್ತಿದ್ದ. ಕಅಬ್ ಕೊನೆಗೆ ಹಯ್ಯಿ ಬನ್ ಅಖ್ತಬ್‌ನ ವಾಚಾಳಿತನ, ಸ್ವಜನ ಪಕ್ಷಪಾತ ಮತ್ತು ವಂಚನೆಯ ಜಾಲದಲ್ಲಿ ಸಿಲುಕಿ ಮುಹಮ್ಮದ್‌ರೊಡನೆ(ಸ) ಮಾಡಿಕೊಂಡ ಒಪ್ಪಂದವನ್ನು ಏಕಪಕ್ಷೀಯವಾಗಿ ಮುರಿಯುವ ನಿರ್ಧಾರ ಮಾಡುತ್ತಾನೆ.

ಈ ರಹಸ್ಯ ಮಾತುಕತೆಯ ಸುದ್ದಿ ಪ್ರವಾದಿ ಮುಹಮ್ಮದ್‌ರಿಗೆ(ಸ) ಸಿಗುತ್ತಲೇ ಅವರು ತಮ್ಮ ನಾಲ್ಕು ಮಂದಿ ಸಂಗಾತಿಗಳನ್ನು ಅದರ ಬಗ್ಗೆ ತನಿಖೆ ನಡೆಸಲು ನಿಯೋಗಿಸುತ್ತಾರೆ.

ಕುರೈಝಾ ಗೋತ್ರದ ಸರದಾರ ಕಅಬ್ ಬಿನ್ ಅಸದ್ ತನ್ನ ಮನೆಯಿಂದ ಎಲ್ಲಿಗೋ ಹೊರಡಲು ಸಿದ್ಧವಾಗುತ್ತಿದ್ದಾನೆ. ಅಷ್ಟರಲ್ಲಿ ಆತನ ಸೇವಕನೊಬ್ಬ ಬಂದು, ಸಅದ್ ಬಿನ್ ಮುಆದ್, ಸಅದ್ ಬಿನ್ ಉಬಾದಾ, ಅಬ್ದುಲ್ಲಾ ಬಿನ್ ರವಾಹಾ ಮತ್ತು ಖವ್ವಾತ್ ಬಿನ್ ಝುಬೈರ್(ರ) ತಮ್ಮನ್ನು ಭೇಟಿಯಾಗಲು ಬಂದಿರುವರೆಂದು ತಿಳಿಸುತ್ತಾನೆ. ಕಅಬ್ ಅವರನ್ನು ಆದರದಿಂದ ಬರಮಾಡಿಕೊಂಡು ಒಳಗೆ ಕೂರಿಸುತ್ತಾನೆ. ಅನಂತರ ಅವರ ಆಗಮನದ ಉದ್ದೇಶವನ್ನು ಕೇಳುತ್ತಾ:

"ತಾವೀಗ ಸುಮ್ಮನೆ ಬಂದಿರಲಿಕ್ಕಿಲ್ಲ."

ಸಅದ್: "ಹೌದು, ನಿಮ್ಮ ಊಹೆ ಸರಿ."

ಕಅಬ್: "ಹೇಳಿರಿ, ಏನು ಸಮಾಚಾರ?"

ಸಅದ್: "ಹಯ್ಯಿ ಬಿನ್ ಅಖ್ತಬ್ ತಮ್ಮನ್ನು ಮುಸ್ಲಿಮರೊಂದಿಗೆ ಮಾಡಿಕೊಂಡಿರುವ ಒಪ್ಪಂದ ಮುರಿಯುವಂತೆ ಹೇಳಿರುವನೆಂದು ನಮಗೆ ತಿಳಿದು ಬಂದಿದೆ."

ಕಅಬ್: "ಇದು ಒಪ್ಪಂದ ಮುರಿಯುವ ಪ್ರಶ್ನೆಯೇನಲ್ಲ. ಇದು ನಮ್ಮ ಉಳಿವಿನ ಪ್ರಶ್ನೆ. ಈ ಬಗ್ಗೆ ನಾವು ಅಲಕ್ಷ್ಯರಾಗುವುದು ಸಾಧ್ಯವಿಲ್ಲ."

ಸಅದ್: "ನೀವು ಮುಹಮ್ಮದ್‌ರ(ಸ) ಸತ್ಯಸಂಧತೆ ಮತ್ತು ವಚನಪಾಲನೆಯ ಬಗ್ಗೆ ನಂಬಿಕೆ ಉಳ್ಳವರಾಗಿದ್ದು ಈಗ ಹಯ್ಯಿ ಬಿನ್ ಅಖ್ತಬ್‌ರ ಮಾತು ಕೇಳಿ ನಿಮ್ಮ ವಚನವನ್ನೇ ಭಂಗಗೊಳಿಸುತ್ತಿರುವಿರಾ?"

ಕಅಬ್: "ಮುಹಮ್ಮದ್(ಸ) ಯಾರು? ನಮ್ಮ ಮತ್ತು ಅವರ ಮಧ್ಯೆ ಯಾವುದೇ ಒಪ್ಪಂದ ಇಲ್ಲವಲ್ಲಾ."

ಸಅದ್: "ನೀವು ಇದೇನು ಹೇಳುತ್ತಿರುವಿರಿ."

ಕಅಬ್: "ನಾನು ಸರಿಯಾಗಿಯೇ ಹೇಳುತ್ತಿರುವೆನು. ನಮ್ಮ ಉಳಿವಿನ ಪ್ರಶ್ನೆಯಿದು. ನಾವು ಯಾವುದೇ ಒಪ್ಪಂದಕ್ಕೆ ಬದ್ಧರಲ್ಲ."

ಸಅದ್: "ನಿಮ್ಮ ವಚನಭಂಗವು ನಿಮ್ಮ ಮಟ್ಟಿಗೇ ವಿನಾಶಕಾರಿಯಾಗಲಿದೆ."

ಕಅಬ್: "ನೀವೇನು ಬೇಕಾದರೂ ಹೇಳಿ. ನೀವು ನಮ್ಮ ಮಿತ್ರರು. ನಮ್ಮ ಗೋತ್ರವು ಮುಸ್ಲಿಮರನ್ನು ಬೆಂಬಲಿಸುತ್ತಿತ್ತು. ಆದರೆ ನಾವು ನಮ್ಮ ಕಣ್ಣಾರೆ ಕಂಡ ಸತ್ಯವನ್ನು ನಿರಾಕರಿಸುವುದಾದರೂ ಹೇಗೆ?

ಸಅದ್: "ಯಾವ ಸತ್ಯ?"

ಕಅಬ್: "ಕುರೈಶರ ಸೇನೆ ಮತ್ತು ಅದರ ಬೆಂಬಲಕ್ಕೆ ಬಂದಿರುವ ಇತರ ಸೈನ್ಯ ಗಳು ಮುಸ್ಲಿಮರನ್ನು ನಾಶಮಾಡಲು ಸಾಕಾಗುವುದು. ಆ ಬಾಹ್ಯ ಶಕ್ತಿಗಳಿಂದ ನಾವು ದೂರವಿರಬಹುದು. ಈ ಪರಿಸ್ಥಿತಿಯಲ್ಲಿ ನಿಮ್ಮ ಬೆಂಬಲಕ್ಕೆ ನಿಲ್ಲುವುದು ಅಥವಾ ಯಾವುದೇ ಒಪ್ಪಂದವನ್ನು ಪಾಲಿಸುವುದೆಂದರೆ ನಮ್ಮ ಮೃತ್ಯುವನ್ನೇ ಆಹ್ವಾನಿಸಿದಂತೆ. ಯಾವ ಬುದ್ಧಿವಂತ ವ್ಯಕ್ತಿಯೂ ಮೃತ್ಯುವಿನ ಬಾಯಿಗೆ ಜಿಗಿಯಲು ಸಿದ್ಧನಾಗಲಾರ. ನಮ್ಮ ದೇಶಭ್ರಷ್ಟರಾದ ಸೋದರ ಗೋತ್ರದವರು, ನದೀರ್ ಗೋತ್ರದವರು - ಶೀಘ್ರ ಮರಳಿ ಬಂದು ಮದೀನಾದ ಆಡಳಿತ ವಹಿಸಿಕೊಳ್ಳಲಿದ್ದಾರೆ."

ಮಾತುಕತೆ ವಿಫಲವಾದ ಬಳಿಕ ಸಅದ್(ರ) ತಮ್ಮ ಸಂಗಾತಿಗಳ ಜೊತೆ ಹಿಂತಿರುಗಿ ಪ್ರವಾದಿ ಮುಹಮ್ಮದ್‌ರ(ಸ) ಬಳಿಗೆ ಬಂದಿದ್ದಾರೆ. ಒಂದು ವೇಳೆ ಮಾತು ಕತೆ ವಿಫಲವಾದರೆ ಮರಳಿ ಬಂದು ಸಂಜ್ಞೆಗಳ ಮೂಲಕ ತಿಳಿಸಬೇಕೆಂದೂ ಅನ್ಯಥಾ ಮುಸ್ಲಿಮ್ ಸೇನೆಯ ಸ್ಥೈರ್ಯ ಕುಂದಬಹುದೆಂದೂ ಪ್ರವಾದಿ(ಸ) ಮೊದಲೇ ಸೂಚಿಸಿ ದ್ದರು. ಹಾಗೆಯೇ ಈ ನಾಲ್ಕು ಮಂದಿ ಮರಳಿ ಬಂದು ಸಂಜ್ಞೆಯ ಮೂಲಕ ವಿಷಯ ತಿಳಿಸುತ್ತಾರೆ.

ಪ್ರವಾದಿ(ಸ) ಸೇನೆಯನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ಮುಸ್ಲಿಮರೇ! ನಿಮಗೆ ದೇವ ಸಹಾಯ ಮತ್ತು ವಿಜಯದ ಸುವಾರ್ತೆ ಇರಲಿ."

ಮುಂದೇನು ಆಗಲಿದೆ ಎಂಬುದನ್ನು ಊಹಿಸಲು ಮುಸ್ಲಿಮರಿಗೆ ಸಾಧ್ಯವಿರಲಿಲ್ಲ. ಆದರೆ ಮುಹಮ್ಮದ್(ಸ) ಅದನ್ನು ಸರಿಯಾಗಿಯೇ ಅಂದಾಜಿಸಿದ್ದರು. ಮುಸ್ಲಿಮರು ಯಹೂದಿಗಳ ದ್ರೋಹದ ಬಗ್ಗೆ ಕೇಳಿ ನಿರಾಶರಾಗುತ್ತಿದ್ದರು.

ಇಷ್ಟರಲ್ಲಿ ಮದೀನಾದ ಪರಿಸರದಲ್ಲಿರುವ ತಮ್ಮ ಮನೆಗಳು ಸುರಕ್ಷಿತವಿಲ್ಲವೆಂಬ ನೆಪ ಹೂಡಿ ಹಾರಿಸ ಮತ್ತು ಸಲ್ಮಾ ಗೋತ್ರದ ಕಪಟವಿಶ್ವಾಸಿಗಳ ಎರಡು ತಂಡ ಯುದ್ಧ ರಂಗವನ್ನು ತೊರೆದು ಹಿಂತೆರಳುತ್ತವೆ. ಇದರಿಂದಾಗಿ ಮುಸ್ಲಿಮ್ ಸೇನೆಯಲ್ಲಿ ಭೀತಿಯ ವಾತಾವರಣ ನಿರ್ಮಾಣವಾಗುತ್ತದೆ. ಈ ಸಂದರ್ಭದ ಕುರಿತು ಅಲ್ಲಾಹನು ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಿರುವನು:"ಶತ್ರುಗಳು ಮೇಲಿಂದಲೂ ಕೆಳಗಿಂದಲೂ ನಿಮ್ಮ ಮೇಲೆ ಏರಿ ಬಂದಾಗ, ಭಯದಿಂದ ಕಣ್ಣುಗಳು ನಿಶ್ಚಲಗೊಂಡಾಗ, ಹೃದಯಗಳು ಬಾಯಿಗೆ ಬಂದಾಗ ಮತ್ತು ನೀವು ಅಲ್ಲಾಹನ ವಿಷಯದಲ್ಲಿ ತರತರದ ಗುಮಾನಿಗಳನ್ನಿರಿಸಲು ತೊಡಗಿದಾಗ, ಸತ್ಯವಿಶ್ವಾಸಿಗಳು ಚೆನ್ನಾಗಿ ಪರೀಕ್ಷಿಸಲ್ಪಟ್ಟರು ಮತ್ತು ತೀವ್ರವಾಗಿ ನಡುಗಿಸಲ್ಪಟ್ಟರು." **(ಪವಿತ್ರ ಕುರ್‌ಆನ್: 33: 10-11)**

ಆದರೆ ಆಗ ನಿಷ್ಠಾವಂತ ಸತ್ಯವಿಶ್ವಾಸಿಗಳ ಸ್ಥಿತಿಯು ಹೇಗಿತ್ತೆಂಬುದನ್ನು ಪವಿತ್ರ ಕುರ್‌ಆನ್ ಈ ರೀತಿ ವಿವರಿಸಿದೆ: "ನಿಜವಾದ ಸತ್ಯವಿಶ್ವಾಸಿಗಳು ಆಕ್ರಮಣಕಾರಿ ಸೇನೆಗಳನ್ನು ಕಂಡಾಗ, 'ಅಲ್ಲಾಹ್ ಮತ್ತು ಪೈಗಂಬರರು ನಮಗೆ ವಾಗ್ದಾನ ಮಾಡಿದ್ದುದು ಇದನ್ನೇ. ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಮಾತು ನಿಜವಾಗಿತ್ತು' ಎಂದು ಉದ್ಗರಿಸಿದರು. ಈ ಘಟನೆಯು ಅವರ ವಿಶ್ವಾಸವನ್ನೂ ಅವರ ಸಮರ್ಪಣಾಭಾವವನ್ನೂ ಇನ್ನಷ್ಟು ವರ್ಧಿಸಿ ಬಿಟ್ಟಿತು. ಅಲ್ಲಾಹನೊಡನೆ ಮಾಡಿದ ಕರಾರನ್ನು ನಿಜವೆಂದು ಸಾಧಿಸಿ ತೋರಿಸಿದವರು ಸತ್ಯವಿಶ್ವಾಸ ಸ್ವೀಕಾರ ಮಾಡಿದವರಲ್ಲಿದ್ದಾರೆ. ಅವರಲ್ಲಿ ಕೆಲವರು ತಮ್ಮ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದರು. ಇನ್ನು ಕೆಲವರು ಸಮಯ ಕಾಯುತ್ತಿದ್ದಾರೆ. ಅವರು ತಮ್ಮ ನಿಲುಮೆಯಲ್ಲಿ ಏನೂ ಬದಲಾವಣೆ ಮಾಡಲಿಲ್ಲ. ಅಲ್ಲಾಹ್ ಸತ್ಯಸಂಧರಿಗೆ ಅವರ ಸತ್ಯಸಂಧತೆಯ ಸತ್ಫಲ ನೀಡು ವಂತಾಗಲಿಕ್ಕೂ ತಾನಿಚ್ಛಿಸಿದರೆ ಕಪಟವಿಶ್ವಾಸಿಗಳನ್ನು ಶಿಕ್ಷಿಸಲಿಕ್ಕೂ ಅಥವಾ ಅವರ ಪಶ್ಚಾತ್ತಾಪವನ್ನು ಸ್ವೀಕರಿಸಲಿಕ್ಕೂ (ಹೀಗೆಲ್ಲ ಆಯಿತು). ನಿಶ್ಚಯವಾಗಿಯೂ ಅಲ್ಲಾಹ್ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆ." **(ಪವಿತ್ರ ಕುರ್‌ಆನ್: 33: 22-24)**

## ಕಂದಕ್ ರಣಾಂಗಣ

ಕುರೈಶ್ ಸೇನೆಯ ಯೋಧರು ದಿನನಿತ್ಯ ತಮ್ಮ ಕುದುರೆಯನ್ನೇರಿ ಕಂದಕದ ವಿಭಿನ್ನ ಭಾಗಗಳ ಸಮೀಕ್ಷೆ ನಡೆಸುತ್ತಿರುತ್ತಾರೆ. ಅಬೂಸುಫ್ಯಾನ್, ಖಾಲಿದ್ ಬಿನ್ ವಲೀದ್, ಅಮ್ರ್ ಬಿನ್ ಆಸ್, ಹಬೀರ್ ಬಿನ್ ಅಬೀ ವಹಬ್ ಮತ್ತು ದರಾರ್ ಬಿನ್ ಅಲ್

ಖತ್ತಾಬ್ ನಿತ್ಯ ತಮ್ಮ ಪಾಳಿಯನ್ನು ನಿಶ್ಚಯಿಸಿ ಕೊಂಡಿದ್ದರು. ಅವರು ಸಣ್ಣ ಸಣ್ಣ ಸೇನಾ ತುಕಡಿಗಳೊಂದಿಗೆ ಕಂದಕದ ಹತ್ತಿರ ಬರುತ್ತಿದ್ದರು. ಮುಂದೆ ಹೋಗುವ ಯಾವ ರಸ್ತೆಯನ್ನೂ ಕಾಣದೆ ಅಲ್ಲಿಂದಲೇ ಬಾಣಗಳ ಅಥವಾ ಕಲ್ಲುಗಳ ಮಳೆಗೆರೆದು ತಮ್ಮ ಸಮರಾವೇಶವನ್ನು ತಣಿಸುತ್ತಿದ್ದರು.

ಇಂದು ಇಕ್ರಿಮ ಬಿನ್ ಅಬೂಜಹಲ್, ನೌಫಲ್ ಬಿನ್ ಅಬ್ದುಲ್ಲಾ, ದರಾರ್ ಬಿನ್ ಅಲ್ ಖತ್ತಾಬ್, ಹಬೀರ್ ಬಿನ್ ಅಬೀ ವಹಬ್ ಮತ್ತು ಅಮ್ರ್ ಬಿನ್ ಅಬ್ದೂದ್ ಕುದುರೆಗಳ ಮೇಲೇರಿ ಕಂದಕವನ್ನು ದಾಟಿ ಒಳ ನುಗ್ಗಿದ್ದಾರೆ. ಅವರು ತಮ್ಮ ಶೌರ್ಯವನ್ನು ಪ್ರದರ್ಶಿಸ ಬಯಸುತ್ತಾರೆ. ಅಮ್ರ್ ಬಿನ್ ಅಬ್ದೂದ್ ಅರೇಬಿಯಾದ ಪ್ರಖ್ಯಾತ ಕುಸ್ತಿ ಪಟುವಾಗಿದ್ದು, ಒಬ್ಬಂಟಿಗನಾಗಿಯೇ ಒಂದು ಸಹಸ್ರ ಯೋಧರನ್ನು ಎದುರಿಸಬಲ್ಲವನು ಎಂಬ ಖ್ಯಾತಿಯನ್ನು ಗಳಿಸಿದ್ದ. ಆತನೀಗ ಮುಸ್ಲಿಮ ರಿಗೆ ಪಂಥಾಹ್ವಾನ ನೀಡುತ್ತಿದ್ದಾನೆ. ಆತನ ವಯಸ್ಸು ಆಗ ತೊಂಭತ್ತು ವರ್ಷಗಳಿ ಗಿಂತಲೂ ಮೀರಿತ್ತು. ಆದರೂ ಎಲ್ಲರೂ ಅವನಿಗೆ ಭಯಪಡುತ್ತಾರೆ. "ಯಾರಾದರೂ ನನ್ನಲ್ಲಿ ಮೂರು ವಿಷಯಗಳ ಮನವಿ ಮಾಡಿದರೆ ಒಂದನ್ನು ನಾನು ಖಂಡಿತ ಒಪ್ಪಿಕೊಳ್ಳುವೆ" ಎನ್ನುತ್ತಿದ್ದ ಆತ.

ಅವನು ಮುಸ್ಲಿಮ್ ಸೇನೆಗೆ ಸವಾಲೆಸೆಯುತ್ತಾ: "ಬನ್ನಿ, ಯಾರಿದ್ದಾರೆ ನನ್ನನ್ನು ಎದುರಿಸುವವರು?"

ಯುವಕರ ನಾಯಕರಾದ ಹ. ಅಲೀ(ರ) ಮುಂದೆ ಬಂದು ಆ ಸವಾಲನ್ನು ಸ್ವೀಕರಿಸುತ್ತಾರೆ.

ಅಮ್ರ್ ಅವರನ್ನು ನೋಡಿ ನಕ್ಕು ಬಿಡುತ್ತಾನೆ.

"ನೀನು ಇನ್ನೂ ಸಣ್ಣವನು. ಹೋಗು ಯಾರಾದರೂ ದೊಡ್ಡವರನ್ನು ಕಳುಹಿಸು. ನಾನು ಮಕ್ಕಳ ಮೇಲೆ ಕೈ ಎತ್ತುವುದಿಲ್ಲ."

ಅಲೀ: "ನೀವು ನನ್ನನ್ನು ಎದುರಿಸಲು ಏಕೆ ಹೆದರುತ್ತೀರಿ?"

ಅಮ್ರ್: "ನೀನು ಸಣ್ಣ ಹುಡುಗ, ಹಿಂತಿರುಗಿ ಬಿಡು."

ಅಲೀ: "ಯಾರಾದರೂ ಮೂರು ವಿಷಯ ನಿಮ್ಮಲ್ಲಿ ಹೇಳಿದರೆ ನೀವು ಒಂದನ್ನು ಖಂಡಿತ ಸ್ವೀಕರಿಸುತ್ತೀರಿ ಎಂದು ನಿಮ್ಮ ಬಗ್ಗೆ ನಾನು ಕೇಳಿದ್ದೇನೆ. ಇದು ಸತ್ಯವೆ?"

ಅಮ್ರ್: "ಹೌದು, ಹೇಳು ನಿನಗೇನು ಹೇಳಬೇಕಾಗಿದೆ."

ಅಲೀ: "ಮೊದಲನೆಯ ಮಾತೇನೆಂದರೆ ನೀವು ಇಸ್ಲಾಮ್ ಧರ್ಮ ಸ್ವೀಕರಿಸಬೇಕು. ತನ್ಮೂಲಕ ನೀವು ಯಶಸ್ವಿಯಾಗಬಹುದು."

ಅಮ್ರ್: "ಅದು ಸಾಧ್ಯವೇ ಇಲ್ಲ. ಅದಕ್ಕಾಗಿಯೇ ನಾವು ಯುದ್ಧಕ್ಕೆ ಬಂದಿದ್ದೇವೆ."

ಅಲೀ: "ಹಾಗಾದರೆ ಯುದ್ಧದ ಯೋಜನೆಯನ್ನು ತೊರೆದು ಮರಳಿ ಹೋಗಿರಿ."

ಅಮ್ರ್: "ಇದೂ ಅಸಾಧ್ಯ. ವೀರರು ಎಂದೂ ರಣರಂಗವನ್ನು ಬಿಟ್ಟು ಹೋಗುವುದಿಲ್ಲ."

ಅಲೀ: "ಮೂರನೆಯ ಮತ್ತು ಕೊನೆಯ ಮಾತೇನೆಂದರೆ ನೀವು ನನ್ನೊಂದಿಗೆ ಹೋರಾಟಕ್ಕೆ ಸಿದ್ಧವಾಗಿ."

ಅಮ್ರ್: "ಈ ರೀತಿ ನಿನ್ನ ಮರಣವನ್ನು ನೀನೇ ಆಹ್ವಾನಿಸುತ್ತಿರುವೆಯಲ್ಲಾ. ನೀನು ಯಾರು?"

ಅಲೀ: "ನಾನು ಅಬೂತಾಲಿಬ್‌ರ ಮಗ ಅಲೀ. ನಿಮ್ಮ ಪಾಲಿಗೆ ಮರಣದ ಕರೆ ಗಂಟೆಯಾಗಿ ಬಂದಿರುವೆನು."

ಇದನ್ನು ಕೇಳಿ ಅಮ್ರ್ ರೋಷಾಗ್ನಿಯಲ್ಲಿ ಬೆಂದು ಕೆಂಡವಾಗುತ್ತಾನೆ. ತನ್ನ ಖಡ್ಗದಿಂದ ಅಲೀಯವರಿಗೆ(ರ) ಒಂದು ಬಲವಾದ ಏಟು ಕೊಡುತ್ತಾನೆ. ಅದು ಅಲೀಯವರ(ರ) ಗುರಾಣಿಯನ್ನು ಭೇದಿಸುತ್ತಾ ಅವರ ಹಣೆಗೆ ಗಾಯ ಮಾಡುತ್ತದೆ. ಇದರಿಂದ ಅಲೀಯವರ(ರ) ಸಮರಾವೇಶವು ಉಕ್ಕಿ ಬಂದು 'ಅಲ್ಲಾಹು ಅಕ್ಬರ್' ಘೋಷಣೆ ಮೊಳಗಿಸುತ್ತಾ ಖಡ್ಗದಿಂದ ಧಾಳಿ ಮಾಡುತ್ತಾರೆ. ಅದು ಅವರ ಭುಜವನ್ನು ಕತ್ತರಿಸುತ್ತಾ ದೇಹದೊಳಗೆ ನುಗ್ಗಿ ಬಿಡುತ್ತದೆ. ಆತ ಕ್ಷಣಮಾತ್ರದಲ್ಲಿ ರಕ್ತಸಿಕ್ತವಾಗಿ ನೆಲಕ್ಕುರುಳುತ್ತಾನೆ. ಹ. ಅಲೀ(ರ) ಮತ್ತೊಮ್ಮೆ ಸಂತೋಷದಿಂದ ತಕ್ಬೀರ್ ಮೊಳಗಿಸು ತ್ತಾರೆ.

ದರಾರ್ ಮತ್ತು ಹಬೀರ್ ಮುಂದೆ ಬಂದು ಅಲೀಯವರನ್ನು(ರ) ಆಕ್ರಮಿಸುತ್ತಾರೆ. ಆದರೆ ಅಲೀಯವರ(ರ) ಮರುಧಾಳಿಗೆ ಸೋತು ಹಿಮ್ಮೆಟ್ಟುತ್ತಾರೆ. ಅತ್ತ ಸಹಾಬಿಗಳು ಅವರ ಮೇಲೆ ಬಾಣದ ಮಳೆಗೆರೆಯುತ್ತಾರೆ. ಇದರಿಂದ ಶತ್ರುಗಳು ದಿಗ್ಭ್ರಾಂತರಾಗಿ ಓಡುತ್ತಾರೆ. ಈ ಓಟದಲ್ಲಿ ನೌಫಲ್ ಕಂದಕದಲ್ಲಿ ಬಿದ್ದು ಬಿಡುತ್ತಾನೆ. ಹ. ಅಲೀ(ರ) ಅಲ್ಲಿಯೇ ಆಕ್ರಮಿಸಿ ಅವನನ್ನು ಮುಗಿಸಿ ಬಿಡುತ್ತಾರೆ.

ಅಮ್ರ್ ಬಿನ್ ಅಬ್ದೂದ್ ಮತ್ತು ನೌಫಲ್ ಬಿನ್ ಅಬ್ದುಲ್ಲಾರ ಕೊಲೆಯಿಂದ ಕುರೈಶರಲ್ಲಿ ಪ್ರತೀಕಾರದ ಅಗ್ನಿ ಉರಿದೇಳುತ್ತದೆ. ಮರುದಿನ ಅವರು ಮುಸ್ಲಿಮ್ ಸೇನೆಯ ಮೇಲೆ ಬಲವಾದ ಆಕ್ರಮಣ ಮಾಡುತ್ತಾರೆ.

ಆ ದಿನವು ಬಹಳ ಕಠಿಣವಾಗಿತ್ತು. ದಿನವಿಡೀ ಯುದ್ಧ ನಡೆಯುತ್ತಿತ್ತು. ಶತ್ರು ಗಳು ಎಲ್ಲ ದಿಕ್ಕುಗಳಿಂದಲೂ ಬಾಣದ ಮತ್ತು ಕಲ್ಲಿನ ಸುರಿ ಮಳೆಗೆರೆಯುತ್ತಾರೆ. ಒಂದು ಕ್ಷಣದ ಮಟ್ಟಿಗೂ ಅದು ನಿಲ್ಲುವುದಿಲ್ಲ. ಈ ದಿನ ಪ್ರವಾದಿವರ್ಯರ ನಾಲ್ಕು ನಮಾಝ್‌ಗಳು ತಪ್ಪಿ ಹೋಗುತ್ತವೆ. ಬಾಣ ಮತ್ತು ಕಲ್ಲಿನ ನಿರಂತರ ಮಳೆಯಿಂದಾಗಿ ಯಾರೂ ತಮ್ಮ ಸ್ಥಾನದಿಂದ ಕದಲುವಂತಿರಲಿಲ್ಲ.

ದಿನವಿಡೀ ಯುದ್ಧ ನಡೆದ ಬಳಿಕ ಸಂಜೆಯ ಹೊತ್ತಿಗೆ ಕುರೈಶ್ ಸೇನೆಯು ತನ್ನ ಡೇರೆಗಳತ್ತ ಮರಳುತ್ತದೆ. ಮುಸ್ಲಿಮ್ ಯೋಧರು ಪ್ರವಾದಿವರ್ಯರ(ಸ) ಡೇರೆಯ ಬಳಿಗೆ ಬರುತ್ತಾರೆ. ಉಸೈದ್ ಬಿನ್ ಹುದೈರ್ ಮತ್ತು ಕೆಲವು ಮಂದಿ ಮುಸ್ಲಿಮ್ ಯೋಧರು

ಮಾತ್ರ ಇನ್ನೂ ಆಕ್ರಮಣದ ಭಯವಿರುವ ಸ್ಥಳದಲ್ಲೇ ಇದ್ದಾರೆ.

ಪರಿಸ್ಥಿತಿಯ ಗಂಭೀರತೆಯನ್ನು ಮನಗಂಡು ಪ್ರವಾದಿವರ್ಯರು(ಸ) ಅನ್ಸಾರ್‌ಗಳನ್ನು ಈ ದಿನನಿತ್ಯದ ಸಂಕಷ್ಟದಿಂದ ಪಾರುಗೊಳಿಸಲಿಕ್ಕಾಗಿ ಕುರೈಶ್ ಸೇನೆಯ ಒಂದು ಪ್ರಮುಖ ಅಂಗವಾದ ಗತ್‌ಫಾನ್‌ನವರೊಂದಿಗೆ ಶಾಂತಿ ಒಪ್ಪಂದ ಮಾಡುವ ಕುರಿತು ಯೋಚಿಸುತ್ತಾರೆ. ಈ ವಿಷಯದಲ್ಲಿ ಸಮಾಲೋಚನೆ ನಡೆಸಲಿಕ್ಕಾಗಿ ಅವರು ಸಅದ್ ಬಿನ್ ಮುಆದ್ ಮತ್ತು ಸಅದ್ ಬಿನ್ ಉಬಾದಾರನ್ನು(ರ) ಕರೆಸಿ ಅವರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ಅನ್ಸಾರ್‌ಗಳು ಬಹಳ ಸಂಕಷ್ಟದಲ್ಲಿ ಸಿಲುಕಿದ್ದಾರೆ. ಅದನ್ನು ನಿವಾರಿಸಲಿಕ್ಕಾಗಿ ಗತ್‌ಫಾನ್ ಗೋತ್ರದವರೊಂದಿಗೆ ಒಪ್ಪಂದ ಮಾಡಿ ಕೊಳ್ಳುವುದು ಹಾಗೂ ಮದೀನಾದ ಬೆಳೆಗಳ ಮೂರನೆಯ ಒಂದಂಶವನ್ನು ಅವರಿಗೆ ನೀಡಿ ಅವರನ್ನು ಮರಳಿ ಹೋಗುವಂತೆ ಮಾಡುವುದು ಒಳ್ಳೆಯದೆನಿಸುತ್ತದೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?"

ಇದಕ್ಕೆ ಉತ್ತರವಾಗಿ ಅವರಿಬ್ಬರೂ: "ಪ್ರವಾದಿವರ್ಯರೇ! ಇದು ಅಲ್ಲಾಹನ ಅಪ್ಪಣೆ ಯಾಗಿದ್ದರೆ ನಾವು ಅದನ್ನು ನಿರಾಕರಿಸುವುದಿಲ್ಲ. ಇದು ತಮ್ಮ ಅಭಿಪ್ರಾಯವಾಗಿದ್ದರೆ, ನಮ್ಮ ಅಭಿಪ್ರಾಯ ಕೇಳಿ. ನಾವು ಮುಸ್ಲಿಮ್ ಆಗುವುದಕ್ಕೆ ಮುಂಚೆಯೂ ಯಾರಿಗೂ ನಮ್ಮಿಂದ ಕಂದಾಯ ವಸೂಲಿ ಮಾಡುವ ಧೈರ್ಯವಿರಲಿಲ್ಲ. ಈಗಂತೂ ಇಸ್ಲಾಮ್‌ನಿಂದಾಗಿ ನಮ್ಮ ಸ್ಥಾನಮಾನವು ಬಹಳ ಉನ್ನತವಾಗಿದೆ. ಈಗ ನಾವು ಅದನ್ನು ಸ್ವೀಕರಿಸುವುದಾದರೂ ಹೇಗೆ?"

ಮುಹಮ್ಮದ್‌ರು(ಸ) ಅವರ ಸ್ಥೈರ್ಯ ಮತ್ತು ವಿಶ್ವಾಸದಾರ್ಢ್ಯವನ್ನು ಕಂಡು ಸಂತೋಷ ಪಡುತ್ತಾರೆ. ಗತ್‌ಫಾನ್ ಗೋತ್ರದವರೊಂದಿಗೆ ಮಾತುಕತೆಯ ತಮ್ಮ ಇರಾದೆಯನ್ನು ತೊರೆಯುತ್ತಾರೆ.

## ಶತ್ರು ಸೈನ್ಯದಲ್ಲಿ ಒಡಕು

ಮುಹಮ್ಮದ್(ಸ) ತಮ್ಮ ಡೇರೆಯಲ್ಲಿ ಕುಳಿತಿದ್ದಾರೆ. ಹೊರಗೆ ಕೆಲವು ಮಂದಿ ಯೋಧರು ಕಾವಲು ನಿಂತಿದ್ದಾರೆ. ಅಷ್ಟರಲ್ಲಿ ನುಐಮ್ ಬಿನ್ ಮಸ್‌ಊದ್ ಅಶ್‌ಜಈ ಪ್ರವಾದಿವರ್ಯರ(ಸ) ಅನುಮತಿ ಪಡೆದು ಒಳಗೆ ಪ್ರವೇಶಿಸಿ ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೇ! ನಾನು ಮುಸ್ಲಿಮ್ ಆಗಿರುವೆನು. ಆದರೆ ನನ್ನ ಇಸ್ಲಾಮ್ ಸ್ವೀಕಾರದ ಸುದ್ದಿಯನ್ನು ಬಹಿರಂಗ ಪಡಿಸಿಲ್ಲ. ನಾನು ಕುರೈಶ್ ಸೇನೆಯಲ್ಲಿ ಒಡಕುಂಟು ಮಾಡಲು ಯತ್ನಿಸುತ್ತಿರುವೆನು. ಇದರಿಂದ ಯುದ್ಧದ ಗತಿಯೇ ಬದಲಾಗಬಹುದು. ನಾನು ಈ ವಿಷಯ ತಮಗೆ ತಿಳಿಸಲಿಕ್ಕಾಗಿ ಬಂದಿರುವೆನು."

ಮುಹಮ್ಮದ್(ಸ) ಅವರಿಗೆ ಅದರ ಅನುಮತಿ ನೀಡುತ್ತಾರೆ. ನುಐಮ್ ಅತ್ಯಂತ ಚಾಕಚಕ್ಯತೆಯಿಂದ ಕುರೈಝಾ ಗೋತ್ರದ ಯಹೂದಿಗಳು ಮತ್ತು ಮಕ್ಕಾದ ಕುರೈಶರ ಮಧ್ಯೆ ಒಡಕುಂಟು ಮಾಡುತ್ತಾರೆ.

ಒಂದೆಡೆ ಅವರು ಕುರೈಝಾ ಗೋತ್ರದವರಿಗೆ ಮುಸ್ಲಿಮ್ ಸೇನೆಯು ಜಯಶೀಲವಾದರೆ

ಅವರಿಗೆದುರಾಗ ಬಹುದಾದ ದುರವಸ್ಥೆಯನ್ನು ಮನಗಾಣಿಸುತ್ತಾರೆ. ಉಹುದ್ ಯುದ್ಧದಲ್ಲಿ ನಡೆದಂತೆ ಮುಸ್ಲಿಮರನ್ನು ಸಂಪೂರ್ಣವಾಗಿ ಸದೆ ಬಡಿಯದೆ ಕುರೈಶ್ ಸೇನೆಯು ಹಿಂತಿರುಗಿ ಬಿಟ್ಟರೆ ಮದೀನಾದಲ್ಲಿ ತಮಗೆ ಉಳಿಗಾಲವಿಲ್ಲ ವೆಂಬುದನ್ನು ಕುರೈಝಾ ಗೋತ್ರದ ನಾಯಕನಾದ ಕಅಬ್ ಬಿನ್ ಅಸದ್ ಮನಗಾಣು ತ್ತಾನೆ. ತಮ್ಮ ಗೋತ್ರದ ರಕ್ಷಣೆಯನ್ನು ಖಾತ್ರಿ ಪಡಿಸುವ ಸಲುವಾಗಿ ಅವರು ಕುರೈಶ್ ಸೇನೆಯಿಂದ ಕೆಲವು ಮಂದಿಯನ್ನು ಒತ್ತೆಯಾಳುಗಳಾಗಿ ಇರಿಸಿಕೊಳ್ಳಬೇಕೆಂದು ನಿರ್ಧರಿಸುತ್ತಾರೆ.

ಇನ್ನೊಂದೆಡೆ ಕುರೈಶರು ಕುರೈಝಾ ಗೋತ್ರದ ಈ ಬೇಡಿಕೆಯು ತಮ್ಮ ಅವಮಾನವೆಂದು ಭಾವಿಸಿ ಅವರೊಂದಿಗೆ ಮಾತುಕತೆಗಾಗಿ ತಮ್ಮ ಪ್ರತಿನಿಧಿಯೊಬ್ಬನನ್ನು ನಿಯೋಗಿಸುತ್ತಾರೆ. ಇಕ್ರಿಮಾ ಬಿನ್ ಅಬೂಜಹಲ್‌ನ ನೇತೃತ್ವದಲ್ಲಿ ಹೊರಟ ಈ ನಿಯೋಗವು ಕಅಬ್ ಬಿನ್ ಅಸದ್‌ರನ್ನು ಭೇಟಿಯಾಗಿ ಹೀಗೆ ಹೇಳುತ್ತದೆ:

"ಕುರೈಝಾ ಗೋತ್ರದವರೇ! ನಾವು ಇಲ್ಲಿನ ನಿವಾಸಿಗಳಲ್ಲ ಎಂಬುದು ನಿಮಗೆ ಚೆನ್ನಾಗಿ ತಿಳಿದಿದೆ. ತಡೆಯಲಾರದ ಚಳಿ ಮತ್ತು ಮೇವಿನ ಕೊರತೆಯಿಂದಾಗಿ ಪ್ರತಿದಿನ ನಮ್ಮ ಕುದುರೆ ಮತ್ತು ಒಂಟೆಗಳು ಸಾಯುತ್ತಿವೆ. ಆದ್ದರಿಂದ ಈ ಪರಿಸ್ಥಿತಿಯಲ್ಲಿ ನಾವು ಹೆಚ್ಚು ಕಾಲ ಈ ಮುತ್ತಿಗೆಯನ್ನು ಮುಂದುವರಿಸಲು ಸಾಧ್ಯವಿಲ್ಲ. ನಾವು ನಾಳೆಯೇ ಮುಸ್ಲಿಮರ ಮೇಲೆ ನಿರ್ಣಾಯಕ ಧಾಳಿ ಮಾಡಬೇಕೆಂದಿದ್ದೇವೆ. ನೀವೂ ಇದಕ್ಕೆ ಸಿದ್ಧರಾಗಿ ಇರಿ ಎಂದು ಹೇಳಲು ನಾನಿಲ್ಲಿಗೆ ಬಂದಿರುವೆನು. ನಾವು ಹೊರಗಿನಿಂದ ಆಕ್ರಮಣ ಮಾಡುವಾಗ ನೀವು ಒಳಗಿಂದಲೇ ದಾಳಿ ಆರಂಭಿಸಬೇಕು. ಈ ರೀತಿ ಮುಸ್ಲಿಮ್ ಸೇನೆಯು ನಮ್ಮಿಬ್ಬರ ಮಧ್ಯೆ ಸಿಲುಕಿ ಹುಡಿಯಾಗಬೇಕು."

ಸ್ವಲ್ಪ ಹೊತ್ತು ಯೋಚಿಸಿದ ಬಳಿಕ ಕಅಬ್ ಹೀಗೆ ಹೇಳುತ್ತಾನೆ: "ನಾಳೆ ಶನಿವಾರ. ನಮ್ಮ ಸಬ್ಬಾತ್‌ನ ದಿನ. ನಾಳೆ ನಾವು ಯಾವ ಕೆಲಸವನ್ನೂ ಮಾಡುವಂತಿಲ್ಲ. ಮಾತ್ರವಲ್ಲ ಯುದ್ಧವು ಒಂದು ವೇಳೆ ನಿರ್ಣಾಯಕ ಹಂತಕ್ಕೆ ತಲುಪದೆ ನೀವು ಇಲ್ಲಿಂದ ಹೊರಟು ಹೋದರೆ ಮುಸ್ಲಿಮರು ನಮ್ಮನ್ನು ನುಚ್ಚುನೂರು ಮಾಡಿ ಬಿಡುವರು. ಆದ್ದರಿಂದ ನಿಮ್ಮ ಕೆಲವು ಮಂದಿಯನ್ನು ನಮ್ಮ ಬಳಿ ಒತ್ತೆ ಯಾಳುಗಳಾಗಿ ನೀಡದೆ ನಾವು ಮುಸ್ಲಿಮರ ವಿರುದ್ಧ ನಿಮ್ಮ ಯುದ್ಧದಲ್ಲಿ ಪಾಲ್ಗೊಳ್ಳುವ ಸ್ಥಿತಿಯಲ್ಲಿಲ್ಲ."

ಇದನ್ನು ಕೇಳಿ ಇಕ್ರಿಮಾ ಕೆರಳುತ್ತಾನೆ: "ಲಾತ್ ಮತ್ತು ಹುಬುಲ್‌ಗಳ ಆಣೆ. ನಾವು ನಮ್ಮ ಒಬ್ಬ ವ್ಯಕ್ತಿಯನ್ನೂ ನಿಮ್ಮ ಬಳಿ ಒತ್ತೆಯಾಳಾಗಿ ಇಡಲಾರೆವು. ನೀವು ನಿಶ್ಶರ್ಥವಾಗಿಯೇ ಯುದ್ಧದಲ್ಲಿ ನಮ್ಮನ್ನು ಬೆಂಬಲಿಸಬೇಕು."

ಕಅಬ್: "ನಿಮ್ಮ ಮಾತನ್ನು ನಾವು ಒಪ್ಪಲು ಸಿದ್ಧರಿಲ್ಲ."

ಇಕ್ರಿಮ ನಿರಾಶನಾಗಿ ತನ್ನ ನಿಯೋಗದ ಜೊತೆ ಮರಳಿ ಕುರೈಶ್ ಸೇನೆಯನ್ನು ಬಂದು ಸೇರುತ್ತಾನೆ.

## ದೇವ ಸಹಾಯ

ತೀವ್ರ ಚಳಿ, ತೀವ್ರ ಬಿರುಗಾಳಿಯೂ ಬೀಸುತ್ತಿದೆ. ಶತ್ರು ಸೇನೆಯ ಯೋಧರು ನಡುಗುತ್ತಿದ್ದಾರೆ. ರಾತ್ರಿಯ ಅಂಧಕಾರದಲ್ಲಿ ಬೆಂಕಿ ಉರಿಸುವುದು ಕೂಡಾ ಅಸಾಧ್ಯ ವಾಗಿದೆ. ತೀವ್ರ ಮಾರುತದ ಹೊಡೆತದಿಂದ ಡೇರೆಗಳ ಹಗ್ಗವೂ ಮುರಿಯುತ್ತಿದೆ. ಆಣಿಗಳು ಕಿತ್ತೊಗೆಯಲ್ಪಡುತ್ತಿವೆ. ಒಲೆಯ ಮೇಲಿಟ್ಟ ಮಡಕೆಗಳೂ ಅಡಿಮೇಲಾಗುತ್ತಿವೆ. ಮರಳಿನ ಕಣಗಳು ಮುಖದ ಮೇಲೆ ಬಾಣದಂತೆ ನಾಟುತ್ತಿವೆ. ಗಾಳಿಯಿಂದೇಳುವ ಮರಳ ರಾಶಿಯಿಂದ ಕಣ್ಣು ತೆರೆಯುವುದು ಅಸಾಧ್ಯವಾಗಿದೆ. ಬಾಯಿ ಮೂಗುಗಳೊಳಗೂ ಹೊಗೆ ನುಗ್ಗುತ್ತಿದೆ. ಪ್ರತಿಯೊಬ್ಬನೂ ಗಾಬರಿಗೊಂಡಿದ್ದಾನೆ.

ಬಿರುಗಾಳಿ ಮತ್ತು ಚಳಿಯಿಂದಾಗಿ ಕುದುರೆ ಒಂಟೆಗಳು ಚೀರಾಡುತ್ತಾ ಅತ್ತಿತ್ತ ಓಡುತ್ತಿವೆ. ಎಲ್ಲೆಡೆ ಗೊಂದಲಮಯ ವಾತಾವರಣ ನಿರ್ಮಾಣವಾಗಿದೆ.

ಅಬೂಸುಫ್ಯಾನ್ ತನ್ನ ಡೇರೆಯೊಳಗೆ ಕುಳಿತು ಚಳಿ ಕಾಯುತ್ತಿದ್ದಾನೆ. ಅವನ ಸುತ್ತ ಕೆಲವು ಮಂದಿ ಕುಳಿತಿದ್ದಾರೆ. ಅಷ್ಟರಲ್ಲಿ ಮುಹಮ್ಮದ್‌ರ(ಸ) ಬೇಹುಗಾರ ಹುದೈಫ(ರ) ತಮ್ಮ ಮುಖ ಮರೆಸಿಕೊಂಡು ಅವರೊಂದಿಗೆ ಶಾಮೀಲಾಗುತ್ತಾರೆ. ಅಬೂಸುಫ್ಯಾನ್ ಎದ್ದು ಹೇಳುತ್ತಾನೆ: "ಕುರೈಶ್ ಗೋತ್ರಜರೇ! ಕಾರ್ಗತ್ತಲ ರಾತ್ರಿಯಿದು. ಜಾಗೃತರಾಗಿರಿ. ಮುಸ್ಲಿಮರು ನಿಶಾಕ್ರಮಣ ಮಾಡಲೂ ಬಹುದು. ಅವರ ಬೇಹುಗಾರರು ನಮ್ಮ ಡೇರೆಗಳೊಳಗೆ ಪ್ರವೇಶಿಸಲೂ ಬಹುದು. ಆದ್ದರಿಂದ ಪ್ರತಿಯೊಬ್ಬನೂ ತನ್ನ ಹತ್ತಿರ ಇರುವವನ ಮೇಲೆ ನಿಗಾ ಇಡಬೇಕು."

ಇದನ್ನು ಕೇಳುತ್ತಲೇ ಹುದೈಫ(ರ) ತಮ್ಮ ಬಳಿಯಿರುವವನ ಮೈ ತಡವುತ್ತಾ: "ನೀನು ಯಾರು?" ಎಂದು ಕೇಳುತ್ತಾರೆ. ಅವನು ತನ್ನ ಹೆಸರು, ಪರಿಚಯ ಹೇಳುತ್ತಾನೆ.

ಅಬೂಸುಫ್ಯಾನ್ ತನ್ನ ಮಾತನ್ನು ಮುಂದುವರಿಸುತ್ತಾ: "ಕುರೈಶರೇ! ನಾವು ಡೇರೆ ಹೂಡಿರುವ ಸ್ಥಳವು ಸೂಕ್ತವಲ್ಲ. ನಮ್ಮ ಒಂಟೆ-ಕುದುರೆಗಳು ಸಾಯುತ್ತಿವೆ. ಕುರೈಝಾ ಗೋತ್ರದವರೂ ನಮ್ಮನ್ನು ಕೈ ಬಿಟ್ಟಿದ್ದಾರೆ. ಅವರ ವರ್ತನೆಯಿಂದ ನಮಗೆ ಅತ್ಯಂತ ಆಘಾತ ಮತ್ತು ನಿರಾಶೆ ಉಂಟಾಗಿದೆ. ಅದರ ಜೊತೆಗೆ ಈ ಕೆಟ್ಟ ಬಿರುಗಾಳಿಯು ಉಂಟು ಮಾಡಿರುವ ಕಷ್ಟ-ನಷ್ಟಗಳು ನಿಮಗೆ ತಿಳಿದೇ ಇದೆ. ಆದ್ದರಿಂದ ಇಲ್ಲಿಂದ ಕಂಬಿ ಕೀಳುವುದೇ ಶ್ರೇಯಸ್ಕರ. ನಾನಂತೂ ಹೊರಡುವ ನಿರ್ಧಾರ ಮಾಡಿಕೊಂಡಿದ್ದೇನೆ. ಇನ್ನು ಇಲ್ಲಿ ನಮ್ಮ ವಿಜಯವು ಸಂಶಯಾಸ್ಪದವಾಗಿದೆ."

ಬೆಳಗಾಗುತ್ತಲೇ ಮದೀನಾದ ಜನರು ಕುರೈಶ್ ಸೇನೆಯು ಮದೀನಾದ ಪರಿಸರವನ್ನು ಖಾಲಿ ಮಾಡಿ ಹೊರಟಿರುವುದನ್ನು ಕಂಡು ಅಚ್ಚರಿಗೊಂಡರು. ಅವರು ಬೀಡು ಬಿಟ್ಟಿದ್ದ ಸ್ಥಳದಲ್ಲಿ ನೆಲಕ್ಕುರುಳಿದ ಡೇರೆಗಳು, ಕವಚಿ ಬಿದ್ದ ಅಡುಗೆ ಪಾತ್ರೆಗಳು, ಸತ್ತು ಬಿದ್ದ ಒಂಟೆ-

ಕುದುರೆಗಳು, ಎಸೆಯಲ್ಪಟ್ಟ ಧಾನ್ಯದ ಚೀಲಗಳು ಚೆಲ್ಲಾಪಿಲ್ಲಿಯಾಗಿ ಹರಡಿದ್ದುವು.

ಕಂದಕ್ ಯುದ್ಧದಲ್ಲಿ ಐದು ಮಂದಿ ಮುಸ್ಲಿಮರು ಹುತಾತ್ಮರಾಗಿ ಶತ್ರು ಸೇನೆಯ ನಾಲ್ಕು ಮಂದಿ ವಧಿಸಲ್ಪಟ್ಟಿದ್ದರು.

ಈ ಬಿರುಗಾಳಿಯು ಅಲ್ಲಾಹನ ವತಿಯಿಂದ ಒಂದು ಪರೋಕ್ಷ ಸಹಾಯವಾಗಿತ್ತು. ಅದನ್ನು ಅಲ್ಲಾಹನೂ ಪವಿತ್ರ ಕುರ್‌ಆನಿನಲ್ಲಿ ಹೀಗೆ ವಿವರಿಸಿರುವನು: "ಸತ್ಯವಿಶ್ವಾಸಿಗಳೇ, ಅಲ್ಲಾಹನು(ಇದೀಗ) ನಿಮಗೆ ಮಾಡಿರುವ ಉಪಕಾರವನ್ನು ಸ್ಮರಿಸಿರಿ. ನಿಮ್ಮ ಮೇಲೆ ಸೈನ್ಯಗಳು ಏರಿ ಬಂದಾಗ ನಾವು ಅವರ ಮೇಲೆ ಒಂದು ಬಲವಾದ ಬಿರುಗಾಳಿಯನ್ನು ಕಳುಹಿಸಿದೆವು ಮತ್ತು ನಿಮಗೆ ಕಾಣಿಸದಂತಹ ಸೈನ್ಯಗಳನ್ನು ರವಾನಿಸಿದೆವು. ನೀವು ಆಗ ಮಾಡುತ್ತಿದ್ದುದನ್ನೆಲ್ಲ ಅಲ್ಲಾಹ್ ನೋಡುತ್ತಿದ್ದನು." **(ಪವಿತ್ರ ಕುರ್‌ಆನ್: 33: 9)**

ಅಹ್‌ಝಾಬ್ (ಸೇನೆಗಳು) ಸೋತು ನಿರಾಶವಾಗಿ ಮರಳಿದ ಬಗ್ಗೆ ಪ್ರವಾದಿ(ಸ) ಈ ರೀತಿ ಹೇಳಿರುವರು: "ಇನ್ನು ಮುಂದೆ ಅವರು (ಕುರೈಶರು) ನಮ್ಮ ಮೇಲೆ ಆಕ್ರಮಣ ಮಾಡಲಾರರು. ನಾವೇ ಅವರ ಮೇಲೆ ಆಕ್ರಮಣ ಮಾಡುವೆವು."

## ವಿದ್ರೋಹದ ಪರಿಣಾಮ

ಹಿ. ಶ. 5ರ ದುಲ್‌ಕಅದ್ ತಿಂಗಳ 5ನೇ ದಿನಾಂಕ ಪ್ರವಾದಿ(ಸ) ತಮ್ಮ ಸಂಗಾತಿಗಳ ಜತೆ ಕಂದಕ್‌ನಿಂದ ಮದೀನಾಕ್ಕೆ ಹಿಂದಿರುಗುತ್ತಾರೆ. ಅವರು ತಮ್ಮ ಆಯುಧಗಳನ್ನು ಕಳಚಿಡುವಾಗಲೇ ಜಿಬ್ರೀಲ್(ಅ) ಹಾಜರಾಗುತ್ತಾರೆ:

"ಪ್ರವಾದಿವರ್ಯರೇ(ಸ)! ತಾವು ಆಯುಧಗಳನ್ನು ಕಳಚಿಟ್ಟಿರಾ?" ಎಂದು ಪ್ರಶ್ನಿಸುತ್ತಾರೆ. "ಹೌದು" ಎಂದು ಪ್ರವಾದಿ(ಸ) ಉತ್ತರಿಸುತ್ತಾರೆ.

ಜಿಬ್ರೀಲ್: "ತಮಗೆ ಕುರೈಝಾ ಗೋತ್ರದವರ ಕಡೆ ಪ್ರಯಾಣ ಬೆಳೆಸಲು ಅಜ್ಞಾಪಿಸಲಾಗಿದೆ."

ಪ್ರವಾದಿ(ಸ) ಹ. ಅಲೀಯವರನ್ನು(ರ) ಕರೆದು ಕುರೈಝಾ ಗೋತ್ರದವರ ಕಡೆಗೆ ರವಾನಿಸುತ್ತಾರೆ. ಮುಅದ್ದಿನ್(ಅದಾನ್ ಕರೆ ಕೊಡುವವರು)ರನ್ನು ಕರೆದು, "ಜನರು ಆಯುಧಗಳನ್ನು ಕಳಚದಿರಲಿ. ಅಸರ್ ನಮಾಝನ್ನು ಕುರೈಝಾ ಗೋತ್ರದ ಊರಿಗೆ ಹತ್ತಿರ ತಲುಪಿದ ಮೇಲೆ ನಿರ್ವಹಿಸಲಿ" ಎಂದು ಘೋಷಣೆ ಮಾಡುವಂತೆ ಆಜ್ಞಾಪಿಸಿದರು.

ಕುರೈಝಾ ಗೋತ್ರದವರಿಗೆ ತಮ್ಮ ಕೋಟೆಗಳ ಬಗ್ಗೆ ಬಹಳ ಗರ್ವ ಇತ್ತು. ಅವು ಅಭೇದ್ಯವಾಗಿವೆಯೆಂದು ಅವರು ಭಾವಿಸಿದ್ದರು. ಆದರೆ ಮುಸ್ಲಿಮ್ ಸೇನೆಯು ಅವರಿಗೆ ಮುತ್ತಿಗೆ ಹಾಕಿದಾಗ ಕೆಲವೇ ದಿನಗಳಲ್ಲಿ ಕುರೈಝಾ ಗೋತ್ರದವರ ಕಣ್ಣು ತೆರೆಯಿತು. ಅವರು ಮುತ್ತಿಗೆಯಿಂದಾಗಿ ಹಲವು ತರದ ಸಮಸ್ಯೆಗಳನ್ನೆದುರಿಸುತ್ತಿದ್ದರು. ಕೊನೆಗೆ ಒಂದು ದಿನ ಅವರ ಸರದಾರ ಕಅಬ್ ಬಿನ್ ಅಸದ್ ತನ್ನ ಗೋತ್ರಜರನ್ನು ಸೇರಿಸಿ ಹೀಗೆ ಹೇಳುತ್ತಾನೆ:

"ಪರಿಸ್ಥಿತಿಯು ದಿನದಿಂದ ದಿನಕ್ಕೆ ಹೆಚ್ಚೆಚ್ಚು ಬಿಗಡಾಯಿಸುತ್ತಿದೆ. ಹೊರಗಿನಿಂದ ಯಾರ ಕಡೆಯ ಕುಮ್ಮಕ್ಕು ಸಿಗುವ ಆಸೆಯೂ ಉಳಿದಿಲ್ಲ. ನಮ್ಮ ಧಾನ್ಯ ಭಂಡಾರ ಮುಗಿಯುತ್ತಾ ಬಂದಿದೆ. ಮುಸ್ಲಿಮರು ನಮಗೆ ನಮ್ಮ ವಚನಭಂಗದ ಶಿಕ್ಷೆ ನೀಡದೆ ಇಲ್ಲಿಂದ ಕದಲಲಾರರು. ಆದ್ದರಿಂದ ನಾನು ನಿಮ್ಮ ಮುಂದೆ ಮೂರು ಸಲಹೆಗಳನ್ನು ಇಡುತ್ತಿದ್ದೇನೆ. ಆ ಪೈಕಿ ನಿಮಗೆ ಯಾವುದು ಮೆಚ್ಚುಗೆಯಾಗುತ್ತದೋ ಅದರಂತೆ ವರ್ತಿಸಿರಿ."

"ಹೇಳಿರಿ ನಿಮ್ಮ ಸಲಹೆಗಳೇನು?" ಎಂಬ ಕೆಲವು ಸ್ವರಗಳು ಕೇಳಿ ಬರುತ್ತವೆ.

"ಕೇಳಿರಿ! ಒಂದನೆಯ ಸಲಹೆಯೇನೆಂದರೆ ನಾವು ಮುಹಮ್ಮದ್‌ರ(ಸ) ಪ್ರವಾದಿತ್ವ ವನ್ನು ದೃಢೀಕರಿಸಿ ಅವರ ಮೇಲೆ ವಿಶ್ವಾಸವಿರಿಸಬೇಕು. ಏಕೆಂದರೆ ಅವರು ಅಲ್ಲಾಹನಿಂದ ನಿಯುಕ್ತರಾದ ಪ್ರವಾದಿಯೆಂಬುದು ಇದೀಗ ದೃಢ ಪಟ್ಟಿದೆ. ಅವರ ಆಗಮನದ ಬಗ್ಗೆ ನಮ್ಮ ಗ್ರಂಥಗಳಲ್ಲಿಯೂ ಉಲ್ಲೇಖವಿದೆ. ತನ್ಮೂಲಕ ನಿಮ್ಮ ಪ್ರಾಣ ಸೊತ್ತು ಮತ್ತು ಸಂತಾನಗಳು ಸುರಕ್ಷಿತವಾಗುವುವು."

ಇದನ್ನು ಕೇಳುತ್ತಲೇ ಕೆಲವರು ಬೊಬ್ಬಿಡುತ್ತಾರೆ: "ನಾವು ತೌರಾತನ್ನು ಖಂಡಿತ ತೊರೆಯಲಾರೆವು. ನಮಗೆ ನಿಮ್ಮ ಸಲಹೆ ಸ್ವೀಕಾರಾರ್ಹವಲ್ಲ."

ಕಅಬ್: "ನನ್ನ ಎರಡನೆಯ ಸಲಹೆ ಏನೆಂದರೆ ನಿಮ್ಮ ಮಡದಿ ಮಕ್ಕಳನ್ನು ನೀವೇ ಕೊಂದು ಬಿಡಿ ಮತ್ತು ಖಡ್ಗ ಹಿಡಿದು ಮುಹಮ್ಮದ್(ಸ) ಮತ್ತವರ ಸಂಗಾತಿ ಗಳೊಂದಿಗೆ ಹೋರಾಟಕ್ಕಿಳಿಯಿರಿ. ಅನಂತರ ಅಲ್ಲಾಹನು ಯಾವ ತೀರ್ಮಾನ ಮಾಡು ತ್ತಾನೋ ಅದನ್ನು ಒಪ್ಪಿಕೊಳ್ಳಿರಿ. ಒಂದು ವೇಳೆ ನೀವು ಕೊಲ್ಲಲ್ಪಟ್ಟರೆ ನಿಮಗೆ ನಿಮ್ಮ ನಂತರ ಉಳಿಯುವ ಮಕ್ಕಳು ಮರಿಗಳ ಚಿಂತೆ ಇರಲಾರದು. ಒಂದು ವೇಳೆ ನೀವು ಬದುಕುಳಿದರೆ ಅಲ್ಲಾಹನು ನಿಮಗೆ ಬೇರೆ ಮಡದಿ ಮಕ್ಕಳನ್ನು ದಯಪಾಲಿಸುವನು."

ಇದಕ್ಕೂ ಅನೇಕ ಸ್ವರಗಳು ಏಳುತ್ತವೆ: "ನಮಗೆ ನಿಮ್ಮ ಈ ಸಲಹೆಯೂ ಸ್ವೀಕಾರಾರ್ಹವಲ್ಲ. ನಮ್ಮ ಮಡದಿ ಮಕ್ಕಳನ್ನು ಕೊಂದ ಬಳಿಕ ನಾವು ಜೀವಿಸಿ ಏನು ಫಲ?"

ಕಅಬ್: "ನನ್ನ ಮೂರನೆಯ ಸಲಹೆ ಏನೆಂದರೆ ಇಂದು ಸಬ್ಬಾತ್(ಶನಿವಾರ) ರಾತ್ರಿ. ಈ ರಾತ್ರಿ ಯಹೂದಿಗಳು ನಿಶಾಕ್ರಮಣ ಮಾಡಲಾರರೆಂದು ಮುಸ್ಲಿಮರು ನಿಶ್ಚಿಂತರಾಗಿರ ಬಹುದು. ಆದ್ದರಿಂದ ಈ ರಾತ್ರಿಯೇ ಅವರ ಮೇಲೆ ಹಠಾತ್ ಧಾಳಿ ಮಾಡಿ ಬಿಡಬೇಕು."

ಇದಕ್ಕೆ ಉತ್ತರವಾಗಿ ಎಲ್ಲ ಕಡೆಯಿಂದಲೂ ಸ್ವರವೇಳುತ್ತದೆ: "ನಿಮ್ಮ ಈ ಸಲಹೆಯನ್ನು ನಾವು ಒಪ್ಪುವುದಿಲ್ಲ. ನಾವು ಸಬ್ಬಾತ್ ದಿನದ ಗೌರವವನ್ನು ಖಂಡಿತ ಮುರಿಯಲಾರೆವು."

ಮುತ್ತಿಗೆಗೆ ಹದಿನೈದು ದಿನಗಳು ಕಳೆದಿವೆ. ಕುರೈಝಾ ಗೋತ್ರದವರು ಬೇರೆ ದಾರಿ ಯಿಲ್ಲದೆ ಮುಹಮ್ಮದ್‌ರ(ಸ) ಮುಂದೆ ಶರಣಾಗಲು ನಿರ್ಧರಿಸುತ್ತಾರೆ. ಆದರೆ ತಮ್ಮ ಬಗ್ಗೆ ಸಅದ್ ಬಿನ್ ಮುಆದ್(ರ) ಯಾವ ತೀರ್ಮಾನ ಮಾಡುತ್ತಾರೋ ಅದಕ್ಕೆ ತಾವು ಒಪ್ಪುವು

ದಾಗಿ ಶರತ್ತು ಒಡ್ಡುತ್ತಾರೆ.

ರಫೀದ ಅಸ್ಲಮಿ ಎಂಬವರ ಚಿಕಿತ್ಸಾಲಯದಲ್ಲಿ ಸಅದ್ ಹಾಸಿಗೆಯೊಂದರಲ್ಲಿ ಬಿದ್ದು ಕೊಂಡಿರುವರು. ರಕ್ತಸ್ರಾವ ಹೆಚ್ಚಾದುದರಿಂದ ಬಲಹೀನತೆ ಹೆಚ್ಚಾಗಿದೆ. ಆದರೆ ಈ ಸ್ಥಿತಿ ಯಲ್ಲೂ ಅವರು ಮುಸ್ಲಿಮರ ಕ್ಷೇಮದ ಕುರಿತು ಚಿಂತಿತರಾಗಿದ್ದಾರೆ. ಅಷ್ಟರಲ್ಲಿ ಕೆಲವು ಮಂದಿ ಅವರ ಅಪ್ಪಣೆ ಪಡೆದು ಒಳಗೆ ಬಂದು ಹೀಗೆ ಹೇಳುತ್ತಾರೆ:

"ನಿಮ್ಮನ್ನು ಪ್ರವಾದಿವರ್ಯರು(ಸ) ಕರೆಯುತ್ತಿದ್ದಾರೆ. ನಾವು ನಿಮ್ಮ ಸವಾರಿಗಾಗಿ ಕತ್ತೆಯನ್ನು ತಂದಿರುವೆವು."

ಸಅದ್: "ನಾನು ಹೊರಟೆ!"

ಜನರು ಅವರನ್ನು ಆಧರಿಸಿ ಕತ್ತೆಯ ಮೇಲೆ ಕೂರಿಸುತ್ತಾರೆ. ಕುರೈಝಾ ಗೋತ್ರದ ವಿಷಯ ಚರ್ಚಿಸಲಿಕ್ಕಾಗಿ ನಿಮ್ಮನ್ನು ಕರೆಯಲಾಗಿದೆ ಎಂದು ಅವರು ಸಅದ್ ಬಿನ್ ಮುಆದ್‌ರಿಗೆ ಹೇಳುತ್ತಾರೆ. ಪ್ರಾಯಶಃ ನಿಮ್ಮನ್ನು ಮಧ್ಯಸ್ಥಿಕೆದಾರನಾಗಿ ನೇಮಿಸಬಹುದು ಎಂದೂ ತಿಳಿಸುತ್ತಾರೆ. ರಸ್ತೆಯಲ್ಲಿ ಔಸ್ ಗೋತ್ರದ ಕೆಲವು ಪ್ರಮುಖರು ಅವರನ್ನು ಸ್ವಲ್ಪ ಸಮಯ ನಿಲ್ಲಿಸಿ ಹೀಗೆ ನಿವೇದಿಸಿಕೊಳ್ಳುತ್ತಾರೆ: "ಸರದಾರರೇ! ಕುರೈಝಾ ಗೋತ್ರದವರ ಬಗ್ಗೆ ಮೃದುನೀತಿಯನ್ನು ಅನುಸರಿಸಿರಿ. ಅವರು ನಮ್ಮ ಬೆಂಬಲಿಗರು. ನಾವು ಪರಸ್ಪರ ಸೋದರರಾಗಿದ್ದೇವೆ."

ಸಅದ್ ಈ ರೀತಿ ಉತ್ತರಿಸುತ್ತಾರೆ: "ಸಅದ್‌ನಿಗೆ ಅಲ್ಲಾಹನ ವಿಷಯದಲ್ಲಿ ಯಾವ ಆಕ್ಷೇಪಕನ ಆಕ್ಷೇಪವನ್ನೂ ಲೆಕ್ಕಿಸದೆ ಇರುವ ಸಮಯ ಬಂದಿದೆ."

ಮುಹಮ್ಮದ್‌ರ(ಸ) ಬಳಿ ತಲುಪಿ ಸಅದ್(ರ) ಆಸರೆಯೊಂದಿಗೆ ಕುಳಿತು ಕೊಳ್ಳುತ್ತಾರೆ. ಆಗ ಪ್ರವಾದಿವರ್ಯರು(ಸ): "ಸಅದ್! ನಿಮ್ಮನ್ನು ಕುರೈಝಾ ಗೋತ್ರದವರ ಬಗ್ಗೆ ಮಧ್ಯಸ್ಥಿಕೆದಾರನಾಗಿ ನೇಮಿಸಲಾಗಿದೆ. ಅವರು ನಿಮ್ಮ ತೀರ್ಮಾನವನ್ನು ಒಪ್ಪಲು ಸಿದ್ಧರಿದ್ದಾರೆ."

ಸಅದ್ ಪ್ರವಾದಿವರ್ಯರಿಗೆ(ಸ) ಕೃತಜ್ಞತೆ ಅರ್ಪಿಸಿದ ಬಳಿಕ ತಮ್ಮ ಗೋತ್ರದವ ರನ್ನುದ್ದೇಶಿಸಿ ಹೀಗೆ ಪ್ರಶ್ನಿಸುತ್ತಾರೆ: "ನಾನು ಮಾಡಿದ ತೀರ್ಮಾನವೇ ಅಂತಿಮವೆಂದು ನೀವು ಅಲ್ಲಾಹನೆದುರು ವಾಗ್ದಾನ ಮಾಡಲು ಸಿದ್ಧರಿರುವಿರಾ?"

ಎಲ್ಲರೂ ಒಪ್ಪಿಗೆ ಸೂಚಿಸಿದ ಬಳಿಕ ಸಅದ್(ರ) ಸಭಿಕರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ಕುರೈಝಾ ಗೋತ್ರದ ಎಲ್ಲ ಯೋಧರನ್ನು ವಧಿಸಿ ಬಿಡಬೇಕು. ಸ್ತ್ರೀಯರನ್ನೂ ಮಕ್ಕಳನ್ನೂ ಸೆರೆ ಹಿಡಿಯಬೇಕು ಮತ್ತು ಅವರ ಸೊತ್ತನ್ನು ವಿತರಣೆ ಮಾಡಿ ಬಿಡಬೇಕು ಎಂಬುದೇ ನನ್ನ ತೀರ್ಮಾನ."

ಇದನ್ನು ಕೇಳಿ ಪ್ರವಾದಿವರ್ಯರು(ಸ) ಹೀಗೆ ಹೇಳುತ್ತಾರೆ: "ಸಅದ್! ಕುರೈಝಾ ಗೋತ್ರದವರ ಬಗ್ಗೆ ನೀವು ಅಲ್ಲಾಹನಿಂದ ಬಂದ ವಿಧಿಗೆ ಅನುಗುಣವಾಗಿಯೇ ತೀರ್ಮಾನ

ಮಾಡಿರುವಿರಿ."

ಈ ತೀರ್ಮಾನದಂತೆ ಯೋಧರನ್ನು ವಧಿಸಲಾಗುತ್ತದೆ. ಅವರಿಗೆ ಅವರ ವಚನ ಭಂಗದ ಶಿಕ್ಷೆ ಸಿಗುತ್ತದೆ. ಹಯ್ಯಿ ಬಿನ್ ಅಖ್ತಬ್ ಕೂಡಾ ವಧಿಸಲ್ಪಟ್ಟವರಲ್ಲಿ ಸೇರಿದ್ದಾನೆ. ಆತ ಕಲಬ್ ಬಿನ್ ಅಸದ್‌ನೊಂದಿಗೆ ಮಾಡಿಕೊಂಡ ವಾಗ್ದಾನದಂತೆ ತನ್ನ ಮನೆಯಲ್ಲೇ ಇದ್ದನು. ವಧಿಸಲ್ಪಡುವುದಕ್ಕೆ ಮುಂಚೆ ತನ್ನ ಜನರನ್ನುದ್ದೇಶಿಸಿ ಹೀಗೆ ಹೇಳಿದನು: "ಜನರೇ! ಅಲ್ಲಾಹನ ಆಜ್ಞೆಯನ್ನು ಪಾಲಿಸುವುದರಲ್ಲಿ ಏನೂ ತೊಂದರೆಯಿಲ್ಲ. ಇದೊಂದು ದೇವಾಜ್ಞೆಯಾಗಿತ್ತು. ಅಲ್ಲಾಹನು ಬನೀ ಇಸ್ರಾಈಲರ ಮೇಲೆ ಲಿಖಿತಗೊಳಿಸಿದ್ದ ಒಂದು ಶಿಕ್ಷೆಯಾಗಿತ್ತು."

ಅಧ್ಯಾಯ - ೧೨

# ಮತ್ತೆ ಮಕ್ಕಾದ ಕಡೆಗೆ

## ಹುದೈಬಿಯಾದ ಕಡೆಗೆ

ಮುಂದಿನ ವರ್ಷ ಅಂದರೆ ಹಿ. ಶ. 6ರಲ್ಲಿ ಒಂದು ರಾತ್ರಿ ಪ್ರವಾದಿ(ಸ) ಒಂದು ಕನಸು ಕಾಣುತ್ತಾರೆ. ಅದರಲ್ಲಿ ಅವರು ತಮ್ಮ ತಲೆ ಕೂದಲನ್ನು ಕತ್ತರಿಸಿರುವುದಾಗಿ ಹಾಗೂ ಸಹಾಬಿಗಳ ಒಂದು ದೊಡ್ಡ ತಂಡವೂ ಹಾಗೆಯೇ ಮಾಡಿರುವುದಾಗಿ ಮತ್ತು ಪ್ರವಾದಿ(ಸ) ತಮ್ಮ ಸಂಗಾತಿಗಳ ಜೊತೆ ಕಅಬಾ ಭವನಕ್ಕೆ ಪ್ರವೇಶಿಸಿದುದಾಗಿ ಕಾಣುತ್ತಾರೆ. ಇದರಿಂದಾಗಿ ಪ್ರವಾದಿವರ್ಯರಿಗೆ(ಸ) ಕಅಬಾ ಸಂದರ್ಶನ ಮತ್ತು ಉಮ್ರಾ ಮಾಡುವ ಉತ್ಕಟೇಚ್ಛೆ ಉಂಟಾಯಿತು.

ದುಲ್‌ಕಅದ್ ತಿಂಗಳಲ್ಲಿ ಪ್ರವಾದಿವರ್ಯರು(ಸ) ಉಮ್ರಾ ಮಾಡಲಿಕ್ಕಾಗಿ ಮಕ್ಕಾಕ್ಕೆ ತೆರಳುವ ನಿರ್ಧಾರ ಮಾಡುತ್ತಾರೆ. ತಮ್ಮ ಜೊತೆ ಉಮ್ರಾ ಮಾಡಬಯಸು ವವರೆಲ್ಲಾ ಹೊರಡಬೇಕೆಂಬ ಘೋಷಣೆಯನ್ನೂ ಹೊರಡಿಸುತ್ತಾರೆ. ದುಲ್‌ಕಅದ್ ಯುದ್ಧ ನಿಷಿದ್ಧ ತಿಂಗಳುಗಳ ಪೈಕಿ ಒಂದಾಗಿತ್ತು. ಆದ್ದರಿಂದ ಅರಬ್ ಸಂಪ್ರದಾಯದಂತೆ ಆ ತಿಂಗಳಲ್ಲಿ ರಕ್ತಪಾತದ ಭಯವಿರಲಿಲ್ಲ. ಯುದ್ಧ ನಿಷಿದ್ಧ ತಿಂಗಳುಗಳಲ್ಲಿ ಜನರು ಯಾವ ಭಯವೂ ಇಲ್ಲದೆ ಎಲ್ಲಿಗೆ ಬೇಕಾದರೂ ನಿರಾತಂಕವಾಗಿ ಯಾತ್ರೆ ಹೊರಡುತ್ತಿದ್ದರು. ವಿಶೇಷವಾಗಿ ಆ ತಿಂಗಳುಗಳಲ್ಲಿ ಕಅಬಾ ಭವನದ ಕಡೆಗೆ ಹೋಗುವವರನ್ನು ಯಾರೂ ತಡೆಯುತ್ತಿರಲಿಲ್ಲ.

ಹಿ. ಶ. 6ರ ದುಲ್‌ಕಅದ್ ತಿಂಗಳ ಒಂದನೆಯ ತಾರೀಕಿನಂದು ಸೋಮವಾರ ಪ್ರವಾದಿವರ್ಯರು(ಸ) ಸ್ನಾನ ಮಾಡಿ ಉಮ್ರಾದ ಇಹ್ರಾಮ್ ಬಟ್ಟೆಯನ್ನು ಧರಿಸುತ್ತಾರೆ. ಒಂದು ಬಿಳಿ ಬಟ್ಟೆಯನ್ನು ಪಂಚೆಯ ರೂಪದಲ್ಲಿ ಉಟ್ಟು ಇನ್ನೊಂದು ತುಂಡು ಬಿಳಿ ಬಟ್ಟೆಯನ್ನು ಮೈ ಮೇಲೆ ಹೊದ್ದುಕೊಳ್ಳುತ್ತಾರೆ. ತಮ್ಮ ಅನುಪಸ್ಥಿತಿಯಲ್ಲಿ ಮದೀನಾದ ನಾಯಕತ್ವವನ್ನು ಅಬ್ದುಲ್ಲಾ ಬಿನ್ ಉಮ್ಮು ಮಕ್ತೂಮ್ ಎಂಬ ಅಂಧ ಸಹಾಬಿಗೆ ವಹಿಸಿಕೊಡುತ್ತಾರೆ.

ತಮ್ಮ ಪತ್ನಿಯರ ಪೈಕಿ ಉಮ್ಮು ಸಲ್ಮಾರನ್ನು(ರ) ಜೊತೆಗೆ ಕರೆದುಕೊಂಡು ಪ್ರಯಾಣ ಹೊರಡುತ್ತಾರೆ. ಪ್ರವಾದಿವರ್ಯರು(ಸ) ಕುರ್ಬಾನಿ(ಬಲಿದಾನ)ಗಾಗಿ 70 ಒಂಟೆಗಳನ್ನೂ

ಜತೆಗೆ ಒಯ್ಯುತ್ತಾರೆ. ಸುಮಾರು 1400 ಸಹಾಬಿಗಳು ಪ್ರವಾದಿ ವರ್ಯರ(ಸ) ಜತೆ ಹೊರಡುತ್ತಾರೆ. ಅವರು ಆತ್ಮರಕ್ಷಣೆಗಾಗಿ ಪ್ರತಿಯೊಬ್ಬ ಅರಬನೂ ಸದಾ ಜೊತೆಯಲ್ಲೇ ಇರಿಸುತ್ತಿದ್ದಂತಹ ಖಡ್ಗ ಮತ್ತು ಬಿಲ್ಲು ಬಾಣಗಳ ಹೊರತು ಬೇರಾವ ಆಯುಧವನ್ನೂ ತೆಗೆದಿರಲಿಲ್ಲ. ಖಡ್ಗಗಳು ಕೂಡಾ ಚರ್ಮದ ಒರೆಯಲ್ಲಿ ಇರಿಸಲ್ಪಟ್ಟಿದ್ದುವು. ಅವರ ಗುರಿಯು ಉಮ್ರಾ ಮಾಡುವುದಾಗಿತ್ತೇ ವಿನಾ ಯುದ್ಧ ಮಾಡುವುದಾಗಿರಲಿಲ್ಲ. ಇದರಿಂದ ತಾವು ಕೇವಲ ಕಅಬಾ ಸಂದರ್ಶನಾರ್ಥ ಹೊರಟ ವರೆಂಬುದನ್ನು ಕುರೈಶರಿಗೆ ಮನಗಾಣಿಸುವುದು ಕೂಡಾ ಅವರ ಉದ್ದೇಶವಾಗಿತ್ತು.

ಮದೀನಾದಿಂದ ಹೊರಗೆ ಬರುತ್ತಲೇ ಪ್ರವಾದಿ(ಸ) ವಾಡಿಕೆಯಂತೆ ಈ ರೀತಿ ಪ್ರಾರ್ಥಿಸುತ್ತಾರೆ: "ಓ ಅಲ್ಲಾಹ್! ನೀನೇ ನಮ್ಮ ಪ್ರಯಾಣದ ಸಂಗಾತಿ. ನೀನೇ ನಮ್ಮ ಮನೆಮಂದಿಯ ಮೇಲ್ವಿಚಾರಕ. ಯಾತ್ರೆಯ ಸಂಕಷ್ಟಗಳಿಂದ ಮತ್ತು ಮರಳಿ ಬರುವಾಗ ನಮ್ಮ ಮನೆ ಮಂದಿಯನ್ನು ದುಃಸ್ಥಿತಿಯಲ್ಲಿ ಕಾಣುವ ದುರಂತದಿಂದ ನಾವು ನಿನ್ನ ಅಭಯವನ್ನು ಯಾಚಿಸುತ್ತೇವೆ. ಓ ಅಲ್ಲಾಹ್! ನಮ್ಮ ಯಾತ್ರೆಯ ದೂರ ವನ್ನು ಕಡಿತಗೊಳಿಸು. ಈ ಯಾತ್ರೆಯನ್ನು ನಮ್ಮ ಪಾಲಿಗೆ ಸುಗಮಗೊಳಿಸು."

'ದುಲ್ ಹಲೀಫ್' ಎಂಬಲ್ಲಿಗೆ ತಲುಪಿದಾಗ ಕುರ್ಬಾನಿಯ ಒಂಟೆಗಳ ಕೊರಳಿಗೆ ಪಟ್ಟಿಯನ್ನು ಕಟ್ಟಲಾಗುತ್ತದೆ. ಇದರಿಂದ ದೂರದಿಂದ ನೋಡುವವರು ಕೂಡಾ ಅದು ಬಲಿದಾನಕ್ಕೆ ಇರುವ ಪ್ರಾಣಿ ಎಂಬುದನ್ನು ಗುರುತಿಸಬಹುದಾಗಿತ್ತು.

ಮುಂಜಾಗರೂಕತೆಯ ಕ್ರಮವಾಗಿ ಪ್ರವಾದಿವರ್ಯರು(ಸ) ಬಶೀರ್ ಬಿನ್ ಸುಫ್ಯಾನ್ ಅಲ್ ಕಅಬಿಯವರನ್ನು(ರ) ಮೊದಲೇ ಮಕ್ಕಾಗೆ ರವಾನಿಸುತ್ತಾರೆ. ಕುರೈಶರ ಬಗ್ಗೆ ಸರಿಯಾದ ಮಾಹಿತಿ ಸಂಗ್ರಹಿಸುವುದೇ ಅವರ ಕಾರ್ಯಭಾರವಾಗಿತ್ತು. ಆದರೆ ಪ್ರವಾದಿ(ಸ) ಅಸ್‌ಫಾನ್‌ನ ಬಳಿ ತಲುಪುವಷ್ಟರಲ್ಲೇ ಬಶೀರ್(ರ) ಬಂದು ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೇ(ಸ) ಕುರೈಶರಿಗೆ ತಮ್ಮ ಆಗಮನದ ಸುದ್ದಿ ತಲುಪಿದೆ. ಅವರು ಪರಿಸರದ ಎಲ್ಲ ಗೋತ್ರಗಳಿಗೂ ತಮ್ಮನ್ನು ತಡೆಯುವಂತೆ ಸೂಚಿಸಿದ್ದಾರೆ. ಅವರು ಕೂಡಾ ಸೇನಾ ಸಜ್ಜಿತರಾಗಿ 'ದೀತುವಾ' ಎಂಬಲ್ಲಿ ಡೇರೆ ಹೂಡಿರುವರು. ತಮ್ಮನ್ನು ಎಷ್ಟು ಮಾತ್ರಕ್ಕೂ ಹರಮ್‌ನ ಒಳಗೆ ಪ್ರವೇಶಿಸಲು ಬಿಡುವುದಿಲ್ಲವೆಂದು ಅವರು ಶಪಥ ಮಾಡಿದ್ದಾರೆ. ಅವರು ಖಾಲಿದ್ ಬಿನ್ ವಲೀದ್‌ರ ನೇತೃತ್ವದಲ್ಲಿ ಒಂದು ಸೇನೆಯನ್ನು ಮುಂದೆ ಕಳುಹಿಸಿದ್ದಾರೆ. ಅದರಲ್ಲಿ ಇಕ್ರಿಮಾ ಬಿನ್ ಅಬೂಜಹಲ್ ಕೂಡಾ ಇದ್ದಾರೆ. ಆ ಸೇನಾ ತುಕಡಿಯು ಈಗಾಗಲೇ 'ಕರಾಉಲ್ ಗಮೀಮ್'ನ ಬಳಿ ತಲುಪಿದೆ."

ಇದನ್ನು ಕೇಳಿ ಪ್ರವಾದಿ(ಸ) ಈ ರೀತಿ ಪ್ರತಿಕ್ರಿಯಿಸುತ್ತಾರೆ: "ಕುರೈಶರು ನಾಶವಾಗಲಿ! ಅವರಿಗೆ ಯುದ್ಧದ ಗೀಳು ಹಿಡಿದಿದೆ. ಅವರು ನನ್ನನ್ನು ಮತ್ತು ಅರಬರನ್ನು ನಮ್ಮ ಪಾಡಿಗೆ ಬಿಡುತ್ತಿದ್ದರೆ ಅವರಿಗೇನು ನಷ್ಟವಾಗುತ್ತಿತ್ತು? ಅವರು ನನ್ನನ್ನು ಮುಗಿಸಿ ಬಿಟ್ಟರೆ ಕುರೈಶರ

ಉದ್ದೇಶವು ಪೂರ್ತಿಯಾದಂತಾಗುತ್ತಿತ್ತು. ಒಂದು ವೇಳೆ ಅಲ್ಲಾಹನು ನನಗೆ ಅರಬರ ವಿರುದ್ಧ ವಿಜಯ ದಯಪಾಲಿಸಿದರೆ ಅವರು ತಂಡೋಪ ತಂಡವಾಗಿ ಇಸ್ಲಾಮ್ ಧರ್ಮವನ್ನು ಪ್ರವೇಶಿಸುತ್ತಿದ್ದರು. ಒಂದು ವೇಳೆ ಅವರು ಇಸ್ಲಾಮ್ ಧರ್ಮದಲ್ಲಿ ಪ್ರವೇಶಿಸದಿದ್ದರೆ ಅವ ರಲ್ಲಿ ತಾಕತ್ತಿರುವ ತನಕ ಹೋರಾಡುತ್ತಿದ್ದರು. ಕುರೈಶರು ಈಗ ಯಾವ ಗುಮಾನಿಗೆ ಸಿಲುಕಿರು ವರು? ಅಲ್ಲಾಹನಾಣೆ! ಅಲ್ಲಾಹನು ನನ್ನನ್ನು ಯಾವ ಕಾರ್ಯಕ್ಕಾಗಿ ನಿಯೋಗಿಸಿರುವನೋ ಅದಕ್ಕಾಗಿ ನಾನು ನಿರಂತರ ಜಿಹಾದ್ ಮಾಡುತ್ತಿರುವೆನು. ಒಂದೋ ಅಲ್ಲಾಹನು ಇಸ್ಲಾಮ್‌ಗೆ ವಿಜಯವನ್ನು ದಯಪಾಲಿಸಬೇಕು ಇಲ್ಲವೇ ನಾನು ಈ ಮಾರ್ಗದಲ್ಲಿ ಮಡಿಯಬೇಕು."

ಆ ಬಳಿಕ ಸ್ವಲ್ಪ ಹೊತ್ತು ಸುಮ್ಮನಿದ್ದ ಬಳಿಕ ಹೀಗೆ ಹೇಳುತ್ತಾರೆ: "ಕುರೈಶರು ಈಗ ಡೇರೆ ಹೂಡಿರುವ ರಸ್ತೆಯನ್ನು ಬಿಟ್ಟು ಬೇರೆ ರಸ್ತೆಯ ಮೂಲಕ ನಮಗೆ ಮಾರ್ಗದರ್ಶನ ಮಾಡುವವರು ಯಾರಿದ್ದಾರೆ?"

ಆಗ ಅಸ್ಲಮ್ ಗೋತ್ರಕ್ಕೆ ಸೇರಿದ ಹಮ್‌ಝಾ ಬಿನ್ ಅಮ್ರ್ ಎದ್ದು ನಿಂತು ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೇ! ಆ ಸೇವೆಗೆ ನಾನು ಸಿದ್ಧನಿದ್ದೇನೆ."

ದಾರಿಯು ಬಹಳ ಕಠಿಣವಾಗಿದೆ. ಹಮ್‌ಝಾ ಅಸ್ಲಮಿ ದಾರಿ ತೋರಿಸುತ್ತಾ ಮುಂದೆ ಮುಂದೆ ನಡೆಯುತ್ತಿದ್ದಾರೆ. ಅವರ ಮಾರ್ಗದರ್ಶನದಲ್ಲಿ ಯಾತ್ರಾ ತಂಡವು ಮುಂದು ವರಿಯುತ್ತಾ ಗುರಿ ಮುಟ್ಟುತ್ತದೆ. ಮುಹಮ್ಮದ್(ಸ) ತಮ್ಮ ಅನುಯಾಯಿ ಗಳನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ಎಲ್ಲರೂ ಹೇಳಿರಿ. ನಾವು ಅಲ್ಲಾಹನಲ್ಲಿ ಕ್ಷಮೆ ಯಾಚಿಸುತ್ತೇವೆ. ಬನೀ ಇಸ್ರಾಈಲ ರಿಗೂ ಅಲ್ಲಾಹನು ಇದನ್ನೇ ಆಜ್ಞಾಪಿಸಿದ್ದನು. ಆದರೆ ಅವರು ಅದನ್ನು ಪಾಲಿಸಿರಲಿಲ್ಲ."

ತರುವಾಯ ಎಲ್ಲರೂ ಅಲ್ಲಾಹನಲ್ಲಿ ಕ್ಷಮಾದಾನಕ್ಕಾಗಿ ಪ್ರಾರ್ಥಿಸುತ್ತಾರೆ.

ಯಾತ್ರಾ ತಂಡವು ಅತ್ಯಂತ ಕಠಿಣವಾದ ದಾರಿಯನ್ನು ಕ್ರಮಿಸಿ ಹುದೈಬಿಯಾದ ಹತ್ತಿರ ಇರುವ 'ಸನಿಯತುಲ್ ಮರಾರ್' ಎಂಬಲ್ಲಿಗೆ ತಲುಪಿದಾಗ ಪ್ರವಾದಿವರ್ಯರು(ಸ) ಕುಳಿತಿದ್ದ ಒಂಟೆ 'ಕಸ್ವಾ' ಕುಳಿತು ಬಿಡುತ್ತದೆ. ಅದನ್ನು ಎಬ್ಬಿಸುವ ಎಲ್ಲ ಪ್ರಯತ್ನಗಳೂ ವಿಫಲವಾಗುತ್ತವೆ. ಇದು ಅಲ್ಲಾಹನ ವತಿಯಿಂದ ಇಲ್ಲೇ ತಂಗಬೇಕೆಂಬ ಸೂಚನೆಯಾಗಿದೆ ಎಂದು ಬಗೆದು ಎಲ್ಲರೂ ಅಲ್ಲೇ ಇಳಿಯುತ್ತಾರೆ.

ಅಲ್ಲಿಗೆ ಪ್ರಥಮವಾಗಿ ಬಂದವನು ಕಝಾಅ ಗೋತ್ರಕ್ಕೆ ಸೇರಿದ ಬುದೈಲ್ ಬಿನ್ ವರಕಾ ಆಗಿದ್ದನು. ಆತ ತನ್ನ ಕೆಲವು ಸಂಗಾತಿಗಳೊಂದಿಗೆ ಪ್ರವಾದಿವರ್ಯರ(ಸ) ಬಳಿ ಹಾಜರಾಗಿ ಅವರು ಬಂದ ಉದ್ದೇಶದ ಕುರಿತು ಕೇಳುತ್ತಾನೆ. ಆಗ ಪ್ರವಾದಿ(ಸ): "ನಾವು ಕೇವಲ ಕಅಬಾ ಭವನದ ಸಂದರ್ಶನಕ್ಕಾಗಿ ಬಂದಿದ್ದೇವೆ" ಎನ್ನುತ್ತಾರೆ.

ಬುದೈಲ್: "ಆದರೆ ಕುರೈಶರು ನಿಮ್ಮನ್ನು ಮಕ್ಕಾ ನಗರಕ್ಕೆ ಪ್ರವೇಶಿಸಲು ಬಿಡಲಾರೆವೆಂದು ಶಪಥ ಹಾಕಿದ್ದಾರೆ."

ಮುಹಮ್ಮದ್: "ಯಾರು ನಮ್ಮನ್ನು ತಡೆಯುತ್ತಾರೋ ಅವರೊಂದಿಗೆ ಯುದ್ಧ ಮಾಡುವ ಹೊರತು ಬೇರೆ ದಾರಿ ನಮ್ಮ ಮುಂದಿಲ್ಲ."

ಅರೇಬಿಯಾದ ಯಾವುದೇ ಮೂಲೆಗಳಿಂದ ಯಾರೇ ಬಂದರೂ ಅವರಿಗೆ ಮಕ್ಕಾ ದೊಳಗೆ ಪ್ರವೇಶ ನೀಡಲಾಗುತ್ತಿತ್ತು. ಆ ಬಗ್ಗೆ ಕುರೈಶರಿಗೆ ಯಾವುದೇ ಆಕ್ಷೇಪವಿರಲಿಲ್ಲ. ಆದರೆ ಮುಹಮ್ಮದ್(ಸ) ಮತ್ತು ಅವರ ಸಂಗಾತಿಗಳಿಗೆ ಮಾತ್ರ ಮಕ್ಕಾ ಪ್ರವೇಶಕ್ಕೆ ಎಲ್ಲ ರೀತಿಯ ಅಡೆ ತಡೆಗಳನ್ನೂ ಒಡ್ಡಲಾಗಿತ್ತು.

ಬುದೈಲ್ ಮರಳಿ ಮಕ್ಕಾಕ್ಕೆ ಹೋಗಿ ಕುರೈಶರನ್ನುದ್ದೇಶಿಸಿ ಹೀಗೆ ಹೇಳುತ್ತಾನೆ: "ಕುರೈಶ್ ಗೋತ್ರದವರೇ! ನೀವು ಮುಹಮ್ಮದ್‌ರ(ಸ) ಕುರಿತು ದುಡುಕಿನ ತೀರ್ಮಾನ ಮಾಡಿದ್ದೀರಿ. ಅವರು ಯುದ್ಧಕ್ಕಾಗಿ ಬಂದವರಲ್ಲ. ಅವರ ಉದ್ದೇಶ ಕೇವಲ ಉಮ್ರಾ ಮಾಡುವುದಾಗಿದೆ."

ಇದನ್ನು ಕೇಳಿ ಕುರೈಶರು ಬುದೈಲ್‌ನನ್ನು ಜರೆಯುತ್ತಾ ಹೀಗೆ ಹೇಳುತ್ತಾರೆ: "ಅವರು ಯುದ್ಧ ಮಾಡಲು ಬಯಸದಿದ್ದರೂ ಅಲ್ಲಾಹನಾಣೆ! ಅವರು ನಮ್ಮ ನಗರದೊಳಗೆ ನಮ್ಮ ಅಪ್ಪಣೆಯಿಲ್ಲದೆ ಎಂದೂ ಪ್ರವೇಶಿಸಲಾರರು."

ಕುರೈಶರು ಮುಸ್ಲಿಮರ ಪರಿಸ್ಥಿತಿಯ ಸಮೀಕ್ಷೆ ಮಾಡಿ ಬರಲು ಆಮಿರ್ ಗೋತ್ರದ ಮಿಕ್ರಝ್ ಬಿನ್ ಹಫ್ಸ್ ಮತ್ತು ಹುಲೈಸ್ ಬಿನ್ ಅಲ್ಕಮರನ್ನು ಹುದೈಬಿಯಾದ ಕಡೆಗೆ ರವಾನಿಸುತ್ತಾರೆ. ಕುರ್ಬಾನಿಯ 70 ಒಂಟೆಗಳನ್ನು ಕಂಡು ಹುಲೈಸ್ ಬಹಳ ಪ್ರಭಾವಿತನಾಗುತ್ತಾನೆ. ಮರಳಿ ಬಂದು ಕುರೈಶ್ ನಾಯಕರೊಡನೆ ಹೀಗೆ ಹೇಳುತ್ತಾನೆ: "ಮುಹಮ್ಮದ್‌ರು(ಸ) ಕೇವಲ ಕಅಬಾ ಭವನದ ಸಂದರ್ಶನಕ್ಕಾಗಿ ಬಂದಿರುವರು. ನಾನು ಕುರ್ಬಾನಿಯ ಪ್ರಾಣಿಗಳನ್ನು ಕಣ್ಣಾರೆ ಕಂಡಿದ್ದೇನೆ. ಯಾರನ್ನೂ ಪವಿತ್ರ ಮಕ್ಕಾಕ್ಕೆ ಪ್ರವೇಶಿಸುವುದರಿಂದ ಹಾಗೂ ಕಅಬಾ ಸಂದರ್ಶನ ಮತ್ತು ತವಾಫ್(ಪ್ರದಕ್ಷಿಣೆ)ನಿಂದ ತಡೆಯಲು ಅಧಿಕಾರವಿಲ್ಲ. ನೀವು ಅವರಿಗೆ ಅನುಮತಿ ನೀಡದೆ ಹೋದರೆ ನಾನು ನನ್ನ ಸೇನಾ ತುಕಡಿಯೊಂದಿಗೆ ನಿಮ್ಮಿಂದ ಬೇರ್ಪಡುತ್ತೇನೆ."

ಪರಿಸ್ಥಿತಿಯ ಸಂಕೀರ್ಣತೆಯನ್ನು ಮನಗಂಡು ಕುರೈಶ್ ನಾಯಕರು ಹೀಗೆ ಹೇಳುತ್ತಾರೆ: "ಹುಲೈಸರೇ! ನಮಗೆ ಸ್ವಲ್ಪ ಅವಧಿ ಕೊಡಿ. ನಮ್ಮ ಪಾಲಿಗೆ ಯಾವುದು ಒಳಿತು ಎಂಬುದರ ಬಗ್ಗೆ ನಾವು ಯೋಚಿಸಿ ತೀರ್ಮಾನಿಸುತ್ತೇವೆ."

ತರುವಾಯ ಉರ್ವ ಬಿನ್ ಮಸ್‌ಊದ್ ಸಕಫಿಯವರನ್ನು ಮುಹಮ್ಮದ್‌ರ(ಸ) ಬಳಿ ಮಾತುಕತೆಗಾಗಿ ಕಳುಹಿಸಿ ಕೊಡುತ್ತಾರೆ.

ಮುಹಮ್ಮದ್(ಸ) ತಮ್ಮ ಅನುಯಾಯಿಗಳ ಒಂದು ಗುಂಪಿನ ಜೊತೆ ಕುಳಿತಿರುವರು. ಉರ್ವ ಅವರ ಮುಂದೆ ಕುಳಿತು ಹೀಗೆ ಹೇಳುತ್ತಿದ್ದಾನೆ: "ಮುಹಮ್ಮದರೇ! ನೀವು ವಿಭಿನ್ನ

ಗೋತ್ರದವರನ್ನು ಒಟ್ಟುಗೂಡಿಸಿ ನಿಮ್ಮ ಗೋತ್ರದವರೊಡನೆ ಯುದ್ಧ ಮಾಡಲಿಕ್ಕಾಗಿ ಬಂದಿರುವಿರಿ. ತನ್ಮೂಲಕ ನಿಮ್ಮ ಗೋತ್ರದವರನ್ನೇ ಶಿಥಿಲಗೊಳಿಸ ಬೇಕೆಂದು ಬಯಸಿದ್ದೀರಿ. ಕುರೈಶರು ಬಹಳ ಶೀವಿಯಿಂದ ಹೊರಟಿರುವರು. ಅವರ ಜೊತೆ ಈಗ ತಾನೆ ಹೆತ್ತ ಒಂಟೆಗಳಿವೆ. ಅವರು ಚಿರತೆಗಳ ಚರ್ಮವನ್ನು ಹೊದ್ದುಕೊಂಡಿದ್ದಾರೆ. ನಿಮ್ಮನ್ನು ತಮ್ಮ ನಗರದೊಳಗೆ ಬಲಾತ್ಕಾರವಾಗಿ ಪ್ರವೇಶಿಸಲು ಬಿಡಲಾರೆವೆಂದು ಆಣೆ ಹಾಕಿದ್ದಾರೆ. ನೀವು ರಕ್ತಪಾತದ ಬಳಿಕ ನಿಮ್ಮ ಜನಾಂಗವನ್ನು ಜಯಿಸಿದರೆ ಅದು ಯಾವ ಪುರುಷಾರ್ಥಕ್ಕೆ. ಈ ಮೊದಲು ಅರೇಬಿಯಾದಲ್ಲಿ ಈ ರೀತಿ ತಮ್ಮ ಜನಾಂಗವನ್ನೇ ಯಾರಾದರೂ ಆಕ್ರಮಿಸಿದ್ದನ್ನು ನೀವು ಕೇಳಿರುವಿರಾ? ಒಂದು ವೇಳೆ ಯುದ್ಧದ ಬಣ್ಣ ಬದಲಾದರೆ ನಿಮ್ಮ ಜೊತೆಗಿರುವ ಈ ವಿಭಿನ್ನ ಗೊತ್ರದ ಜನರು ನಿಮ್ಮನ್ನು ಒಂಟಿಯಾಗಿ ಬಿಟ್ಟು ಹೋಗಿ ಬಿಡುವರು."

ಪ್ರವಾದಿವರ್ಯರ(ಸ) ಬಳಿಯಲ್ಲೇ ನಿಂತಿದ್ದ ಹ. ಅಬೂಬಕರ್ ಸಿದ್ದೀಕ್‌ರಿಗೆ ಈ ಮಾತು ಕೇಳಿ ಕೋಪ ನೆತ್ತಿಗೇರುತ್ತದೆ. ಅವರು ಆತನನ್ನು ಬಯ್ಯುತ್ತಾ ಆವೇಶ ಭರಿತರಾಗಿ ಹೇಳುತ್ತಾರೆ: "ನಮಗೆ ಪ್ರವಾದಿವರ್ಯರ(ಸ) ಮೇಲೆ ಎಷ್ಟು ಪ್ರೀತಿಯಿದೆ ಯೆಂಬುದು ನಿನಗೇನು ಗೊತ್ತು. ನಾವು ಖಂಡಿತ ಅವರನ್ನು ಒಬ್ಬಂಟಿಯಾಗಿ ಬಿಡಲಾರೆವು."

ಉರ್ವನಿಗೆ ಆದ ಅಪಮಾನದಿಂದಾಗಿ ಅವನು ಈ ವ್ಯಕ್ತಿ ಯಾರೆಂದು ಕೇಳು ತ್ತಾನೆ. ಆಗ ಪ್ರವಾದಿವರ್ಯರು "ಇದು ಕಹಾಫ್‌ರ ಪುತ್ರ ಅಬೂಬಕರ್" ಎನ್ನುತ್ತಾರೆ.

ಉರ್ವ: "ನನ್ನ ಮೇಲೆ ಇವರ ಒಂದು ಉಪಕಾರವಿದೆ. ಆ ಉಪಕಾರವಿಲ್ಲದಿರುತ್ತಿದ್ದರೆ ಇವರ ಬೈಗುಳಗಳಿಗೆ ನಾನು ಖಂಡಿತ ಉತ್ತರ ನೀಡುತ್ತಿದ್ದೆ."

ಹ. ಅಬೂಬಕರ್(ರ) ಇಸ್ಲಾಮ್ ಸ್ವೀಕರಿಸುವುದಕ್ಕೆ ಮುಂಚೆ ಒಮ್ಮೆ ಉರ್ವನ ಮೇಲೆ ಒಂದು ರಕ್ತ ಪರಿಹಾರದ ಸಾಲವಿತ್ತು. ಆಗ ಆತನಿಗೆ ಅಬೂಬಕರ್(ರ) 10 ದನಗಳನ್ನು ಸಹಾಯಾರ್ಥವಾಗಿ ನೀಡಿದ್ದರು. ಆತ ಆ ಉಪಕಾರವನ್ನೇ ಇಲ್ಲಿ ಸ್ಮರಿಸುತ್ತಿದ್ದ.

ಅರಬರ ಸಂಪ್ರದಾಯದಂತೆ ಉರ್ವ ಆಗಾಗ ಪ್ರವಾದಿವರ್ಯರ(ಸ) ಗಡ್ಡವನ್ನು ನೇವರಿಸುತ್ತಾ ಮಾತಾಡುತ್ತಿದ್ದ. ಇದನ್ನು ಕಂಡು ಪ್ರವಾದಿವರ್ಯರ(ಸ) ಅಂಗರಕ್ಷಕರಾಗಿ ನಿಂತಿದ್ದ ಮುಗೀರಾರಿಗೆ(ರ) ಸಹಿಸಲಾಗಲಿಲ್ಲ. ಒಮ್ಮೆ ಆತ ಪ್ರವಾದಿವರ್ಯರ(ಸ) ಗಡ್ಡದ ಕಡೆಗೆ ಕೈಯೊಡ್ಡಿದಾಗ ಮುಗೀರಾ(ರ) ತಮ್ಮ ಖಡ್ಗವನ್ನು ಎಳೆಯುತ್ತಾ ಆತನನ್ನು ಹೀಗೆ ಗದರಿಸುತ್ತಾರೆ: "ಜಾಗ್ರತೆ! ಇನ್ನೊಮ್ಮೆ ಕೈ ಮುಂದೆ ಮಾಡಿದರೆ ಆ ಕೈ ಮತ್ತೆ ಮರಳಲಾರದು."

ಉರ್ವ ಅವರನ್ನು ಚೆನ್ನಾಗಿ ನೋಡುತ್ತಾ 'ಇವರು ಯಾರು' ಎಂದು ಕೇಳುತ್ತಾನೆ. ಆಗ ಪ್ರವಾದಿವರ್ಯರು(ಸ): "ಇದು ನಿನ್ನ ಸೋದರ ಪುತ್ರ ಮುಗೀರಾ" ಎನ್ನುತ್ತಾರೆ.

ಉರ್ವ: "ಓ ಮೋಸಗಾರ! ನಾನು ನಿನ್ನ ಮೋಸದ ಕಾರ್ಯವನ್ನು ಸರಿಪಡಿಸಲಿಕ್ಕಾಗಿ ನಿನಗೆ ನೆರವಾದುದನ್ನು ಮರೆತು ಬಿಟ್ಟೆಯಾ. ನೀನು ಇಷ್ಟು ಕೃತಘ್ನನಾಗಿರುವೆಯಾ?"

ಮುಗೀರಾ(ರ) ಇಸ್ಲಾಮ್ ಸ್ವೀಕಾರಕ್ಕೆ ಮುಂಚೆ ಕೆಲವು ಮಂದಿಯನ್ನು ವಧಿಸಿದ್ದರು. ಅದರ ರಕ್ತಪರಿಹಾರವನ್ನು ಉರ್ವ ನೀಡಿದ್ದ. ಅದನ್ನೇ ಇಲ್ಲಿ ಆತ ತನ್ನ ನೆರವೆಂದು ಸ್ಮರಿಸಿದ್ದ.

ಉರ್ವ ಪ್ರವಾದಿವರ್ಯರ(ಸ) ಸಂಗಾತಿಗಳು ಅವರ ಬಗ್ಗೆ ಇಟ್ಟಿರುವ ಗೌರವಾದರಗಳ ಬಗ್ಗೆ ಬಹಳ ಪ್ರಭಾವಿತನಾಗಿ ಕುರೈಶರ ಬಳಿಗೆ ಮರಳುತ್ತಾನೆ. ಅವರನ್ನುದ್ದೇಶಿಸಿ ಹೀಗೆ ಹೇಳುತ್ತಾನೆ: "ಓ ನನ್ನ ಜನಾಂಗ ಬಾಂಧವರೇ! ಅಲ್ಲಾಹನಾಣೆ! ನಾನು ಅನೇಕ ರಾಜರುಗಳ ಬಳಿಗೆ ನಿಯೋಗಗಳ ಜೊತೆ ಹೋಗಿದ್ದೇನೆ. ಕೈಸರ್, ಕಿಸ್ರಾ ಮತ್ತು ನಜ್ಜಾಶಿಯ ಆಸ್ಥಾನ ಗಳನ್ನು ನಾನು ಕಂಡಿದ್ದೇನೆ. ಆದರೆ ಅಲ್ಲಾಹನಾಣೆ! ಮುಹಮ್ಮದ್‌ರ(ಸ) ಸಂಗಾತಿ ಗಳು ಅವರನ್ನು ಗೌರವಿಸುವಷ್ಟು ಅವರ ಪೈಕಿ ಯಾವ ರಾಜನನ್ನೂ ಅವನ ಆಸ್ಥಾನಿಗರು ಗೌರವಿ ಸುತ್ತಿರಲಿಲ್ಲ. ಅಲ್ಲಾಹನಾಣೆ! ಮುಹಮ್ಮದ್(ಸ) ವುಝೂ ಮಾಡಿದ ನೀರನ್ನೂ ನೆಲಕ್ಕೆ ಬೀಳಲು ಬಿಡುವುದಿಲ್ಲ. ಅವರ ಸಂಗಾತಿಗಳು ಅದನ್ನು ಕೈಯಲ್ಲಿ ಎತ್ತಿ ತಮ್ಮ ಮುಖ ಮತ್ತು ಮೈಗೆ ಹಚ್ಚಿಕೊಳ್ಳುತ್ತಾರೆ. ಅವರು ಯಾವುದನ್ನಾದರೂ ಆಜ್ಞಾಪಿಸಿದರೆ ಅವರ ಸಂಗಾತಿಗಳು ಅದನ್ನು ಪಾಲಿಸಲು ನಾಮುಂದು ತಾಮುಂದು ಎಂಬಂತೆ ಪೈಪೋಟಿ ನಡೆಸು ತ್ತಾರೆ. ಅವರು ವುಝೂ ಮಾಡುವಾಗ ಅದರ ನೀರನ್ನು ಪಡೆಯಲಿಕ್ಕಾಗಿ ಜನರು ನೂಕು ನುಗ್ಗಲು ನಡೆಸುತ್ತಾರೆ. ಅವರು ಮಾತಾಡುವಾಗ ಅವರ ಗೌರವಾದರಗಳಿಂದಾಗಿ ಸಂಪೂರ್ಣ ಮೌನ ವಹಿಸುತ್ತಾರೆ. ಅವರ ಅತ್ಯಧಿಕ ಗೌರವದಿಂದಾಗಿ ಅವರತ್ತ ಯಾರೂ ಕಣ್ಣೆತ್ತಿಯೂ ನೋಡುವುದಿಲ್ಲ.

ಮುಹಮ್ಮದರು(ಸ) ನಿಮ್ಮ ಮುಂದೆ ಒಂದು ಉತ್ತಮ ಮಾತನ್ನು ಇಟ್ಟಿದ್ದಾರೆ. ಅದನ್ನು ಸ್ವೀಕರಿಸುವುದೇ ನಿಮ್ಮ ಪಾಲಿಗೆ ಒಳಿತಾಗಿದೆ. ನಾನು ನೋಡಿದಂತಹ ಸಮುದಾಯವು ಯಾವ ಪರಿಸ್ಥಿತಿಯಲ್ಲೂ ತನ್ನ ಪ್ರವಾದಿಯನ್ನು(ಸ) ನಿಮ್ಮ ವಶಕ್ಕೆ ಒಪ್ಪಿಸಲಾರದು. ಆದ್ದರಿಂದ ಅವರೊಂದಿಗೆ ಹೋರಾಡುವ ನಿಮ್ಮ ಇರಾದೆಯನ್ನು ತೊರೆ ಯುವುದೇ ನಿಮ್ಮ ಪಾಲಿಗೆ ಶ್ರೇಯಸ್ಕರ. ನೀವು ಅವರನ್ನು ಜಯಿಸಲಾರಿರೆಂದೇ ನಾನು ಭಯಪಡುತ್ತೇನೆ."

ಆದರೆ ಕುರೈಶರು ಉರ್ವನ ಮಾತನ್ನು ಸ್ವೀಕರಿಸುವುದಿಲ್ಲ. ಆತ ನಿರಾಶನಾಗಿ ತನ್ನ ಸಂಗಾತಿಗಳ ಜೊತೆ ತಾಯಿಫ್‌ಗೆ ಮರಳುತ್ತಾನೆ.

ಮುಹಮ್ಮದ್(ಸ) ತಮ್ಮೋರ್ವ ಸಂಗಾತಿ - ಖಿರಾಶ್ ಬಿನ್ ಉಮಯ್ಯ ಖಝಾಈ ಯವರನ್ನು ಕುರೈಶರ ಬಳಿಗೆ ನಿರ್ಣಾಯಕ ಮಾತುಕತೆಗಾಗಿ ರವಾನಿಸುತ್ತಾರೆ. ಅವರಿಗೆ ತಮ್ಮ ಒಂದು ಒಂಟೆ-ಸಅಲಬ್‌ಯನ್ನು ಸವಾರಿಗಾಗಿ ನೀಡುತ್ತಾರೆ. ಕುರೈಶರು ಆ ಒಂಟೆಯನ್ನು ಕೊಂದು ಖಿರಾಶ್‌ರ ಮೇಲೆಯೂ ದಾಳಿ ಮಾಡುತ್ತಾರೆ. ಆದರೆ ಅಲ್ಲಿ ನೆರೆದಿದ್ದ ವಿಭಿನ್ನ ಗೋತ್ರಗಳ ಜನರು ಮಧ್ಯೆ ಪ್ರವೇಶಿಸಿ ಅವರನ್ನು ತಡೆ ಯುತ್ತಾರೆ. ತನ್ಮೂಲಕ ಖಿರಾಶ್‌ರ ಪ್ರಾಣ ಉಳಿಯುತ್ತದೆ. ಆದರೆ ಕುರೈಶರು ಮುಸ್ಲಿಮರ ಶತ್ರುತ್ವದಲ್ಲಿ ಮಿತಿಮೀರಿ ಹೋಗಿದ್ದರು. ಅವರು ಯಾವುದೇ ಸಲಹೆಯನ್ನು ಕೇಳಲಿ ಕ್ಕಾಗಲೀ ಸ್ವೀಕರಿಸಲಿಕ್ಕಾಗಲೀ

ಸಿದ್ಧವಿರಲಿಲ್ಲ. ಅವರು ತಮ್ಮ 70 ಮಂದಿ ಯೋಧರ ಒಂದು ತುಕಡಿಯನ್ನು ಹುದೈಬಿಯಾಕ್ಕೆ ರವಾನಿಸುತ್ತಾರೆ. ದಾರಿಯಲ್ಲಿ ಸಿಗುವ ಎಲ್ಲ ಮುಸ್ಲಿಮರನ್ನು ಕೊಂದು ಬಿಡುವಂತೆ ಅದಕ್ಕೆ ಆದೇಶಿಸುತ್ತಾರೆ. ಆದರೆ ಆ ತುಕಡಿಯನ್ನು ಮುಸ್ಲಿಮರು ಸೆರೆಹಿಡಿಯುತ್ತಾರೆ. ಮುಹಮ್ಮದ್(ಸ) ತಮ್ಮ ಕ್ಷಮೆ ಮತ್ತು ಕರುಣೆಯಿಂದಾಗಿ ಅವರನ್ನು ಏನೂ ವಿಚಾರಿಸದೆ ಬಿಟ್ಟು ಬಿಡುತ್ತಾರೆ. ಈ ಘಟನೆಯ ಕುರಿತು ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಪ್ರಸ್ತಾಪಿಸಲಾಗಿದೆ: "ಮಕ್ಕಾ ಕಣಿವೆಯಲ್ಲಿ ಅವರ ಕೈಗಳನ್ನು ನಿಮ್ಮಿಂದಲೂ ನಿಮ್ಮ ಕೈಗಳನ್ನು ಅವರಿಂದಲೂ ತಡೆದವನು ಅವನೇ. ವಸ್ತುತಃ ಅವನು ನಿಮಗೆ ಅವರ ಮೇಲೆ ಪ್ರಾಬಲ್ಯ ದಯಪಾಲಿಸಿದ್ದನು ಮತ್ತು ನೀವು ಮಾಡುತ್ತಿದ್ದುದನ್ನೆಲ್ಲ ಅಲ್ಲಾಹ್ ವೀಕ್ಷಿಸುತ್ತಿದ್ದನು." **(ಪವಿತ್ರ ಕುರ್‌ಆನ್: 48: 24)**

ಅಲ್ಲಾಹನು ಕುರೈಶರ ಕೈಗಳನ್ನು ಆಕ್ರಮಣದಿಂದ ತಡೆದನು ಮತ್ತು ಅವರ ಮೇಲೆ ಸ್ವಾಧೀನ ಪ್ರಾಪ್ತವಾಗಿಯೂ ಮುಸ್ಲಿಮರು ಅವರನ್ನು ವಧಿಸದಂತೆ ತಡೆದನು. ಇದು ಕೂಡಾ ಕುರೈಶರ ಪಾಲಿಗೆ ಮುಹಮ್ಮದ್‌ರು(ಸ) ಯುದ್ಧಕ್ಕೆ ಬಂದುದಾಗಿರಲಿಲ್ಲ ಎಂಬುದರ ಒಂದು ನಿದರ್ಶನವಾಗಿತ್ತು. ಅವರ ಆಗಮನವು ಕೇವಲ ಕಅಬಾ ಭವನದ ಸಂದರ್ಶನಕ್ಕಾಗಿತ್ತೆಂಬುದನ್ನು ಮನಗಂಡ ಬಳಿಕವೂ ಕುರೈಶರು ಅದನ್ನು ಒಪ್ಪಿಕೊಳ್ಳಲು ಸಿದ್ಧರಿರಲಿಲ್ಲ.

## ರಿಝ್ವಾನ್ ಪ್ರತಿಜ್ಞೆ

ಕುರೈಶರು ಹ. ಉಸ್ಮಾನ್‌ರನ್ನು(ರ) ವಧಿಸಿರುವರೆಂಬ ಸುದ್ದಿಯಿಂದ ಮುಸ್ಲಿಮರು ಗಲಿಬಿಲಿಗೊಳ್ಳುತ್ತಾರೆ. ಪ್ರವಾದಿವರ್ಯರು(ಸ) ತಾವು ಮತ್ತು ಸಂಗಾತಿಗಳು ಕಅಬಾ ಭವನವನ್ನು ಸಂದರ್ಶಿಸಿ ಉಮ್ರಾ ಮಾಡುವ ಬಗ್ಗೆ ಕುರೈಶರ ಇಂಗಿತವೇನೆಂದು ವಿಚಾರಿಸಲಿಕ್ಕಾಗಿ ಹ.ಉಸ್ಮಾನ್‌ರನ್ನು(ರ) ಮಕ್ಕಾಕ್ಕೆ ರವಾನಿಸಿದ್ದರು. ಆದರೆ ಕುರೈಶರು ಅವರನ್ನುದ್ದೇಶಿಸಿ: "ನೀವು ಬೇಕಾದರೆ ಕಅಬಾ ಭವನದ ಸಂದರ್ಶನ ಮಾಡಿ ಹೋಗಬಹುದು. ಆದರೆ ಇತರರನ್ನು ನಗರ ಪ್ರವೇಶಿಸಲು ನಾವು ಬಿಡಲಾರೆವು" ಎಂದರು.

ಇದಕ್ಕೆ ಉತ್ತರವಾಗಿ ಹ. ಉಸ್ಮಾನ್(ರ) ಅತ್ಯಂತ ನಿರ್ಣಾಯಕ ಸ್ವರದಲ್ಲಿ ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೂ ಅವರ ಸಂಗಾತಿಗಳೂ ತವಾಫ್ ಮಾಡುವ ತನಕ ಖಂಡಿತ ನಾನೂ ತವಾಫ್ ಮಾಡಲಾರೆ. ನೀವು ಅವರಿಗೆ ಅನುಮತಿ ನೀಡದಿದ್ದರೆ ನನಗೆ ನಿಮ್ಮ ಕೊಡುಗೆಯು ಸ್ವೀಕಾರಾರ್ಹವಲ್ಲ."

ಇದನ್ನು ಕೇಳಿ ಕುರೈಶರು ಕೆರಳುತ್ತಾರೆ. ಅವರು ಉಸ್ಮಾನ್‌ರನ್ನು(ರ) ಬಂಧಿಸುತ್ತಾರೆ. ಬಹಳ ಸಮಯವಾದರೂ ಉಸ್ಮಾನ್(ರ) ಮರಳದಿರುವುದನ್ನು ಕಂಡು ಮುಸ್ಲಿಮರು ಆತಂಕ ಗೊಳ್ಳುತ್ತಾರೆ. ಅಷ್ಟರಲ್ಲಿ ಅವರನ್ನು ಕುರೈಶರು ವಧಿಸಿದ್ದಾರೆಂಬ ವದಂತಿ ಹರಡಿ ಬಿಡುತ್ತದೆ.

ಪ್ರವಾದಿವರ್ಯರು(ಸ) ಆ ವೇಳೆಗೆ ಒಂದು ಮರದ ನೆರಳಲ್ಲಿ ಕುಳಿತಿದ್ದರು. ಈ ವದಂತಿಯನ್ನು ಕೇಳಿ ಅವರು ಸಹಾಬಿಗಳಿಗೆ ಅಲ್ಲಿ ಬಂದು ಸೇರುವಂತೆ ಆಜ್ಞಾಪಿಸುತ್ತಾರೆ. ಎಲ್ಲರೂ ಬಂದು ಹಾಜರಾದಾಗ ಪ್ರವಾದಿ(ಸ) ಅವರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ಈಗ

ನಾವು ಕುರೈಶರೊಂದಿಗೆ ಯುದ್ಧ ಮಾಡದೆ ಇಲ್ಲಿಂದ ಮರಳುವಂತಿಲ್ಲ. ನಾವು ನಮ್ಮ ಶರೀರದಲ್ಲಿ ಪ್ರಾಣವಿರುವ ತನಕ ಹಿಂದಕ್ಕೆ ಸರಿಯಲಾರೆವು ಎಂಬ ಪ್ರತಿಜ್ಞೆ ಮಾಡಿರಿ."

ಸಹಾಬಿಗಳು ಒಬ್ಬೊಬ್ಬರಾಗಿ ಮುಂದೆ ಬಂದು ಪ್ರವಾದಿವರ್ಯರ(ಸ) ಕೈಯಲ್ಲಿ ಕೈ ಕೊಟ್ಟು ಪ್ರತಿಜ್ಞೆ ಮಾಡುತ್ತಾರೆ. ಕುರೈಶರೊಂದಿಗೆ ಯುದ್ಧ ನಡೆದರೆ ಎಲ್ಲ ಸ್ಥಿತಿಯಲ್ಲೂ ನಾವು ದೃಢಚಿತ್ತರಾಗಿ ನಿಲ್ಲುವೆವೆಂದು ಪ್ರತಿಜ್ಞೆಗೈಯುತ್ತಾರೆ.

ಹ. ಉಸ್ಮಾನ್‌ರ(ರ) ಪರವಾಗಿ ಸ್ವತಃ ಪ್ರವಾದಿವರ್ಯರೇ ತಮ್ಮ ಎಡಕೈಯ ಮೂಲಕ ಪ್ರತಿಜ್ಞೆ ಮಾಡುತ್ತಾರೆ. ಸಹಾಬಿಗಳ ಈ ಐತಿಹಾಸಿಕ ಪ್ರತಿಜ್ಞೆಯನ್ನು 'ಬೈಅತ್ ರಿಝ್ವಾನ್' ಅರ್ಥಾತ್ ರಿಝ್ವಾನ್ ಪ್ರತಿಜ್ಞೆ ಎನ್ನಲಾಗುತ್ತದೆ. ಈ ಕುರಿತು ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ:

1. "ಸಂದೇಶವಾಹಕರೇ, ನಿಮ್ಮೊಂದಿಗೆ ಆಜ್ಞಾನುಸರಣೆಯ ಕರಾರು ಮಾಡು ತ್ತಿದ್ದವರು ವಾಸ್ತವದಲ್ಲಿ ಅಲ್ಲಾಹನೊಂದಿಗೆ ಆಜ್ಞಾನುಸರಣೆಯ ಕರಾರು ಮಾಡುತ್ತಿದ್ದರು. ಅವರ ಹಸ್ತಗಳ ಮೇಲೆ ಅಲ್ಲಾಹನ ಹಸ್ತವಿತ್ತು. ಇನ್ನು ಈ ಕರಾರನ್ನು ಉಲ್ಲಂಘಿಸುವವನ ಮೇಲೆಯೇ ಆ ಉಲ್ಲಂಘನೆಯ ಅಪರಾಧವಿರುವುದು. ಯಾರು ಅಲ್ಲಾಹನೊಂದಿಗೆ ಮಾಡಿದ ಈ ಕರಾರನ್ನು ಪಾಲಿಸುವನೋ ಅವನಿಗೆ ಅಲ್ಲಾಹನು ಶೀಘ್ರವೇ ಭಾರೀ ಪ್ರತಿಫಲವನ್ನು ದಯಪಾಲಿಸುವನು." **(ಪವಿತ್ರ ಕುರ್‌ಆನ್: 48: 10)**

2. "ವೃಕ್ಷದಡಿಯಲ್ಲಿ ನಿಮ್ಮೊಂದಿಗೆ ಸತ್ಯವಿಶ್ವಾಸಿಗಳು ಆಜ್ಞಾನುಸರಣೆಯ ಕರಾರು ಮಾಡುತ್ತಿದ್ದಾಗ ಅಲ್ಲಾಹನು ಅವರಿಂದ ಸಂತುಷ್ಟನಾದನು. ಅವರ ಮನಸ್ಸಿನಲ್ಲೇ ನಿತ್ತೆಂಬುದು ಅವನಿಗೆ ತಿಳಿದಿತ್ತು. ಆದುದರಿಂದ ಅವನು ಅವರ ಮೇಲೆ ಪ್ರಶಾಂತತೆ ಯನ್ನು ಇಳಿಸಿದನು. ಪುರಸ್ಕಾರವಾಗಿ ಅವರಿಗೆ ಶೀಘ್ರ ವಿಜಯವನ್ನು ದಯಪಾಲಿಸಿದನು."

**(ಪವಿತ್ರ ಕುರ್‌ಆನ್: 48: 18)**

ಈ ಪ್ರತಿಜ್ಞೆಯ ವಿಷಯ ಕುರೈಶರಿಗೆ ತಿಳಿದಾಗ ಅವರಲ್ಲಿ ಭೀತಿ ಆವರಿಸಿತು. ಬದ್ರ್ ಮತ್ತು ಉಹುದ್ ಯುದ್ಧಗಳಲ್ಲಿ ಕಂಡಿದ್ದ ಮುಸ್ಲಿಮರ ಶೌರ್ಯವು ಅವರ ಕಣ್ಣ ಮುಂದೆ ಸುಳಿದಂತಾಯಿತು. ಈಗ ಮುಸ್ಲಿಮರೊಂದಿಗೆ ಒಪ್ಪಂದ ಮಾಡಿಕೊಳ್ಳುವು ದೊಂದೇ ಉಳಿದಿರುವ ಮಾರ್ಗವೆಂದು ಅವರು ಬಗೆದರು. ಒಪ್ಪಂದದ ನಿಬಂಧನೆಗಳನ್ನು ನಿರ್ಧರಿಸ ಲಿಕ್ಕಾಗಿ ಸುಹೈಲ್ ಬಿನ್ ಅಮ್ರ್‌ರನ್ನು ತಮ್ಮ ಅಧಿಕೃತ ಪ್ರತಿನಿಧಿಯಾಗಿ ಹುದೈಬಿಯಾಕ್ಕೆ ರವಾನಿಸಿದರು. ಸುಹೈಲ್ ಹತ್ತಿರ ಬರುತ್ತಿರುವುದನ್ನು ಕಂಡು ಪ್ರವಾದಿ(ಸ) ಆತ ಶಾಂತಿ ಒಪ್ಪಂದಕ್ಕಾಗಿಯೇ ಕಳುಹಿಸಲ್ಪಟ್ಟಿದ್ದಾನೆಂಬುದನ್ನು ಅರಿತುಕೊಳ್ಳುತ್ತಾರೆ.

ಕುರೈಶರ ಮಟ್ಟಿಗೆ ಸುಹೈಲ್ ಅತ್ಯಂತ ಮೇಧಾವಿ, ತೀಕ್ಷ್ಣ ಬುದ್ಧಿಯ ಮತ್ತು ದೂರ ದೃಷ್ಟಿಯ ಸಂಧಾನಕಾರನಾಗಿದ್ದ. ಆದ್ದರಿಂದಲೇ ಅವನನ್ನು ಮುಸ್ಲಿಮರೊಂದಿಗೆ ಸಂಧಾನ ನಡೆಸುವ ಪೂರ್ಣ ಅಧಿಕಾರದೊಂದಿಗೆ ರವಾನಿಸಲಾಗಿದೆ. ಅವರಿಂದಲೇ ಹ. ಉಸ್ಮಾನ್‌ರ(ರ)

ಹುತಾತ್ಮತೆಯ ವದಂತಿ ಸುಳ್ಳಾಗಿತ್ತೆಂದು ತಿಳಿದು ಬರುತ್ತದೆ. ಸ್ವಲ್ಪ ಹೊತ್ತಿನಲ್ಲೇ ಹ. ಉಸ್ಮಾನ್(ರ) ಅವರೂ ಮರಳಿ ಬರುತ್ತಾರೆ.

ಸುದೀರ್ಘ ಮಾತುಕತೆಯ ಬಳಿಕ ಸಂಧಾನದ ಈ ಕೆಳಗಿನ ನಿಬಂಧನೆಗಳು ನಿಶ್ಚಯಿಸಲ್ಪಡುತ್ತದೆ:

1. ಹತ್ತು ವರ್ಷಗಳವರೆಗೆ ಎರಡೂ ಕಡೆಯವರೊಳಗೆ ಯುದ್ಧ ವಿರಾಮವಿರುವುದು. ಈ ಅವಧಿಯಲ್ಲಿ ಅವರು ಪರಸ್ಪರರ ವಿರುದ್ಧ ಯಾವುದೇ ರಹಸ್ಯ ಅಥವಾ ಬಹಿರಂಗ ಕಾರ್ಯಾಚರಣೆಯನ್ನು ನಡೆಸಲಾರರು.

2. ಈ ಕಾಲಾವಧಿಯಲ್ಲಿ ಕುರೈಶರ ಪೈಕಿ ಯಾರಾದರೂ ತನ್ನ ಸಂರಕ್ಷಕನ ಅನುಮತಿಯಿಲ್ಲದೆ ಓಡಿ ಬಂದು ಮುಹಮ್ಮದ್‌ರ(ಸ) ಜೊತೆ ಸೇರಿಕೊಂಡರೆ, ಮುಹಮ್ಮದ್(ಸ) ಆತನನ್ನು ಮರಳಿ ಕುರೈಶರಿಗೆ ಒಪ್ಪಿಸುವರು. ಆದರೆ ಮುಹಮ್ಮದ್‌ರ(ಸ) ಸಂಗಾತಿಗಳ ಪೈಕಿ ಯಾರಾದರೂ ಕುರೈಶರ ಬಳಿಗೆ ಬಂದರೆ ಆತನನ್ನು ಅವರು ಮರಳಿಸಲಾರರು.

3. ಅರಬ್ ಗೋತ್ರಗಳ ಪೈಕಿ ಪ್ರತಿಯೊಂದು ಗೋತ್ರವೂ ಇತ್ತಂಡಗಳ ಪೈಕಿ ಯಾವ ತಂಡದೊಡನೆ ಬೇಕಾದರೂ ಒಪ್ಪಂದ ಬದ್ಧವಾಗಿ ಸೇರಿಕೊಳ್ಳಲು ಸ್ವತಂತ್ರ ವಾಗಿರುವುದು.

4. ಇತ್ತಂಡಗಳವರೂ ಪರಸ್ಪರ ಕರಾರು ಉಲ್ಲಂಘನೆ ಅಥವಾ ವಂಚನೆ ಮಾಡಲಾರರು. ಮನಸ್ಸಿನಲ್ಲಿ ದ್ವೇಷವಿದ್ದರೂ ಅದನ್ನು ಬಹಿರಂಗಗೊಳಿಸಲಾಗದು.

5. ಮುಹಮ್ಮದ್(ಸ) ಈ ವರ್ಷ ಮರಳಿ ಹೋಗಬೇಕು. ಮುಂದಿನ ವರ್ಷ ಅವರು ಉಮ್ರಾ ಮಾಡಲಿಕ್ಕಾಗಿ ಬಂದು ಕೇವಲ ಮೂರು ದಿನಗಳ ಕಾಲ ಮಕ್ಕಾದಲ್ಲಿ ತಂಗುವರು. ಅವರು ತಮ್ಮ ಆತ್ಮರಕ್ಷಣೆಯ ಖಡ್ಗಗಳನ್ನು ಕವಚದೊಳಗಿರಿಸಬೇಕು. ಇತರ ಯಾವುದೇ ಯುದ್ಧೋಪಕರಣವನ್ನು ತರಬಾರದು. ಈ ಮೂರು ದಿನಗಳಲ್ಲಿ (ಯಾವುದೇ ಘರ್ಷಣೆ ಯುಂಟಾಗದಂತೆ) ಮಕ್ಕಾ ವಾಸಿಗಳು ಮುಹಮ್ಮದ್(ಸ) ಮತ್ತು ಅನುಯಾಯಿಗಳಿಗಾಗಿ ಮಕ್ಕಾ ಪಟ್ಟಣವನ್ನು ಬಿಟ್ಟುಕೊಡುವರು. ಆದರೆ ಅವರು ಮರಳಿ ಹೋಗುವಾಗ ಅಲ್ಲಿನ ಯಾವನೇ ನಿವಾಸಿಯನ್ನು ತಮ್ಮ ಜೊತೆ ಕರೆದೊಯ್ಯಬಾರದು.

## ಹುದೈಬಿಯಾ ಸಂಧಿ

ಹುದೈಬಿಯಾ ಸಂಧಿಯ ಈ ನಿಬಂಧನೆಗಳು ನಿಶ್ಚಯಿಸಲ್ಪಡುತ್ತಿರುವಾಗ ಮುಸ್ಲಿಮರಲ್ಲಿ ಅತೃಪ್ತಿ-ಅಸಮಾಧಾನಗಳು ವ್ಯಾಪಕವಾಗಿದ್ದುವು. ಪ್ರವಾದಿವರ್ಯರು(ಸ) ಯಾವ ಪ್ರಯೋಜನ ಗಳನ್ನು ದೃಷ್ಟಿಯಲ್ಲಿರಿಸಿ ಈ ಒಪ್ಪಂದದ ಶರತ್ತುಗಳಿಗೆ ಒಪ್ಪಿಗೆ ನೀಡಿದ್ದರೋ ಅದಿನ್ನೂ ಮುಸ್ಲಿಮರಿಗೆ ತಿಳಿದಿರಲಿಲ್ಲ. ಒಂದೆಡೆ ಕುರೈಶರು ಈ ಒಪ್ಪಂದವು ತಮ್ಮ ವಿಜಯವೆಂದು ಭಾವಿಸಿದರೆ ಇನ್ನೊಂದೆಡೆ ಮುಸ್ಲಿಮರು ಇಂತಹ ಅಪಮಾನಕಾರಿ ಶರತ್ತುಗಳೊಂದಿಗೆ ಈ ಸಂಧಿಯನ್ನು ಮಾಡಿಕೊಂಡ ಬಗ್ಗೆ ಬಹಳ ಆತಂಕಿತರಾಗಿದ್ದರು.

ಒಪ್ಪಂದದ ಶರತ್ತುಗಳು ಲಿಖಿತಗೊಳ್ಳುವ ಹಂತ ತಲುಪಿದಾಗ ಪ್ರವಾದಿವರ್ಯರು(ಸ) ಹ. ಅಲೀಯವರಿಗೆ(ರ) ಬರೆಯಲು ಸೂಚಿಸುತ್ತಾರೆ. ಅವರು ಒಪ್ಪಂದ ಪತ್ರದ ಆರಂಭದಲ್ಲಿ 'ಬಿಸ್ಮಿಲ್ಲಾಹಿರ್ರಹ್ಮಾನಿರ್ರಹೀಮ್' (ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ) ಎಂದು ಬರೆಯ ಬಯಸುತ್ತಾರೆ. ಆದರೆ ಸುಹೈಲ್ ಇದಕ್ಕೆ ತನ್ನ ಆಕ್ಷೇಪವನ್ನು ವ್ಯಕ್ತಪಡಿಸಿ ಅರಬ್ ಸಂಪ್ರದಾಯದಂತೆ 'ಬಿಸ್ಮಿಕ ಅಲ್ಲಾಹುಮ್ಮ' (ಓ ಅಲ್ಲಾಹ್! ನಿನ್ನ ನಾಮದಿಂದ) ಎಂದು ಬರೆಯಬೇಕೆನ್ನುತ್ತಾರೆ. ಮುಹಮ್ಮದ್(ಸ) ಅಲೀಯ ವರಿಗೆ(ರ) ಹಾಗೆಯೇ ಬರೆಯಲು ಆದೇಶಿಸುತ್ತಾರೆ.

ಹ. ಅಲೀ(ರ) ಹಾಗೆಯೇ ಬರೆಯುತ್ತಾರೆ. ಅನಂತರ "ಅಲ್ಲಾಹನ ಪ್ರವಾದಿಯಾದ ಮುಹಮ್ಮದ್(ಸ) ಮತ್ತು ಸುಹೈಲ್ ಬಿನ್ ಅಮ್ರ್ ಅವರ ಮಧ್ಯೆ ಆದ ಒಪ್ಪಂದದ ಶರತ್ತುಗಳು" ಎಂದು ಬರೆಯಲು ಪ್ರವಾದಿವರ್ಯರು(ಸ) ಸೂಚಿಸುತ್ತಾರೆ. ಸುಹೈಲ್ ಅದಕ್ಕೂ ಆಕ್ಷೇಪವೆತ್ತುತ್ತಾನೆ. "ನಾವು ನಿಮ್ಮನ್ನು ಅಲ್ಲಾಹನ ಪ್ರವಾದಿಯೆಂದು ಒಪ್ಪಿಕೊಂಡಿದ್ದರೆ ಮತ್ತೆ ಈ ಜಗಳ ಎಲ್ಲಿಂದ ಬಂತು" ಎನ್ನುತ್ತಾನೆ.

ಆಗ ಮುಹಮ್ಮದ್(ಸ) ನಾನು ಖಂಡಿತವಾಗಿಯೂ ಅಲ್ಲಾಹನ ಪ್ರವಾದಿಯಾಗಿ ರುವೆನು. ಆದರೆ ಇಲ್ಲಿ ನೀವು ಹೀಗೆ ಬರೆಯಿರಿ ಎಂದು ಅಲೀಯವರಿಗೆ(ರ) ಆದೇಶಿಸುತ್ತಾರೆ: "ಅಬ್ದುಲ್ಲಾರ ಮಗ ಮುಹಮ್ಮದ್(ಸ) ಮತ್ತು ಅಮ್ರ್‌ನ ಮಗ ಸುಹೈಲ್‌ರ ಮಧ್ಯೆ ಏರ್ಪಟ್ಟ ಒಪ್ಪಂದ."

ಆದರೆ ಹ. ಅಲೀ(ರ), ಉಸೈದ್ ಬಿನ್ ಹುದೈರ್(ರ) ಹಾಗೂ ಸಅದ್ ಬಿನ್ ಉಬಾದಾ(ರ) ಪ್ರವಾದಿವರ್ಯರ(ಸ) ಮೇಲಿನ ಪ್ರೇಮದಿಂದಾಗಿ 'ಅಲ್ಲಾಹನ ಪ್ರವಾದಿ' ಎಂಬ ಶಬ್ದಗಳನ್ನು ಅಳಿಸಲು ಒಪ್ಪುವುದಿಲ್ಲ. ಆದ್ದರಿಂದ ಆ ಪದಗಳ ಮೇಲೆ ಪ್ರವಾದಿ ವರ್ಯರೇ(ಸ) ತಮ್ಮ ಕೈಯಿಂದ ಗೆರೆ ಎಳೆಯುತ್ತಾರೆ ಮತ್ತು ಅಲ್ಲಿ ಮುಹಮ್ಮದ್ ಬಿನ್ ಅಬ್ದುಲ್ಲಾ ಎಂದು ಬರೆಸುತ್ತಾರೆ.

ಒಪ್ಪಂದದ ಶರತ್ತುಗಳನ್ನು ಬರೆಯುತ್ತಿರುವಾಗಲೇ ಓರ್ವ ಯುವಕನು ಬರುತ್ತಿರುವುದು ಕಾಣಿಸುತ್ತದೆ. ಆತನ ಕೂದಲು ಕೆದರಿತ್ತು. ಬಟ್ಟೆಗಳು ಹರಿದಿದ್ದುವು. ಶರೀರದಲ್ಲೆಲ್ಲ ಹಿಂಸೆಯ ಕುರುಹುಗಳಿದ್ದುವು. ಮೈಮೇಲೆ ಸಂಕೋಲೆಗಳು ನೇತಾಡುತ್ತಿದ್ದುವು. ಸೆರೆಮನೆಯಿಂದ ತಪ್ಪಿಸಿಕೊಂಡು ಬಂದವನಂತೆ ಕಾಣಿಸುತ್ತಿತ್ತು. ಎಲ್ಲರ ದೃಷ್ಟಿಯೂ ಅವನತ್ತ ಹರಿಯುತ್ತದೆ. ಆತ ದೀನ ಸ್ವರದಲ್ಲಿ ಮೊರೆಯಿಡುತ್ತಾನೆ:

"ಓ ಪ್ರವಾದಿವರ್ಯರೇ(ಸ) ನನಗೆ ಆಶ್ರಯ ನೀಡಿರಿ."

ಇದು ಸುಹೈಲ್ ಬಿನ್ ಅಮ್ರ್‌ನ ಪುತ್ರ ಅಬೂಜಂದಲ್ ಆಗಿದ್ದರು. ಮುಸ್ಲಿಮ್ ಆದ ತಪ್ಪಿಗಾಗಿ ತಂದೆಯು ಅವರನ್ನು ಸಂಕೋಲೆಗಳಲ್ಲಿ ಬಿಗಿದು ಕಟ್ಟಿದ್ದರು. ಇಂದು ಅವರು ಸಂದರ್ಭ ಸಾಧಿಸಿ ತಪ್ಪಿಸಿಕೊಂಡು ಓಡಿ ಬಂದಿದ್ದಾರೆ. ಹುದೈಬಿಯಾದಲ್ಲಿ

ಪ್ರವಾದಿವರ್ಯ(ಸ) ಮತ್ತು ಅನುಯಾಯಿಗಳಿದ್ದಾರೆಂಬ ಸುದ್ದಿ ತಿಳಿದು ಅಭಯಕ್ಕಾಗಿ ಅವರ ಬಳಿಗೆ ಬಂದಿರುವರು. ಈ ಕರುಣಾಜನಕ ದೃಶ್ಯವನ್ನು ಕಂಡು ಸಹಾಬಿಗಳ ಸಹನೆಯ ಕಟ್ಟೆಯೊಡೆಯ ತೊಡಗಿತು.

ಅಬೂಜಂದಲ್‌ರವರ(ರ) ಮೊರೆಗೆ ಪ್ರವಾದಿ(ಸ) ಉತ್ತರಿಸುವುದಕ್ಕೆ ಮುಂಚಿತವಾಗಿಯೇ ಸುಹೈಲ್ ಬಿನ್ ಅಮ್ರ್:

"ಮುಹಮ್ಮದರೇ(ಸ), ಒಪ್ಪಂದವನ್ನು ಪಾಲಿಸಿರಿ. ಒಪ್ಪಂದದ ಶರತ್ತಿನಂತೆ ಅವನನ್ನು ಮರಳಿಸಿ ಬಿಡಿರಿ" ಎನ್ನುತ್ತಾನೆ.

ಪ್ರವಾದಿ(ಸ): "ಆದರೆ ಇನ್ನೂ ಅದನ್ನು ಬರೆಯಲಾಗಿಲ್ಲವಲ್ಲಾ."

ಸುಹೈಲ್: "ಹಾಗಿದ್ದರೆ ಒಪ್ಪಂದದ ವಿಷಯವನ್ನು ಬಿಟ್ಟು ಬಿಡೋಣ."

ಪ್ರವಾದಿ(ಸ): "ನನಗಾಗಿ ಅವನಿಗೆ ಅನುಮತಿ ನೀಡಿರಿ. ಆತ ನಮ್ಮ ಬಳಿಯೇ ಇರಲಿ."

ಸುಹೈಲ್: "ಸಾಧ್ಯವಿಲ್ಲ."

ಈ ಮಾತುಕತೆಯನ್ನು ಆಲಿಸಿದ ಬಳಿಕ ಅಬೂಜಂದಲ್ ಬಹಳ ದುಃಖಿತರಾಗಿ ಮುಸ್ಲಿಮರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ:

"ಸೋದರರರೇ! ನಾನು ಈಗಾಗಲೇ ಬಹಳ ಸಂಕಷ್ಟಗಳನ್ನು ಅನುಭವಿಸಿದ್ದೇನೆ. ಇನ್ನೂ ನನ್ನನ್ನು ಶತ್ರುಗಳ ವಶಕ್ಕೆ ಒಪ್ಪಿಸಿ ಬಿಡಲಾಗುವುದೇ?"

ಈ ದುಃಖಭರಿತ ಮೊರೆಯನ್ನಾಲಿಸಿದ ಮುಸ್ಲಿಮರ ಮನ ಕರಗುತ್ತದೆ. ಆದರೆ ಪ್ರವಾದಿವರ್ಯರು(ಸ) ಅವರಿಗೆ ಹೀಗೆ ಆದೇಶಿಸುತ್ತಾರೆ: "ಅಬೂಜಂದಲ್! ತಾಳ್ಮೆ ವಹಿಸಿರಿ. ಅಲ್ಲಾಹನು ನಿಮ್ಮ ಮಟ್ಟಿಗೆ ವಿಮೋಚನೆಯ ಯಾವುದಾದರೂ ದಾರಿಯನ್ನು ಖಂಡಿತ ತೆರೆಯುವನು."

ಅಬೂಜಂದಲ್‌ರ ಕಣ್ಣುಗಳಿಂದ ಅಶ್ರುಧಾರೆ ಹರಿಯುತ್ತದೆ. ಮುಸ್ಲಿಮರ ಮನದಿಂದ ದುಃಖ, ಬೇಸರ ಮತ್ತು ನಿರಾಶೆಯ ಹೊಗೆಯೇಳುತ್ತದೆ. ಆದರೂ ಅವರು ಮುಹಮ್ಮದ್‌ರ(ಸ) ತೀರ್ಮಾನದ ಬಗ್ಗೆ ಮೌನವಾಗಿದ್ದರು. ಯಾರಿಗೂ ತುಟಿ ಬಿಚ್ಚುವ ಧೈರ್ಯವಿರಲಿಲ್ಲ.

ಒಪ್ಪಂದವು ಲಿಖಿತಗೊಂಡಾಗಿದೆ. ಸುಹೈಲ್‌ರ ಬಯಕೆಯಂತೆ ಅದರ ಇನ್ನೊಂದು ಪ್ರತಿಯನ್ನು ಮುಹಮ್ಮದ್ ಬಿನ್ ಮುಸ್ಲಿಮ(ರ) ಅವರು ಬರೆಯುತ್ತಾರೆ. ಒಂದು ಪ್ರತಿ ಮುಸ್ಲಿಮರ ಬಳಿಯೂ ಇನ್ನೊಂದು ಕುರೈಶರ ಬಳಿಯೂ ಇರಲಿ ಎಂಬುದೇ ಉದ್ದೇಶವಾಗಿತ್ತು.

ಕುರೈಶರ ಪರವಾಗಿ ಸಂಧಾನ ಪತ್ರಕ್ಕೆ ಸುಹೈಲ್ ಬಿನ್ ಅಮ್ರ್, ಹುವೈತಬ್ ಮತ್ತು ಮಿಕ್ರಝ್ ಸಹಿ ಮಾಡುತ್ತಾರೆ. ಮುಸ್ಲಿಮರ ಪರವಾಗಿ ಅಬೂಬಕರ್, ಉಮರ್, ಉಸ್ಮಾನ್, ಅಬ್ದುರ್ರಹ್ಮಾನ್ ಬಿನ್ ಔಫ್, ಸಅದ್ ಬಿನ್ ಅಬೀ ವಕ್ಕಾಸ್, ಅಬೂ

ಉಬೈದಾ ಬಿನ್ ಜರ್‍ರಾಹ್ ಮತ್ತು ಮುಹಮ್ಮದ್ ಬಿನ್ ಮುಸ್ಲಿಮ(ರ) ತಮ್ಮ ಸಾಕ್ಷ್ಯವನ್ನು ಹಾಕುತ್ತಾರೆ. ಹೀಗೆ ಈ ಒಡಂಬಡಿಕೆಯು ಪೂರ್ಣ ಗೊಳ್ಳುತ್ತದೆ.

ಸುಹೈಲ್ ಬಿನ್ ಅಮ್ರ್ ತನ್ನ ಸಂಗಾತಿಗಳೊಂದಿಗೆ ಒಪ್ಪಂದದ ಪ್ರತಿ ಹಿಡಿದು ತನ್ನ ಪುತ್ರ ಅಬೂಜಂದಲ್‌ರನ್ನು ಜೊತೆಗೆ ಕರೆದುಕೊಂಡು ಸಂತೋಷದಿಂದ ಮಕ್ಕಾದ ಕಡೆಗೆ ಮರಳುತ್ತಾನೆ. ಮುಸ್ಲಿಮರಿಗೆ ರಾಜಕೀಯವಾಗಿ ಬಹಳ ದೊಡ್ಡ ಸೋಲನ್ನು ಉಣ್ಣಿಸಿರುವೆನೆಂಬ ಗುಂಗಿನಲ್ಲಿ ಅವನು ಸಿಲುಕಿದ್ದನು.

## ಮುಸ್ಲಿಮರ ಕಳವಳ

ಹುದೈಬಿಯಾ ಸಂಧಿಯ ಶರತ್ತುಗಳು ಯಾವ ಮುಸ್ಲಿಮನಿಗೂ ಹಿಡಿಸಿರಲಿಲ್ಲ. ಅಬೂ ಜಂದಲ್ ಅವರ ಘಟನೆಯು ಉರಿಯುವ ಬೆಂಕಿಗೆ ತುಪ್ಪ ಸುರಿದಂತಾಗಿತ್ತು. ಹ.ಉಮರ್(ರ) ಈ ಘಟನೆಯಿಂದ ತೀವ್ರ ಕಳವಳಕ್ಕೀಡಾಗುತ್ತಾರೆ. ಅವರು ಹ. ಅಬೂಬಕರ್‌ರ(ರ) ಬಳಿ ಹೋಗಿ ಹೀಗೆ ಕೇಳುತ್ತಾರೆ: "ಮುಹಮ್ಮದ್‌ರು(ಸ) ಅಲ್ಲಾಹನ ಪ್ರವಾದಿಯಲ್ಲವೆ?"

ಹ. ಅಬೂಬಕರ್(ರ) ಪ್ರವಾದಿವರ್ಯರ(ಸ) ಪ್ರಕೃತಿಯನ್ನು ಚೆನ್ನಾಗಿ ಬಲ್ಲವ ರಾಗಿದ್ದರು. ಮುಹಮ್ಮದ್‌ರ(ಸ) ಪೂರ್ಣ ಒಪ್ಪಿಗೆಯೊಂದಿಗೆ ಬರೆಯಲ್ಪಟ್ಟಿರುವ ಶರತ್ತು ಗಳಲ್ಲಿ ಖಂಡಿತವಾಗಿಯೂ ಮುಸ್ಲಿಮರಿಗೆ ಒಳಿತಿದೆ ಎಂದು ಅವರು ಪೂರ್ಣ ನಂಬಿಕೆ ಹೊಂದಿದ್ದರು. ಈಗ ಉಮರ್‌ರ(ರ) ದುಃಖ ಮತ್ತು ಕೋಪವನ್ನು ಕಂಡು ಅವರು ಕೇಳಿದ ಪ್ರಶ್ನೆಗೆ ಅತ್ಯಂತ ನಯವಾಗಿ ಉತ್ತರಿಸುತ್ತಾರೆ:

"ಯಾಕಿಲ್ಲ? ಖಂಡಿತವಾಗಿಯೂ ಅವರು ಅಲ್ಲಾಹನ ಪ್ರವಾದಿಯಾಗಿದ್ದಾರೆ."

ಉಮರ್(ರ): "ನಾವು ಮುಸ್ಲಿಮರಲ್ಲವೇ?"

ಅಬೂಬಕರ್(ರ): "ಹೌದು, ಖಂಡಿತವಾಗಿಯೂ."

ಉಮರ್(ರ): "ಹಾಗಿರುವಾಗ ಧರ್ಮದ ವಿಷಯದಲ್ಲಿ ಈ ಅಪಮಾನವನ್ನು ಏಕೆ ಸಹಿಸಬೇಕು?"

ಅಬೂಬಕರ್(ರ): "ಉಮರ್! ಪ್ರವಾದಿವರ್ಯರನ್ನು(ಸ) ಬಿಗಿ ಹಿಡಿಯಿರಿ. ಅವರು ಅಲ್ಲಾಹನ ಪ್ರವಾದಿಯಾಗಿರುವರೆಂದು ನಾನು ಸಾಕ್ಷ್ಯವಹಿಸುತ್ತೇನೆ."

ಉಮರ್(ರ): "ಅವರು ಅಲ್ಲಾಹನ ಪ್ರವಾದಿಯಾಗಿರುವರೆಂದು ನಾನೂ ಸಾಕ್ಷ್ಯ ವಹಿಸುತ್ತೇನೆ."

ಉಮರ್‌ರ(ರ) ಆವೇಶ ತಣಿದಿರಲಿಲ್ಲ. ಅವರು ಅದೇ ಸ್ಥಿತಿಯಲ್ಲಿ ಪ್ರವಾದಿವರ್ಯರ(ಸ) ಬಳಿ ಹೋಗಿ ಅವರಿಗೂ ಅಂತಹುದೇ ಪ್ರಶ್ನೆಗಳನ್ನು ಹಾಕುತ್ತಾರೆ. ಆದರೆ ಪ್ರವಾದಿ(ಸ) ಅತ್ಯಂತ ಸಹನೆಯೊಂದಿಗೆ ಹೀಗೆ ಹೇಳುತ್ತಾರೆ: "ನಾನು ಅಲ್ಲಾಹನ ದಾಸ ಮತ್ತು ಅವನ ಪ್ರವಾದಿಯಾಗಿರುವೆನು. ನಾನು ಅವನ ಆಜ್ಞೆಗಳನ್ನು ಉಲ್ಲಂಘಿಸುವಂತಿಲ್ಲ."

ಹುದೈಬಿಯಾ ಸಂಧಿಯ ಬಗ್ಗೆ ತಮಗಾದ ಕಳವಳದಿಂದಾಗಿ ತಾವು ಪ್ರವಾದಿವರ್ಯರ(ಸ) ಜತೆ ಆಡಿದ ಮಾತುಗಳ ಬಗ್ಗೆ ಹ. ಉಮರ್‌ರಿಗೆ(ರ) ಆ ಬಳಿಕ ತೀವ್ರ ಖೇದ ಉಂಟಾಗಿತ್ತು. ಅದಕ್ಕೆ ಪ್ರಾಯಶ್ಚಿತ್ತವೆಂಬಂತೆ ಅವರು ಐಚ್ಛಿಕ ನಮಾಝ್, ಉಪವಾಸ ವ್ರತ, ದಾನಧರ್ಮ ಮತ್ತು ಗುಲಾಮ ವಿಮೋಚನೆಯನ್ನು ಅಧಿಕಾಧಿಕ ಮಾಡುತ್ತಲಿದ್ದರು. ಕೊನೆಗೆ ತಮ್ಮ ಪ್ರಾಯಶ್ಚಿತ್ತವನ್ನು ಅಲ್ಲಾಹನು ಸ್ವೀಕರಿಸಿ ತಮ್ಮಿಂದಾದ ಆ ಪ್ರಮಾದವನ್ನು ಕ್ಷಮಿಸುವನು ಎಂಬ ಭರವಸೆ ಅವರಲ್ಲಿ ಮೂಡಿತು.

ಮುಸ್ಲಿಮರಿಗಾದ ಕಳವಳವನ್ನು ಒಂದು ಘಟನೆಯಿಂದ ಚೆನ್ನಾಗಿ ಅಂದಾಜಿಸಬಹುದಾಗಿದೆ. ಸಂಧಿಗೆ ಹಸ್ತಾಕ್ಷರ ಆದ ಬಳಿಕ ಪ್ರವಾದಿವರ್ಯರು(ಸ) ಮದೀನಾಕ್ಕೆ ಮರಳುವ ನಿರ್ಧಾರ ಮಾಡಿ ಕ್ಷೌರ ಮಾಡಿಸುವ ಮತ್ತು ತಂತಮ್ಮ ಬಲಿ ಪ್ರಾಣಿಗಳನ್ನು ಅಲ್ಲೇ ಬಲಿ ನೀಡುವ ಆಜ್ಞೆಯನ್ನು ಅನುಯಾಯಿಗಳಿಗೆ ನೀಡುತ್ತಾರೆ. ಆದರೆ ಪ್ರವಾದಿವರ್ಯರ(ಸ) ಈ ಆಜ್ಞೆಯ ಹೊರತಾಗಿಯೂ ಯಾರೂ ತಮ್ಮ ಸ್ಥಾನದಿಂದ ಕದಲದೆ ಕಲ್ಲಿನ ಮೂರ್ತಿಗಳಂತೆ ಕುಳಿತು ಬಿಟ್ಟಿದ್ದರು. ತಮ್ಮ ಅನುಯಾಯಿಗಳ ಈ ಅವಸ್ಥೆ ಕಂಡು ಪ್ರವಾದಿವರ್ಯರಿಗೆ(ಸ) ಬಹಳ ನೋವಾಗುತ್ತದೆ. ಅವರು ಖಿನ್ನರಾಗಿ ತಮ್ಮ ಡೇರೆಗೆ ಮರಳುತ್ತಾರೆ. ನಡೆದ ಘಟನೆಯ ಕುರಿತು ತಮ್ಮ ಪತ್ನಿ ಹ. ಉಮ್ಮು ಸಲ್ಮಾರಿಗೆ(ರ) ಹೀಗೆ ವಿವರಿಸುತ್ತಾರೆ: "ಜನರಿಗೇನಾಗಿದೆ. ನಾನು ಆಜ್ಞಾಪಿಸಿದರೂ ಅವರು ಪಾಲಿಸುತ್ತಿಲ್ಲ."

ಆಗ ಉಮ್ಮು ಸಲ್ಮಾ(ರ) ಹೀಗೆ ಹೇಳುತ್ತಾರೆ: "ಜನರು ಉಮ್ರಾ ಮಾಡುವ ಅವಕಾಶವಿಲ್ಲದೆ ಮರಳಿ ಹೋಗಬೇಕಾದ ಈ ಪರಿಸ್ಥಿತಿಯಿಂದ ದುಃಖಿತರಾಗಿ ಹೀಗೆ ಮಾಡುತ್ತಿರಬಹುದು. ತಾವು ಆ ಬಗ್ಗೆ ಚಿಂತಿತರಾಗದಿರಿ. ತಾವು ಸ್ವತಃ ಕ್ಷೌರ ಮಾಡಿಸಿ. ಅದನ್ನು ಕಂಡು ಅವರೂ ಮಾಡಿಸುವರು."

ಪ್ರವಾದಿವರ್ಯರಿಗೆ(ಸ) ಈ ಸಲಹೆ ಮೆಚ್ಚುಗೆಯಾಯಿತು. ಅವರು ತಮ್ಮ ಡೇರೆಯಿಂದ ಹೊರಗೆ ಬಂದು ತಮ್ಮ ತಲೆ ಕ್ಷೌರ ಮಾಡಿಸುತ್ತಾರೆ. ಪ್ರವಾದಿವರ್ಯರು(ಸ) ಕ್ಷೌರ ಮಾಡಿಸುತ್ತಿರುವುದನ್ನು ಕಂಡು ನಿದ್ದೆಯಿಂದ ಎಚ್ಚೆತ್ತವರಂತೆ ಎಲ್ಲರೂ ಎದ್ದು ಕುರ್ಬಾನಿ ನೀಡಲು ಮತ್ತು ಕ್ಷೌರ ಮಾಡಿಸಲು ಆರಂಭಿಸುತ್ತಾರೆ.

ಹುದೈಬಿಯಾದಿಂದ ಈ ಯಾತ್ರಾ ತಂಡವು ಹೊರಟಾಗ ಅಲ್ಲಾಹನ ವಾಣಿ ಪ್ರವಾದಿವರ್ಯರ(ಸ) ಮೇಲೆ ಅವತೀರ್ಣವಾಗುತ್ತದೆ: "ಸಂದೇಶವಾಹಕರೇ, ನಾವು ನಿಮಗೆ ಸುಸ್ಪಷ್ಟ ವಿಜಯ ಪ್ರದಾನ ಮಾಡಿದೆವು-ಅಲ್ಲಾಹನು ನಿಮ್ಮ ಹಿಂದಿನ ಹಾಗೂ ಮುಂದಿನ ಎಲ್ಲ ತಪ್ಪುಗಳನ್ನು ಕ್ಷಮಿಸಲಿಕ್ಕಾಗಿ, ನಿಮ್ಮ ಮೇಲೆ ತನ್ನ ಅನುಗ್ರಹವನ್ನು ಪರಿಪೂರ್ಣಗೊಳಿಸಲಿಕ್ಕಾಗಿ, ನಿಮಗೆ ಸನ್ಮಾರ್ಗವನ್ನು ತೋರಿಸಲಿಕ್ಕಾಗಿ ಮತ್ತು ನಿಮಗೆ ಪ್ರಚಂಡ ಸಹಾಯವನ್ನು ನೀಡಲಿಕ್ಕಾಗಿ." **(ಪವಿತ್ರ ಕುರ್‌ಆನ್: 48: 1-3)**

ಈ ಸ್ಪಷ್ಟ ವಿಜಯದ ಚಿತ್ರವನ್ನು ಮುಂದಿನ ಕೆಲವು ವರ್ಷಗಳ ಇತಿಹಾಸವು

ದಾಖಲುಗೊಳಿಸಿದೆ. ಅದನ್ನು ಕಂಡು ಸಹಾಬಿಗಳೂ ಆಶ್ಚರ್ಯ ಚಕಿತರಾಗುತ್ತಿದ್ದರು. ಯಾವ ವಿಷಯವನ್ನು ಅವರು ಹುದೈಬಿಯಾ ಸಂಧಿಯ ವೇಳೆ ಮನಗಾಣಲಿಲ್ಲವೋ ಅದು ಅತ್ಯಂತ ಶೋಭಾಯಮಾನವಾಗಿ ಅವರ ಮುಂದೆ ಬರುತ್ತದೆ. ಕುರೈಶರ ಮತ್ತು ಮುಸ್ಲಿಮರ ನಡುವೆ ಮುಕ್ತ ಸಹವಾಸದಿಂದಾಗಿ ಇಸ್ಲಾಮ್ ಧರ್ಮವು ವ್ಯಾಪಕವಾಗಿ ಹರಡುತ್ತದೆ. ಅಣೆಕಟ್ಟು ಒಡೆದಾಗ ನೀರು ದೂರದೂರದ ತನಕ ವ್ಯಾಪಿಸುವಂತೆ ಇಸ್ಲಾಮ್ ವ್ಯಾಪಿಸತೊಡಗುತ್ತದೆ. ಯುದ್ಧದ ಕರಿನೆರಳು ಮಾಯವಾದುದರಿಂದ ಮುಸ್ಲಿಮರಿಗೆ ತಮ್ಮ ಧರ್ಮಪ್ರಚಾರ ಚಟುವಟಿಕೆಗಳನ್ನು ಇನ್ನಷ್ಟು ಊರ್ಜಿತಗೊಳಿಸು ವುದರ ಜತೆಗೆ ತಮ್ಮ ಆರ್ಥಿಕ ಮತ್ತು ಸಾಮಾಜಿಕ ಜೀವನವನ್ನು ಸುಧಾರಿಸುವಂತಹ ಒಂದು ಉತ್ತಮ ಅವಕಾಶವೂ ಒದಗಿ ಬಂತು. ಇದರ ಅತ್ಯಂತ ಆಶಾಜನಕ ಪ್ರಭಾವ ಅವರ ಜೀವನದಲ್ಲಿ ಗೋಚರಿಸತೊಡಗಿತು.

ಮುಹಮ್ಮದ್(ಸ) ಮದೀನಾದ ಕಡೆ ತೆರಳಲು ತಮ್ಮ ಒಂಟೆಯನ್ನೇರುವಾಗ ಅಲ್ಲಾಹನನ್ನು ಪ್ರಕೀರ್ತಿಸುತ್ತಾ ಹೀಗೆ ಹೇಳುತ್ತಾರೆ: "ಈ ಸವಾರಿಯನ್ನು ನಮ್ಮ ನಿಯಂತ್ರಣಕ್ಕೆ ಕೊಟ್ಟ ಅಲ್ಲಾಹನು ಪರಮ ಪಾವನನು. ಅನ್ಯಥಾ ನಾವು ಇವುಗಳನ್ನು ಹತೋಟಿಗೆ ತರಲು ಶಕ್ತರಾಗಿರಲಿಲ್ಲ ಮತ್ತು ನಮಗೊಂದು ದಿನ ನಮ್ಮ ಪ್ರಭುವಿನ ಕಡೆಗೇ ಮರಳಲಿಕ್ಕಿದೆ."
**(ಪವಿತ್ರ ಕುರ್‌ಆನ್: 43: 13-14)**

ಪ್ರವಾದಿವರ್ಯರು(ಸ) ತಮ್ಮ ಎಲ್ಲ ಪ್ರಯಾಣದ ವೇಳೆಯೂ ಹೀಗೆ ಹೇಳುವುದು ರೂಢಿಯಾಗಿತ್ತು. ಮರಳಿ ತಮ್ಮ ಗುರಿಯನ್ನು ಸೇರಿದಾಗಲೂ ಅವರು ಅಲ್ಲಾಹನನ್ನು ಈ ರೀತಿ ಸ್ತುತಿಸುತ್ತಿದ್ದರು: "ನಾವು ಮರಳಿ ಬಂದಿರುವೆವು. ನಾವು ಪಶ್ಚಾತ್ತಾಪ ಪಡುವವರಾಗಿರುವೆವು. ನಾವು ಅಲ್ಲಾಹನ ವಿಧೇಯ ದಾಸರಾಗಿರುವೆವು. ನಾವು ಅವನ ಸ್ತುತಿ ಸ್ತೋತ್ರಗಳನ್ನೇ ಮಾಡುತ್ತೇವೆ."

## ಉಮ್ರತುಲ್ ಕಝಾ*

ಹಿ.ಶ. 7ರ ದುಲ್‌ಕಅದ್ ತಿಂಗಳು. ಮಕ್ಕಾ ನಿವಾಸಿಗಳು ತಮ್ಮ ಮನೆ ಮಾರುಗಳನ್ನು ಬಿಟ್ಟು ಬೆಟ್ಟಗುಡ್ಡಗಳಲ್ಲಿ ಹೋಗಿ ವಾಸ ಹೂಡಿರುವರು. ಅಲ್ಲಿಂದ ಅವರು ಮಕ್ಕಾದಲ್ಲಿ ನೆರೆದಿರುವ ಮುಸ್ಲಿಮರನ್ನು ಕಣ್ಣು ಕಣ್ಣು ಬಿಟ್ಟು ನೋಡುತ್ತಿದ್ದರು.

"ಇಂದು ಮುಸ್ಲಿಮರು ಇಲ್ಲಿಗೆ ತಲುಪುವಲ್ಲಿ ಯಶಸ್ವಿಯಾಗಿರುವರು" ಎಂದು ಓರ್ವ ಕುರೈಶನು ತನ್ನ ಪಕ್ಕದಲ್ಲಿರುವವನ್ನುದ್ದೇಶಿಸಿ ಹೇಳುತ್ತಾನೆ.

"ಹೌದು, ಕಳೆದ ವರ್ಷ ಹುದೈಬಿಯಾ ಸಂಧಿಯಲ್ಲಿ ಅವರಿಗೆ ಈ ಅನುಕೂಲತೆಯನ್ನು ನೀಡಲಾಗಿತ್ತು."

ಮುಹಮ್ಮದ್(ಸ) ತಮ್ಮ ಅಪಾರ ಸಂಖ್ಯೆಯ ಅನುಯಾಯಿ ವೃಂದದೊಂದಿಗೆ

* ಅರ್ಥಾತ್ ಮುಂದೂಡಲ್ಪಟ್ಟ ಕಅಬಾ ಸಂದರ್ಶನ.

ಮಕ್ಕಾ ಪ್ರವೇಶಿಸಿದ್ದಾರೆ. ಅವರು 'ಕಸ್ವಾ' ಎಂಬ ತಮ್ಮ ಒಂಟೆಯ ಮೇಲೆ ಸವಾರರಾಗಿದ್ದಾರೆ. ಅದರ ನೊಗವನ್ನು ಅಬ್ದುಲ್ಲಾ ಬಿನ್ ರವಾಹ(ರ) ಹಿಡಿದುಕೊಂಡು ಈ ರೀತಿ ಹಾಡುತ್ತಾ ನಗರ ದೊಳಗೆ ಪ್ರವೇಶಿಸುತ್ತಾರೆ:

"ಅಲ್ಲಾಹನ ಹೆಸರಿನೊಂದಿಗೆ ನಾವು ಪ್ರವೇಶಿಸುತ್ತೇವೆ. ಅವನ ಧರ್ಮದ ಹೊರತು ಬೇರಾವ ಧರ್ಮವೂ ಇಲ್ಲ. ಅಲ್ಲಾಹನ ಹೆಸರಿನೊಂದಿಗೆ ನಾವು ಪ್ರವೇಶಿಸು ತ್ತೇವೆ. ಮುಹಮ್ಮದ್(ಸ) ಅವನ ಪ್ರವಾದಿಯಾಗಿದ್ದಾರೆ. ಪರಮ ದಯಾಮಯನು ತನ್ನ ಗ್ರಂಥದಲ್ಲಿ ಬೋಧಿಸಿರುವನು ಅವನ ಮಾರ್ಗದಲ್ಲಿ ಮಾಡುವ ಯುದ್ಧವೇ ಅತ್ಯುತ್ತಮ ಯುದ್ಧವಾಗಿದೆ. ಓ ನನ್ನ ಪ್ರಭೂ! ನಾನು ನಿನ್ನ ಪ್ರವಾದಿಯ ಮಾತನ್ನು ನಂಬುವವನಾಗಿದ್ದೇನೆ."

ಪ್ರವಾದಿವರ್ಯರ(ಸ) ಹಿಂದೆ ಎರಡು ಸಾವಿರದಷ್ಟು ಮಂದಿ ಪಂಕ್ತಿಬದ್ಧವಾಗಿ ಬರುತ್ತಿದ್ದಾರೆ. ಪ್ರವಾದಿ(ಸ) ತಮ್ಮ ಇನ್ನೂರು ಮಂದಿ ಸಹಾಬಿಗಳನ್ನು 'ಬತನ್ ಯಾಜಜ್' ಎಂಬಲ್ಲಿ ತಮ್ಮ ಅಸ್ತ್ರ, ಕುದುರೆ ಮತ್ತು ಒಂಟೆಗಳ ರಕ್ಷಣೆಗಾಗಿ ನಿಲ್ಲಿಸಿರುವರು. ಅವುಗಳಲ್ಲಿ 70 ಕುರ್ಬಾನಿಯ ಒಂಟೆಗಳೂ ಸೇರಿವೆ. ಅವುಗಳ ರಕ್ಷಣೆಯ ಮೇಲ್ನೋಟವನ್ನು ಔಸ್ ಬಿನ್ ಖೌಲಿ ಅನ್ಸಾರಿ(ರ) ಅವರಿಗೆ ವಹಿಸಿ ಕೊಡಲಾಗಿತ್ತು.

ಪ್ರವಾದಿವರ್ಯರು(ಸ) ತಮ್ಮ ಒಂಟೆಯ ಮೇಲೆ ಸವಾರರಾಗಿಯೇ ಕಅಬಾ ಭವನದ 'ತವಾಫ್' ಮತ್ತು ಸಫಾ-ಮರ್ವಾ ಬೆಟ್ಟಗಳ ಮಧ್ಯೆ 'ಸಈ' ನೆರವೇರಿಸುತ್ತಾರೆ. ಸಹಾಬಿಗಳೂ ಅವರ ಜೊತೆಗೆ ಈ ವಿಧಿಗಳನ್ನು ಪೂರ್ಣಗೊಳಿಸುತ್ತಾರೆ.

ಇಂದು ದೇವನ ಏಕತ್ವ ಮತ್ತು ಮುಹಮ್ಮದ್‌ರ(ಸ) ಪ್ರವಾದಿತ್ವದ ಘೋಷಣೆ ಯಿಂದ ಮಕ್ಕಾದ ಬೆಟ್ಟಗಳು ಮಾರ್ದನಿಸುತ್ತಿವೆ. ಅಲ್ಲಿ ಕುಳಿತಿರುವ ಕುರೈಶ್ ಮಹಿಳೆ ಯರು ಮುಸ್ಲಿಮರನ್ನು ಆಶ್ಚರ್ಯದಿಂದ ನೋಡುತ್ತಿದ್ದಾರೆ. ಅವರ ಸರದಾರರು ಮುಸ್ಲಿಮರು ಇಲ್ಲಿಗೆ ಬರುವುದರಿಂದ ತಡೆಯಲು ಶತ ಪ್ರಯತ್ನ ಮಾಡಿಯೂ ಮುಸ್ಲಿಮರ ಈ ತಂಡವು ಕೊನೆಗೂ ಇಲ್ಲಿಗೆ ತಲುಪಿರುವುದು ಅವರನ್ನು ಚಕಿತಗೊಳಿಸಿದೆ.

ಮುಹಮ್ಮದ್‌ರಿಗೆ(ಸ) ಚರ್ಮದ ಡೇರೆಯನ್ನು ಹಾಕಲಾಗಿದೆ. ತವಾಫ್ ಮುಗಿಸಿದ ಒಂದು ತಂಡವನ್ನು 'ಬತನ್ ಯಾಜಜ್'ಗೆ ಕಳುಹಿಸಿ ಅಲ್ಲಿದ್ದವರನ್ನು ತವಾಫ್‌ಗೆ ಕಳುಹಿಸುವಂತೆ ಆದೇಶಿಸುತ್ತಾರೆ. ಮೂರು ದಿನಗಳ ತನಕ ಮುಸ್ಲಿಮರು ಹರಮ್‌ನಲ್ಲೇ ಸಾಮೂಹಿಕ ನಮಾಝ್ ನೆರವೇರಿಸುತ್ತಾರೆ. ಕಅಬಾ ಭವನದಲ್ಲಿ ಅವರನ್ನು ನಮಾಝ್ ಮಾಡುವುದರಿಂದ ತಡೆಯುವ ಧೈರ್ಯ ಯಾವ ಕುರೈಶನಿಗೂ ಬರುವುದಿಲ್ಲ.

ಮಕ್ಕಾವಾಸಿಗಳು ಮುಸ್ಲಿಮರ ನೈತಿಕ ಪರಿಶುದ್ಧತೆ ಮತ್ತು ಆಧ್ಯಾತ್ಮಿಕ ಉನ್ನತಿ ಯನ್ನು ಕಂಡು ದಿಗಿಲುಗೊಳ್ಳುತ್ತಾರೆ. ಮೂರು ದಿನ ರಾತ್ರಿಗಳು ಮಕ್ಕಾದಲ್ಲಿದ್ದೂ ತಮ್ಮನ್ನು ಅತ್ಯಧಿಕ ಪೀಡಿಸಿದ್ದ ಮಕ್ಕಾ ಜನರ ಪ್ರಾಣ-ಸೊತ್ತುಗಳಿಗೆ ಯಾವುದೇ ರೀತಿಯ ನಷ್ಟವನ್ನು ಅವರು ಉಂಟು ಮಾಡಿರಲಿಲ್ಲವೆಂಬುದು ಅವರ ಪಾಲಿಗೆ ಅತ್ಯಂತ ಆಶ್ಚರ್ಯದ ಸಂಗತಿಯಾಗಿತ್ತು.

ಅವರು ಮರಳಿ ತಮ್ಮ ಮನೆಗಳಿಗೆ ಬಂದಾಗ ಅವರ ಎಲ್ಲ ಸೊತ್ತುವಿತ್ತಗಳೂ ಸುರಕ್ಷಿತವಾಗಿದ್ದವು. ಇಸ್ಲಾಮಿನ ಪ್ರಭಾವದಿಂದಾಗಿ ಅವರು ಈ ರೀತಿ ಮಾರ್ಪಟ್ಟಿರುವರು ಎಂಬುದನ್ನು ಮಾತ್ರ ಅವರು ಗ್ರಹಿಸದೆ ಹೋದರು.

ಮೂರು ದಿನಗಳ ಅವಧಿ ಪೂರ್ಣಗೊಂಡಾಗ ಒಡಂಬಡಿಕೆಯ ಶರತ್ತಿನಂತೆ ಪ್ರವಾದಿವರ್ಯರು(ಸ) ತಮ್ಮ ಒಂಟೆಯನ್ನೇರಿ ಪ್ರವಾಸ ಹೊರಡಲು ಅನುವಾಗುತ್ತಾರೆ. ಅಷ್ಟರಲ್ಲಿ ಪ್ರವಾದಿವರ್ಯರ(ಸ) ಚಿಕ್ಕಪ್ಪ ಹ. ಹಮ್‌ಝಾರವರ(ರ) ಪುಟ್ಟ ಮಗಳು ಅಣ್ಣಾ! ಅಣ್ಣಾ! ಎಂದು ಕರೆಯುತ್ತಾ ಮುಂದೆ ಬಂದು ಪ್ರವಾದಿವರ್ಯರನ್ನು(ಸ) ಅಪ್ಪಿಕೊಳ್ಳುತ್ತಾಳೆ. ತಮ್ಮ ಚಿಕ್ಕಪ್ಪನವರ ಮುಗ್ಧ ಮಗುವನ್ನು ಕಂಡು ಮುಹಮ್ಮದ್‌ರ(ಸ) ಕಣ್ಣುಗಳು ತೇವಗೊಳ್ಳುತ್ತವೆ. ಮಗುವನ್ನೆತ್ತಿ ಮುದ್ದಿಸುತ್ತಾರೆ. ಈ ದೃಶ್ಯವನ್ನು ಕಂಡು ಅನುಯಾಯಿಗಳೂ ಕಣ್ಣೀರಿಳಿಸುತ್ತಾರೆ.

## ಪತ್ರಗಳ ಮೂಲಕ ಸಂದೇಶ

"ಓ ಸಂದೇಶವಾಹಕರೇ! ನಿಮ್ಮ ಪಾಲಕ ಪ್ರಭುವಿನ ಕಡೆಯಿಂದ ನಿಮ್ಮ ಮೇಲೆ ಅವತೀರ್ಣಗೊಳಿಸಲ್ಪಟ್ಟುದನ್ನು ಜನರಿಗೆ ತಲುಪಿಸಿರಿ." **(ಪವಿತ್ರ ಕುರ್‌ಆನ್: 5: 67)**

ಇದು ಅಲ್ಲಾಹನ ವತಿಯಿಂದ ಪ್ರವಾದಿ ಮುಹಮ್ಮದ್‌ರಿಗೆ(ಸ) ದೊರೆತ ಆದೇಶವಾಗಿತ್ತು. ಅವರು ಸಮಸ್ತ ಲೋಕಕ್ಕೆ ಸುವಾರ್ತೆ ನೀಡುವವರೂ ಎಚ್ಚರಿಕೆ ಕೊಡುವವರೂ ಆಗಿ ನಿಯೋಗಿಸಲ್ಪಟ್ಟಿದ್ದರು. ಆದಮರ ಎಲ್ಲ ಮಕ್ಕಳಿಗೆ ಅಲ್ಲಾಹನ ಸಂದೇಶವನ್ನು ತಲುಪಿಸುವುದು ಅವರ ಹೊಣೆಗಾರಿಕೆಯಾಗಿತ್ತು. ಆದರೆ ಕುರೈಶರ ಶತ್ರುತ್ವದಿಂದಾಗಿ ಈ ಕಾರ್ಯವನ್ನು ಸಂಪೂರ್ಣ ಏಕಾಗ್ರತೆಯೊಂದಿಗೆ ಮಾಡುವ ಅವಕಾಶ ಅವರಿಗೆ ಒದಗಿರಲಿಲ್ಲ.

ಹುದೈಬಿಯಾ ಸಂಧಿಯ ಬಳಿಕ ಪ್ರವಾದಿವರ್ಯರ(ಸ) ಸಂದೇಶ ಪ್ರಚಾರ ಕಾರ್ಯಕ್ಕೆ ಅನುಕೂಲ ವಾತಾವರಣವು ಒದಗಿ ಬಂತು. ಆಗ ಅವರು ಪರಿಸರದ ಎಲ್ಲ ರಾಜರುಗಳಿಗೆ ಮತ್ತು ಜನನಾಯಕರಿಗೆ ತಮ್ಮ ಕರೆಯನ್ನು ಲಿಖಿತ ರೂಪದಲ್ಲಿ ಕಳುಹಿಸಿ ಕೊಟ್ಟರು. ಈ ಸಂದೇಶಗಳನ್ನು ಪ್ರವಾದಿವರ್ಯರ(ಸ) ಆಪ್ತ ದೂತರು ಅವರಿಗೆ ತಲುಪಿಸಿದರು. ವಾಡಿಕೆಯಂತೆ ಈ ಸಂದೇಶಗಳ ಮೇಲೆ ಒತ್ತಲಿಕ್ಕಾಗಿ "ಮುಹಮ್ಮದುರ್‌ರಸೂಲುಲ್ಲಾಹ್" ಅರ್ಥಾತ್ ಅಲ್ಲಾಹನ ಸಂದೇಶವಾಹಕರಾದ ಮುಹಮ್ಮದ್(ಸ) ಎಂಬ ಮೊಹರನ್ನು ಪ್ರವಾದಿವರ್ಯರು(ಸ) ಮಾಡಿಸಿಕೊಂಡರು.

ಈ ಸಂದೇಶ ಪತ್ರಗಳ ಪೈಕಿ ಆರು ಪತ್ರಗಳು ಅತ್ಯಂತ ಪ್ರಾಮುಖ್ಯವೆನಿಸಿವೆ. ಅವುಗಳನ್ನು ಪ್ರವಾದಿವರ್ಯರು(ಸ) ಹಿ. ಶ. 7ರ ಮುಹರ್‍ರಮ್ ತಿಂಗಳಲ್ಲಿ ಒಂದೇ ದಿನ ಬರೆಸಿ ರವಾನಿಸಿದ್ದರು. ಆ ಪತ್ರಗಳ ಒಕ್ಕಣೆಯನ್ನು ಈ ಕೆಳಗೆ ಕೊಡಲಾಗಿದೆ:

1. ಇದನ್ನು ಅಮ್ರ್ ಬಿನ್ ಉಮಯ್ಯ ಅದ್ದಮ್ರಿ(ರ) ಎಂಬವರ ಮೂಲಕ ಅಬಿಸೀನಿಯಾ(ಇಥಿಯೋಪಿಯಾ)ದ ರಾಜ ಅಶ್‌ಹಮ ಅವರಿಗೆ ಕಳುಹಿಸಲಾಯಿತು.

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ.

ಅಲ್ಲಾಹನ ಸಂದೇಶವಾಹಕನಾದ ಮುಹಮ್ಮದ್‌ರ(ಸ) ಕಡೆಯಿಂದ ಅಬಿಸೀನಿಯಾದ ದೊರೆ ಅಶ್‌ಹಮ ನಜ್ಜಾಶೀ ಅವರಿಗೆ. ನಿಮ್ಮ ಮೇಲೆ ಶಾಂತಿಯಿರಲಿ. ನಾನು ನಿಮ್ಮ ಮುಂದೆ ವಿಶ್ವದ ಅಧಿಪತಿ, ಪರಮ ಪಾವನ, ಶಾಂತಿ ಸ್ವರೂಪಿ, ರಕ್ಷಣೆ ದಯಪಾಲಿಸುವವ ಹಾಗೂ ಜೀವನಾಧಾರ, ಜೀವನ ಮತ್ತು ಮರಣವನ್ನು ನೀಡುವವನ ಗುಣಗಾನ ಮಾಡುತ್ತೇನೆ.

ಹ. ಮರ್ಯಮ್‌ರ(ಅ) ಪುತ್ರ ಈಸಾ(ಅ) ಅಲ್ಲಾಹನ ಆತ್ಮ ಹಾಗೂ ಅವನ ವಚನವಾಗಿದ್ದು ಅದನ್ನು ಅಲ್ಲಾಹನು ಹ. ಮರ್ಯಮ್‌ರ(ಅ) ಶರೀರಕ್ಕೆ ವರ್ಗಾಯಿಸಿದನು ಎಂಬುದನ್ನು ನಾನು ದೃಢೀಕರಿಸುತ್ತೇನೆ.

ಹ. ಮರ್ಯಮ್(ಅ) ಅವಿವಾಹಿತೆಯೂ ಅತ್ಯಂತ ಪರಿಶುದ್ಧೆಯೂ ಆಗಿದ್ದರು ಎಂಬುದನ್ನು ನಾನು ದೃಢೀಕರಿಸುತ್ತೇನೆ. ಅವರು ಅಲ್ಲಾಹನ ಆತ್ಮ ಮತ್ತು ಅವನ ಊದಿನಿಂದ ಗರ್ಭವತಿಯಾಗಿ ಹ. ಈಸಾರನ್ನು(ಅ) ಹಡೆದರು. ಅಲ್ಲಾಹನು ಆದಮ್‌ರನ್ನು(ಅ) ತನ್ನ ಕೈಯಿಂದ ಮತ್ತು ತನ್ನ ಊದಿನಿಂದ ಸೃಷ್ಟಿಸಿದಂತೆ ಅವರನ್ನೂ ಸೃಷ್ಟಿಸಿದ್ದನು.

ನಾನು ನಿಮ್ಮನ್ನು ಏಕನೂ ಅದ್ವಿತೀಯನೂ ಆದ ಅಲ್ಲಾಹನ ಕಡೆಗೆ ಆಹ್ವಾನಿಸುತ್ತೇನೆ. ನಿಮಗೆ ಅಲ್ಲಾಹನ ಅನುಸರಣೆಯ, ನನ್ನ ವಿಧೇಯತೆಯ ಮತ್ತು ನನ್ನ ಬಳಿ ದಿವ್ಯ ವಾಣಿಯನ್ನು ತರುವವರ ಮೇಲೆ ವಿಶ್ವಾಸವಿರಿಸಬೇಕೆಂಬ ಆಹ್ವಾನ ನೀಡುತ್ತೇನೆ.

ಖಂಡಿತವಾಗಿಯೂ ನಾನು ಅಲ್ಲಾಹನ ಪ್ರವಾದಿಯಾಗಿದ್ದೇನೆ. ನಿಮ್ಮನ್ನೂ ನಿಮ್ಮ ಸೇನೆಗಳನ್ನೂ ಮಹಾನನೂ ಪ್ರತಾಪಶಾಲಿಯೂ ಆದ ಅಲ್ಲಾಹನ ಕಡೆಗೆ ಆಹ್ವಾನಿಸುತ್ತೇನೆ. ನಾನು ಸತ್ಯಸಂದೇಶವನ್ನು ನಿಮಗೆ ತಲುಪಿಸಿದ್ದೇನೆ. ನಿಮಗೆ ಉಪದೇಶ ಮಾಡಿದ್ದೇನೆ. ನನ್ನ ಉಪದೇಶವನ್ನು ಸ್ವೀಕರಿಸಿ. ಸನ್ಮಾರ್ಗವನ್ನು ಅನುಸರಿಸುವವನ ಮೇಲೆ ಶಾಂತಿಯಿರಲಿ."

ನಜ್ಜಾಶೀ ದೊರೆಗೆ ಈ ಪತ್ರವು ಸಿಕ್ಕಿದಾಗ ಅವರು ಅದಕ್ಕೆ ಮುತ್ತಿಕ್ಕಿದರು. ಅದನ್ನು ತಮ್ಮ ಕಣ್ಣಿಗೆ ತಾಗಿಸಿದರು. ಸಸಂತೋಷ ಇಸ್ಲಾಮ್ ಧರ್ಮವನ್ನು ಸ್ವೀಕರಿಸಿ ಕೊಂಡರು.

2. ಇದು ಪ್ರವಾದಿವರ್ಯರು(ಸ) ರೋಮ್ ಸಾಮ್ರಾಜ್ಯದ ದೊರೆ ಹರ್ಕಲ್ ಕೈಸರ್‌ಗೆ ರವಾನಿಸಿದ ಪತ್ರ. ಈ ಪತ್ರವನ್ನು ದಹ್ಯಾ ಕಲ್ಬೀ(ರ) ಎಂಬ ಸಹಾಬಿ ಯವರು (ಪ್ರವಾದಿ ಸಂಗಾತಿ) ಅವರಲ್ಲಿಗೆ ಒಯ್ದಿದ್ದರು.

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ.

ಅಲ್ಲಾಹನ ಪ್ರವಾದಿಯಾದ ಮುಹಮ್ಮದ್‌ರ(ಸ) ಕಡೆಯಿಂದ ರೋಮ್ ಸಾಮ್ರಾಜ್ಯದ ದೊರೆ ಹರ್ಕಲ್ ಕೈಸರ್ ಅವರಿಗೆ,

"ನಾನು ನಿಮಗೆ ಇಸ್ಲಾಮ್ ಧರ್ಮದ ಆಹ್ವಾನ ನೀಡುತ್ತೇನೆ. ನೀವು ಇಸ್ಲಾಮ್ ಸ್ವೀಕರಿಸಿ, ಎಲ್ಲ ವಿಪತ್ತುಗಳಿಂದಲೂ ಸುರಕ್ಷಿತವಾಗಿರುವಿರಿ. ಅಲ್ಲಾಹನು ನಿಮಗೆ ಇಮ್ಮಡಿ

ಪ್ರತಿಫಲವನ್ನು ದಯಪಾಲಿಸುವನು. ನೀವು ಇದರಿಂದ ವಿಮುಖರಾದರೆ ನಿಮ್ಮ ಎಲ್ಲ ಪ್ರಜೆಗಳ ಪಥಭ್ರಷ್ಟತೆಯ ಹೊಣೆಯೂ ನಿಮ್ಮ ಮೇಲಿರುವುದು.

ಓ ಗ್ರಂಥದವರೇ, (ಭಿನ್ನಾಭಿಪ್ರಾಯ ಮತ್ತು ಒಡಕಿನ ಎಲ್ಲ ವಿಷಯಗಳನ್ನೂ ಬಿಟ್ಟು) ನಮ್ಮ ನಿಮ್ಮ ಮಧ್ಯೆ ಸರ್ವಸಮ್ಮತವಾದ ವಿಷಯದ ಕಡೆಗೆ ಬನ್ನಿರಿ. ಅಂದರೆ ಅಲ್ಲಾಹನ ಹೊರತು ನಾವು ಯಾರನ್ನೂ ಆರಾಧಿಸದಿರೋಣ. ಯಾರನ್ನೂ ಅವನ ಸಹಭಾಗಿಯಾಗಿ ಮಾಡದಿರೋಣ. ನಮ್ಮ ಪೈಕಿ ಯಾವನೂ ಯಾವನೇ ಮನುಷ್ಯನೊಂದಿಗೆ ಅಲ್ಲಾಹನನ್ನು ಬಿಟ್ಟು ಅವನನ್ನೇ ದೇವನಾಗಿ ಮಾಡುವಂತಹ ವರ್ತನೆ ಮಾಡದಿರೋಣ.

ನೀವು ಒಂದು ವೇಳೆ ಇದರಿಂದ ವಿಮುಖರಾದರೆ ನಾವಂತೂ ಅಲ್ಲಾಹನ ವಿಧೇಯ ದಾಸರಾಗಿರುವೆವು ಎಂಬುದರ ಬಗ್ಗೆ - ಅಂದರೆ ಅವನನ್ನು ನಾವು ಆಲಿಸುತ್ತೇವೆ ಮತ್ತು ಅನುಸರಿಸುತ್ತೇವೆ ಎಂಬುದರ ಬಗ್ಗೆ - ನೀವು ಸಾಕ್ಷಿಯಾಗಿರಿ."

ಹರ್ಕಲ್ ಕೈಸರನು ಈ ಪತ್ರವನ್ನು ಕಂಡಾಗ ಅವರಿಗೆ ಮುಹಮ್ಮದ್‌ರ(ಸ) ಪ್ರವಾದಿತ್ವದ ಬಗ್ಗೆ ನಂಬಿಕೆ ಬಂತಾದರೂ ಕ್ರೈಸ್ತ ಪಾದ್ರಿಗಳಿಂದ ಭಯಭೀತನಾಗಿ ಇಸ್ಲಾಮ್ ಧರ್ಮವನ್ನು ಸ್ವೀಕರಿಸದೇ ಹೋದನು.

3. ಇದು ಇರಾನ್‌ನ ದೊರೆ ಖುಸ್ರೂ ಪರ್ವೇಝ್‌ರಿಗೆ ಅಬ್ದುಲ್ಲಾ ಬಿನ್ ಹಝಾಫ ಸಹಮಿ(ರ) ಅವರ ಮೂಲಕ ಕಳುಹಿಸಲಾದ ಪತ್ರವಾಗಿದೆ:

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ.

ಅಲ್ಲಾಹನ ಪ್ರವಾದಿಯಾದ ಮುಹಮ್ಮದ್‌ರ(ಸ) ಕಡೆಯಿಂದ ಇರಾನ್‌ನ ದೊರೆ ಕಿಸ್ರಾನ* ಕಡೆಗೆ -

ಸನ್ಮಾರ್ಗವನ್ನು ಅನುಸರಿಸಿದವನ, ಅಲ್ಲಾಹನ ಮತ್ತು ಪ್ರವಾದಿಯ ವಿಶ್ವಾಸವಿರಿಸಿದವನ ಮೇಲೆ ಶಾಂತಿಯಿರಲಿ.

ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂದೂ ನಾನು ಅಲ್ಲಾಹನು ಅಖಿಲ ಮಾನವಕುಲಕ್ಕೆ ಮಾರ್ಗದರ್ಶನ ನೀಡುವ ಮೂಲಕ ಜೀವಂತ ಮನುಷ್ಯರಿಗೆ ದುಷ್ಕರ್ಮಗಳ ಪರಿಣಾಮದಿಂದ ಎಚ್ಚರಿಸಲಿಕ್ಕಾಗಿ ಕಳುಹಿಸಲ್ಪಟ್ಟ ಅಲ್ಲಾಹನ ಸಂದೇಶವಾಹಕನಾಗಿರು ವೆನೆಂದೂ ನಾನು ಸಾಕ್ಷ್ಯ ವಹಿಸುತ್ತೇನೆ.

ಇಸ್ಲಾಮ್ ಸ್ವೀಕರಿಸಿರಿ, ಎಲ್ಲ ವಿಪತ್ತುಗಳಿಂದಲೂ ಸುರಕ್ಷಿತವಾಗಿರುವಿರಿ. ಒಂದು ವೇಳೆ ನೀವು ನಿರಾಕರಿಸಿದರೆ ಎಲ್ಲ ಇರಾನ್‌ವಾಸಿಗಳ ಹೊಣೆಯು ನಿಮ್ಮ ಮೇಲಿರುವುದು."

ಮುಹಮ್ಮದ್(ಸ)ರವರ ಈ ಪತ್ರವನ್ನು ಕಂಡು ಖುಸ್ರೂ ಪರ್ವೇಝ್ ಕೆರಳಿದನು. ಏಕೆಂದರೆ ಆತ ತನ್ನ ಹೆಸರಿಗಿಂತ ಮೊದಲು ಬೇರೆ ಯಾರ ಹೆಸರನ್ನೂ ನೋಡಿ ಸಹಿಸಲು

* ಇರಾನಿನ ದೊರೆಯ ಹೆಸರು.

ಸಿದ್ಧನಿರಲಿಲ್ಲ. ಆತ ದರ್ಪ ಮತ್ತು ದುರಹಂಕಾರಕ್ಕೆ ಬಲಿ ಬಿದ್ದು ಆ ಪತ್ರವನ್ನು ಹರಿದು ಹಾಕಿದನು. ಈ ಘಟನೆಯನ್ನು ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹ. ಅಬ್ದುಲ್ಲಾ ಬಿನ್ ಹರ್ಝಾಫ ಸಹಮಿೂಯವರು(ರ) ವಿವರಿಸಿದಾಗ, "ಆತನ ಸಾಮ್ರಾಜ್ಯವನ್ನು ಅಲ್ಲಾಹನು ಛಿದ್ರ ಛಿದ್ರಗೊಳಿಸಲಿ" ಎಂದು ಪ್ರವಾದಿ(ಸ) ಪ್ರಾರ್ಥಿಸಿದರು.

ಕೆಲವೇ ಸಮಯದ ಬಳಿಕ ಪ್ರವಾದಿವರ್ಯರ(ಸ) ಈ ಪ್ರಾರ್ಥನೆಯು ಸ್ವೀಕೃತವಾಯಿತು.

ಖುಸ್ರೂ ಪರ್ವೇಝ್ ಕೇವಲ ಪತ್ರವನ್ನು ಹರಿದು ಹಾಕುವಷ್ಟಕ್ಕೇ ಸಾಕು ಮಾಡಿರಲಿಲ್ಲ. ಬದಲಾಗಿ ಆತನು ಯಮನ್‌ನಲ್ಲಿ ತನ್ನ ರಾಜ್ಯಪಾಲನಿಗೆ ಅರೇಬಿಯಾದ ಆ ಪ್ರವಾದಿಯನ್ನು ಬಂಧಿಸಿ ತನ್ನ ಮುಂದೆ ಹಾಜರುಪಡಿಸುವಂತೆ ಆದೇಶ ಜಾರಿಗೊಳಿಸಿದನು.

ಯಮನ್‌ನ ರಾಜ್ಯಪಾಲ ಬಾದಾನ್ ತನ್ನ ಇಬ್ಬರು ಸೈನಿಕರನ್ನು ಈ ಉದ್ದೇಶಕ್ಕಾಗಿ ಮದೀನಾ ನಗರಕ್ಕೆ ರವಾನಿಸುತ್ತಾನೆ. ಅವರ ಪೈಕಿ ಒಬ್ಬನ ಹೆಸರು 'ಕಹರ್‌ಮಾನಾ' ಆಗಿತ್ತು. ಜನರು ಖುಸ್ರೂ ಪರ್ವೇಝ್‌ನ ಪತ್ರವನ್ನು ಪ್ರವಾದಿವರ್ಯರಿಗೆ(ಸ) ನೀಡಿದಾಗ ಅವರು, "ನಿಮ್ಮ ಯಜಮಾನ(ಬಾದಾನ್)ನಿಗೆ ಹೇಳಿ, ಅವನ ಪ್ರಭು(ಪರ್ವೇಝ್)ವನ್ನು ನನ್ನ ಪ್ರಭು (ಅಲ್ಲಾಹ್) ಕೊಂದು ಬಿಟ್ಟಿದ್ದಾನೆಂದು!"

ಹಿ.ಶ. 7ರ ಜುಮಾದಿಲ್ ಅವ್ವಲ್ ತಿಂಗಳ 10ನೇ ತಾರೀಕಿನಂದು ಮಂಗಳವಾರ ರಾತ್ರೆ ಖುಸ್ರೂ ಪರ್ವೇಝ್‌ನ ಮಗನು ತನ್ನ ಮಲತಾಯಿಯೊಂದಿಗಿನ ಪ್ರಣಯದ ಕಾರಣ ತನ್ನ ತಂದೆಯನ್ನು ಕೊಂದು ಬಿಟ್ಟ. ಈ ಘಟನೆಯ ಬಗ್ಗೆ ತಿಳಿದಾಗಲೇ ಬಾದಾನ್ ಇಸ್ಲಾಮ್ ಧರ್ಮವನ್ನು ಸ್ವೀಕರಿಸುತ್ತಾನೆ.

4. ನಾಲ್ಕನೆಯ ಪತ್ರವು ಹಾತಿಬ್ ಬಿನ್ ಅಬೀ ಬಲ್ತ‌ಅರ(ರ) ಮೂಲಕ ಈಜಿಪ್ಟ್‌ನ ರಾಜ್ಯಪಾಲ 'ಮಕೂಕಸ್'ನಿಗೆ ಕಳುಹಿಸಲ್ಪಟ್ಟಿತ್ತು. ಅದರಲ್ಲಿದ್ದ ವಿಷಯವೂ ರೋಮ್ ದೊರೆಗೆ ಕಳುಹಿಸಿದ ಪತ್ರದ ವಿಷಯವೇ ಆಗಿತ್ತು.

ಆ ಪತ್ರದೊಂದಿಗೆ ಹಾತಿಬ್(ರ) ಅವರು ಅಲೆಕ್ಸಾಂಡ್ರಿಯ ತಲುಪಿದಾಗ 'ಮಕೂಕಸ್' ನೈಲ್ ನದಿಯ ವಿಹಾರದಲ್ಲಿ ನಿರತನಾಗಿದ್ದ. ಹಾತಿಬ್ ಒಂದು ದೋಣಿಯನ್ನು ಬಾಡಿಗೆಗೆ ಪಡೆದು 'ಮಕೂಕಸ್'ನ ಬಳಿ ತಲುಪುತ್ತಾರೆ. ಆತನನ್ನು ಭೇಟಿಯಾಗಿ ಪ್ರವಾದಿವರ್ಯರ(ಸ) ಪತ್ರವನ್ನು ನೀಡುತ್ತಾರೆ. ಆತ ಅದನ್ನೋದಿದ ಬಳಿಕ ಹೀಗೆ ಹೇಳುತ್ತಾನೆ: "ನಿಮ್ಮ ಪ್ರವಾದಿಯು ಸತ್ಯವಂತನಾಗಿದ್ದರೆ ಅವರನ್ನು ದೇಶದಿಂದ ಹೊರ ಹಾಕಿದವರು ನಾಶವಾಗಲಿ ಎಂದು ಅವರು ಏಕೆ ಪ್ರಾರ್ಥಿಸುವುದಿಲ್ಲ."

ಹಾತಿಬ್(ರ) ನಿಸ್ಸಂಕೋಚವಾಗಿ ಹೀಗೆ ಉತ್ತರಿಸುತ್ತಾರೆ: "ನಿಮ್ಮ ನಂಬಿಕೆಯಂತೆ ಯಹೂದಿಗಳು ಈಸಾರನ್ನು(ಅ) ಶಿಲುಬೆಗೇರಿಸಿದರು. ಶಿಲುಬೆಯಲ್ಲೇ ಅವರು ಸಾವನ್ನು ಅಪ್ಪಿದರು. ಅವರು ತಮ್ಮ ಶತ್ರುಗಳು ನಾಶವಾಗಲಿ ಎಂದೇಕೆ ಪ್ರಾರ್ಥಿಸಲಿಲ್ಲ."

ಇದನ್ನು ಕೇಳಿ ಮಕೂಕಸ್ ನಿರುತ್ತರನಾದ.

"ಹೌದು, ನೀವೂ ಜಾಣರು. ನಿಮ್ಮನ್ನು ರಾಯಭಾರಿಯಾಗಿ ಕಳುಹಿಸಿದವರೂ ಜಾಣರೂ ಯುಕ್ತಿವಂತರೂ ಆಗಿರುವರು."

ತರುವಾಯ ಆತ ಆ ಪತ್ರವನ್ನು ಆನೆಯ ದಂತದ ಎರಡು ಹಲಗೆಗಳ ಮಧ್ಯೆ ಇಟ್ಟು ಸರಕಾರಿ ಬೊಕ್ಕಸದಲ್ಲಿ ಭದ್ರವಾಗಿರಿಸಿದ. ಜೊತೆಗೆ ಅದಕ್ಕೆ ಈ ಕೆಳಗಿನಂತೆ ಉತ್ತರ ಬರೆದು ಪ್ರವಾದಿವರ್ಯರಿಗೆ(ಸ) ರವಾನಿಸಿದ:

"ಪ್ರವಾದಿವರ್ಯರ ಸನ್ನಿಧಿಗೆ:

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ.

ಈಜಿಪ್ಟ್‌ನ ರಾಜ್ಯಪಾಲ 'ಮಕೂಕಸ್'ನ ವತಿಯಿಂದ ಹಝ್ರತ್ ಮುಹಮ್ಮದ್ ಬಿನ್ ಅಬ್ದುಲ್ಲಾರ ಸನ್ನಿಧಿಗೆ ಸಲಾಮ್‌ಗಳು!

ತರುವಾಯ ನಾನು ತಮ್ಮ ಪತ್ರವನ್ನು ಓದಿದೆ. ತಾವು ಅದರಲ್ಲಿ ಹೇಳಿರುವ ವಿಷಯಗಳನ್ನು ಮತ್ತು ಯಾವ ಧರ್ಮದ ಕಡೆಗೆ ತಾವು ನನ್ನನ್ನು ಆಹ್ವಾನಿಸಿರುವಿರೋ ಅದನ್ನು ಮೆಚ್ಚಿದ್ದೇನೆ. ಓರ್ವ ಪ್ರವಾದಿ ಬರುವವರಿದ್ದಾರೆಂಬುದು ನನಗೆ ಮೊದಲೇ ತಿಳಿದಿತ್ತು. ಆದರೆ ಅವರು ಸಿರಿಯಾದಲ್ಲಿ ಬರುವರೆಂದು ನಾನು ಭಾವಿಸಿದ್ದೆ."

ಈ ಪತ್ರದ ಜೊತೆಗೆ 'ಮಕೂಕಸ್' ನೂರು ದೀನಾರ್, ಬಟ್ಟೆ-ಬರೆಗಳು ಮತ್ತು ಇತರ ಉಡುಗೊರೆಗಳನ್ನೂ ನೀಡಿ ಹಾತಿಬ್‌ರನ್ನು(ರ) ಆದರಪೂರ್ವಕ ರವಾನಿಸುತ್ತಾನೆ.

5. ಐದನೆಯ ಪತ್ರವನ್ನು ಪ್ರವಾದಿವರ್ಯರು(ಸ) ಯಮಾಮದ ಅಧಿಪತಿಯಾದ ಹೌದಾ ಬಿನ್ ಅಲೀಯವರ ಕಡೆಗೆ ಸಲೀತ್ ಬಿನ್ ಕೈಸ್ ಬಿನ್ ಅಮ್ರ್ ಅಲ್ ಆರೀ(ರ) ಅವರ ಮುಖಾಂತರ ರವಾನಿಸುತ್ತಾರೆ.

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ.

ಅಲ್ಲಾಹನ ಪ್ರವಾದಿಯಾದ ಮುಹಮ್ಮದ್‌ರ(ಸ) ಕಡೆಯಿಂದ ಹೌದಾ ಬಿನ್ ಅಲೀ ಯವರಿಗೆ!

ಸನ್ಮಾರ್ಗವನ್ನು ಅನುಸರಿಸಿದವನ ಮೇಲೆ ಶಾಂತಿಯಿರಲಿ!

ನನ್ನ ಧರ್ಮವು ಸದ್ಯದಲ್ಲೇ ಯಾವನೇ ಮನುಷ್ಯನ ಹೆಜ್ಜೆ ಮತ್ತು ಯಾವುದೇ ಪ್ರಾಣಿಯ ಗೊರಸು ತಲುಪುವಲ್ಲಿಯ ತನಕ ತಲುಪಲಿದೆ ಎಂಬುದು ನಿಮಗೆ ತಿಳಿದಿರಲಿ. ಆದ್ದರಿಂದ ನೀವು ಇಸ್ಲಾಮ್ ಧರ್ಮವನ್ನು ಸ್ವೀಕರಿಸಿ. ನೀವು ಮೋಕ್ಷ ಹೊಂದುವಿರಿ. ನಿಮ್ಮ ಅಧೀನದಲ್ಲಿರುವ ದೇಶಕ್ಕೆ ನಿಮ್ಮನ್ನೇ ಆಡಳಿತಗಾರನಾಗಿ ಮುಂದುವರಿಸಲಾಗುವುದು.

ಆದರೆ ಹೌದಾ ಇಸ್ಲಾಮ್ ಸ್ವೀಕರಿಸಲಿಲ್ಲ. ಮುಂದೆ ಮುಹಮ್ಮದ್(ಸ) ಮಕ್ಕಾ ವಿಜಯ ಮತ್ತು ಹುನೈನ್ ಯುದ್ಧದ ಬಳಿಕ ಮರಳಿ ಮದೀನಾ ತಲುಪಿದಾಗ ಹೌದಾ ತೀರಿ

ಹೋದ ಬಗ್ಗೆ ಅವರಿಗೆ ಸುದ್ದಿ ತಲುಪುತ್ತದೆ.

6. ಆರನೆಯ ಪತ್ರವನ್ನು ಪ್ರವಾದಿವರ್ಯರು(ಸ) ಗಸ್ಸಾನ್‌ನ ದೊರೆ ಹಾರಿಸ್ ಬಿನ್ ಅಬೀ ಶಮರ್‌ನ ಕಡೆಗೆ ಶುಜಾಅ್ ಬಿನ್ ವಹಬ್ ಅಸದೀಯವರ(ರ) ಮೂಲಕ ರವಾನಿಸಿದ್ದರು:

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ.

"ಅಲ್ಲಾಹನ ಪ್ರವಾದಿಯಾದ ಮುಹಮ್ಮದ್‌ರ(ಸ) ಕಡೆಯಿಂದ ಹಾರಿಸ್ ಬಿನ್ ಶಮರ್‌ನ ಕಡೆಗೆ! ಸನ್ಮಾರ್ಗವನ್ನು ಅನುಸರಿಸಿದವನ ಹಾಗೂ ಅಲ್ಲಾಹನ ಮೇಲೆ ವಿಶ್ವಾಸವಿರಿಸಿದವನ ಮೇಲೆ ಶಾಂತಿಯಿರಲಿ! ನಾನು ನಿಮಗೆ ಏಕನೂ ಅದ್ವಿತೀಯನೂ ಆದ ಅಲ್ಲಾಹನ ಮೇಲೆ ವಿಶ್ವಾಸವಿರಿಸುವ ಆಹ್ವಾನ ನೀಡುತ್ತೇನೆ. ಹಾಗೆ ಮಾಡಿದರೆ ನಿಮ್ಮ ದೇಶವು ಉಳಿಯುವುದು."

ಈ ಪತ್ರವನ್ನು ತಂದು ಕೊಟ್ಟಾಗ ಅದನ್ನೋದಿ ಆತ ಎಸೆದು ಬಿಟ್ಟು ಹೀಗೆ ಹೇಳಿದ: "ನನ್ನಿಂದ ನನ್ನ ದೇಶವನ್ನು ಕಸಿಯುವವರು ಯಾರಿದ್ದಾರೆ. ನಾನೇ ಅವನನ್ನು ಎದುರಿಸಲು ಹೋಗುವೆನು."

ಆತನಿಗೂ ಇಸ್ಲಾಮ್ ಧರ್ಮ ಸ್ವೀಕಾರದ ಸೌಭಾಗ್ಯ ದೊರೆಯಲಿಲ್ಲ. ಆತ ಹಿ. ಶ. 8ರಲ್ಲಿ ನಿಧನ ಹೊಂದಿದ.

ಇನ್ನೂ ಅನೇಕ ಮಂದಿ ಗಣ್ಯ ವ್ಯಕ್ತಿಗಳಿಗೆ ಪ್ರವಾದಿವರ್ಯರು(ಸ) ಈ ರೀತಿಯ ಪತ್ರಗಳನ್ನು ರವಾನಿಸಿದ್ದರು.

## ಖೈಬರ್‌ನ ಯಹೂದಿಗಳು

ಮದೀನಾ ನಗರದಿಂದ ನೂರು ಮೈಲಿ ದೂರದಲ್ಲಿ ಉತ್ತರ ದಿಕ್ಕಿನಲ್ಲಿ ಖೈಬರ್ ಎಂಬ ಪ್ರದೇಶವಿದೆ. ಇಲ್ಲಿ ಎಲ್ಲೆಡೆ ಬೆಟ್ಟಗಳಿವೆ. ಅವುಗಳ ಮಧ್ಯೆ ಏಳು ಕಣಿವೆಗಳಿವೆ. ಅವುಗಳಲ್ಲಿ ಸುಮಾರು ನೂರು ಚಿಲುಮೆಗಳಿವೆ. ಇವುಗಳಿಗೆ ಹೊರತಾಗಿ ಅನೇಕ ಬಾವಿಗಳೂ ಇವೆ. ಇಡೀ ಪ್ರದೇಶವು ಸಸ್ಯಶ್ಯಾಮಲವಾಗಿದೆ. ಇಲ್ಲಿ ಖರ್ಜೂರ, ದ್ರಾಕ್ಷೆ, ಲಿಂಬೆ, ಅಂಜೂರ, ಚಕೋತ ಇತ್ಯಾದಿಗಳ ತೋಟಗಳಿವೆ. ಬೆಳೆಯೂ ಚೆನ್ನಾಗಿ ಆಗುತ್ತದೆ. ಯಹೂದಿಗಳನ್ನು ಫೆಲಸ್ತೀನ್‌ನಿಂದ ಹೊರಹಾಕಿದ ನಂತರ ಅವರು ಇಲ್ಲಿ ಬಂದು ನೆಲೆಸಿದ್ದರು. ಖೈಬರ್ ಅವರ ಮುಖ್ಯ ವಾಸಸ್ಥಳವಾಗಿತ್ತು. ಅವರು ವಾಸಿಸು ತ್ತಿದ್ದ ಇತರ ಪ್ರದೇಶಗಳೆಂದರೆ ಫಿದಕ್, ವಾದಿಲ್ ಕುರಾ ಮತ್ತು ತೀಮಾ. ಆದರೆ ಅವರ ಶಕ್ತಿ ಕೇಂದ್ರವು ಖೈಬರ್ ಪ್ರದೇಶವೇ ಆಗಿತ್ತು. ಮದೀನಾದಿಂದ ಹೊರ ಹಾಕಲ್ಪಟ್ಟ ನಂತರ ನದೀರ್ ಗೋತ್ರದವರೂ ಇಲ್ಲೇ ಬಂದು ವಾಸ ಹೂಡಿದ್ದರು. ಸ್ವಲ್ಪ ಸಮಯದಲ್ಲೇ ಅವರು ಇಲ್ಲಿ ವಿಶಿಷ್ಟ ಸ್ಥಾನಮಾನವನ್ನು ಪಡೆದಿದ್ದರು. ಮೊದಲು ಹಯ್ಯಿ ಬಿನ್ ಅಖ್ತಬ್ ಅವರ ಸರದಾರ

ನಾಗಿದ್ದನು. ಆದರೆ ಅವನ ಹತ್ಯೆಯ ನಂತರ ಅಬೂ ರಾಫಿಲ್ ಬಿನ್ ಅಲ್ ಹಕೀಕ್ ಅವರ ನಾಯಕನಾದನು.

ಇಂದು ಖೈಬರ್‌ನ ಒಂದು ಕೋಟೆಯಲ್ಲಿ ಯಹೂದಿಗಳ ಒಂದು ರಹಸ್ಯ ಸಭೆ ನಡೆಯುತ್ತಿದೆ. ಎಲ್ಲ ಪ್ರದೇಶಗಳ ಗಣ್ಯ ವ್ಯಕ್ತಿಗಳು ಇಲ್ಲಿ ನೆರೆದಿದ್ದಾರೆ. ಅಬೂ ರಾಫಿಲ್ ಸಭೆಯ ಅಧ್ಯಕ್ಷತೆ ವಹಿಸಿ ಮಾತನಾಡುತ್ತಾ ಹೀಗೆ ಹೇಳುತ್ತಾನೆ:

"ಸೋದರರೇ! ಮುಸ್ಲಿಮರ ಏರುತ್ತಿರುವ ಶಕ್ತಿಯು ಈಗ ನಮ್ಮ ಪಾಲಿಗೆ ಅಪಾಯಕರವಾಗಿ ಮಾರ್ಪಟ್ಟಿದೆ. ನಾವು ಕುರೈಶರನ್ನೂ ಗತ್‌ಫಾನ್‌ನವರನ್ನೂ ಮುಸ್ಲಿಮರ ವಿರುದ್ಧ ಪ್ರಚೋದಿಸಿ ಯುದ್ಧ ಮಾಡಿಸಿ ನೋಡಿದೆವು. ಆದರೆ ನಮ್ಮ ಧ್ಯೇಯ ಈಡೇರಲಿಲ್ಲ. ಈ ಮುಸ್ಲಿಮರು ಹಿಂದಿಗಿಂತಲೂ ಹೆಚ್ಚು ಬಲಶಾಲಿಗಳಾಗಿರುವರು. ಈಗ ನಾವೇ ಶಕ್ತಿ ಆರ್ಜಿಸಿ ಅವರ ವಿರುದ್ಧ ಹೋರಾಡಿ ಅವರನ್ನು ಸದೆ ಬಡಿಯಬೇಕಾಗಿದೆ. ಏಕೆಂದರೆ ಇದೀಗ ನಮ್ಮ ಅಳಿವು-ಉಳಿವಿನ ಪ್ರಶ್ನೆಯಾಗಿದೆ."

ಆಗ ಒಬ್ಬನು ಅವನ ಮಾತನ್ನು ತಡೆದು ಹೇಳುತ್ತಾನೆ: "ಈಗ ನಾವು ಇತರರ ಮೇಲೆ ಭರವಸೆ ಇಡುವ ಅಥವಾ ಅವರನ್ನು ನಮ್ಮ ದಾಳವಾಗಿ ಮಾಡುವ ಕೆಲಸ ಬಿಟ್ಟು ಬಿಡಬೇಕು. ಏನು ಮಾಡುವುದಿದ್ದರೂ ನಮ್ಮ ತೋಳ್ಬಲದ ಭರವಸೆಯ ಮೇಲೆಯೇ ಮಾಡಬೇಕು. ನಮ್ಮ ವಿಜಯ ಅಡಗಿರುವುದು ಇದರಲ್ಲೇ."

ಅಬೂ ರಾಫಿಲ್: "ಹೌದು, ನೀನು ಹೇಳುತ್ತಿರುವುದು ಸತ್ಯ. ನಾನು ನಿಮ್ಮನ್ನು ಈ ಸಭೆಗೆ ಕರೆದಿರುವ ಉದ್ದೇಶವೂ ಅದೇ ಆಗಿದೆ. ನಾವು ಯುದ್ಧ ಸಿದ್ಧತೆಗೆ ಸೂಕ್ತ ಯೋಜನೆಯೊಂದನ್ನು ಮಾಡಿ ಅದನ್ನು ಜಾರಿಗೆ ತರಲು ಸಮರ್ಥವಾದ ಕಾರ್ಯತಂತ್ರವನ್ನು ರೂಪಿಸಬೇಕು. ಗತ್‌ಫಾನ್‌ನವರಿಂದಲೂ ಈ ಬಗ್ಗೆ ನೆರವು ಪಡೆಯಬೇಕು. ಅವರೊಂದಿಗೆ ನಮ್ಮ ಉತ್ತಮ ಸಂಬಂಧವಿದೆ. ಆದ್ದರಿಂದ ಅವರು ನಮ್ಮ ಕರೆಗೆ ಖಂಡಿತ ಓಗೊಡುವರೆಂಬ ಭರವಸೆ ನನಗಿದೆ."

"ನಾವೆಲ್ಲರೂ ನಿಮ್ಮ ಜೊತೆಗಿದ್ದೇವೆ" ಎಂಬ ಅನೇಕ ಸ್ವರಗಳು ಒಮ್ಮೆಲೇ ಕೇಳಿ ಬಂತು. ಮರುದಿನವೇ ಅಬೂ ರಾಫಿಲ್‌ನ ಆಮಂತ್ರಣದ ಮೇರೆಗೆ ಗತ್‌ಫಾನ್ ಗೋತ್ರದ ಒಂದು ಪ್ರತಿನಿಧಿ ತಂಡವು ಖೈಬರ್‌ಗೆ ತಲುಪುತ್ತದೆ. ಸ್ವಲ್ಪ ಸಮಯದ ಮಾತುಕತೆಯ ಬಳಿಕ ಅಬೂ ರಾಫಿಲ್ ನಿರ್ಣಾಯಕ ಸ್ವರದಲ್ಲಿ ಹೀಗೆ ಹೇಳುತ್ತಾನೆ:

"ನಿಮ್ಮ ಬೆಂಬಲದೊಂದಿಗೆ ನಾವು ಮದೀನಾವನ್ನು ಜಯಿಸಿದರೆ ಅಲ್ಲಿನ ಉತ್ಪತ್ತಿಯ ಅರ್ಧಾಂಶವನ್ನು ಶಾಶ್ವತವಾಗಿ ನಿಮಗೆ ನೀಡಲಾಗುವುದು."

ಗತ್‌ಫಾನ್‌ನ ಪ್ರತಿನಿಧಿ ತಂಡದ ವಕ್ತಾರ: "ನಾವು ನಾಲ್ಕುಸಾವಿರ ವೀರ ಯೋಧರ ಸೇನೆಯನ್ನು ನಿಮ್ಮ ನೆರವಿಗೆ ಕಳುಹಿಸುವೆವು."

ಯಹೂದಿಗಳ ಯುದ್ಧ ಸಿದ್ಧತೆಯ ಕುರಿತು ಮದೀನಾದ ಮುನಾಫಿಕ್ ಸರದಾರನಾದ

ಅಬ್ದುಲ್ಲಾ ಬಿನ್ ಉಬೈಗೆ ತಿಳಿದಾಗ ಅವನ ದ್ವೇಷಾಗ್ನಿಯು ಪ್ರಜ್ವಲಿಸುತ್ತದೆ. ಮುಸ್ಲಿಮರು ಅಳಿದು ಹೋಗುವ ಸಮಯ ಸನ್ನಿಹಿತವಾಗಿದೆಯೆಂದು ಅವನು ಸಂತೋಷಪಡುತ್ತಾನೆ. ಆತ ಅಬೂ ರಾಫಿಲ್‌ನಿಗೆ ಒಂದು ಗುಪ್ತ ಸಂದೇಶವನ್ನು ಕಳುಹಿಸಿ ಕೊಡುತ್ತಾನೆ: "ಮುಸ್ಲಿಮರ ಬಗ್ಗೆ ಭಯ ಬೇಡ. ಅವರು ಕೇವಲ ಬೆರಳೆಣಿಕೆಯ ಜನರು. ಅವರ ಬಳಿ ಯಾವುದೇ ಆಯುಧವಿಲ್ಲ. ಕಂದಕ್ ಯುದ್ಧದ ನೋವಿನಿಂದ ಅವರು ಇನ್ನೂ ಚೇತರಿಸಿಕೊಂಡಿಲ್ಲ. ನೀವು ಒಂದು ಪ್ರಬಲ ಧಾಳಿ ಮಾಡಿದರೆ ಖಂಡಿತ ವಿಜಯ ನಿಮ್ಮದಾಗುತ್ತದೆ."

ಮುಹಮ್ಮದ್‌ರಿಗೆ(ಸ) ಯಹೂದಿಗಳ ಯುದ್ಧ ಸಿದ್ಧತೆಯ ಕುರಿತು ತಿಳಿದಾಗ ಅವರು ತಮ್ಮ ಆಪ್ತ ಅನುಯಾಯಿಯಾದ ಅಬ್ದುಲ್ಲಾ ಬಿನ್ ರವಾಹರನ್ನು(ರ) ಅದರ ತನಿಖೆಗಾಗಿ ಕಳುಹಿಸಿ ಕೊಡುತ್ತಾರೆ. ಖೈಬರ್‌ನಿಂದ ಅಗತ್ಯ ವಿವರಗಳನ್ನು ಸಂಗ್ರಹಿಸಿ ಅಬ್ದುಲ್ಲಾ ಬಿನ್ ರವಾಹ(ರ) ಅದನ್ನು ಪ್ರವಾದಿವರ್ಯರಿಗೆ(ಸ) ಮುಟ್ಟಿಸುತ್ತಾರೆ. ಆ ಬಗ್ಗೆ ಪ್ರವಾದಿ ವರ್ಯರು(ಸ) ಗಂಭೀರವಾಗಿ ಯೋಚಿಸಿದ ಬಳಿಕ ಶತ್ರುವನ್ನು ಅದರ ನೆಲದಲ್ಲೇ ತಡೆಯುವ ಏರ್ಪಾಡು ಮಾಡಬೇಕೆಂಬ ತೀರ್ಮಾನಕ್ಕೆ ಬರುತ್ತಾರೆ.

ಹಿ. ಶ. 7ರ ಮುಹರ್ರಮ್ ತಿಂಗಳಲ್ಲಿ ಪ್ರವಾದಿವರ್ಯರು(ಸ) ಖೈಬರ್‌ನ ಯಹೂದಿಗಳ ವಿರುದ್ಧ ಕಾರ್ಯಾಚರಣೆ ಮಾಡಲಿಕ್ಕಾಗಿ ಯುದ್ಧ ಸಿದ್ಧತೆಯ ಆಜ್ಞೆ ನೀಡುತ್ತಾರೆ.

"ಖೈಬರ್ ಯುದ್ಧಕ್ಕೆ ಹುದೈಬಿಯಾದಲ್ಲಿ ರಿಝ್ವಾನ್ ಪ್ರತಿಜ್ಞೆಯಲ್ಲಿ ಭಾಗವಹಿಸಿ ದವರು ಮಾತ್ರ ಹೊರಡಬೇಕು."

ಕುರೈಶರ ಪ್ರದೇಶದಲ್ಲಿ ನಿರಾಯುಧರಾಗಿದ್ದಾಗಲೇ ತಮ್ಮ ಪ್ರಾಣಗಳನ್ನು ಬಲಿನೀಡುವ ಪ್ರತಿಜ್ಞೆ ಮಾಡಿದಂತಹ ಸಜ್ಜನರಾದ ಸತ್ಯವಿಶ್ವಾಸಿಗಳನ್ನು ಮಾತ್ರ ಜೊತೆಗೆ ಒಯ್ಯುವುದು ಪ್ರವಾದಿವರ್ಯರ(ಸ) ಉದ್ದೇಶವಾಗಿತ್ತು. ಏಕೆಂದರೆ ಅವರ ಅರ್ಪಣಾ ಮನೋಭಾವವನ್ನು ಮೆಚ್ಚಿ ಅವರಿಗೆ ಅಲ್ಲಾಹನೇ "ರದಿಯಲ್ಲಾಹು ಅನ್‌ಹುಮ್" (ಅಲ್ಲಾಹನು ಅವರಿಂದ ಸಂಪ್ರೀತನಾದನು) ಎಂಬ ಸುವಾರ್ತೆಯನ್ನು ನೀಡಿದ್ದನು.

ಮದೀನಾದಲ್ಲಿ ಪ್ರವಾದಿವರ್ಯರು(ಸ) ಸಬಾಲ್ ಬಿನ್ ಅರ್ಫತ ಗಿಫ್ಫಾರಿ(ರ) ಅವರನ್ನು ತಮ್ಮ ಉತ್ತರಾಧಿಕಾರಿಯಾಗಿ ನೇಮಿಸುತ್ತಾರೆ. ಸಾವಿರದ ಆರ್‍ನೂರು ಯೋಧರ ಜೊತೆ ಪ್ರವಾದಿವರ್ಯರು(ಸ) ಖೈಬರ್‌ನ ಕಡೆಗೆ ಹೊರಡುತ್ತಾರೆ. ಈ ಪೈಕಿ 200 ಮಂದಿ ಸವಾರರೂ ಇದ್ದರು. ಪ್ರವಾದಿವರ್ಯರು(ಸ) ಹೊರಡುವಾಗ ತಮ್ಮ ಜೊತೆ ಅನೇಕ ಮಹಿಳೆಯರು ಇರುವುದನ್ನು ಕಂಡು 'ಇವರು ಯಾಕೆ ಹೊರಟಿದ್ದಾರೆ?' ಎಂದು ವಿಚಾರಿಸುತ್ತಾರೆ. ಆಗ ಆ ಮಹಿಳೆಯರು:

"ಓ ಪ್ರವಾದಿವರ್ಯರೇ(ಸ): ನಾವು ಗಾಯಾಳುಗಳ ಶುಶ್ರೂಷೆ ಮಾಡುವೆವು. ಯೋಧರಿಗೆ ಬಾಣಗಳನ್ನು ಎತ್ತಿ ಕೊಡುವೆವು. ಅವರಿಗೆ ಜಲಪಾನ ಮಾಡಿಸುವೆವು. ನಾವು

ಔಷಧಿಗಳನ್ನೂ ತಂದಿದ್ದೇವೆ. ನಮಗೂ ಈ ಯುದ್ಧದಲ್ಲಿ ಭಾಗವಹಿಸುವ ಅನುಮತಿ ದಯಪಾಲಿಸಿರಿ" ಎನ್ನುತ್ತಾರೆ.

ಅವರ ಮನವಿಯನ್ನು ಸ್ವೀಕರಿಸಲಾಗುತ್ತದೆ. ಸೈನ್ಯವು ತನ್ನ ಗುರಿಯತ್ತ ಹೊರಡುತ್ತದೆ. ಆಹಾರ ವಸ್ತುವಾಗಿ ಸೈನ್ಯದ ಬಳಿ ಇದ್ದುದು ಕೇವಲ ಹುರಿದ ಧಾನ್ಯದ ಹುಡಿಯಾಗಿತ್ತು. ಪ್ರವಾದಿವರ್ಯರೂ ಅದನ್ನೇ ನೀರಿನಲ್ಲಿ ಕಲಸಿ ಕುಡಿಯುತ್ತಿದ್ದರು.

ಇಸ್ಲಾಮೀ ಸೇನೆಯು ಮುಖ್ಯ ದಂಡನಾಯಕರಾದ ಹ. ಉಸ್ಮಾನ್‌ರ(ರ) ಜೊತೆ ನಾಲ್ಕು ದಿನಗಳ ಪ್ರಯಾಣದ ಬಳಿಕ ಖೈಬರ್ ಮತ್ತು ಗತ್ಫಾನ್‌ನ ಪ್ರದೇಶವನ್ನು ತಲುಪುತ್ತದೆ. ಪ್ರವಾದಿವರ್ಯರ(ಸ) ಯುದ್ಧ ತಂತ್ರದ ಮೇರೆಗೆ ಆ ಎರಡು ಪ್ರದೇಶಗಳ ಮಧ್ಯೆ ಸೇನೆಯು ಠಿಕಾಣಿ ಹೂಡುತ್ತದೆ. ಇದರಿಂದಾಗಿ ಗತ್ಫಾನ್‌ನವರು ಖೈಬರ್‌ನವರ ಬೆಂಬಲಕ್ಕೆ ಹೊರಡಲು ಹಿಂಜರಿದರು.

ರಾತ್ರಿಯಾಗುತ್ತಲೇ ಪ್ರವಾದಿವರ್ಯರು(ಸ) ಎಲ್ಲಿಗೆ ಪ್ರವೇಶಿಸುವುದಿದ್ದರೂ ತಮ್ಮ ವಾಡಿಕೆಯಂತೆ ಈ ರೀತಿ ಪ್ರಾರ್ಥಿಸುತ್ತಿದ್ದರು: "ಓ ಅಲ್ಲಾಹ್! ನಾವು ನಿನ್ನಿಂದ ಈ ಪ್ರದೇಶ, ಇಲ್ಲಿನ ನಿವಾಸಿಗಳು ಮತ್ತು ಇಲ್ಲಿರುವ ಎಲ್ಲ ವಸ್ತುಗಳ ಒಳಿತನ್ನು ಅರಸುತ್ತೇವೆ. ಈ ಪ್ರದೇಶದ, ಇಲ್ಲಿನ ನಿವಾಸಿಗಳ ಮತ್ತು ಇಲ್ಲಿರುವ ಎಲ್ಲ ವಸ್ತುಗಳ ಕೆಡುಕುಗಳಿಂದ ನಿನ್ನ ಅಭಯವನ್ನು ಯಾಚಿಸುತ್ತೇವೆ."

## ಖೈಬರ್ ವಿಜಯ

ಖೈಬರ್‌ನಲ್ಲಿ ಯಹೂದಿಗಳ ಅನೇಕ ಕೋಟೆಗಳಿವೆ. ಆ ಪೈಕಿ ಆರು ಕೋಟೆಗಳು ಪ್ರಖ್ಯಾತವಾಗಿವೆ. ಅವುಗಳ ಬಗ್ಗೆ ಅವರಿಗೆ ಬಹಳ ಹೆಮ್ಮೆ ಇದೆ. ಅವರ ಮಟ್ಟಿಗೆ ಅವು ಅಭೇದ್ಯ ಕೋಟೆಗಳು. ಆದರೆ ಮುಸ್ಲಿಮ್ ಯೋಧರು ಆ ಪೈಕಿ ತಾಯಿಮ್, ಝುಬೈಲ್ ಮತ್ತು ಶಲಅಬ್ ಎಂಬ ಕೋಟೆಗಳನ್ನು ಸುತ್ತುವರಿಯುತ್ತಾರೆ. ಆಗ ಯಹೂದಿಗಳು ತಮ್ಮ ಬಂಧು ಬಳಗದವರನ್ನು ಹಳೆಯ ಕೋಟೆಗಳಲ್ಲಿ ಒಟ್ಟುಗೂಡಿಸುತ್ತಾರೆ. ಆಹಾರ ಧಾನ್ಯಗಳ ಸಂಗ್ರಹವನ್ನು ತಾಯಿಮ್ ಮತ್ತು ಶಲಅಬ್‌ನಲ್ಲಿ ಶೇಖರಿಸಿ ಸೇನೆಯನ್ನು ನಝಾತ್‌ನಲ್ಲಿ ಒಟ್ಟು ಸೇರಿಸಿ ಯುದ್ಧ ಆರಂಭಿಸುತ್ತಾರೆ.

ಮುಸ್ಲಿಮರು ಕೋಟೆಗಳಿಗೆ ಮುತ್ತಿಗೆ ಹಾಕಿರುವರು. ಯಹೂದಿಗಳು ಕೋಟೆಯ ಒಳಗಿಂದ ಅವರ ಮೇಲೆ ಕಲ್ಲು ಮತ್ತು ಬಾಣಗಳ ಮಳೆಗರೆಯುತ್ತಾರೆ. ಮುಸ್ಲಿಮರು ಆ ಬಾಣಗಳನ್ನೇ ಹೆಕ್ಕಿಕೊಂಡು ಅವರ ವಿರುದ್ಧ ಬಳಸುತ್ತಾರೆ.

ಮುಸ್ಲಿಮ್ ಯೋಧರ ಸತತ ಪ್ರಯತ್ನದಿಂದ ತಾಯಿಮ್ ಮತ್ತು ನಝಾತ್ ಕೋಟೆಗಳನ್ನು ಜಯಿಸುತ್ತಾರೆ. ಅನಂತರ ಒಂದೆರಡು ದಿನಗಳಲ್ಲೇ ಶಕ್ ಮತ್ತು ಶಲಅಬ್‌ನ ಕೋಟೆಗಳೂ ಅವರ ವಶವಾಗುತ್ತವೆ. ಕಮೂಶ್ ಎಂಬ ಕೋಟೆಯು ಅತ್ಯಂತ ಭದ್ರವಾಗಿದ್ದು

ಯಹೂದಿಗಳ ಎಲ್ಲಾ ಭರವಸೆಗಳೂ ಆ ಕೋಟೆಯ ಭದ್ರತೆಯನ್ನು ಅವಲಂಬಿಸಿದೆ. ಮುಸ್ಲಿಮರು ಅದನ್ನು ಸುತ್ತುವರಿದು ಇಂದಿಗೆ 20 ದಿನಗಳಾಗಿವೆ. ಆದರೆ ಅದು ಅಧೀನವಾಗುವ ಯಾವ ಲಕ್ಷಣವೂ ಗೋಚರಿಸುವುದಿಲ್ಲ. ತನ್ಮಧ್ಯೆ ಮುಸ್ಲಿಮರ ಸೆರೆಯಲ್ಲಿದ್ದ ಓರ್ವ ಯಹೂದಿ ಈ ಕೋಟೆಯಲ್ಲಿರುವ ಅಸ್ತ್ರ ಮತ್ತು ಧಾನ್ಯಗಳ ರಹಸ್ಯ ಸಂಗ್ರಹವನ್ನು ತೋರಿಸಿಕೊಡುತ್ತಾನೆ. ತನ್ಮೂಲಕ ಮುಸ್ಲಿಮರು ಆ ಅಸ್ತ್ರಗಳನ್ನೂ ಧಾನ್ಯಗಳನ್ನೂ ವಶಪಡಿಸಿಕೊಳ್ಳುತ್ತಾರೆ.

ಕಮೂಶ್ ಕೋಟೆಯ ಮುತ್ತಿಗೆಯ ವೇಳೆ ಸ್ವತಃ ಪ್ರವಾದಿವರ್ಯರು(ಸ) ಪ್ರತಿ ದಿನ ಸೇನೆಯ ಕಾರ್ಯ ಚಟುವಟಿಕೆಗಳನ್ನು ವೀಕ್ಷಿಸುತ್ತಿರುತ್ತಾರೆ. ಈ ಮಧ್ಯೆ ಅವರಿಗೆ ತಲೆನೋವಿನ ಕಾಯಿಲೆ ಬಾಧಿಸುತ್ತದೆ. ಅವರು ಪ್ರತಿದಿನ ಬೇರೆ ಬೇರೆ ತಂಡಗಳನ್ನು ಕೋಟೆಯನ್ನು ವಶಪಡಿಸಲು ಕಳುಹಿಸಿ ಕೊಡುತ್ತಾರೆ. ಆದರೆ ಅವು ಯಶಸ್ವಿ ಯಾಗುವುದಿಲ್ಲ. ಕೊನೆಗೆ ಒಂದು ರಾತ್ರಿ ಪ್ರವಾದಿ(ಸ) ಈ ರೀತಿ ಹೇಳುತ್ತಾರೆ: "ನಾನು ನಾಳೆ ಸೇನೆಯ ಧ್ವಜವನ್ನು ಅಲ್ಲಾಹನನ್ನೂ ಆತನ ಪ್ರವಾದಿಯನ್ನೂ ಪ್ರೀತಿಸುವ ಮತ್ತು ಅಲ್ಲಾಹ್ ಮತ್ತು ಪ್ರವಾದಿಯ ಪ್ರೀತಿಗೆ ಪಾತ್ರನಾದ ವ್ಯಕ್ತಿಗೆ ನೀಡುವೆನು."

ಆ ರಾತ್ರಿ ಪ್ರವಾದಿವರ್ಯರ(ಸ) ಎಲ್ಲಾ ಸಂಗಾತಿಗಳೂ ನಾಳೆ ಪ್ರವಾದಿವರ್ಯರು(ಸ) ಯಾರನ್ನು ಆರಿಸುತ್ತಾರೆಂಬ ನಿರೀಕ್ಷೆ-ಕಾತರಗಳಲ್ಲಿ ಕಳೆದರು. ಎಲ್ಲರೂ ಫಜ್ರ್ ನಮಾಝ್ ನಿರ್ವಹಿಸಿ ಆಗಿದೆ. ಸೂರ್ಯೋದಯದ ನಂತರ ಪ್ರವಾದಿವರ್ಯರು(ಸ) ಹ. ಅಲೀಯ ವರನ್ನು(ರ) ಕರೆದು ಧ್ವಜವನ್ನು ಅವರ ಕೈಗೆ ನೀಡುತ್ತಾ ಈ ರೀತಿ ಹೇಳುತ್ತಾರೆ: "ಅಲೀ! ಅವರಿಗೆ ನಯವಾಗಿ ಇಸ್ಲಾಮ್ ಧರ್ಮದ ಕಡೆಗೆ ಆಹ್ವಾನ ನೀಡಿರಿ. ನಿಮ್ಮ ಪ್ರಯತ್ನದಿಂದ ಒಬ್ಬನಾದರೂ ಇಸ್ಲಾಮ್ ಸ್ವೀಕರಿಸಿದರೆ ಅದು ನಿಮ್ಮ ಪಾಲಿಗೆ ಕೆಂಪು ಒಂಟೆಗಳಿಗಿಂತಲೂ ಉತ್ತಮವಾಗಿದೆ."

ಪ್ರವಾದಿವರ್ಯರ(ಸ) ನೈಜ ಉದ್ದೇಶ ಯುದ್ಧವಾಗಿರಲಿಲ್ಲವೆಂಬುದು ಮೇಲಿನ ಆದೇಶದಿಂದ ವ್ಯಕ್ತವಾಗುತ್ತದೆ.

ಅಲೀ(ರ) ಕಮೂಶ್ ಕೋಟೆಯ ಬಳಿ ತಲುಪಿ ಧ್ವಜವನ್ನು ನಾಟುತ್ತಾರೆ. ಯಹೂದಿಗಳನ್ನು ಯುದ್ಧಕ್ಕೆ ಕರೆಯುತ್ತಾರೆ. ಮೊಟ್ಟ ಮೊದಲು ಯಹೂದಿಗಳ ಪ್ರಖ್ಯಾತ ಕುಸ್ತಿಪಟು ಮರ್ಹಬ್‌ನ ಸೋದರ ಹಾರಿಸ್ ಮುಂದೆ ಬರುತ್ತಾನೆ ಮತ್ತು ಕೆಲವೇ ಕ್ಷಣಗಳಲ್ಲಿ ಅಲೀಯವರಿಂದ(ರ) ಹತನಾಗುತ್ತಾನೆ. ಆ ಬಳಿಕ ಸ್ವತಃ ಮರ್ಹಬ್ ಮುಂದೆ ಬರುತ್ತಾನೆ. ಆತ ಯಹೂದಿಗಳ ಹೆಮ್ಮೆಯ ಯೋಧನಾಗಿದ್ದ. ಆತ ಬಂದ ಕೂಡಲೇ ಬಲವಾದ ದಾಳಿ ಮಾಡುತ್ತಾನೆ. ಹ. ಅಲೀಯವರ(ರ) ಕೈಯಿಂದ ಗುರಾಣೆಯು ಕೆಳಗೆ ಬೀಳುತ್ತದೆ. ಕೂಡಲೇ ಅವರು ಮುಂದುವರಿದು ಕೋಟೆಯ ಬಾಗಿಲನ್ನು ತುಂಡು ಮಾಡಿ ಅದನ್ನೇ ಗುರಾಣೆಯಾಗಿ ಹಿಡಿಯುತ್ತಾರೆ. ತಕ್ಬೀರ್ ಧ್ವನಿಯನ್ನು ಮೊಳಗಿಸುತ್ತಾ ಮಿಂಚಿನ ವೇಗದಲ್ಲಿ ಅವನ ಮೇಲೆ ಖಡ್ಗದಿಂದ ದಾಳಿ

ಮಾಡುತ್ತಾರೆ. ಅಲೀಯವರ(ರ) ಖಡ್ಗವು ಆತನ ಶಿರವನ್ನು ಭೇದಿಸಿ ಹಲ್ಲುಗಳ ತನಕ ತಲುಪುತ್ತದೆ. ಅವನು ಅಲೀಯವರ(ರ) ಕಾಲ ಬುಡಕ್ಕೆ ಬಿದ್ದು ಚಡಪಡಿಸುತ್ತಾನೆ. ಈ ದೃಶ್ಯವನ್ನು ಕಂಡು ಮರ್ಹಬ್‌ನ ಇನ್ನೊಬ್ಬ ಸೋದರ ಮುಂದೆ ಬರುತ್ತಾನೆ. ಆದರೆ ಝುಬೈರ್(ರ) ಅವರ ತಲವಾರಿನ ಒಂದೇ ಏಟಿಗೆ ಆತ ಶಾಶ್ವತವಾಗಿ ತಣ್ಣಗಾಗುತ್ತಾನೆ.

ಇಪ್ಪತ್ತು ದಿನಗಳ ನಿರಂತರ ಹೋರಾಟ ಮತ್ತು ಹ. ಅಲೀಯವರ(ರ) ಪರಾಕ್ರಮ ದಿಂದ ಕಮೂಶ್ ಕೋಟೆಯೂ ಮುಸ್ಲಿಮ್ ಸೇನೆಯ ವಶವಾಗುತ್ತದೆ. ಯಹೂದಿಗಳ ಸೊಂಟ ಮುರಿದಂತಾಗುತ್ತದೆ. ಅವರ ಅತ್ಯಂತ ಭದ್ರಕೋಟೆಯು ಮುಸ್ಲಿಮರ ವಶವಾಗಿದೆ. ಈಗ ಅವರಲ್ಲಿ ಆ ಸೇನೆಯನ್ನು ಎದುರಿಸುವ ಶಕ್ತಿ ಉಳಿದಿಲ್ಲ. ಆದ್ದರಿಂದ ಈಗ ಸಂಧಾನದ ಯತ್ನವನ್ನು ಆರಂಭಿಸುತ್ತಾರೆ. ಯಹೂದಿಗಳ 93 ಮಂದಿ ಹತರಾಗಿದ್ದಾರೆ. ಮುಸ್ಲಿಮ್ ಸೇನೆಯಲ್ಲಿ 15 ಮಂದಿ ಹುತಾತ್ಮರಾಗಿದ್ದಾರೆ.

ಸಂಧಾನ ಯತ್ನಗಳು ಸಫಲವಾಗುತ್ತವೆ. ಶರತ್ತುಗಳು ನಿಶ್ಚಯಿಸಲ್ಪಡುತ್ತವೆ:

1. ಯುದ್ಧ ಮಾಡದವರಿಗೆ ಪ್ರಾಣ ರಕ್ಷಣೆ ನೀಡಲಾಗುವುದು.

2. ಮಕ್ಕಳು ಮರಿಗಳನ್ನು ಬಿಟ್ಟು ಬಿಡಲಾಗುವುದು.

3. ಯಹೂದಿಗಳು ಖೈಬರ್ ನಗರವನ್ನು ಮತ್ತು ಅದರ ಪೂರ್ಣ ಪ್ರದೇಶವನ್ನು ತೊರೆದು ಬೇರೆಡೆಗೆ ವಲಸೆ ಹೋಗುವುದು.

4. ಯಹೂದಿಗಳು ವಲಸೆ ಹೋಗುವಾಗ ಉಟ್ಟ ಬಟ್ಟೆಯ ಹೊರತು ಏನನ್ನೂ ಕೊಂಡು ಹೋಗಕೂಡದು.

ಖೈಬರ್‌ನ ನಂತರ 'ಫಿದಕ್', 'ವಾದಿಯುಲ್ ಕುರಾ' ಮತ್ತು 'ತೀಮಾ'ದ ಯಹೂದಿ ಗಳೂ ಮುಸ್ಲಿಮರೊಂದಿಗೆ ಶಾಂತಿಯ ಒಪ್ಪಂದ ಮಾಡಿಕೊಳ್ಳುತ್ತಾರೆ. ಅವರ ಮನವಿಯ ಮೇರೆಗೆ ಈಗ ಮುಸ್ಲಿಮರ ವಶವಾಗಿರುವ ಅವರ ಕೃಷಿ ಭೂಮಿಯನ್ನು ಬೇಸಾಯಕ್ಕಾಗಿ ಅವರಿಗೇ ನೀಡಲಾಗುತ್ತದೆ. ಅದರ ಗೇಣಿಯನ್ನು ಸಂಗ್ರಹಿಸಲು ಅಬ್ದುಲ್ಲಾ ಬಿನ್ ರವಾಹರನ್ನು(ರ) ನೇಮಿಸಲಾಗುತ್ತದೆ. ಈ ರೀತಿ ಮದೀನಾದ ಪರಿಸರದಲ್ಲಿ ಯಹೂದಿಗಳ ಪ್ರಭಾವವು ಶಾಶ್ವತವಾಗಿ ಅಳಿಯುತ್ತದೆ.

## ಮೂತಾ ಯುದ್ಧ

ಹಿ. ಶ. 8ರ ಜುಮಾದಿಲ್ ಅವ್ವಲ್ ತಿಂಗಳು. ಮುಹಮ್ಮದ್‌ರ(ಸ) ದೂತರಾದ ಹಾರಿಸ್ ಬಿನ್ ಉಮೈರ್(ರ) ವೇಗವಾಗಿ ಬಲ್‌ಕಾದಿಂದ ಸಾಗುತ್ತಿದ್ದಾರೆ. ಬಸ್ರಾದ ಅಧಿಪತಿಗೆ ಪ್ರವಾದಿವರ್ಯರು(ಸ) ಬರೆದ ಒಂದು ಪತ್ರವು ಅವರ ಕೈಯಲ್ಲಿದೆ. ಅದನ್ನವರು ಆ ಅಧಿಪತಿಗೆ ಇಸ್ಲಾಮ್ ಧರ್ಮದ ಆಹ್ವಾನ ನೀಡಲಿಕ್ಕಾಗಿ ಬರೆದಿರುವರು. 'ಅತ್ನಾ' ಎಂಬಲ್ಲಿ ಅವರನ್ನು ಮೂತಾದ ಅಧಿಪತಿ ಶುರ್ಜೈಲ್ ಬಿನ್ ಅಮ್ರ್ ಗಸ್ಸಾನೀ ತಡೆದು

ಈ ರೀತಿ ಪ್ರಶ್ನಿಸುತ್ತಾನೆ: "ನೀವು ಯಾರು?"

ಹಾರಿಸ್: "ನಾನು ಮುಹಮ್ಮದ್(ಸ) ಅವರ ದೂತ."

ಶುರ್ಜೈಲ್ ಮುಹಮ್ಮದ್‌ರ(ಸ) ಹೆಸರು ಕೇಳುತ್ತಲೇ ಸಿಡಿಮಿಡಿಗೊಂಡು ಮುಖ ಸಿಂಡರಿಸುತ್ತಾ ಒರಟಾಗಿ ಕೇಳುತ್ತಾನೆ: "ಎಲ್ಲಿಗೆ ಹೋಗುತ್ತಿರುವಿ?"

ಹಾರಿಸ್: "ಬಸ್ರಾದ ಅಧಿಪತಿಯ ಬಳಿ ಹೋಗುತ್ತಿದ್ದೇನೆ. ಈ ಕಾಗದವು ಅವರ ಹೆಸರಿಗೇ ಇದೆ."

ಶುರ್ಜೈಲ್ ಮತ್ತೊಮ್ಮೆ ಅವರನ್ನು ದಿಟ್ಟಿಸಿ ನೋಡುತ್ತಾನೆ. ಸ್ವಲ್ಪ ಹೊತ್ತು ಯೋಚಿಸಿದ ಬಳಿಕ ತನ್ನ ಒಬ್ಬ ಸೇವಕನನ್ನುದ್ದೇಶಿಸಿ: "ಇವನನ್ನು ಕೊಂದು ಬಿಡಿ" ಎನ್ನುತ್ತಾನೆ.

ರಾಯಭಾರಿಯ ಹತ್ಯೆಯು ಅಂತಾರಾಷ್ಟ್ರೀಯ ನೀತಿಗೆ ವಿರುದ್ಧವಾದ ಅತ್ಯಂತ ಹೇಯ ಕೃತ್ಯವಾಗಿದೆ. ಪ್ರಯಾಣಿಕರನ್ನು ವಧಿಸುವುದು ಅತ್ಯಂತ ಕಠಿಣ ಹೃದಯದ ದ್ಯೋತಕವಾಗಿದೆ. ಆದರೆ ಶುರ್ಜೈಲ್‌ನಿಗೆ ಆ ನೀತಿ ಮತ್ತು ಶಿಷ್ಟಾಚಾರದ ಪರಿವೆ ಲವಲೇಶವೂ ಇರಲಿಲ್ಲ. ಆದ್ದರಿಂದ ಹಾರಿಸ್‌ರಿಗೆ(ರ) ಏನೂ ಹೇಳುವ ಅವಕಾಶ ನೀಡದೆಯೇ ಅವರನ್ನು ನಿರ್ದಯವಾಗಿ ವಧಿಸಿ ಬಿಡಲಾಗುತ್ತದೆ.

ಈ ಧೂರ್ತ ಕೃತ್ಯದ ಕುರಿತು ಪ್ರವಾದಿ ಮುಹಮ್ಮದ್‌ರಿಗೆ(ಸ) ತಿಳಿದಾಗ ಅವರು ಬಹಳ ನೊಂದುಕೊಳ್ಳುತ್ತಾರೆ. ಆ ಅಕ್ರಮಿಗೆ ಸೂಕ್ತ ಶಿಕ್ಷೆ ನೀಡಲು ಮತ್ತು ಅವನನ್ನು ಸದೆಬಡಿಯಲು ತಮ್ಮ ಸೇನೆಗೆ ಸಿದ್ಧವಾಗಲು ಆಜ್ಞಾಪಿಸುತ್ತಾರೆ. ಸ್ವಲ್ಪವೇ ಹೊತ್ತಿನಲ್ಲಿ ಮದೀನಾದಿಂದ ಮೂರು ಮೈಲಿ ದೂರ ಸಿರಿಯಾದ ಮಾರ್ಗದಲ್ಲಿರುವ 'ಜರ್ಫ್' ಎಂಬಲ್ಲಿ ಮುಸ್ಲಿಮ್ ಸೇನೆಯು ಒಟ್ಟು ಸೇರುತ್ತದೆ. ಪ್ರವಾದಿವರ್ಯರು(ಸ) ಆ ಸೇನೆಯನ್ನು ಖುದ್ದಾಗಿ ವೀಕ್ಷಿಸುತ್ತಾರೆ. ಯೋಧರಿಗೆ ಉಪದೇಶ ನೀಡುತ್ತಾ ಅವರು ಈ ರೀತಿ ಹೇಳುತ್ತಾರೆ:

"ನಾನು ನಿಮಗೆ 'ತಕ್ವಾ' (ದೇವಭಯ) ಮತ್ತು ನಿಮ್ಮ ಮುಸ್ಲಿಮ್ ಸೋದರರೊಂದಿಗೆ ಸದ್ವರ್ತನೆಯ ಉಪದೇಶ ಮಾಡುತ್ತೇನೆ. ಅಲ್ಲಾಹನ ಹೆಸರೆತ್ತಿ ಅಲ್ಲಾಹನ ಮಾರ್ಗದಲ್ಲಿ ಸತ್ಯನಿಷೇಧಿಗಳೊಂದಿಗೆ ಹೋರಾಡಿರಿ. ವಚನ ಭಂಗ ಮಾಡದಿರಿ. ಯಾವುದೇ ರೀತಿಯ ಅತಿಕ್ರಮವನ್ನೆಸಗಬೇಡಿರಿ. ಯಾವುದೇ ಮಗು, ಮಹಿಳೆ, ವೃದ್ಧ ಮತ್ತು ಆರಾಧನಾ ನಿರತ ಮಂದಿಯನ್ನು ಕೊಲ್ಲಬೇಡಿರಿ. ಖರ್ಜೂರದ ತೋಟಗಳ ಬಳಿ ಸುಳಿಯಬೇಡಿರಿ. ಯಾವುದೇ ವೃಕ್ಷವನ್ನು ಕಡಿಯಬೇಡಿರಿ. ಯಾವುದೇ ಮನೆಯನ್ನು ಕೆಡವಬೇಡಿರಿ."

ಮೂರು ಸಾವಿರ ಯೋಧರ ಆ ಸೇನೆಯು ಪ್ರವಾದಿವರ್ಯರ(ಸ) ಮಾತುಗಳನ್ನು ಕಿವಿ ನಿಮಿರಿಸಿ ಕೇಳುತ್ತಿತ್ತು. ಪ್ರವಾದಿ(ಸ) ಮುಂದುವರಿಯುತ್ತಾ ಹೀಗೆ ಆದೇಶಿಸುತ್ತಾರೆ:

"ಝೈದ್ ಬಿನ್ ಹಾರಿಸ್(ರ) ಈ ಸೇನೆಯ ದಂಡನಾಯಕರಾಗಿರುವರು. ಅವರು

ವಧಿಸಲ್ಪಟ್ಟರೆ ಜಾಫರ್ ಬಿನ್ ಅಬೂತಾಲಿಬ್(ರ) ನಾಯಕತ್ವವನ್ನು ವಹಿಸುವರು. ಅವರೂ ವಧಿಸಲ್ಪಟ್ಟರೆ ನಾಯಕತ್ವವನ್ನು ಅಬ್ದುಲ್ಲಾ ಬಿನ್ ರವಾಹರಿಗೆ(ರ) ವಹಿಸಲಾಗುವುದು. ಅವರೂ ವಧಿಸಲ್ಪಟ್ಟರೆ ಮುಸ್ಲಿಮರು ತಮ್ಮ ಪೈಕಿ ಯಾರನ್ನೇ ಆಗಲಿ ತಮ್ಮ ನಾಯಕನಾಗಿ ಆರಿಸಿಕೊಳ್ಳಬಹುದು."

ಇದು ಪ್ರವಾದಿವರ್ಯರ(ಸ) ಬಾಯಿಯಿಂದ ಹೊರಟ ಆ ಮೂವರು ನಾಯಕರ ಹುತಾತ್ಮತೆಯ ಭವಿಷ್ಯವಾಣಿಯಾಗಿತ್ತು. ಈ ಆದೇಶದೊಂದಿಗೆ ಪ್ರವಾದಿವರ್ಯರು(ಸ) ಬಿಳಿ ಧ್ವಜವನ್ನು ಝೈದ್ ಬಿನ್ ಹಾರಿಸ್‌ರಿಗೆ(ರ) ನೀಡುತ್ತಾರೆ.

ಸೇನೆಯು ತನ್ನ ಗುರಿಯತ್ತ ಹೊರಟಿದೆ. 'ಸನಿಯತುಲ್ ವದಾ' ಎಂಬಲ್ಲಿಯ ತನಕ ಪ್ರವಾದಿವರ್ಯರು(ಸ) ಸೇನೆಯ ಜೊತೆಗೆ ಹೋಗುತ್ತಾರೆ. ಅಲ್ಲಿ ಅವರನ್ನು ಬೀಳ್ಕೊಡುತ್ತಾ ಈ ರೀತಿ ಹೇಳುತ್ತಾರೆ:

"ನಾನು ನಿಮ್ಮ ಧರ್ಮ, ನಿಮ್ಮ ವಿಶ್ವಸ್ಥ ನಿಧಿ ಮತ್ತು ನಿಮ್ಮ ಕರ್ಮಗಳ ಫಲವನ್ನು ಅಲ್ಲಾಹನ ವಶಕ್ಕೆ ಒಪ್ಪಿಸಿ ನಿಮ್ಮನ್ನು ಅಲ್ಲಾಹನ ಮಾರ್ಗದ ಹೋರಾಟಕ್ಕಾಗಿ ಕಳುಹಿಸುತ್ತಿದ್ದೇನೆ." ಶುರ್ಹ್ಬೈಲ್‌ನಿಗೂ ಇಸ್ಲಾಮಿ ಸೇನೆಯು ಹೊರಟ ವಿಷಯ ತಿಳಿದು ಬಿಡುತ್ತದೆ. ಆತ ರೋಮನ್ ಸಾಮ್ರಾಜ್ಯದ ಕೈಸರ್ ಹರ್ಕಲ್‌ರ ಕಡೆಯಿಂದ ಮೂತಾದ ಅಧಿಪತಿಯಾಗಿದ್ದನು. ಆಗ ಕೈಸರನು ಒಂದು ಲಕ್ಷ ಸೈನಿಕರ ಜೊತೆ 'ಮುವಾಬ್' ಎಂಬಲ್ಲಿದ್ದಾನೆ. ಅವನ ಈ ಸೇನೆಯ ಜೊತೆ ಲಹಮ್, ಜದಾಮ್, ಬಲ್ಕೀನ್, ರಬ್ಲೀ ಇತ್ಯಾದಿ ಗೋತ್ರಗಳ ಒಂದು ಲಕ್ಷಕ್ಕೂ ಮಿಕ್ಕ ಯೋಧರು ಇದ್ದರು. 'ಮಆನ್' ಎಂಬಲ್ಲಿಗೆ ತಲಪಿದಾಗ ಮುಸ್ಲಿಮ್ ಸೇನೆಗೆ ಈ ಬೃಹತ್ ಸೇನೆಯ ಕುರಿತು ತಿಳಿಯುತ್ತದೆ. ಮುಂದಿನ ಕಾರ್ಯತಂತ್ರವನ್ನು ನಿರ್ಣಯಿಸಲಿಕ್ಕಾಗಿ ಸೇನೆಯು ಅಲ್ಲೇ ತಂಗುತ್ತದೆ. ಈ ಬೃಹತ್ ಸೇನೆಯ ಕುರಿತು ಪ್ರವಾದಿವರ್ಯರಿಗೆ(ಸ) ತಿಳಿಸಿ ಮುಂದಿನ ಕಾರ್ಯತಂತ್ರವನ್ನು ನಿರ್ಣಯಿಸಬೇಕೆಂದೂ ಇದರಿಂದ ಅವರು ಮತ್ತಷ್ಟು ಸೇನೆಯನ್ನು ರವಾನಿಸಬಹುದೆಂದೂ ಒಂದು ವಿಭಾಗದ ಜನರು ಹೇಳುತ್ತಾರೆ. ಎರಡು ದಿನಗಳ ದೀರ್ಘ ಸಮಾಲೋಚನೆಯ ಬಳಿಕ ಅಬ್ದುಲ್ಲಾ ಬಿನ್ ರವಾಹ(ರ) ನಿರ್ಣಾಯಕ ಸ್ವರದಲ್ಲಿ ಹೀಗೆ ಹೇಳುತ್ತಾರೆ: "ಸೋದರರರೇ, ನಾವಂತೂ ಹುತಾತ್ಮರಾಗುವ ಬಯಕೆಯೊಂದಿಗೆ ಹೊರಟಿದ್ದೇವೆ. ಈಗ ಆ ಬಯಕೆಯು ಈಡೇರುವ ಸಮಯ ಸನ್ನಿಹಿತವಾಗಿದೆ. ನಮ್ಮ ಗುರಿಯು ನಮ್ಮ ಮುಂದಿದೆ. ಹೀಗಿರುವಾಗ ಅದರೆಡೆಗೆ ಮುಂದುವರಿಯಲು ಸಂಕೋಚವೇಕೆ? ನಾವು ಸಂಖ್ಯಾಬಲ ಮತ್ತು ಶಕ್ತಿಯ ಆಧಾರದಲ್ಲಿ ಹೋರಾಡುವುದಿಲ್ಲ. ಜಯಗಳಿಸಿದರೆ ಖಂಡಿತ ನಮಗೇ ಒಳಿತಿದೆ. ಆದರೆ ಒಂದು ವೇಳೆ ಹುತಾತ್ಮರಾದರೂ ನಮ್ಮ ಮಟ್ಟಿಗೆ ಅದು ಅತ್ಯುತ್ತಮವಾಗಿದೆ."

ಯೋಧರು ಅವರ ಅಭಿಪ್ರಾಯವನ್ನು ಅನುಮೋದಿಸುತ್ತಾರೆ.

ಮೂತಾದ ಬಳಿ ಒಂದು ವಿಶಾಲ ಮೈದಾನದಲ್ಲಿ ಒಂದೆಡೆ ಒಂದು ಲಕ್ಷ ಯೋಧರ

ಶತ್ರು ಸೇನೆ, ಇನ್ನೊಂದೆಡೆ ಮುಸ್ಲಿಮ್ ಸೇನೆಯಿದೆ. ಶತ್ರುಸೇನೆಯ ಬಳಿ ಅತ್ಯುತ್ತಮ ಆಯುಧ ಮತ್ತು ಸವಾರಿಗಳಿವೆ. ಮುಸ್ಲಿಮ್ ಸೇನೆಯ ಸಂಖ್ಯೆಯು ಕೇವಲ ಮೂರು ಸಾವಿರವಿದ್ದು ಆಯುಧ ಮತ್ತು ಸವಾರಿಗಳೂ ಬಹಳ ಕಡಿಮೆಯಿದೆ.

ರಣಕಹಳೆ ಮೊಳಗುತ್ತದೆ. ಅರಬ್ ಸಂಪ್ರದಾಯದಂತೆ ಮೊತ್ತಮೊದಲು ಸೇನಾ ದಂಡನಾಯಕ ಝೈದ್ ಬಿನ್ ಹಾರಿಸ್(ರ) ಧ್ವಜವನ್ನೆತ್ತಿ ಮುಂದೆ ಬರುತ್ತಾರೆ. ವೀರಾವೇಶದಿಂದ ಹೋರಾಡುತ್ತಾರೆ. ನಾಲ್ಕೂ ಕಡೆಯಿಂದ ಅವರ ಮೇಲೆ ಭರ್ಜಿ ಮತ್ತು ಬಾಣಗಳ ಮಳೆಗೆರೆಯುತ್ತದೆ. ಅವರು ಅಲ್ಲಾಹನ ಮಾರ್ಗದಲ್ಲಿ ತಮ್ಮ ಪ್ರಾಣದ ಕಾಣಿಕೆಯರ್ಪಿಸಿ ಕೃತಾರ್ಥರಾಗುತ್ತಾರೆ.

ಅವರ ನಂತರ ಜಾಫರ್ ಬಿನ್ ಅಬೂತಾಲಿಬ್(ರ) ಧ್ವಜ ಹಿಡಿದುಕೊಂಡು ಮುಂದುವರಿಯುತ್ತಾರೆ. ಭೀಕರ ಯುದ್ಧದಲ್ಲಿ ಅವರ ಬಲ ತೋಳು ಕಡಿಯಲ್ಪಡುತ್ತದೆ. ಅವರು ಎಡ ಕೈಯಿಂದ ಧ್ವಜವನ್ನು ಹಿಡಿಯುತ್ತಾರೆ. ಅದೂ ಕಡಿಯಲ್ಪಟ್ಟಾಗ ಅದನ್ನು ಎದೆಗವಚಿಕೊಳ್ಳುತ್ತಾರೆ. ಅದನ್ನು ಕೊನೆಯುಸಿರಿನ ತನಕ ಉನ್ನತವಾಗಿಡುತ್ತಾರೆ. ಅಷ್ಟರಲ್ಲಿ ಅವರ ಸೊಂಟದ ಮೇಲೆ ತಲವಾರಿನ ಏಟು ಬೀಳುತ್ತದೆ. ಅದರಿಂದ ಅವರ ಶರೀರವು ಎರಡು ಭಾಗಗಳಾಗುತ್ತದೆ. ಮೈಮೇಲೆ ತೊಂಬತ್ತು ಗಾಯಗಳಾಗಿರುತ್ತವೆ.

ಪ್ರವಾದಿವರ್ಯರ(ಸ) ಆದೇಶದಂತೆ ಈಗ ಅಬ್ದುಲ್ಲಾ ಬಿನ್ ರವಾಹರ(ರ) ಸರದಿ. ಅವರು ಧ್ವಜವನ್ನೆತ್ತಿ ಮುನ್ನುಗ್ಗುತ್ತಾರೆ. ಅತ್ಯಂತ ಪರಾಕ್ರಮದಿಂದ ಹೋರಾಡುತ್ತಾರೆ. ಸ್ವಲ್ಪ ಹೊತ್ತಿನಲ್ಲೇ ಹುತಾತ್ಮರಾಗುತ್ತಾರೆ. ಹುತಾತ್ಮತೆಯು ಅವರ ಮನದ ಬಯಕೆಯಾಗಿತ್ತು. ಇಂದು ಆ ಅದಮ್ಯ ಬಯಕೆಯು ಈಡೇರಿದೆ.

ಮುಸ್ಲಿಮ್ ಸೇನೆಯ ಮೂರು ಮಂದಿ ಅತ್ಯಂತ ಪ್ರಮುಖ ಯೋಧರು ಹುತಾತ್ಮ ರಾಗಿದ್ದಾರೆ. ಅವರ ನಾಯಕತ್ವವು ಛಿದ್ರಗೊಂಡಿದೆ. ಅವರು ಸೋಲುತ್ತಿರುವ ಸೇನೆ ಎಂಬುದನ್ನು ಮನಗಂಡು ಹಿಂಜರಿಯುವ ಸ್ಥಿತಿಯಲ್ಲಿದ್ದಾರೆ. ಅವರಿಗೆ ಪರಸ್ಪರರ ಪರಿವೆಯೂ ಇಲ್ಲದಾಗಿದೆ. ಅಷ್ಟರಲ್ಲಿ ಸಾಬಿತ್ ಬಿನ್ ಅಕ್ರಮ್ ಅನ್ಸಾರೀಯವರು(ರ) ಇಸ್ಲಾಮಿ ಸೇನೆಯ ಧ್ವಜ ಎತ್ತಿಕೊಂಡು ಮುಂದೆ ಬರುತ್ತಾರೆ ಮತ್ತು ಸೇನೆಯನ್ನು ಕೂಗಿ ಕರೆದು ಈ ರೀತಿ ಹೇಳುತ್ತಾರೆ: "ಜನರೇ! ನನ್ನೆಡೆಗೆ ಬನ್ನಿ!"

ಗೊಂದಲದ ಈ ವಾತಾವರಣದಲ್ಲಿ ಈ ಧ್ವನಿ ಕೇಳಿ ಎಲ್ಲರೂ ಬಂದು ಅವರ ಸುತ್ತ ನೆರೆಯುತ್ತಾರೆ. ಆಗ ಅವರು: "ಮುಸ್ಲಿಮರೇ! ನೀವು ನಿಮ್ಮ ಪೈಕಿ ಯಾರನ್ನಾದರೂ ನಿಮ್ಮ ನಾಯಕರಾಗಿ ಆರಿಸಿಕೊಳ್ಳಿರಿ ಮತ್ತು ಅವನ ನೇತೃತ್ವದಲ್ಲಿ ಯುದ್ಧವನ್ನು ಮುಂದುವರಿಸಿರಿ."

"ನಾವು ನಿಮ್ಮನ್ನು ನಮ್ಮ ನಾಯಕರೆಂದು ಅಂಗೀಕರಿಸುತ್ತೇವೆ" ಎಂಬ ಸ್ವರವು ಕೆಲವು ಮಂದಿಯಿಂದ ಕೇಳಿ ಬರುತ್ತದೆ.

"ಬೇಡ-ಬೇಡ. ಖಾಲಿದ್ ಬಿನ್ ವಲೀದ್‌ರನ್ನು ನೀವು ನಿಮ್ಮ ನಾಯಕರಾಗಿ

ಆರಿಸಿಕೊಳ್ಳಿರೆಂಬುದೇ ನನ್ನ ಅಭಿಪ್ರಾಯ" ಎಂದು ಸಾಬಿತ್ ಬಿನ್ ಅಕ್ರಮ್ ಹೇಳುತ್ತಾರೆ.

ಖಾಲಿದ್ ಬಿನ್ ವಲೀದ್(ರ) ಕೇವಲ ಮೂರು ತಿಂಗಳ ಹಿಂದೆ ಇಸ್ಲಾಮ್ ಸ್ವೀಕರಿಸಿದ್ದರು. ಮುಸ್ಲಿಮ್ ಸೇನೆಯ ಜತೆಗೂಡಿ ಅವರು ಭಾಗವಹಿಸಿದ ಪ್ರಥಮ ಯುದ್ಧವಿದು. ಆದರೂ ಜನರಿಗೆ ಅವರ ಯುದ್ಧ ಕೌಶಲ್ಯದ ಕುರಿತು ಚೆನ್ನಾಗಿ ತಿಳಿದಿತ್ತು. ಆದ್ದರಿಂದ ಎಲ್ಲರೂ ಸರ್ವಾನುಮತದಿಂದ ಅವರನ್ನು ತಮ್ಮ ನಾಯಕರಾಗಿ ಆರಿಸುತ್ತಾರೆ. ಖಾಲಿದ್ ಇಸ್ಲಾಮೀ ಸೇನೆಯ ಧ್ವಜ ವಹಿಸಿಕೊಂಡು ಸೇನೆಯನ್ನು ಮರುಸಂಘಟಿಸುತ್ತಾರೆ. ಅನಂತರ ನಡೆದ ಯುದ್ಧದಲ್ಲಿ ಶತ್ರುಗಳು ದಿಗಿಲುಗೊಳ್ಳುತ್ತಾರೆ. ಖಾಲಿದ್(ರ) ಅವರ ಆದೇಶದಂತೆ ಒಂದೊಂದು ಸೇನಾ ತುಕಡಿಯು ಸ್ವಲ್ಪಸ್ವಲ್ಪ ಸಮಯದ ಅಂತರದಲ್ಲಿ 'ಅಲ್ಲಾಹು ಅಕ್ಬರ್' ಎಂಬ ಘೋಷಣೆಯೊಂದಿಗೆ ರಣಾಂಗಣವನ್ನು ಪ್ರವೇಶಿಸಿ ಶತ್ರುಗಳೊಂದಿಗೆ ಸೆಣಸುತ್ತದೆ. ಈ ಹೋರಾಟಗಳು ನಿರಂತರ ಸಾಗುತ್ತಿರುವುದನ್ನು ಕಂಡು ಶತ್ರು ಸೇನೆಯು ದಂಗಾಗುತ್ತದೆ ಮತ್ತು ಇದು ಕೊನೆಯಿಲ್ಲದ ಸರಣಿಯೆಂದು ಭಾವಿಸಿ ಭಯಭೀತಗೊಳ್ಳುತ್ತದೆ. ಸ್ವತಃ ಖಾಲಿದ್‌ರವರು(ರ) ಶತ್ರು ಸೇನೆಯ ಒಳ ನುಗ್ಗಿ ವೀರಾವೇಶದಿಂದ ಹೋರಾಡುತ್ತಾರೆ. ತನ್ಮಧ್ಯೆ ಅವರ ಒಂಭತ್ತು ಖಡ್ಗಗಳು ಮುರಿಯುತ್ತವೆ. ಶತ್ರುಗಳು ಹೆದರಿ ಓಟಕ್ಕೀಳುತ್ತಾರೆ. ಅವರಿಗಾದ ಸಾವು ನೋವುಗಳಿಗೆ ಲೆಕ್ಕ ಮಿತಿಯಿಲ್ಲ.

ಯುದ್ಧವು ಒಂದು ನಿರ್ಣಾಯಕ ಹಂತಕ್ಕೆ ತಲಪುವುದಕ್ಕೆ ಮುಂಚೆಯೇ ಶತ್ರುಗಳು ಹತಾಶರಾಗಿ ಮರಳುತ್ತಾರೆ. ಅವರು ತಮ್ಮ ಪ್ರದೇಶದಲ್ಲಿಯೇ ಇದ್ದರೂ ನೂರು ಮೈಲಿ ದೂರದಿಂದ ಬಂದಿರುವ ಮುಸ್ಲಿಮ್ ಸೇನೆಯನ್ನು ಎದುರಿಸುವ ತ್ರಾಣ ಅವರಲ್ಲಿ ಉಳಿದಿರುವುದಿಲ್ಲ.

ಮುಸ್ಲಿಮ್ ಸೇನೆಯು ಮೂತಾದಿಂದ ಇನ್ನೂ ಮದೀನಾಕ್ಕೆ ಮರಳಿರಲಿಲ್ಲ. ಮುಹಮ್ಮದ್(ಸ) ಜುಮಾ(ಶುಕ್ರವಾರ)ದ ಪ್ರವಚನಕ್ಕಾಗಿ ವೇದಿಕೆ ಏರಿದ್ದಾರೆ. ಅವರ ಕಣ್ಣುಗಳು ತೇವಗೊಂಡಿವೆ. ಅವರು ಜನರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ:

"ಜನರೇ! ನಿಮಗೆ ಶುಭವಾರ್ತೆ ಇದೆ. ನಿಮಗೆ ಶುಭವಾರ್ತೆ ಇದೆ. ನಾನು ನಿಮಗೆ ಆ ಯುದ್ಧನಿರತ ಯೋಧರ ವೃತ್ತಾಂತ ಹೇಳುತ್ತೇನೆ. ಸೇನೆಯು ಇಲ್ಲಿಂದ ಹೊರಟು ಶತ್ರುಗಳನ್ನು ಎದುರಿಸಿತು. ಝೈದ್ ಬಿನ್ ಹಾರಿಸ್(ರ) ಹುತಾತ್ಮರಾದರು. ಸಹಾಬಿಗಳು ಅವರಿಗಾಗಿ ಕ್ಷಮೆ ಮತ್ತು ಮೋಕ್ಷದ ಪ್ರಾರ್ಥನೆ ಮಾಡಿದರು. ತರುವಾಯ ಜಾಫರ್(ರ) ಇಸ್ಲಾಮೀ ಸೇನೆಯ ಧ್ವಜವನ್ನು ಎತ್ತಿಕೊಂಡರು. ಸ್ಥೈರ್ಯದಿಂದ ಹೋರಾಡಿದರು. ಕೊನೆಗೆ ಅವರೂ ಹುತಾತ್ಮರಾದರು. ಅವರಿಗೂ ಸಹಾಬಿಗಳು ಕ್ಷಮೆ ಮತ್ತು ಮೋಕ್ಷದ ಪ್ರಾರ್ಥನೆ ಮಾಡಿದರು. ಅಬ್ದುಲ್ಲಾ ಬಿನ್ ರವಾಹ್‌ರ ನಂತರ ಖಾಲಿದ್ ಬಿನ್ ವಲೀದ್(ರ) ಧ್ವಜವನ್ನು ಎತ್ತಿ ಕೊಂಡರು. ಅವರು ನನ್ನಿಂದ ನೇಮಕಗೊಂಡ ದಂಡನಾಯಕರಲ್ಲಿ ಸೇರಿರಲಿಲ್ಲ. ಸೇನೆಯೇ ಅವರನ್ನು ಆರಿಸಿತ್ತು. ಅವರು ಅಲ್ಲಾಹನ ಖಡ್ಗಗಳ ಪೈಕಿ ಒಂದು

ಖಡ್ಗವಾಗಿದ್ದರು. ಅವರು ರಣಾಂಗಣದಿಂದ ವಿಜಯಿಯಾಗಿ ಮರಳಿದರು."

ಈ ರೀತಿ ಮುಹಮ್ಮದ್‌ರ(ಸ) ಬಾಯಿಯಿಂದ ಖಾಲಿದ್‌ರಿಗೆ(ರ) 'ಅಲ್ಲಾಹನ ಖಡ್ಗ' ಎಂಬ ಬಿರುದು ಲಭಿಸಿತು. ಮದೀನಾದಲ್ಲಿದ್ದುಕೊಂಡೇ ಪ್ರವಾದಿ(ಸ) ಮೂತಾದ ರಣರಂಗದ ಪೂರ್ಣ ವೃತ್ತಾಂತವನ್ನು ತಿಳಿಸಿದರು. ಆಗ ಮುಸ್ಲಿಮ್ ಸೇನೆಯು ಮೂತಾ ದಲ್ಲಿಯೇ ಇದ್ದು ಅಲ್ಲಿಂದ ಯಾವನೇ ಹರಿಕಾರನೂ ಮದೀನಾಕ್ಕೆ ಬಂದಿರಲಿಲ್ಲ. ಈ ಸುದ್ದಿಯನ್ನು ಮುಹಮ್ಮದ್(ಸ) ಅವರ ಪ್ರಭುವೇ ಅವರಿಗೆ ತಲುಪಿಸಿದ್ದರೆಂಬುದು ವ್ಯಕ್ತ.

ಪ್ರವಾದಿವರ್ಯರಿಗೆ(ಸ) ಎಲ್ಲ ಹುತಾತ್ಮರ ಬಗ್ಗೆ ದುಃಖವಿತ್ತಾದರೂ ಝೈದ್ ಮತ್ತು ಜಾಫರ್‌ರ(ರ) ಬಗ್ಗೆ ಮುಹಮ್ಮದ್(ಸ) ಬಹಳ ದುಃಖಿತರಾಗಿದ್ದರು. ಇವರಿಬ್ಬರೂ ಪ್ರವಾದಿವರ್ಯರ(ಸ) ಅತ್ಯಂತ ಆಪ್ತರಾಗಿದ್ದರು.

## ಕುರೈಶರ ವಚನ ಭಂಗ

ಹಿ. ಶ. 8ರ ಶಅಬಾನ್ ತಿಂಗಳು. ಮುಹಮ್ಮದ್(ಸ) ಮಸ್ಜಿದುನ್ನಬವಿಯಲ್ಲಿ ಆಸೀನ ರಾಗಿರುವರು. ಸಹಾಬಿಗಳ ಒಂದು ತಂಡ ಅವರ ಬಳಿ ಇದೆ. ಪ್ರವಾದಿವರ್ಯರು(ಸ) ಅವರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ನನ್ನ ಮತ್ತು ಜನರ ಉಪಮೆಯು ಓರ್ವ ಅಗ್ನಿ ಹೊತ್ತಿಸುವವನಂತಿದೆ. ಬೆಂಕಿಯು ಪ್ರಜ್ವಲಿಸಿ ಉರಿಯ ತೊಡಗಿದಾಗ ಪತಂಗಗಳು ಅದರ ಮೇಲೆ ಮುಗಿ ಬೀಳುತ್ತವೆ. ಆತ ಪತಂಗಗಳನ್ನು ಅಗ್ನಿಗೆ ಬೀಳುವುದರಿಂದ ತಡೆಯ ಬಯಸುತ್ತಾನೆ. ಆದರೆ ಅವು ಅವನ ಅಂಕಿತಕ್ಕೆ ಸಿಗುವುದಿಲ್ಲ. ಬೆಂಕಿಗೆ ಬಿದ್ದು ಸಾಯುತ್ತವೆ. ಹಾಗೆಯೇ ನಾನು ನಿಮ್ಮನ್ನು ಹಿಡಿದು ಬೆಂಕಿಯಿಂದ ರಕ್ಷಿಸಬಯಸುತ್ತೇನೆ. ಆದರೆ ಜನರು ಅದರಲ್ಲೇ ಬೀಳುತ್ತಿರುವರು."

ಇಷ್ಟು ಹೇಳಿ ಮುಗಿಸುವಷ್ಟರಲ್ಲಿ ಖುಝಾಅ ಗೋತ್ರದ ನಾಯಕ ಅಮ್ರ್ ಬಿನ್ ಸಾಲಿಮ್ ಅಲ್ಲಿಗೆ ಬರುತ್ತಾನೆ. ಹುದೈಬಿಯಾ ಸಂಧಿಯ ವೇಳೆ ಖುಝಾಅ ಗೋತ್ರವು ಮುಸ್ಲಿಮರ ಜತೆ ಮೈತ್ರಿ ಮಾಡಿಕೊಂಡು ಅವರ ಬೆಂಬಲಿಗರಾಗಿ ಮಾರ್ಪಟ್ಟಿದ್ದರು. ಅವರ ಹಳೆಯ ಶತ್ರು ಬಕರ್ ಗೋತ್ರದವರು ಕುರೈಶರೊಂದಿಗೆ ಮೈತ್ರಿ ಮಾಡಿಕೊಂಡು ಅವರ ಬೆಂಬಲಕ್ಕೆ ನಿಂತಿದ್ದರು. ಅಮ್ರ್‌ನ ಮುಖವು ಖಿನ್ನವಾಗಿತ್ತು. ಅವನ ಬಟ್ಟೆಯೂ ಕೊಳಕಾಗಿ ಆತ ಬಹಳ ಚಿಂತಿತನಾಗಿರುವಂತೆ ಕಾಣಿಸುತ್ತಿದ್ದಾನೆ. ಅಮ್ರ್‌ನ ಜೊತೆ ಬಂದಿದ್ದ 25 ಮಂದಿ ಒಂಟೆ ಸವಾರರು ಮಸ್ಜಿದುನ್ನಬವಿಯ ಹೊರಗೆ ನಿಂತಿದ್ದರು. ಅಮ್ರ್ ಪ್ರವಾದಿವರ್ಯರನ್ನುದ್ದೇಶಿಸಿ ಹೀಗೆ ಹೇಳುತ್ತಾನೆ:

"ಪ್ರವಾದಿವರ್ಯರೇ! ಹುದೈಬಿಯಾ ಸಂಧಿಗೆ 18 ತಿಂಗಳು ಸಂದಿವೆ. ಈ ತನಕ ನಾವು ಪೂರ್ಣ ಸುರಕ್ಷಿತರಾಗಿರುವೆವು. ಆದರೆ ಈಗ ಕುರೈಶರ ಕುಮ್ಮಕ್ಕಿನಿಂದ ಬಕರ್ ಗೋತ್ರದ ನೌಫಲ್ ಬಿನ್ ಮುಆವಿಯ ಮತ್ತು ಅವನ ಅನೇಕ ಸಂಗಾತಿಗಳು ನಮ್ಮ ಮೇಲೆ ನಿಶಾಕ್ರಮಣ ಮಾಡಿರುವರು. ನಮ್ಮ ಅನೇಕ ಮಂದಿ ಹತರಾಗಿದ್ದಾರೆ. ನಮ್ಮಲ್ಲಿ ಅನೇಕರು

ಓಡಿ ಹೋಗಿ ಹರಮ್‌ನಲ್ಲಿ ಆಶ್ರಯ ಪಡೆದರು. ಅಲ್ಲಿ ಯಾರೂ ಯಾರ ಮೇಲೆಯೂ ಕೈ ಎತ್ತುವಂತಿರಲಿಲ್ಲ. ಆಕ್ರಮಣಕಾರಿಗಳು ಕೈ ಎಳೆದುಕೊಂಡರು. ಆಗ ನೌಫಲ್ ಅವರನ್ನು ದ್ವೇಶಿಸಿ ಹೀಗೆ ಹೇಳಿದ: "ನಿಮಗೆ ಹರಮ್‌ನೊಳಗೆ ಕಳ್ಳತನ ಮಾಡಲು ಸಂಕೋಚವಿಲ್ಲ. ಹಾಗಿರುವಾಗ ಯುದ್ಧಕ್ಕೆ ಯಾಕೆ ಹಿಂಜರಿಯುತ್ತಿರುವಿರಿ. ಇನ್ನು ಇಂತಹ ಅವಕಾಶ ಲಭಿಸಲಾರದು." ಅವನ ಈ ಮಾತು ಕೇಳಿ ಅವರು ನಮ್ಮ ಮೇಲೆ ಪುನಃ ಧಾಳಿ ಮಾಡಿದರು. ನಮ್ಮ ಜನರು ಮಕ್ಕಾ ತಲಪಿ ಬುದೈಲ್ ಬಿನ್ ವರಕಾ ಮತ್ತು ರಾಫಿಅ್‌ನ ಮನೆಗಳಲ್ಲಿ ಆಶ್ರಯ ಪಡೆಯಬೇಕಾಯಿತು. ಈ ಆಕ್ರಮಣಕಾರಿಗಳಲ್ಲಿ ಇಕ್ರಿಮ ಬಿನ್ ಅಬೂಜಹಲ್, ಸಫ್ವಾನ್ ಬಿನ್ ಉಮಯ್ಯ ಮತ್ತು ಸುಹೈಲ್ ಬಿನ್ ಅಮ್ರ್ ಕೂಡಾ ಸೇರಿದ್ದರು."

ಕುರೈಶರ ವಚನಭಂಗದ ಈ ವೃತ್ತಾಂತವನ್ನಾಲಿಸಿ ಪ್ರವಾದಿವರ್ಯರಿಗೆ(ಸ) ಬಹಳ ವಿಷಾದವಾಗುತ್ತದೆ. ಪರಿಸ್ಥಿತಿಯನ್ನು ಸುಧಾರಿಸುವ ಸಲುವಾಗಿ ಅವರು ತಮ್ಮ ಓರ್ವ ದೂತರನ್ನು ಮಕ್ಕಾದ ಕುರೈಶರ ಬಳಿಗೆ ಕಳುಹಿಸುತ್ತಾರೆ. ಈ ಕೆಳಗಿನ ಮೂರು ಶರತ್ತುಗಳ ಪೈಕಿ ಯಾವುದಾದಾರೂ ಒಂದನ್ನು ಕುರೈಶರು ಅಂಗೀಕರಿಸಬೇಕೆಂದು ಅವರಿಗೆ ಹೇಳಿ ಕಳುಹಿಸುತ್ತಾರೆ:

1. ಹತ್ಯೆಗೀಡಾದವರಿಗೆ ಸೂಕ್ತ ಪರಿಹಾರಧನ ನೀಡಬೇಕು.
2. ಕುರೈಶರು ಬಕರ್ ಗೋತ್ರದವರಿಂದ ಬೆಂಬಲ ಹಿಂತೆಗೆದುಕೊಳ್ಳಬೇಕು.
3. ಹುದೈಬಿಯಾ ಸಂಧಿಯು ಕೊನೆಗೊಂಡಿದೆ ಎಂದು ಸ್ಪಷ್ಟವಾಗಿ ಘೋಷಿಸಬೇಕು.

ಮುಹಮ್ಮದ್(ಸ) ಅವರ ದೂತರು ಮಕ್ಕಾ ತಲುಪಿ ಈ ಶರತ್ತುಗಳನ್ನು ಕುರೈಶ್ ಸರದಾರರ ಮುಂದಿಟ್ಟಾಗ ಅವರ ನಾಯಕ ಕರ್ತಬ ಬಿನ್ ಅಮ್ರ್ ಅತ್ಯಂತ ದರ್ಪದಿಂದ ಹೀಗೆ ಹೇಳುತ್ತಾನೆ: "ನಮಗೆ ಮೂರನೆಯ ರೂಪವೇ ಮೆಚ್ಚುಗೆಯಾಗಿದೆ ಎಂದು ಮುಹಮ್ಮದ್‌ರಿಗೆ(ಸ) ಹೇಳಿಬಿಡಿರಿ."

ತನ್ಮೂಲಕ ಕುರೈಶರು ಹುದೈಬಿಯಾ ಸಂಧಿಯನ್ನು ಮುರಿಯುವ ಘೋಷಣೆ ಮಾಡುತ್ತಾರೆ.

## ಸಂಧಿಯ ನವೀಕರಣದ ವಿಫಲ ಯತ್ನ

ದಾರುನ್ನದ್‌ವಾದಲ್ಲಿ ಕುರೈಶರ ಒಂದು ಸಭೆಯು ಅನೇಕ ಘಂಟೆಗಳಿಂದ ಜಾರಿಯಲ್ಲಿದೆ. ಅಬೂ ಸುಫ್‌ಯಾನ್ ಹೇಳುತ್ತಾನೆ: "ಕುರೈಶ್ ಜನರೇ! ನೀವು ಹುದೈಬಿಯಾ ಸಂಧಿಯನ್ನು ತಿರಸ್ಕರಿಸುವಾಗ ಅದರ ಭಾವೀ ಪರಿಣಾಮದ ಕುರಿತು ಚಿಂತಿಸಲೇ ಇಲ್ಲ. ಆದರೆ ಈಗ ನಿಧಾನವಾಗಿ ನಿಮ್ಮ ಕಣ್ಣು ತೆರೆಯುತ್ತಿದೆ. ಸದ್ಯೋ ಭವಿಷ್ಯದಲ್ಲಿ ಸಂಭವಿಸಲಿರುವ ಆ ಭಯಾನಕ ಘಟನೆಗಳನ್ನು ಈಗ ನೀವು ಕಾಣಲಾರಂಭಿಸಿ ರುವಿರಿ. ಕುರೈಝಾ ಗೋತ್ರ ಹೇಗೆ ನಿರ್ನಾಮವಾಯಿತೆಂಬುದನ್ನು ನಾವು ಕಂಡಿದ್ದೇವೆ. ನದೀರ್ ಗೋತ್ರವು ನಮ್ಮ ಕಣ್ಣ ಮುಂದೆಯೇ ಸರ್ವನಾಶಗೊಂಡಿದೆ. ಖೈಬರ್‌ನ ಹಚ್ಚಹಸುರಾದ ತೋಟಗಳು ಮುಸ್ಲಿಮರ

ವಶಕ್ಕೆ ಹೋಗಿವೆ. ಹಿಜಾಝ್‌ನಲ್ಲಿ ಯಹೂದಿಗಳು ಶಾಶ್ವತವಾಗಿ ನಿಂದ್ಯರೂ ನಿಕೃಷ್ಟರೂ ಆಗಿ ಹೋಗಿದ್ದಾರೆ. ಮೂರು ಸಾವಿರದಷ್ಟು ಬಲಹೀನ ಮುಸ್ಲಿಮ್ ಸೇನೆಯು ರೋಮನರ ಒಂದು ಲಕ್ಷದ ಬಲಿಷ್ಠ ಸೇನೆಯನ್ನು ಸದೆಬಡಿದಿರುವುದು ಎಷ್ಟೊಂದು ಆಶ್ಚರ್ಯದ ಸಂಗತಿ! ಈಗಲೂ ನೀವು ಮುಸ್ಲಿಮರೊಂದಿಗೆ ಯುದ್ಧ ಮಾಡಿ ಜಯಿಸಬಹುದೆಂಬ ಭ್ರಮೆಯಲ್ಲಿದ್ದೀರಾ?"

"ಹೌದು, ನೀವು ಹೇಳುತ್ತಿರುವುದು ನಿಜ" ಎನ್ನುವ ಅನೇಕ ಸ್ವರಗಳು ಒಮ್ಮೆಲೇ ಕೇಳಿ ಬರುತ್ತವೆ.

"ನೀವು ನಮಗೆ ಪರಿಸ್ಥಿತಿಯನ್ನು ಚೆನ್ನಾಗಿ ಮನಗಾಣಿಸಿರುವಿರಿ. ಈಗ ನಾವು ಮುಂದೆ ಏನು ಮಾಡಬೇಕೆಂಬುದನ್ನೂ ನೀವೇ ತಿಳಿಸಿ. ನಮಗೆ ಶಾಂತಿ ಬೇಕು." ಓರ್ವ ಗಂಭೀರವದನನಾದ ಕುರೈಶನು ಹೇಳುತ್ತಾನೆ.

ಅಬೂ ಸುಫ್‌ಯಾನ್: "ನೀವು ಹೇಳಿದರೆ ನಾನು ಮದೀನಾಕ್ಕೆ ಹೋಗಿ ಹುದೈಬಿಯಾ ಸಂಧಿಯ ನವೀಕರಣಕ್ಕೆ ಪ್ರಯತ್ನಿಸುತ್ತೇನೆ. ನನ್ನ ಪ್ರಯತ್ನ ಸಫಲವಾದರೆ ಸ್ವಲ್ಪ ಸಮಯದ ಮಟ್ಟಿಗಾದರೂ ಹತಾಶೆ ಮತ್ತು ಭಯದ ಕಾರ್ಮೋಡಗಳು ಸರಿಯಬಹುದು."

"ನಮಗೆ ನಿಮ್ಮ ಸಲಹೆಯ ಬಗ್ಗೆ ಒಪ್ಪಿಗೆ ಇದೆ. ನೀವು ನಾಳೆಯೇ ಹೊರಡಿರಿ." ಕೆಲವು ಸ್ವರಗಳು ಏಳುತ್ತವೆ.

ಮದೀನಾದಲ್ಲಿ ಪ್ರವಾದಿ ಪತ್ನಿ ಹ. ಉಮ್ಮು ಹಬೀಬಾರ(ರ) ಮನೆಬಾಗಿಲಲ್ಲಿ ತೂಗು ಹಾಕಿರುವ ಪರದೆ ಸರಿಯುತ್ತದೆ. ತಮ್ಮ ತಂದೆ ಅಬೂ ಸುಫ್‌ಯಾನ್ ಈ ರೀತಿ ಅನಿರೀಕ್ಷಿತವಾಗಿ ಮನೆಗೆ ಬಂದುದನ್ನು ಕಂಡು ಅವರು ಆಶ್ಚರ್ಯಚಕಿತರಾಗುತ್ತಾರೆ. 'ತಂದೆಯವರು-ಇಲ್ಲಿ!' ಎಂದು ಅವರು ಮನದೊಳಗೇ ಅಂದುಕೊಳ್ಳುತ್ತಾರೆ.

ಅಬೂ ಸುಫ್‌ಯಾನ್ ಒಳಗೆ ಬಂದು ಪ್ರವಾದಿವರ್ಯರ(ಸ) ಹಾಸಿಗೆಯಲ್ಲಿ ಕುಳಿತುಕೊಳ್ಳಬಯಸುತ್ತಾರೆ. ಆದರೆ ಪ್ರವಾದಿ ಪತ್ನಿ ಉಮ್ಮು ಹಬೀಬಾ ಮಿಂಚಿನ ವೇಗದಲ್ಲಿ ಮುಂದೆ ಬಂದು ಆ ಹಾಸಿಗೆಯನ್ನು ಮಡಚಿಡುತ್ತಾರೆ. ತಮ್ಮ ಪ್ರಿಯ ಪುತ್ರಿಯ ಈ ವರ್ತನೆಯನ್ನು ಕಂಡು ಅಬೂ ಸುಫ್‌ಯಾನ್‌ಗೆ ಎಲ್ಲಿಲ್ಲದ ಆಶ್ಚರ್ಯವಾಗುತ್ತದೆ.

"ಮಗಳೇ! ಏನಿದು. ನೀನು ನನಗಾಗಿ ಹಾಸಿಗೆಯನ್ನು ಮಡಚಿದೆಯಾ ಅಥವಾ ನನ್ನಿಂದ ಹಾಸಿಗೆಯನ್ನು ಮಡಚಿದೆಯಾ?" ಎಂದು ಪ್ರಶ್ನಿಸುತ್ತಾರೆ.

"ಇದು ಪ್ರವಾದಿವರ್ಯರ(ಸ) ಪಾವನ ಹಾಸಿಗೆ. ನೀವು ಬಹುದೇವಾರಾಧಕರು ಮತ್ತು ಮಲಿನ ವ್ಯಕ್ತಿ. ನೀವು ಈ ಪಾವನ ಹಾಸಿಗೆಯಲ್ಲಿ ಕುಳಿತಿರುವುದು ನನಗಿಷ್ಟವಿಲ್ಲ" ಉಮ್ಮು ಹಬೀಬಾ(ರ) ಹೇಳುತ್ತಾರೆ.

ಅಬೂ ಸುಫ್‌ಯಾನ್: "ಅಲ್ಲಾಹನಾಣೆ! ನನ್ನನ್ನು ಅಗಲಿ ನೀನು ಕೆಟ್ಟವಳಾಗಿರುವಿ."

ಉಮ್ಮು ಹಬೀಬಾ(ರ): "ಹಾಗಲ್ಲ. ಅಲ್ಲಾಹನು ನನಗೆ ಇಸ್ಲಾಮಿನ ಹಾದಿಯನ್ನು ತೋರಿಸಿರುವನು. ನೀವು ಇನ್ನೂ ಕಲ್ಲನ್ನು ಪೂಜಿಸುತ್ತಿರುವಿರಿ."

ಅಬೂ ಸುಫ್ಯಾನ್(ಕೋಪಗೊಂಡು): "ನಾನು ನಿನ್ನ ಮಾತು ಕೇಳಿ ನನ್ನ ಪೂರ್ವಜರ ಧರ್ಮ ತೊರೆದು ಮುಹಮ್ಮದ್‌ರ(ಸ) ಧರ್ಮವನ್ನು ಸ್ವೀಕರಿಸಬೇಕೆ?"

ಮುಹಮ್ಮದ್(ಸ) ಮುಸ್ಜಿದುನ್ನಬವಿಯಲ್ಲಿ ಕುಳಿತಿರುವರು. ಉಡುಗೊರೆಯಾಗಿ ಲಭಿಸಿದ ಒಂದು ಶಾಲನ್ನು ಮೈಮೇಲೆ ಹಾಕಿಕೊಂಡಿರುವರು. ಅಷ್ಟರಲ್ಲಿ ಒಬ್ಬ ವ್ಯಕ್ತಿ ಬಂದು ಹೀಗೆ ಹೇಳುತ್ತಾರೆ: "ಸುಬ್‌ಹಾನಲ್ಲಾಹ್! (ಅಲ್ಲಾಹನು ಪರಮ ಪಾವನನು) ಎಷ್ಟೊಂದು ಒಳ್ಳೆಯ ಶಾಲು." ಪ್ರವಾದಿವರ್ಯರು(ಸ) ಆ ಕೂಡಲೇ ಶಾಲನ್ನು ತೆಗೆದು ಆ ವ್ಯಕ್ತಿಗೆ ನೀಡುತ್ತಾರೆ. ಅವರು ಅದನ್ನು ಪಡೆದುಕೊಂಡು ಹೊರಟು ಹೋಗುತ್ತಾರೆ. ಜನರು ಅವರನ್ನು ಆಕ್ಷೇಪಿಸುತ್ತಾರೆ, "ಪ್ರವಾದಿವರ್ಯರು(ಸ) ಯಾರ ಬೇಡಿಕೆಯನ್ನೂ ತಿರಸ್ಕರಿಸುವುದಿಲ್ಲವೆಂಬುದು ನಿಮಗೆ ತಿಳಿದಿಲ್ಲವೇ? ಅವರಿಗೆ ಈ ಶಾಲಿನ ಅಗತ್ಯವಿದೆ ಎಂಬುದೂ ನಿಮಗೆ ತಿಳಿದಿಲ್ಲವೇ?" ಇದನ್ನು ಕೇಳಿ ಆ ವ್ಯಕ್ತಿ ಹೀಗೆ ಹೇಳುತ್ತಾರೆ: "ಹೌದು, ಇದೆಲ್ಲವನ್ನೂ ಅರಿತೇ ನಾನು ಅದನ್ನು ಪಡೆದಿರುವೆನು. ನಾನು ಇದನ್ನು ನನ್ನ ಶವವಸ್ತ್ರವಾಗಿ ಉಪಯೋಗಿಸುವೆನು. ಇದು ನನ್ನ ಪಾಲಿಗೆ ಮಂಗಳದಾಯಕವಾಗಲಿದೆ."

ಅಷ್ಟರಲ್ಲಿ ಅಬೂ ಸುಫ್ಯಾನ್ ಮಸೀದಿಯೊಳಗೆ ಪ್ರವೇಶಿಸಿ ನೇರವಾಗಿ ಪ್ರವಾದಿವರ್ಯರ(ಸ) ಬಳಿ ತಲಪುತ್ತಾನೆ. ಪ್ರವಾದಿವರ್ಯರ(ಸ) ಜೊತೆಗೆ ಸಹಾಬಿಗಳ ಒಂದು ತಂಡವೂ ಇದೆ. ಅಬೂ ಸುಫ್ಯಾನ್‌ನನ್ನು ಕಂಡು ಅವರು ಕೆರಳುತ್ತಾರೆ. ಆದರೆ ಪ್ರವಾದಿವರ್ಯರ(ಸ) ಗೌರವಾದರಗಳಿಂದಾಗಿ ಅದನ್ನವರು ಪ್ರಕಟಗೊಳಿಸುವುದಿಲ್ಲ.

ಅಬೂ ಸುಫ್ಯಾನ್ ಹುದೈಬಿಯಾ ಒಪ್ಪಂದದ ನವೀಕರಣದ ಕುರಿತು ಪ್ರಸ್ತಾಪಿಸುತ್ತಾನೆ. ಆದರೆ ಮುಹಮ್ಮದ್(ಸ) ಮೌನ ವಹಿಸುತ್ತಾರೆ. ಆತ ನಿರಾಶನಾಗಿ ಈ ಬಗ್ಗೆ ಹ. ಉಮರ್, ಹ. ಅಲೀ ಮತ್ತು ಹ. ಫಾತಿಮಾರ(ರ) ನೆರವು ಯಾಚಿಸುತ್ತಾನೆ. ಆದರೆ ಅವರಾರೂ ಆತನ ನೆರವಿಗೆ ಬರಲು ಸಿದ್ಧರಾಗುವುದಿಲ್ಲ. ತರುವಾಯ ಆತನೇ ಎದ್ದು ನಿಂತು ಮಸ್ಜಿದುನ್ನಬವಿಯಲ್ಲಿ ನೆರೆದಿರುವವರನ್ನುದ್ದೇಶಿಸಿ ತಾನು ಹುದೈಬಿಯಾ ಸಂಧಿಯನ್ನು ನವೀಕರಿಸಿರುವುದಾಗಿ ಘೋಷಿಸುತ್ತಾನೆ.

ಅಲ್ಲಿಂದ ಮರಳಿ ಮಕ್ಕಾಗೆ ತಲುಪಿದ ಅಬೂ ಸುಫ್ಯಾನ್ ಮದೀನಾದಲ್ಲಿ ನಡೆದ ಘಟನೆಯನ್ನು ಚಾಚೂ ತಪ್ಪದೆ ಕುರೈಶರಿಗೆ ವಿವರಿಸುತ್ತಾನೆ. ಇನ್ನು ಭವಿಷ್ಯದ ಬಗ್ಗೆ ನೀವೇ ಚಿಂತಿಸಿ ನಿರ್ಧರಿಸಿ ಎಂದು ಅವರನ್ನು ಕೇಳಿಕೊಳ್ಳುತ್ತಾನೆ.

## ದೇಶಭ್ರಷ್ಟರು ಮಕ್ಕಾದ ಹಾದಿಯಲ್ಲಿ

ಹಿ. ಶ. 8ರ ರಮಝಾನ್ ತಿಂಗಳು 10ನೇ ದಿನಾಂಕದಂದು 10 ಸಾವಿರ ಯೋಧರ ಇಸ್ಲಾಮೀ ಸೇನೆಯು ಮದೀನಾದಿಂದ ಮಕ್ಕಾದ ಕಡೆಗೆ ಹೊರಡುತ್ತದೆ. ಪ್ರವಾದಿವರ್ಯರೇ(ಸ)

ಸೇನೆಯ ನಾಯಕತ್ವವನ್ನು ವಹಿಸಿದ್ದಾರೆ. ಸೇನೆಯ ರವಾನೆಯ ಕುರಿತು ಮಕ್ಕಾವಾಸಿಗಳಿಗೆ ಯಾವುದೇ ಸುಳಿವು ದೊರೆಯದಂತೆ ಜಾಗರೂಕತೆ ವಹಿಸ ಲಾಗಿದೆ. ತನ್ಮೂಲಕ ರಕ್ತಪಾತವನ್ನು ತಪ್ಪಿಸಬೇಕೆಂಬುದೇ ಅವರ(ಸ) ಉದ್ದೇಶವಾಗಿತ್ತು.

ಇಸ್ಲಾಮಿ ಸೇನೆಯಲ್ಲಿ ಮದೀನಾದ ಯೋಧರ ಹೊರತು ಅಸ್‌ಲಮ್, ಅಶ್‌ಜಲ್, ಸುಲೈಮ್ ಮುಂತಾದ ಗೋತ್ರಗಳ ಸುಮಾರು ಎರಡು ಸಾವಿರ ಸೈನಿಕರೂ ಇದ್ದಾರೆ.

ಪ್ರವಾದಿ ಪತ್ನಿಯರ ಪೈಕಿ ಹ. ಉಮ್ಮು ಸಲ್ಮಾ ಮತ್ತು ಹ. ಮೈಮೂನ(ರ) ಪ್ರವಾದಿವರ್ಯರ(ಸ) ಜೊತೆಗಿದ್ದಾರೆ. ಮದೀನಾದಿಂದ ಹೊರಟ ಈ ಸೇನೆಯು ಒಂದೊಂದು ಹಂತವನ್ನು ಕ್ರಮಿಸುತ್ತಾ 'ಮರ್ರುದ್ದಹ್ರಾನ್'ನಲ್ಲಿ ಠಿಕಾಣಿ ಹೂಡುತ್ತದೆ.

'ಮರ್ರುದ್ದಹ್ರಾನ್'ನಲ್ಲಿ ಪ್ರವಾದಿವರ್ಯರು(ಸ) ಪ್ರತಿಯೊಂದು ಸೇನಾ ತುಕಡಿಗೆ ದೂರ ದೂರ ಡೇರೆ ಹೂಡಿ ಪ್ರತ್ಯಪ್ರತ್ಯೇಕ ಒಲೆಗಳನ್ನು ಉರಿಸುವಂತೆ ಆಜ್ಞಾಪಿಸುತ್ತಾರೆ. ಇದು ಪ್ರೇಕ್ಷಕರಿಗೆ ಸೇನೆಯು ಬಹಳ ದೊಡ್ಡದಾಗಿ ಕಾಣಲು ಹೂಡಿದ ಯುದ್ಧ ತಂತ್ರವಾಗಿತ್ತು.

ಮುಸ್ಲಿಮರ ಒಂದು ಸೇನೆಯು ಮಕ್ಕಾದ ಸಮೀಪವೇ ಬೀಡು ಬಿಟ್ಟಿದೆ ಎಂಬ ವಾರ್ತೆಯು ಕುರೈಶರಿಗೆ ತಲಪುತ್ತದೆ. ವಿಷಯದ ಅವಲೋಕನಕ್ಕಾಗಿ ಅವರು ಮೂವರು ನಾಯಕರನ್ನು ಮುಸ್ಲಿಮ್ ಸೇನೆಯ ಬಳಿಗೆ ಕಳುಹಿಸುತ್ತಾರೆ. ಹ. ಖದೀಜಾರ(ರ) ಸೋದರ ಪುತ್ರ ಹಕೀಮ್ ಬಿನ್ ಹಿಝಾಮ್, ಬುದೈಲ್ ಬಿನ್ ವರಕಾ ಮತ್ತು ಅಬೂ ಸುಫ್‌ಯಾನ್ ರಾತ್ರಿಯ ಅಂಧಕಾರದಲ್ಲಿ ಸದ್ದಿಲ್ಲದೆ 'ಆರಾಕ್'ಗೆ ತಲಪುತ್ತಾರೆ. ಅಲ್ಲೊಂದು ಬೆಟ್ಟದ ಮೇಲೇರಿ ನೋಡಿದಾಗ ಅವರ ಆಶ್ಚರ್ಯಕ್ಕೆ ಮಿತಿಯೇ ಇರಲಿಲ್ಲ. 'ವಾದಿಫಾತಿಮಾ'ದಲ್ಲಿ ದೂರ ದೂರದವರೆಗೆ ಅಲ್ಲಲ್ಲಿ ಬೆಂಕಿ ಉರಿಯುತ್ತಿ ರುವುದು ಕಾಣಿಸುತ್ತದೆ. ಜನರು ಅತ್ತಿತ್ತ ಚಲಿಸುತ್ತಿರುವುದು ಕೂಡಾ ಮಂದ ಬೆಳಕಿನಲ್ಲಿ ಗೋಚರಿಸುತ್ತದೆ.

ಅವರು ಪರಸ್ಪರ ಪಿಸುನುಡಿಯುತ್ತಿರುತ್ತಾರೆ. ಅಷ್ಟರಲ್ಲಿ ಪ್ರವಾದಿವರ್ಯರ(ಸ) ಚಿಕ್ಕಪ್ಪ ಅಬ್ಬಾಸ್ ಅಲ್ಲಿಗೆ ತಲಪುತ್ತಾರೆ. ಅವರು ಬಹಳ ಹೊತ್ತಿನಿಂದ ಯಾವನಾದರೂ ಮಕ್ಕಾ ವಾಸಿಗಾಗಿ ಕಾಯುತ್ತಿದ್ದರು. "ಮುಸ್ಲಿಮರ ಸೇನೆಯು ತಲುಪಿದೆ. ಕೂಡಲೇ ಬಂದು ಅವರೊಡನೆ ಶಾಂತಿಯ ಒಪ್ಪಂದ ಮಾಡಿಕೊಳ್ಳಿ" ಎಂದು ಕುರೈಶರಿಗೆ ಹೇಳಿ ಕಳುಹಿಸುವುದೇ ಅವರ ಉದ್ದೇಶವಾಗಿತ್ತು. ರಾತ್ರಿಯ ಅಂಧಕಾರದಲ್ಲಿ ಅಬೂ ಸುಫ್‌ಯಾನ್‌ನ ಧ್ವನಿ ಕೇಳಿ ಅವರು ಆತನನ್ನು ಗುರುತಿಸಿಕೊಂಡಿದ್ದರು. ಆದ್ದರಿಂದ ಅವರ ಬಳಿ ತಲಪಿ ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರು(ಸ) ತಮ್ಮ ಅನುಯಾಯಿಗಳೊಂದಿಗೆ ಬಂದಿರುವರು. ಇನ್ನು ಕುರೈಶರಿಗೆ ಉಳಿಗಾಲವಿಲ್ಲ."

ಅಬೂ ಸುಫ್‌ಯಾನ್ ಗಾಬರಿಯಾಗಿ ವಿಚಾರಿಸುತ್ತಾನೆ: "ಈಗ ಏನು ಮಾಡುವುದು?"

ಅಬ್ಬಾಸ್: "ನನ್ನ ಹಿಂದೆ ಕುಳಿತುಕೊಳ್ಳಿ. ನಾವು ಹೋಗಿ ಮುಹಮ್ಮದ್(ಸ) ಅವರಲ್ಲಿ ಅಭಯ ಯಾಚಿಸೋಣ. ನಮಗೆ ಇನ್ನು ಬೇರೆ ಯಾವ ಮಾರ್ಗವೂ ಉಳಿದಿಲ್ಲ."

ಅಬೂ ಸುಫ್‌ಯಾನ್ ಅಬ್ಬಾಸ್‌ರ ಜೊತೆ ಕತ್ತೆಯ ಮೇಲೆ ಸವಾರರಾಗಿ ಹೊರಡುತ್ತಾರೆ. ಬುದೈಲ್ ಮತ್ತು ಹಕೀಮ್ ಮಕ್ಕಾದ ಕಡೆಗೆ ಮರಳುತ್ತಾರೆ. ಅಬ್ಬಾಸ್(ರ) ತಮ್ಮ ಜೊತೆ ಅಬೂ ಸುಫ್‌ಯಾನ್‌ರನ್ನು ಕರೆದುಕೊಂಡು ಪ್ರವಾದಿ ವರ್ಯರ(ಸ) ಬಳಿಗೆ ಹೋಗಿ ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೇ! ಅಬೂ ಸುಫ್‌ಯಾನ್‌ರಿಗೆ ನಾನು ಅಭಯ ನೀಡಿದ್ದೇನೆ."

ಮುಹಮ್ಮದ್(ಸ): "ಅವರನ್ನು ಬೆಳಿಗ್ಗೆ ನನ್ನ ಬಳಿ ಕರೆತನ್ನಿ."

ಬೆಳಿಗ್ಗೆ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಅಬ್ಬಾಸ್(ರ) ಅಬೂ ಸುಫ್‌ಯಾನ್‌ರ ಜೊತೆ ಹಾಜರಾಗುತ್ತಾರೆ. ಆಗ ಪ್ರವಾದಿವರ್ಯರು(ಸ) ಅಬೂ ಸುಫ್‌ಯಾನ್‌ರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ:

"ಅಬೂ ಸುಫ್‌ಯಾನ್! ಎಷ್ಟೊಂದು ಬೇಸರದ ಸಂಗತಿಯಿದು. ಒಬ್ಬ ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂಬ ವಾಸ್ತವಿಕತೆಯು ಇನ್ನೂ ನಿಮಗೆ ಮನವರಿಕೆಯಾಗಿಲ್ಲವೇ?"

ಅಬೂ ಸುಫ್‌ಯಾನ್: "ನನ್ನ ತಂದೆತಾಯಿಗಳನ್ನು ತಮಗೆ ಅರ್ಪಿಸುತ್ತೇನೆ. ತಾವು ಎಷ್ಟೊಂದು ಸಹನಶೀಲರು ಮತ್ತು ದಯಾಳುಗಳಾಗಿರುವಿರಿ. ಬಂಧುಗಳೊಂದಿಗೆ ಸದ್ವರ್ತನೆಯ ಬಗ್ಗೆ ತಮಗೆ ಎಷ್ಟೊಂದು ಕಾಳಜಿ ಇದೆ. ಈಗ ನನಗೂ ಮನವರಿಕೆಯಾಗಿದೆ. ಅಲ್ಲಾಹನ ಹೊರತು ಬೇರೆ ಯಾರಾದರೂ ಆರಾಧ್ಯರಿರುತ್ತಿದ್ದರೆ ಅವರು ಖಂಡಿತ ನಮಗೆ ನೆರವಾಗುತ್ತಿದ್ದರು."

ಆ ಬಳಿಕ ಅಬೂ ಸುಫ್‌ಯಾನ್ ಇಸ್ಲಾಮ್ ಧರ್ಮವನ್ನು ಸ್ವೀಕರಿಸುತ್ತಾರೆ. ಅಬ್ಬಾಸ್(ರ) ಹೀಗೆ ಹೇಳುತ್ತಾರೆ: "ಪ್ರವಾದಿವರ್ಯರೇ(ಸ) ಅಬೂ ಸುಫ್‌ಯಾನ್ ಬಹಳ ಸ್ವಾಭಿಮಾನಿ. ಅವರಿಗಾಗಿ ಏನಾದರೂ ವಿಶಿಷ್ಟ ಘೋಷಣೆ ಮಾಡಿರಿ."

ಮುಹಮ್ಮದ್(ಸ): "ಮಕ್ಕಾಗೆ ಪ್ರವೇಶಿಸುವಾಗ ಹೀಗೆ ಘೋಷಣೆ ಮಾಡಿರಿ: ಯಾರು ಅಬೂ ಸುಫ್‌ಯಾನ್‌ರ ಮನೆಯನ್ನು ಪ್ರವೇಶಿಸುತ್ತಾರೋ ಅವರಿಗೆ ಅಭಯ ನೀಡಲಾಗುವುದು. ಯಾರು ತನ್ನ ಮನೆಯ ಬಾಗಿಲನ್ನು ಮುಚ್ಚಿಕೊಳ್ಳುತ್ತಾನೋ ಅವನಿಗೆ ಅಭಯ ನೀಡಲಾಗುವುದು ಮತ್ತು ಯಾರು ಮಸ್ಜಿದುಲ್ ಹರಾಮ್‌ನಲ್ಲಿ ಪ್ರವೇಶಿಸುತ್ತಾರೋ ಅವರಿಗೂ ಅಭಯ ನೀಡಲಾಗುವುದು."

## ಮಕ್ಕಾ ವಿಜಯ

ಹಿ. ಶ. 8 ರಮಝಾನ್ ತಿಂಗಳ 20ನೆಯ ಶುಕ್ರವಾರ (630ರ ಫೆಬ್ರವರಿ 11). ಅಬೂ ಸುಫ್‌ಯಾನ್ ಒಂದು ಬಂಡೆಯ ಮೇಲೆ ನಿಂತು ಜೋರಾಗಿ ಕೂಗಿ ಹೇಳುತ್ತಿದ್ದಾರೆ: "ಓ ಕುರೈಶ್ ಗೋತ್ರಜರೇ! ಮುಹಮ್ಮದ್(ಸ) ಬಂದು ಮುಟ್ಟಿರುವರು. ಯಾರಿಗೂ ಅವರನ್ನು ಎದುರಿಸುವ ಧೈರ್ಯವಿಲ್ಲ. ಯಾರು ನನ್ನ ಮನೆಯಲ್ಲಿ ಬಂದು ಆಶ್ರಯ ಪಡೆಯುತ್ತಾರೋ ಅವರಿಗೆ ಅಭಯವಿದೆ."

ಈ ಧ್ವನಿ ಕೇಳಿ ಗಾಬರಿಗೊಂಡ ಜನರು ಅಬೂ ಸುಫ್‌ಯಾನ್‌ರ ಸುತ್ತಲೂ ನೆರೆಯುತ್ತಾರೆ. 'ಇಷ್ಟೆಲ್ಲ ಜನ ನಿಮ್ಮ ಮನೆಯಲ್ಲಿ ಆಶ್ರಯ ಪಡೆಯುವುದು ಹೇಗೆ?' ಎಂದು ಅವರನ್ನು ಪ್ರಶ್ನಿಸುತ್ತಾರೆ.

ಅಬೂ ಸುಫ್‌ಯಾನ್: "ಯಾರು ತನ್ನ ಮನೆಯ ಬಾಗಿಲನ್ನು ಮುಚ್ಚಿ ಕೊಳ್ಳುತ್ತಾನೋ ಅವನಿಗೂ ಅಭಯವಿದೆ. ಯಾರು ಮಸ್ಜಿದುಲ್ ಹರಾಮನ್ನು ಪ್ರವೇಶಿ ಸುತ್ತಾನೋ ಅವನಿಗೂ ಅಭಯವಿದೆ."

ಇಂದಿಗೆ ಎಂಟು ವರ್ಷಗಳ ಹಿಂದೆ ತಮ್ಮ ಓರ್ವ ಸಂಗಾತಿಯ ಜೊತೆಗೆ ರಾತ್ರಿಯ ಅಂಧಕಾರದಲ್ಲಿ ಮಕ್ಕಾದಿಂದ ವಲಸೆ ಹೋದ ಮುಹಮ್ಮದ್(ಸ) ಅವರು 10 ಸಾವಿರ ಯೋಧರ ಬಲಿಷ್ಠ ಸೇನೆಯೊಂದಿಗೆ ಇಂದು ಮಕ್ಕಾ ಪಟ್ಟಣದಲ್ಲಿ ವಿಜಯಿ ಯಾಗಿ ಪ್ರವೇಶಿಸುತ್ತಾರೆ.

ಅವರು ಸರ್ವಲೋಕಗಳಿಗೆ ಅನುಗ್ರಹವಾಗಿ ಅಲ್ಲಾಹನಿಂದ ನಿಯುಕ್ತರಾದವರು. ತಮ್ಮ ಪ್ರಭುವಿನ ಅತ್ಯಂತ ವಿಧೇಯ ದಾಸರು. ಆದ್ದರಿಂದ ವಿಜಯಿಯಾಗಿ ಮಕ್ಕಾ ಪ್ರವೇಶಿಸು ವಾಗಲೂ ಅವರ ಶಿರವು ಒಂಟೆಯ ಮೇಲೆ ಕುಳಿತಲ್ಲಿಯೇ ಅಹಂಭಾವದಿಂದ ಸೆಟೆದು ನಿಲ್ಲುವ ಬದಲು ವಿನಮ್ರತೆಯಿಂದ ತಮ್ಮ ಪ್ರಭುವಿನ ಮುಂದೆ ಬಾಗಿಕೊಂಡಿದೆ. ನಾಲಗೆಯಲ್ಲಿ ಅವನದೇ ಸ್ತುತಿ-ಸ್ತೋತ್ರಗಳಿವೆ. ಆತನ ಕೃತಜ್ಞತಾಭಾವದಿಂದ ಮನವು ಮಿಡಿಯುತ್ತಿದೆ. ಅವರ ಮುಖಾರವಿಂದವು ಸಂತೋಷ, ಸಂಭ್ರಮ, ಉಲ್ಲಾಸದ ಜೊತೆಗೆ ಸೌಮ್ಯತೆ ಮತ್ತು ಕರುಣೆಯಿಂದ ಕಂಗೊಳಿಸುತ್ತಿದೆ. ಈ ವಿಜಯೀ ಸೈನ್ಯದ ಕೊನೆಯ ತಂಡದ ನಾಯಕತ್ವವು ಅವರ ದತ್ತುಪುತ್ರನ ಮಗ ಉಸಾಮಾ ಬಿನ್ ಝೈದ್‌ರ(ರ) ಹಸ್ತದಲ್ಲಿದೆ. ಇಲ್ಲಿ ಯಜಮಾನ - ಆಳು ಎಂಬ ಯಾವ ಭೇದಭಾವವೂ ಉಳಿದಿಲ್ಲ. ಇಲ್ಲಿ ಅಹಂಕಾರ-ದರ್ಪಗಳ ಲವಲೇಶವೂ ಗೋಚರಿಸುವುದಿಲ್ಲ. ಮುಹಮ್ಮದ್(ಸ) ಪವಿತ್ರ ಕುರ್‌ಆನಿನ ಸೂರಃ 'ಅಲ್ ಫತಹ್'ನ ಪಠನ ಮಾಡುತ್ತಾ ನಗರವನ್ನು ಪ್ರವೇಶಿಸುತ್ತಿದ್ದಾರೆ.

ಹದಿಮೂರು ವರ್ಷಗಳ ಕಾಲ ಪವಿತ್ರ ಕಅಬಾ ಮತ್ತು ಅದರ ಸುತ್ತಲಿರುವ ಮಸ್ಜಿದುಲ್ ಹರಾಮ್‌ನಲ್ಲಿ ಪ್ರಾರ್ಥಿಸುವ ಅನುಮತಿಯನ್ನು ನಿರಾಕರಿಸಲ್ಪಟ್ಟಿದ್ದಂತಹ, ಮಕ್ಕಾದ ಸರದಾರರ ಅತ್ಯಧಿಕ ಹಿಂಸೆ, ಮರ್ದನ, ಪೀಡನೆಗಳಿಗೆ ಪಾತ್ರರಾದ ಮುಹಮ್ಮದ್(ಸ) ಇಂದು ವಿಜಯಿಯಾಗಿ ಅದೇ ನಗರವನ್ನು ಪ್ರವೇಶಿಸುತ್ತಿರುವಾಗ ನೈಜ ವಿಜಯವು ಇದುವೇ ಆಗಿದೆ ಎಂಬ ವಾಸ್ತವಿಕತೆಯು ಮಕ್ಕಾವಾಸಿಗಳಿಗೆ ಮನವರಿಕೆಯಾಗದೆ ಇರಲಿಲ್ಲ.

ಮೂರ್ತಿ ಪೂಜಕರು ಏಕದೇವ ಸಿದ್ಧಾಂತದ ಪ್ರತಿಪಾದಕರಾದ ಮುಹಮ್ಮದ್‌ರನ್ನು(ಸ) ಅಲ್ಲಾಹನ ಭವನದ ಬಳಿ ಕಂಡು ತಮ್ಮ ವಿಜಯದ ಆಶೆಯನ್ನು ಶಾಶ್ವತವಾಗಿ ತೊರೆಯುತ್ತಾರೆ.

ಮುಹಮ್ಮದ್(ಸ) ಹೇಳುತ್ತಾರೆ: "ಕಅಬಾದ ಕೀಲಿ ಕೈ ಹೊಂದಿರುವ ಉಸ್ಮಾನ್ ಬಿನ್

ತಲ್‌ಹಾರನ್ನು ಕರೆಯಿರಿ."

ಉಸ್ಮಾನ್ ಪ್ರವಾದಿವರ್ಯರ(ಸ) ಮುಂದೆ ಹಾಜರಾಗುತ್ತಾರೆ. ಪ್ರವಾದಿವರ್ಯರು(ಸ) ಮುಗುಳ್ನಗುತ್ತಾ: "ಕಅಬಾದ ಕೀಲಿ ಕೈಯನ್ನು ತನ್ನಿ" ಎನ್ನುತ್ತಾರೆ.

ಕೆಲವು ವರ್ಷಗಳ ಹಿಂದೆ ಪ್ರವಾದಿವರ್ಯರು(ಸ) ಅದೇ ಕೀಲಿಕೈಯನ್ನು ಕೇಳಿದಾಗ ಉಸ್ಮಾನ್ ಕೊಡಲು ನಿರಾಕರಿಸಿದ್ದರು. ಅಂದು ಅವರು ಕೇವಲ ಕೆಲವು ಕ್ಷಣಗಳ ಮಟ್ಟಿಗೆ ಅದರೊಳಗೆ ಪ್ರಾರ್ಥಿಸಲಿಕ್ಕಾಗಿ ಆ ಕೀಲಿಕೈಯನ್ನು ಕೇಳಿದ್ದರು. ಆಗ ಪ್ರವಾದಿವರ್ಯರು(ಸ) ಉಸ್ಮಾನ್‌ರನ್ನುದ್ದೇಶಿಸಿ ಹೀಗೆ ಹೇಳಿದ್ದರು: "ಒಂದು ದಿನ ಈ ಕೀಲಿಕೈ ನನ್ನ ವಶಕ್ಕೆ ಬರಲಿದೆ. ಆಗ ನಾನು ಬಯಸುವವರಿಗೆ ಅದನ್ನು ನೀಡುವೆನು."

ಅಂದು ಮುಹಮ್ಮದ್‌ರ(ಸ) ಮಾತನ್ನು ಉಸ್ಮಾನ್ ಓರ್ವ ಹುಚ್ಚನ ಬಡಬಡಿಕೆ ಯೆಂದೇ ಪರಿಗಣಿಸಿದ್ದನು. ಅಂದು ಆತ ಬಹಳ ದರ್ಪದಿಂದಲೇ ಹೇಳಿದ್ದ: "ಪ್ರಾಯಶಃ ಅಂದು ಕುರೈಶರೆಲ್ಲಾ ನಾಶವಾಗಿರಬಹುದು."

ಅದಕ್ಕುತ್ತರವಾಗಿ ಮುಹಮ್ಮದ್(ಸ): "ಅಲ್ಲ, ಅದು ಕುರೈಶರ ಮೇಲ್ಮೆಯ ದಿನವಾಗಿರುವುದು."

ಇಂದು ಪ್ರವಾದಿವರ್ಯರ(ಸ) ಆ ಭವಿಷ್ಯವಾಣಿಯು ಅಕ್ಷರಶಃ ನಿಜವಾಗಿರುವುದನ್ನು ಎಲ್ಲರೂ ಸ್ಪಷ್ಟವಾಗಿ ನೋಡುತ್ತಿದ್ದಾರೆ. ಯಾರಿಗೂ ಏನನ್ನೂ ಹೇಳುವ ಧೈರ್ಯವಿಲ್ಲ. ಉಸ್ಮಾನ್ ಕಂಪಿಸುವ ಕೈಗಳೊಂದಿಗೆ ಕಅಬಾದ ಬಾಗಿಲನ್ನು ತೆರೆದು ಕೀಲಿಕೈಯನ್ನು ಮುಹಮ್ಮದ್‌ರಿಗೆ(ಸ) ನೀಡುತ್ತಾರೆ. ಆದರೆ ಮುಹಮ್ಮದ್(ಸ) ಅದನ್ನು ಅವರಿಗೇ ಮರಳಿಸುತ್ತಾ ಹೀಗೆ ಹೇಳುತ್ತಾರೆ: "ಉಸ್ಮಾನ್! ಈ ಕೀಲಿಕೈ ಇನ್ನು ಪ್ರಳಯಕಾಲದ ತನಕ ನಿಮ್ಮ ವಂಶದ ಬಳಿಯಲ್ಲೇ ಇರುವುದು. ಅಕ್ರಮಿಯ ಹೊರತು ಯಾರೂ ಅದನ್ನು ನಿಮ್ಮಿಂದ ಕಸಿಯಲಾರನು."

ಈ ಔದಾರ್ಯವನ್ನು ಕಂಡು ಉಸ್ಮಾನ್ ಪುಳಕಿತರಾಗುತ್ತಾರೆ, "ಖಂಡಿತವಾಗಿಯೂ ತಾವು ಅಲ್ಲಾಹನ ಪ್ರವಾದಿಯಾಗಿರುವಿರಿ" ಎಂದು ಘೋಷಿಸುತ್ತಾರೆ.

ಅದಕ್ಕುತ್ತರವಾಗಿ ಪ್ರವಾದಿ(ಸ) ಹೀಗೆ ಹೇಳುತ್ತಾರೆ: "ಇಂದಿನ ದಿನವು ಪುಣ್ಯ ಮತ್ತು ನಿಷ್ಠೆಯ ದಿನವಾಗಿದೆ."

ಈ ಘಟನೆಯ ಬಳಿಕ ಉಸ್ಮಾನ್ ಮುಸ್ಲಿಮರಾಗುತ್ತಾರೆ. ಮುಹಮ್ಮದ್(ಸ) ಕಅಬಾ ಭವನದೊಳಗೆ ಪ್ರವೇಶಿಸುತ್ತಾರೆ. ಆಗ ಅಲ್ಲಿ 360 ವಿಗ್ರಹಗಳಿದ್ದುವು. ಗೋಡೆಯ ಮೇಲೆ ಹ. ಇಬ್ರಾಹೀಮ್ ಮತ್ತು ಹ. ಇಸ್ಮಾಈಲ್(ಅ) ಅವರ ಚಿತ್ರವನ್ನು ಬಿಡಿಸಲಾಗಿತ್ತು. ಪ್ರವಾದಿವರ್ಯರ(ಸ) ಕೈಯಲ್ಲಿ ಬಿಲ್ಲು ಇತ್ತು. ಅದರ ತುದಿಯಿಂದ ಅವರು ಆ ವಿಗ್ರಹ ಗಳನ್ನು ಕೆಡಹುತ್ತಾರೆ. ಜೊತೆಗೆ ಪವಿತ್ರ ಕುರ್‌ಆನಿನ ಈ ಸೂಕ್ತವನ್ನು ಓದುತ್ತಾರೆ: "ಸತ್ಯ ಬಂದು ಬಿಟ್ಟಿತು. ಮಿಥ್ಯ ಅಳಿದು ಹೋಯಿತು. ಮಿಥ್ಯವು ಅಳಿದು ಹೋಗು ವಂತಹದ್ದೇ" ಎಂದು ಘೋಷಿಸಿರಿ." **(ಪವಿತ್ರ ಕುರ್‌ಆನ್: 17: 81)**

ಕೆಲವು ವಿಗ್ರಹಗಳು ಎತ್ತರದಲ್ಲಿ ಇರಿಸಲ್ಪಟ್ಟಿದ್ದುವು. ಅವುಗಳನ್ನು ಬೀಳಿಸಲು ಹ. ಅಲೀಯವರನ್ನು(ರ) ಪ್ರವಾದಿವರ್ಯರು(ಸ) ತಮ್ಮ ಹೆಗಲ ಮೇಲೇರಿಸಿ ಅವುಗಳನ್ನು ಕೆಡಹುವಂತೆ ಆದೇಶಿಸುತ್ತಾರೆ.

ಅಲೀ(ರ) ಪ್ರವಾದಿವರ್ಯರ(ಸ) ಆದೇಶದಂತೆ ವಿಗ್ರಹಗಳನ್ನು ಒಡೆಯುತ್ತಾ ಕೆಡಹುತ್ತಾ ಸಾಗುತ್ತಾರೆ. ಗೋಡೆಯ ಮೇಲೆ ಬಿಡಿಸಲಾಗಿದ್ದ ಚಿತ್ರಗಳನ್ನೂ ಅವರು ಅಳಿಸಿ ಹಾಕಿದರು. ತನ್ಮೂಲಕ ನಿಜಾರ್ಥದಲ್ಲಿ ಕಅಬಾ ಭವನವು ಪವಿತ್ರವಾಯಿತು. ಮೂರ್ತಿಗಳ ಮಾಲಿನ್ಯದಿಂದ ಮುಕ್ತವಾಯಿತು. ಮರ ಕಲ್ಲುಗಳಿಂದ ನಿರ್ಮಿತವಾದ ಈ ವಿಗ್ರಹಗಳಿಗೆ ಲಾಭ-ನಷ್ಟಗಳನ್ನು ಉಂಟು ಮಾಡುವ ಯಾವ ಶಕ್ತಿಯೂ ಇಲ್ಲ ವೆಂಬ ವಾಸ್ತವಿಕತೆ ಈಗ ಕುರೈಶರಿಗೆ ಮನವರಿಕೆ ಯಾಗಿದೆ. ಅವು ತಮ್ಮ ರಕ್ಷಣೆಯನ್ನೂ ಮಾಡಿಕೊಳ್ಳಲು ಶಕ್ತವಲ್ಲವೆಂಬುದೂ ಅವರಿಗೆ ತಿಳಿದು ಹೋಯಿತು. ಅವರು ಎಲ್ಲ ಮಿಥ್ಯ ಆರಾಧ್ಯರನ್ನೂ ತಮ್ಮ ಕಣ್ಣುಗಳ ಮುಂದೆ ಮುರಿದು ತುಂಡಾಗಿ ನಿಂದ್ಯತೆಯೊಂದಿಗೆ ಬೀಳುತ್ತಿರುವುದನ್ನು ಕಂಡು ಅವುಗಳ ಆಶ್ರಯ ಎಂತಹ ಮಿಥ್ಯೆ ಯಾಗಿತ್ತೆಂಬುದನ್ನು ಮನಗಂಡರು.

ಮೂರ್ತಿಗಳ ಮಾಲಿನ್ಯದಿಂದ ಮುಕ್ತವಾದ ಕಅಬಾ ಭವನದೊಳಗೆ ಪ್ರವಾದಿ(ಸ) ಆ ಭವನದ ನೈಜ ಯಜಮಾನನಿಗೆ ನಮಾಝ್ ಸಲ್ಲಿಸುತ್ತಾರೆ. ಅವರ ಜೊತೆಗಿದ್ದವರು ಓರ್ವ ಗುಲಾಮನ ಪುತ್ರ ಉಸಾಮಾ(ರ) ಮತ್ತು ಇಥಿಯೋಪಿಯಾದ ಕರಿಯ ಗುಲಾಮ ಬಿಲಾಲ್(ರ) ಆಗಿದ್ದರು. ಕಅಬಾದ ಹೊರಗೆ ಕುರೈಶರು ನೆರೆದಿದ್ದಾರೆ. ಅವರು ತಮ್ಮ ಭವಿಷ್ಯದ ಬಗ್ಗೆ ಚಿಂತಿತರಾಗಿದ್ದಾರೆ. ಅವರಿಗೆ ತಾವು ಮುಸ್ಲಿಮರ ವಿರುದ್ಧ ಎಸಗಿದ್ದ ಅಕ್ರಮ-ಅನ್ಯಾಯಗಳು ಜ್ಞಾಪಕಕ್ಕೆ ಬರುತ್ತವೆ. ಮುಸ್ಲಿಮ್ ಸೇನೆಯೂ ಅವರ ಮುಂದಿದೆ. ಅವರು ಭಯ-ಭೀತಿಯಿಂದ ನಡುಗುತ್ತಿದ್ದಾರೆ. ಅವರ ತುಟಿಗಳು ಒಣ ಗಿವೆ. ಮುಖ ಮಂಕಾಗಿದೆ. ಹೃದಯಗಳು ಜೋರಾಗಿ ಬಡಿದುಕೊಳ್ಳುತ್ತಿವೆ. ಅಷ್ಟರಲ್ಲಿ ಮುಹಮ್ಮದ್(ಸ) ನಮಾಝ್ ಮುಗಿಸಿ ಕಅಬಾದ ಬಾಗಿಲ ಬಳಿ ಬಂದು ದ್ವಾರದ ಎರಡು ಬದಿಗಳನ್ನೂ ಹಿಡಿದು ನಿಂತು ಈ ರೀತಿ ಹೇಳುತ್ತಾರೆ: "ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಅವನು ಏಕಮೇವಾದ್ವಿತೀಯನು. ಯಾರೂ ಅವನಿಗೆ ಸಹಭಾಗಿಗಳಿಲ್ಲ. ಅವನು ತನ್ನ ವಚನವನ್ನು ಪೂರ್ಣಗೊಳಿಸಿರುವನು. ತನ್ನ ದಾಸನಿಗೆ ನೆರವಾದನು. ಅವನೊಬ್ಬನೇ ಎಲ್ಲ ವಿರೋಧೀ ಬಣಗಳನ್ನೂ ಮುರಿ ದನು. ಹೌದು! ಎಲ್ಲ ಅಹಂಕಾರಗಳು, ಎಲ್ಲ ವ್ಯವಸ್ಥೆಗಳು, ಎಲ್ಲ ರಕ್ತ ಪರಿಹಾರಗಳು ನನ್ನ ಕಾಲಬುಡದಲ್ಲಿವೆ. ಕೇವಲ ಕಅಬಾ ಭವನದ ಧರ್ಮದರ್ಶಿತ್ವ ಮತ್ತು ಹಾಜಿ ಗಳಿಗೆ ನೀರು ಕುಡಿಸುವ ವ್ಯವಸ್ಥೆ ಇದಕ್ಕೆ ಹೊರತಾಗಿದೆ. ಕುರೈಶರೇ! ಅಜ್ಞಾನಜನ್ಯ ಅಹಂಭಾವ ಮತ್ತು ಕುಲಮಹಿಮೆಗಳನ್ನು ಅಲ್ಲಾಹನು ಅಳಿಸಿರುವನು. ಎಲ್ಲ ಜನರೂ ಆದಮರ ಸಂತತಿಯಾಗಿರುವರು. ಆದಮರು ಮಣ್ಣಿನಿಂದ ಸೃಷ್ಟಿಸಲ್ಪಟ್ಟಿದ್ದರು."

ತರುವಾಯ ಸೂರಃ ಅಲ್ ಹುಜುರಾತ್‌ನ ಈ ಸೂಕ್ತಗಳನ್ನು ಪಠಿಸುತ್ತಾರೆ: "ಜನರೇ,

ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬ ಸ್ತ್ರೀಯಿಂದ ಉಂಟು ಮಾಡಿ ದೆವು. ತರುವಾಯ ನೀವು ಪರಸ್ಪರ ಪರಿಚಯ ಪಟ್ಟುಕೊಳ್ಳಲಿಕ್ಕಾಗಿ ನಿಮ್ಮ ಜನಾಂಗ ಗಳನ್ನೂ ಗೋತ್ರಗಳನ್ನೂ ಮಾಡಿದೆವು. ನಿಮ್ಮ ಪೈಕಿ ಅತ್ಯಧಿಕ ಧರ್ಮನಿಷ್ಠನೇ ವಾಸ್ತವ ದಲ್ಲಿ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಪಾತ್ರನು. ನಿಶ್ಚಯವಾಗಿಯೂ ಅಲ್ಲಾಹ್ ಸರ್ವಜ್ಞನೂ ವಿವರಪೂರ್ಣನೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್: 49: 13)

ಅನಂತರ ಕುರೈಶರನ್ನುದ್ದೇಶಿಸಿ ಈ ರೀತಿ ವಿಚಾರಿಸುತ್ತಾರೆ: "ನಿಮ್ಮ ಅಭಿಪ್ರಾಯವೇನು? ನಾನು ನಿಮ್ಮೊಂದಿಗೆ ಹೇಗೆ ವರ್ತಿಸಲಿರುವೆನು?"

ಕುರೈಶರ ಮನಸ್ಸಿಗೆ ಈ ಪದಗಳು ಬಾಣದಂತೆ ನಾಟುತ್ತವೆ. ಕೆಲವು ಕ್ಷಣಗಳ ಮೌನದ ಬಳಿಕ ಎಲ್ಲರೂ ಏಕಕಂಠದಿಂದ ಹೇಳುತ್ತಾರೆ: "ನಿಮ್ಮಿಂದ ನಾವು ಕೇವಲ ಒಳಿತನ್ನೇ ನಿರೀಕ್ಷಿಸುತ್ತೇವೆ."

ಪ್ರವಾದಿವರ್ಯರು(ಸ) ಸ್ವಲ್ಪ ಮುಗುಳ್ನಗುತ್ತಾರೆ. ಅನಂತರ ಹೇಳುತ್ತಾರೆ: "ಇಂದು ನಾನು ಪ್ರವಾದಿ ಯೂಸುಫರು ತಮ್ಮ ಸೋದರರಿಗೆ ಹೇಳಿದುದನ್ನೇ ಹೇಳುತ್ತೇನೆ, ನಿಮ್ಮ ಮೇಲೆ ಇಂದು ಯಾವ ಅಪವಾದವೂ ಇಲ್ಲ. ಹೋಗಿ, ನೀವಿಂದು ಸ್ವತಂತ್ರರಾಗಿರುವಿರಿ."

ಸುಬ್‌ಹಾನಲ್ಲಾಹ್! ಎಂತಹ ವಿಸ್ಮಯ! 21 ವರ್ಷಗಳ ಕಾಲ ಪ್ರವಾದಿವರ್ಯರನ್ನೂ(ಸ) ಅವರ ಸಂಗಾತಿಗಳನ್ನೂ ಎಲ್ಲ ರೀತಿಯ ಚಿತ್ರಹಿಂಸೆಗಳಿಗೆ ಗುರಿಪಡಿಸಿ ಸಂಕಷ್ಟ, ಹಿಂಸೆ, ದೌರ್ಜನ್ಯಗಳ ಸರಮಾಲೆಯನ್ನೇ ಎರಗಿಸಿದ ಹಾಗೂ ತಮ್ಮ ಖಡ್ಗ, ಬಿಲ್ಲುಬಾಣ ಮತ್ತು ಭರ್ಜಿಗಳನ್ನು ಸದಾ ಅವರ ಮೇಲೆ ವರ್ಷಿಸುತ್ತಿದ್ದಂತಹ ಶತ್ರುಗಳಿಗೆ ಇದು ಪ್ರವಾದಿವರ್ಯರ(ಸ) ಸಾರ್ವತ್ರಿಕ ಕ್ಷಮಾದಾನವಾಗಿತ್ತು.

ಪ್ರವಾದಿವರ್ಯರ(ಸ) ಈ ಆದರ್ಶಪ್ರಾಯ ಚಾರಿತ್ರ್ಯದ ಕುರಿತು ಮೌಲಾನಾ ಅಬುಲ್ ಕಲಾಮ್ ಆಝಾದ್ ಒಂದೆಡೆ ಹೀಗೆ ಬರೆದಿರುವರು: "ಹಿಂಸೆಯ ವಿರುದ್ಧ ಸಹನೆ, ಶತ್ರುವನ್ನು ಎದುರಿಸುವಾಗ ಸ್ಥೈರ್ಯ, ವ್ಯವಹಾರದಲ್ಲಿ ಸತ್ಯಸಂಧತೆ, ಅಧಿಕಾರ ಮತ್ತು ಶಕ್ತಿ ಪ್ರಾಪ್ತವಾದಾಗ ಕ್ಷಮಾದಾನ ಇವು ಮಾನವ ಇತಿಹಾಸದಲ್ಲಿ ಯಾವ ವ್ಯಕ್ತಿಯಲ್ಲೂ ಒಂದುಗೂಡದಂತಹ ಅಮೂಲ್ಯ ಗುಣಗಳಾಗಿವೆ."

## ಸಾರ್ವತ್ರಿಕ ಕ್ಷಮಾದಾನ

ಲೋಕಾನುಗ್ರಹಿಯ ದರಬಾರು. ರಕ್ತದಾಹಿಗಳೆಲ್ಲರೂ ನೆರೆದಿದ್ದಾರೆ. ಎಲ್ಲರಿಗೂ ಕ್ಷಮಾದಾನ ನೀಡಲಾಗುತ್ತಿದೆ. ಅವರನ್ನು 21 ವರ್ಷಗಳ ಕಾಲ ವಿಧವಿಧವಾಗಿ ಪೀಡಿಸಿ ಖುಷಿಪಟ್ಟವರೆಲ್ಲರೂ ಅವರ ಮುಂದೆ ಪಶ್ಚಾತ್ತಾಪದಿಂದ ತಲೆ ತಗ್ಗಿಸಿ ನಿಂತಿದ್ದಾರೆ. ಆದರೆ ಅವರೆಲ್ಲರನ್ನೂ ಕರುಣಾ ಸಾಗರವಾದ ಪ್ರವಾದಿವರ್ಯರು(ಸ) ನಗುಮುಖದಿಂದ ಕ್ಷಮಿಸುತ್ತಾರೆ. ಆಕಾಶವು ಇಂತಹ ದೃಶ್ಯವನ್ನು ಹಿಂದೆಂದೂ ದರ್ಶಿಸಿರಲಿಲ್ಲ. ಅದರ ಕೆಲವು ತುಣುಕುಗಳನ್ನು ನೀವೂ ನೋಡಿ:

1. ಇವರು ಸಫ್ವಾನ್ ಬಿನ್ ಉಮಯ್ಯ. ಸ್ವತಃ ಪ್ರವಾದಿವರ್ಯರನ್ನು(ಸ) ಹಿಂಸಿಸಿದವರು. ಇತರರನ್ನೂ ಅದಕ್ಕಾಗಿ ಪ್ರೇರೇಪಿಸಿದವರು. ಮಕ್ಕಾ ವಿಜಯದ ನಂತರ ಭವಿಷ್ಯದ ಬಗ್ಗೆ ಭಯಭೀತರಾಗಿ ಊರು ಬಿಟ್ಟು ಪಲಾಯನ ಮಾಡಲು ಹೊರಟಿದ್ದಾರೆ. ಯಮನ್‌ನ ಕಡೆಗೆ ಪಲಾಯನ ಮಾಡಬಯಸಿದ್ದಾರೆ. ಮುಹಮ್ಮದ್(ಸ) ತನ್ನ ರಕ್ತವನ್ನು ಧರ್ಮ ಸಮ್ಮತವೆಂದು ಸಾರಿದ್ದಾರೆಂದು ಯಾರೋ ಅವರಿಗೆ ಹೇಳಿದ್ದರು. ಆದ್ದರಿಂದ ಮುಸ್ಲಿಮರು ಅವರನ್ನು ಸಿಕ್ಕಲ್ಲಿ ತುಂಡು ತುಂಡು ಮಾಡಿ ಬಿಡುವರೆಂಬ ಭಯ ಅವರನ್ನಾವರಿಸಿತ್ತು. ಅವರು ಅತ್ಯಂತ ರಹಸ್ಯವಾಗಿ ಪಲಾಯನ ಮಾಡಿ ಜಿದ್ದಾ ಪಟ್ಟಣಕ್ಕೆ ತಲುಪುತ್ತಾರೆ. ಅತ್ತ ಅವರ ಚಿಕ್ಕಪ್ಪನ ಮಗ ಉಮೈರ್ ಬಿನ್ ವಹಬ್(ರ) ಪ್ರವಾದಿ ಯವರ(ಸ) ಬಳಿ ಹೋಗಿ ಈ ರೀತಿ ನಿವೇದಿಸಿಕೊಳ್ಳುತ್ತಾರೆ, "ಪ್ರವಾದಿವರ್ಯರೇ! ಸಫ್ವಾನ್ ತನ್ನ ಗೋತ್ರದ ಸರದಾರರಾಗಿದ್ದಾರೆ. ಅವರು ಇಲ್ಲಿಂದ ಓಡಿ ಹೋಗಿ ಸಮುದ್ರ ಪಾಲಾಗ ಬಯಸುತ್ತಾರೆ. ಆದ್ದರಿಂದ ಅವರನ್ನು ಕ್ಷಮಿಸಿ ಅಭಯ ನೀಡಬೇಕೆಂದು ಯಾಚಿಸುತ್ತೇನೆ."

ಇದನ್ನು ಕೇಳಿ ಪ್ರವಾದಿ(ಸ) ಹೀಗೆ ಹೇಳುತ್ತಾರೆ: "ಹೋಗಿ ಅವರನ್ನು ಹುಡುಕಿ ತನ್ನಿ. ನಾನು ಅವರನ್ನು ಕ್ಷಮಿಸಿ ಅವರಿಗೆ ಅಭಯ ನೀಡಿರುವೆನು."

ಉಮೈರ್(ರ): "ನನಗೆ ಏನಾದರೂ ಚಿಹ್ನೆಯನ್ನು ನೀಡಿರಿ. ಅದನ್ನು ಅವರಿಗೆ ತೋರಿಸಿ ತಮ್ಮ ಅಭಯದ ಭರವಸೆ ನೀಡುವೆನು. ಅನ್ಯಥಾ ಅವರು ನನ್ನ ಮಾತನ್ನು ನಂಬಲಾರರು."

ಪ್ರವಾದಿವರ್ಯರು(ಸ) ಚಿಹ್ನೆಯ ರೂಪದಲ್ಲಿ ತಮ್ಮ ಅಮಾಮ(ಶಿರವಸ್ತ್ರ)ವನ್ನು ಅವರಿಗೆ ನೀಡುತ್ತಾರೆ. ಅದನ್ನು ಅವರು ಮಕ್ಕಾ ವಿಜಯದ ದಿನ ತಮ್ಮ ತಲೆಗೆ ಸುತ್ತಿದ್ದರು.

ಉಮೈರ್(ರ) ಜಿದ್ದಾ ತಲುಪುತ್ತಾರೆ. ಅಷ್ಟರಲ್ಲಿ ಸಫ್ವಾನ್ ಒಂದು ದೋಣಿಯನ್ನೇರಿ ಹೊರಡಲನುವಾಗಿದ್ದರು. ಉಮೈರ್(ರ) ಅವರನ್ನು ಜೋರಾಗಿ ಕೂಗಿ ಕರೆಯುತ್ತಾರೆ. ಆದರೆ ಸಫ್ವಾನ್ "ಉಮೈರ್! ತೊಲಗು ಇಲ್ಲಿಂದ" ಎನ್ನುತ್ತಾರೆ.

ಉಮೈರ್: "ನಾನು ನಿಮ್ಮ ಪ್ರಾಣದ ಅಭಯವನ್ನು ಪಡೆದು ಬಂದಿರುವೆನು. ಇದೋ ನೋಡಿ ಈ ಅಮಾಮ(ಶಿರವಸ್ತ್ರ)ವನ್ನು ಪ್ರವಾದಿವರ್ಯರು(ಸ) ತಮ್ಮ ಚಿಹ್ನೆಯಾಗಿ ನೀಡಿರುವರು."

ಸಫ್ವಾನ್ ದೋಣಿಯಿಂದ ಇಳಿದು ಬರುತ್ತಾರೆ. ಇಬ್ಬರೂ ಪರಸ್ಪರ ಮಾತಾಡುತ್ತಾರೆ. ಸ್ವಲ್ಪ ಸಮಯದ ಬಳಿಕ ಮಕ್ಕಾಕ್ಕೆ ಹಿಂದಿರುಗುತ್ತಾರೆ. ಮುಹಮ್ಮದ್‌ರ(ಸ) ಮುಂದೆ ಹಾಜರಾಗಿ ಸಫ್ವಾನ್ ಈ ರೀತಿ ಹೇಳುತ್ತಾರೆ: "ತಾವು ನನಗೆ ಅಭಯ ದಯಪಾಲಿಸಿರುವುದಾಗಿ ಉಮೈರ್ ಹೇಳುತ್ತಿದ್ದಾನೆ. ಇದು ನಿಜವೆ?"

ಪ್ರವಾದಿ(ಸ): "ಹೌದು ನಿಜ."

ಸಫ್ವಾನ್‌ನಿಗೆ ತಾನು ಮಾಡಿದ ಎಲ್ಲ ಅಕ್ರಮ ಅನ್ಯಾಯಗಳೂ ನೆನಪಿಗೆ ಬರುತ್ತವೆ.

ಆದ್ದರಿಂದ ಆಶ್ಚರ್ಯಾತಿರೇಕದಿಂದ ಬಾಯಿ ಬಿಟ್ಟು ಕೆಲಕಾಲ ಸ್ಥಂಭೀಭೂತನಾಗಿ ನಿಂತ ಬಳಿಕ ಹೀಗೆ ಹೇಳುತ್ತಾನೆ: "ಇಸ್ಲಾಮಿನ ಬಗ್ಗೆ ಯಾವುದಾದರೂ ಒಂದು ನಿರ್ಧಾರಕ್ಕೆ ಬರಲು ನನಗೆ ಎರಡು ತಿಂಗಳ ಅವಧಿ ದಯಪಾಲಿಸಿ."

ಪ್ರವಾದಿ(ಸ): "ನಿಮಗೆ ನಾಲ್ಕು ತಿಂಗಳ ಅವಧಿ ನೀಡಲಾಗುತ್ತದೆ."

ಮುಹಮ್ಮದ್‌ರ(ಸ) ರಕ್ತದಾಹಿ ಶತ್ರು ಸಫ್ವಾನ್ ಇಂದು ಅವರ ಕರುಣೆ ಮತ್ತು ಔದಾರ್ಯವನ್ನು ಕಂಡು ಸಸಂತೋಷ ಮನೆಗೆ ಮರಳುತ್ತಾರೆ.

2. ಇವರು ಇಕ್ರಿಮಾ ಬಿನ್ ಅಬೂಜಹಲ್. ಇಸ್ಲಾಮ್ ಧರ್ಮದ ಅತಿದೊಡ್ಡ ಶತ್ರುವಾದ ಅಬೂಜಹಲ್‌ನ ಪುತ್ರ. ಬದ್ರ್ ಮತ್ತು ಉಹುದ್ ಯುದ್ಧಗಳಲ್ಲಿ ತನ್ನ ಪರಾಕ್ರಮಕ್ಕಾಗಿ ಕುರೈಶರಲ್ಲಿ ಅತ್ಯಧಿಕ ಗೌರವಕ್ಕೆ ಪಾತ್ರರಾದವರು. ಮುಹಮ್ಮದ್‌ರಿಗೆ(ಸ) ಸಾಧ್ಯವಿದ್ದಷ್ಟು ಕಿರುಕುಳ ಕೊಡುವ ಆಂದೋಲನಕ್ಕೆ ಮಕ್ಕಾ ವಿಜಯದ ತನಕ ನಾಯಕತ್ವವನ್ನು ಕೊಟ್ಟವರು. ಅವರೂ ಮಕ್ಕಾ ವಿಜಯದ ಬಳಿಕ ಭಯಭೀತರಾಗಿ ಯಮನ್‌ನ ಕಡೆಗೆ ಪಲಾಯನ ಮಾಡುತ್ತಾರೆ. ಮುಹಮ್ಮದ್‌ರು(ಸ) ತಮಗೆ ಮರಣ ದಂಡನೆಯನ್ನು ವಿಧಿಸಿರುವರೆಂದು ಯಾರೋ ಅವರಿಗೆ ತಿಳಿಸಿರುತ್ತಾರೆ. ಅವರ ಪತ್ನಿ ಉಮ್ಮು ಹಕೀಮ್ ಮುಸ್ಲಿಮ್ ಆಗಿದ್ದರು. ಅವರು ಕೂಡಾ ಅಬೂಜಹಲ್‌ನ ಸೋದರ ಪುತ್ರಿಯಾಗಿದ್ದರು. ಅವರು ಬಂದು ಪ್ರವಾದಿವರ್ಯರಲ್ಲಿ(ಸ) ತಮ್ಮ ಪತಿಯ ಅಭಯಕ್ಕಾಗಿ ಯಾಚಿಸುತ್ತಾರೆ. ಪ್ರವಾದಿವರ್ಯರು(ಸ) ಯಾವ ಅಳುಕೂ ಇಲ್ಲದೆ ಅವರ ಮನವಿಯನ್ನು ಸ್ವೀಕರಿಸುತ್ತಾರೆ. ಆಕೆ ತನ್ನ ಪತಿಯನ್ನು ಹುಡುಕುತ್ತಾ ಯಮನ್ ತಲುಪುತ್ತಾರೆ. ಅವರನ್ನು ಒಲಿಸಿ ಕರೆ ತರುತ್ತಾರೆ. ತನ್ಮಧ್ಯೆ ಮುಹಮ್ಮದ್(ಸ) ಮದೀನಾಕ್ಕೆ ಮರಳಿರುತ್ತಾರೆ. ಇಕ್ರಿಮಾ ಮದೀನಾ ತಲುಪಿ ಮಸ್ಜಿದುನ್ನಬವಿಯಲ್ಲಿ ಪ್ರವಾದಿವರ್ಯರನ್ನು(ಸ) ಭೇಟಿಯಾಗುತ್ತಾರೆ. ಪ್ರವಾದಿ ವರ್ಯರು(ಸ) ಅವರನ್ನು ಆದರದಿಂದ ಬರಮಾಡಿಕೊಳ್ಳುತ್ತಾರೆ.

3. ಇದು ಹಿಬಾರ್ ಬಿನ್ ಅಲ್ ಅಸ್ವದ್. ಇವರು ಪ್ರವಾದಿ ಪುತ್ರಿ ಹ. ಝೈನಬ್‌ರನ್ನು(ರ) ಮದೀನಾದ ಕಡೆಗೆ ವಲಸೆ ಹೊರಟಾಗ ಈಟಿಯಿಂದ ಹೊಡೆದು ಒಂಟೆಯ ಮೇಲಿಂದ ನೆಲಕ್ಕುರುಳಿಸಿದ್ದರು. ಆಗ ಹ. ಝೈನಬ್(ರ) ಗರ್ಭವತಿಯಾಗಿದ್ದು ಬಿದ್ದ ಏಟಿನಿಂದ ಗರ್ಭಪಾತವಾಗಿ ತೀವ್ರ ಕಾಯಿಲೆಗೆ ಒಳಗಾಗಿದ್ದರು. ಅದೇ ಕಾಯಿಲೆಯಿಂದ ಅವರು ಕೊನೆಯುಸಿರೆಳೆದಿದ್ದರು. ಮಕ್ಕಾ ವಿಜಯದ ದಿನ ಅವರಿಗೆ ಮರಣದಂಡನೆ ವಿಧಿಸಲಾಗುತ್ತದೆ. ಅವರು ಭಯಭೀತರಾಗಿ ಮಕ್ಕಾದಲ್ಲೇ ಎಲ್ಲೋ ಭೂಗತರಾಗುತ್ತಾರೆ. ಆದರೆ ಪರಿಸ್ಥಿತಿಯು ತನಗೆ ಪ್ರತಿಕೂಲವಾಗಿರುವುದನ್ನರಿತು ಒಂದು ದಿನ ಪಶ್ಚಾತ್ತಾಪ ಪಟ್ಟು ಪ್ರವಾದಿವರ್ಯರ(ಸ) ಬಳಿ ಹಾಜರಾಗುತ್ತಾರೆ. ಅವರ ಬಳಿ ತನ್ನ ಅತಿರೇಕಗಳಿಗಾಗಿ ಮರುಗುತ್ತಾ ಕ್ಷಮೆ ಯಾಚಿಸುತ್ತಾರೆ. ಲೋಕಾನುಗ್ರಹಿಯಾದ ಪ್ರವಾದಿ(ಸ) ಆ ಕಠಿಣ ಹೃದಯಿಯನ್ನು ಕ್ಷಮಿಸಿ ಬಿಡುತ್ತಾರೆ. ಅವರು ಇಸ್ಲಾಮ್ ಸ್ವೀಕರಿಸುತ್ತಾರೆ. ಅವರ ಬಗ್ಗೆ ಯಾವುದೇ ಆಕ್ಷೇಪಾರ್ಹ

ಮಾತು ಹೇಳಬಾರದೆಂದು ಮುಸ್ಲಿಮರಲ್ಲಿ ಘೋಷಣೆ ಹೊರಡಿಸುತ್ತಾರೆ.

4. ಇವರು ಕಅಬ್ ಬಿನ್ ಝುಬೈರ್. ಪ್ರಖ್ಯಾತ ಕವಿ. ಅವರು ತಮ್ಮ ಜೀವನದ ಬಹುಪಾಲನ್ನು ಪ್ರವಾದಿವರ್ಯರನ್ನು(ಸ) ಲೇವಡಿ ಮಾಡುತ್ತಾ ನಿಂದಿಸುತ್ತಾ ಕಳೆದಿದ್ದರು. ಅವರ ಸೋದರ ಇಸ್ಲಾಮ್ ಸ್ವೀಕರಿಸಿದಾಗಲೂ ಅವರನ್ನು ಅಣಕಿಸುತ್ತಿದ್ದರು. ಮಕ್ಕಾ ವಿಜಯದ ನಂತರ ಪ್ರವಾದಿವರ್ಯರು(ಸ) ಅವರಿಗೆ ಮರಣ ದಂಡನೆ ವಿಧಿಸಲಿದ್ದಾರೆಂದು ತಿಳಿದು ಅವರು ಭೂಗತರಾಗಿ ಬಿಡುತ್ತಾರೆ. ಆದರೆ ಕೆಲವು ಕಾಲದ ಬಳಿಕ ತಮ್ಮ ಸೋದರರ ವಿನಂತಿಯಂತೆ ಇಸ್ಲಾಮ್ ಸ್ವೀಕರಿಸಿ ಮದೀನಾಕ್ಕೆ ಹೋಗುತ್ತಾರೆ. ಪ್ರವಾದಿವರ್ಯರು(ಸ) ಅವರನ್ನೂ ಕ್ಷಮಿಸಿ ಬಿಡುತ್ತಾರೆ.

5. ಇದು ವಹ್‌ಶೀ ಬಿನ್ ಹರಬ್. ಪ್ರವಾದಿವರ್ಯರ(ಸ) ಪ್ರೀತಿಯ ಚಿಕ್ಕಪ್ಪ ಹಮ್‌ಝಾರನ್ನು(ರ) ಕೊಂದವರು. ಮಕ್ಕಾ ವಿಜಯದ ಬಳಿಕ ಅವರಿಗೂ ಮರಣದಂಡನೆ ವಿಧಿಸಲಾಗಿತ್ತು. ಜೀವದ ಭಯದಿಂದ ಅವರು ತಾಯಿಫ್‌ನ ಕಡೆಗೆ ಪಲಾಯನ ಮಾಡುತ್ತಾರೆ. ಆದರೆ ತಾಯಿಫ್‌ನ ಜನರಿಗೂ ಒಂದು ಕಾಲ ಬರುತ್ತದೆ. ಅವರು ಸಾಮೂಹಿಕವಾಗಿ ಇಸ್ಲಾಮ್ ಸ್ವೀಕರಿಸಲು ಮದೀನಾದ ಕಡೆಗೆ ಹೊರಡುತ್ತಾರೆ. ಆ ಪೈಕಿ ವಹ್‌ಶೀ ಬಿನ್ ಹರಬ್ ಕೂಡಾ ಸೇರಿದ್ದರು. ತಮ್ಮ ಚಿಕ್ಕಪ್ಪನ ಕೊಲೆಗಾರನನ್ನು ಕಂಡು ಪ್ರವಾದಿ ವರ್ಯರಿಗೆ(ಸ) ಅವರ ನೆನಪಾಗಿ ಕಣ್ಣುಗಳು ತೇವಗೊಳ್ಳುತ್ತವೆ. ಆದರೂ ಅವರು ವಹ್‌ಶೀಯನ್ನು ಕ್ಷಮಿಸುತ್ತಾ ಹೀಗೆನ್ನುತ್ತಾರೆ: "ನೀನು ನನ್ನ ಮುಂದೆ ಮಾತ್ರ ಬರಬೇಡ. ನಿನ್ನನ್ನು ಕಂಡರೆ ನನಗೆ ನನ್ನ ಚಿಕ್ಕಪ್ಪನ ನೆನಪಾಗುತ್ತದೆ."

6. ಇವರು ಉತ್‌ಬಾ ಮತ್ತು ಮುಅ್‌ತಬ್. ಇಸ್ಲಾಮಿನ ಮಹಾ ಶತ್ರು ಅಬೂ ಲಹಬ್‌ನ ಪುತ್ರರು. ಅವರು ತಮ್ಮ ತಂದೆಯ ಆದೇಶದಂತೆ ಪ್ರವಾದಿವರ್ಯರ(ಸ) ಪುತ್ರಿಯರಾದ ರುಖಿಯ್ಯ(ರ) ಮತ್ತು ಉಮ್ಮು ಕುಲ್ಸೂಮ್‌ರನ್ನು(ರ) ವಿಚ್ಛೇದನಗೊಳಿಸಿ ದ್ದರು. ಮಕ್ಕಾ ವಿಜಯದ ನಂತರ ಅವರು ಹೆದರಿ ಅಡಗಿಕೊಳ್ಳುತ್ತಾರೆ. ಆದರೆ ಲೋಕಾನುಗ್ರಹಿ(ಸ) ಅವರನ್ನು ಕರೆಸುತ್ತಾರೆ. ಅವರಿಬ್ಬರನ್ನೂ ಕ್ಷಮಿಸಿ ಅಭಯ ನೀಡುತ್ತಾರೆ. ಅವರೂ ಇಸ್ಲಾಮ್ ಸ್ವೀಕಾರ ಮಾಡಿಕೊಳ್ಳುತ್ತಾರೆ.

7. ಇವರು ಹಿಂದ್ ಬಿನ್ತ್ ಉತ್ಬಾ. ಅಬೂ ಸುಫ್‌ಯಾನ್‌ರ ಮಡದಿ. ಉಹುದ್ ಯುದ್ಧದಲ್ಲಿ ಹ. ಹಮ್‌ಝಾರ(ರ) ಪಾರ್ಥಿವ ಶರೀರವನ್ನು ಸೀಳಿ ಕರುಳನ್ನು ತೆಗೆದು ಜಗಿದವರು. ಅವರ ಕಿವಿ ಮೂಗುಗಳನ್ನು ಕತ್ತರಿಸಿದವರು. ಅವರೂ ಮಕ್ಕಾ ವಿಜಯದ ನಂತರ ಇಸ್ಲಾಮ್ ಸ್ವೀಕಾರ ಮಾಡಿ ಇತರ ಮಹಿಳೆಯರ ಜತೆ ಪ್ರವಾದಿವರ್ಯರ(ಸ) ಸಮ್ಮುಖದಲ್ಲಿ ಹಾಜರಾಗಿ ಈ ರೀತಿ ಹೇಳುತ್ತಾರೆ: "ನಾನು ಹಿಂದ್."

ಆದರೆ ಪ್ರವಾದಿವರ್ಯರು(ಸ) ಅವರನ್ನೂ ಕ್ಷಮಿಸಿ ಬಿಡುತ್ತಾರೆ. ಮಕ್ಕಾದಲ್ಲಿ ಈಗ ಪೂರ್ಣ ಶಾಂತಿಯಿದೆ. ಜನರು ತಂತಮ್ಮ ಮನೆಗಳಿಗೆ ಮರಳಿದ್ದಾರೆ.

## ಹುನೈನ್ ಯುದ್ಧ

ಹವಾಝಿನ್ ಗೋತ್ರದ ಸರದಾರ ಮಾಲಿಕ್ ಬಿನ್ ಔಫ್ ಮೂವತ್ತು ವರ್ಷದ ಯುವಕ. ಅತ್ಯಂತ ಉತ್ಸಾಹಿ ತರುಣ. ತನ್ನ ತೋಟದ ದಟ್ಟ ನೆರಳಲ್ಲಿ ಒಂದು ಆಸನದಲ್ಲಿ ಕುಳಿತಿದ್ದಾನೆ. ಅವನ ಸುತ್ತಮುತ್ತ ಸಕೀಫ್, ನಸ್ರ್, ಜಸ್ಮ್, ಸಅದ್ ಬಿನ್ ಬಕರ್ ಮತ್ತು ಹಿಲಾಲ್ ಗೋತ್ರಗಳ ಹಿರಿಯ ನಾಯಕರು ನೆರೆದಿದ್ದಾರೆ. ಜಸ್ಮ್ ಗೋತ್ರದ ವಯೋವೃದ್ಧ ನಾಯಕ ದುರೈದ್ ಬಿನ್ ಸಮ್ಮ ಕೂಡಾ ಅವರಲ್ಲಿದ್ದಾರೆ. ಶತಾಯುಷಿಯಾದ ಅವರು ತಮ್ಮ ದೃಷ್ಟಿಹೀನತೆಯ ಹೊರತಾಗಿಯೂ ಅತ್ಯಂತ ಬುದ್ಧಿವಂತರೆನಿಸಿದ್ದಾರೆ.

ಮಾಲಿಕ್ ಬಿನ್ ಔಫ್ ಸಭಿಕರನ್ನುದ್ದೇಶಿಸಿ ಹೀಗೆ ಹೇಳುತ್ತಾನೆ: "ಮುಸ್ಲಿಮರು ಮಕ್ಕಾವನ್ನು ಜಯಿಸಿಕೊಂಡ ವಿಷಯ ನಿಮಗೆಲ್ಲರಿಗೂ ತಿಳಿದಿದೆ. ಕುರೈಶರ ಮೇಲ್ಮೆ, ಅಹಂಭಾವಗಳೆಲ್ಲವೂ ಮಣ್ಣುಗೂಡಿವೆ. ಖಂಡಿತವಾಗಿಯೂ ಇನ್ನು ಮುಸ್ಲಿಮರು ನಮ್ಮ ಮೇಲೆ ಆಕ್ರಮಣ ಮಾಡಲಿರುವರು. ಆದ್ದರಿಂದ ನಾವು ಉಳಿಯ ಬೇಕಾದರೆ ಅವರು ಆಕ್ರಮಣ ಮಾಡುವುದಕ್ಕಿಂತ ಮುಂಚೆಯೇ ನಾವು ಮುಂದುವರಿದು ಅವರ ಮೇಲೆ ದಾಳಿ ಮಾಡಬೇಕು. ಇದರಿಂದ ನಮಗೆ ಅನೇಕ ಲಾಭಗಳಿವೆ. ನಾವು ನಮ್ಮ ಸ್ವಾತಂತ್ರ್ಯವನ್ನು ಉಳಿಸುವುದು ಮಾತ್ರವಲ್ಲ ಕುರೈಶರ ಎಲ್ಲ ಸೊತ್ತು ಸಂಪತ್ತುಗಳನ್ನೂ ವಶಪಡಿಸಿಕೊಳ್ಳ ಬಹುದು. ಮುಸ್ಲಿಮರ ಮೇಲೆ ಆಕ್ರಮಣ ಮಾಡಲು ಇದು ಉತ್ತಮ ಅವಕಾಶ. ಈಗ ಅವರು ತಮ್ಮ ಕೇಂದ್ರವಾದ ಮದೀನಾದಿಂದ ನೂರಾರು ಮೈಲಿ ದೂರದಲ್ಲಿರುವರು. ಅವರಿಗೆ ಎಲ್ಲಿಂದಲೂ ಕುಮ್ಮಕ್ಕು ಸಿಗಲಾರದು. ಕುರೈಶರೂ ಮನಸಾರೆ ಇಸ್ಲಾಮ್ ಸ್ವೀಕರಿಸಿರಲಾರರೆಂದು ನನಗೆ ಖಾತ್ರಿ ಇದೆ. ಮುಸ್ಲಿಮರ ಡೋಲಾಯಮಾನ ಸ್ಥಿತಿಯನ್ನು ಕಂಡು ಅವರು ಕೂಡಾ ಅವರ ವಿರುದ್ಧ ಎದ್ದು ನಿಲ್ಲುವರು. ಈ ಅವಕಾಶವನ್ನು ನಾವು ಕಳಕೊಂಡರೆ ಮತ್ತೆ ಯಾವಾಗಲೂ ಪರಿತಪಿಸುತ್ತಿರಬೇಕಾದೀತು."

ಮಾಲಿಕ್ ಬಿನ್ ಔಫ್ ಇಂತಹ ಮಾತುಗಳನ್ನು ಅವರಲ್ಲಿ ಹಿಂದೆಯೂ ಅನೇಕ ಸಲ ಹೇಳಿದ್ದುದರಿಂದ ಅವರೆಲ್ಲರೂ ಅವನ ಮಾತನ್ನು ಒಪ್ಪಿಕೊಳ್ಳುತ್ತಾರೆ.

ಈ ಬಹುಗೋತ್ರ ಸೇನೆಯು ಔತಾಸ್ ಕಣಿವೆಯಲ್ಲಿ ಒಟ್ಟುಗೂಡುತ್ತದೆ. ಮಾಲಿಕ್ ಬಿನ್ ಔಫ್‌ರ ಮಾರ್ಗದರ್ಶನದಂತೆ ಪ್ರತಿಯೊಂದು ಗೋತ್ರವು ತನ್ನೆಲ್ಲ ಪರಿವಾರಗಳನ್ನೂ ಜತೆಗೆ ಕರೆತರುತ್ತದೆ.

ಮುಹಮ್ಮದ್(ಸ) ಅವರ ಬೇಹುಗಾರ ಅಬ್ದುಲ್ಲಾ ಬಿನ್ ಹದ್ದಾದ್ ಅಸ್ಲಮಿ ಈ ಗೋತ್ರಗಳ ಸೇನೆಯ ಸಮೀಕ್ಷೆ ನಡೆಸಿ ಮಾಹಿತಿ ಸಂಗ್ರಹಿಸಿ ಹಿಂತಿರುಗಿದ್ದಾರೆ. ಅವರು ಪ್ರವಾದಿವರ್ಯರಿಗೆ(ಸ) ತಮ್ಮ ವರದಿಯನ್ನೂ ಒಪ್ಪಿಸಿದ್ದಾರೆ. ಮಕ್ಕಾದಲ್ಲಿ ರಕ್ತಪಾತವಾದರೆ ಅದು ಆ ಪಟ್ಟಣದ ಪಾವಿತ್ರ್ಯಕ್ಕೆ ಭಂಗವಾಗುತ್ತವೆಂದು, ಪ್ರವಾದಿ(ಸ) ಮಕ್ಕಾದಲ್ಲಿ ಆ ಸೇನೆಯನ್ನು ಕಾಯುತ್ತ ನಿಲ್ಲದೆ ಕೂಡಲೇ ಹೊರಟು ಅವರ ಮೇಲೆ ದಿಢೀರ್ ಧಾಳಿ ಮಾಡಿ ಅವರ ಐಕ್ಯವನ್ನು ಛಿದ್ರಗೊಳಿಸಬೇಕೆಂದು ನಿರ್ಧರಿಸುತ್ತಾರೆ.

ಪ್ರವಾದಿವರ್ಯರು(ಸ) ಇತಾಬ್ ಬಿನ್ ಉಸೈದ್‌ರನ್ನು(ರ) ಮಕ್ಕಾದಲ್ಲಿ ತಮ್ಮ ಉತ್ತರಾಧಿಕಾರಿಯಾಗಿ ನೇಮಿಸಿ ಸೇನೆಗೆ ಹೊರಡುವ ಆದೇಶ ನೀಡುತ್ತಾರೆ. ಹಿ. ಶ. 8ರ ಶವ್ವಾಲ್ ತಿಂಗಳ 6ನೇ ದಿನ ಸೇನೆಯು ಔತಾಸ್‌ನ ಕಡೆಗೆ ಹೊರಡುತ್ತದೆ. 10 ಸಾವಿರ ಮುಹಾಜಿರ್ ಮತ್ತು ಅನ್ಸಾರ್‌ಗಳನ್ನೊಳಗೊಂಡ ಈ ಸೇನೆಯ ಜತೆ ಸಲೀಮ್ ಗೋತ್ರದವರು ಮತ್ತು ಸ್ವತಂತ್ರಗೊಳಿಸಲ್ಪಟ್ಟ ಮುಸ್ಲಿಮೇತರ ಗುಲಾಮರೂ ಎರಡು ಸಾವಿರ ಸಂಖ್ಯೆ ಯಲ್ಲಿದ್ದರು. ಅವರನ್ನು ಮುಂಚೂಣಿಯ ಸೇನೆಯ ರೂಪದಲ್ಲಿ ಮುಂದೆ ಕಳುಹಿಸಲಾಗುತ್ತದೆ. 12 ಸಾವಿರದ ಈ ಸೇನೆಯು ಶವ್ವಾಲ್ 10ರಂದು ಅನಿರೀಕ್ಷಿತವಾಗಿ ಔತಾಸ್ ತಲುಪುತ್ತದೆ. ತಮ್ಮ ಈ ಸಂಖ್ಯಾಬಲವನ್ನು ಕಂಡು ಅವರಲ್ಲಿ ಒಬ್ಬರು ಹೀಗೆ ಹೇಳುತ್ತಾರೆ: "ನಮ್ಮನ್ನು ಯಾರಾದರೂ ಸೋಲಿಸಲು ನಾವೀಗ ಕಡಿಮೆ ಸಂಖ್ಯೆಯಲ್ಲೇನಿಲ್ಲ."

ಆದರೆ ಈ ಗರ್ವದ ಮಾತು ಅಲ್ಲಾಹನಿಗೆ ಮೆಚ್ಚುಗೆಯಾಗಲಿಲ್ಲ. ಅದು ಅತ್ಯಂತ ಕೆಟ್ಟ ಪರಿಣಾಮವನ್ನು ಬೀರಿತು. ಪವಿತ್ರ ಕುರ್‌ಆನ್ ಆ ಕುರಿತು ಹೀಗೆ ಹೇಳಿದೆ: "ಅಲ್ಲಾಹ್ ಇದಕ್ಕಿಂತ ಮುಂಚೆ ಅನೇಕ ಸಂದರ್ಭಗಳಲ್ಲಿ ನಿಮಗೆ ಸಹಾಯ ಮಾಡಿರು ತ್ತಾನೆ. ಇದೀಗ ಹುನೈನ್ ಯುದ್ಧದ ದಿನ (ಅವನ ನೆರವಿನ ವೈಖರಿಯನ್ನು ನೀವು ಕಂಡಿರುತ್ತೀರಿ.) ಅಂದು ನಿಮಗೆ ಸಂಖ್ಯಾಬಲದ ಜಂಬವಿತ್ತು. ಆದರೆ ಅದು ನಿಮಗೇನೂ ಫಲಕೊಡಲಿಲ್ಲ. ಭೂಮಿಯು ವಿಶಾಲವಿದ್ದೂ ನಿಮ್ಮ ಮಟ್ಟಿಗೆ ಸಂಕುಚಿತವಾಗಿಬಿಟ್ಟಿತು ಮತ್ತು ನೀವು ಬೆನ್ನು ತಿರುಗಿಸಿ ಓಟಕಿತ್ತಿರಿ." **(ಪವಿತ್ರ ಕುರ್‌ಆನ್: 9: 25)**

ಮುಸ್ಲಿಮ್ ಸೇನೆಯು ಹೊರಟ ವಿಷಯ ಮಾತ್ರವಲ್ಲ ಅದು ಬರುತ್ತಿರುವ ದಾರಿಯೂ ಶತ್ರು ಸೇನೆಗೆ ತಿಳಿದು ಬಿಡುತ್ತದೆ. ದಾರಿಯಲ್ಲಿ ಅವರು ತಮ್ಮ ಬಿಲ್ಲುಗಾರರನ್ನು ಅಡಗುದಾಣ ಗಳಲ್ಲಿ ಕುಳ್ಳಿರಿಸಿದ್ದರು. ಮುಸ್ಲಿಮರ ಮುಂಚೂಣಿಯ ಸೇನೆಯು ನಿಶ್ಚಿಂತೆ ಯಿಂದ ಮುಂದು ವರಿಯುತ್ತದೆ. ಆದ್ದರಿಂದ ಆ ಬಿಲ್ಲುಗಾರರು ಅವರ ಮೇಲೆ ನಾಲ್ಕೂ ಕಡೆಗಳಿಂದ ಬಾಣಗಳ ಮಳೆಗೆರೆಯುತ್ತಾರೆ. ಇದರಿಂದ ಅವರಲ್ಲಿರುವ ಮಕ್ಕಾದ ಸ್ವತಂತ್ರಗೊಂಡ ಗುಲಾಮರು ದಿಕ್ಕಾಪಾಲಾಗಿ ಓಟಕ್ಕೀಳುತ್ತಾರೆ. ಅವರ ಈ ದಿಗ್ಭ್ರಮೆಯು ಇಡೀ ಸೇನೆಯ ಶಿಸ್ತು ಮತ್ತು ವ್ಯವಸ್ಥೆಯನ್ನು ಹಾಳು ಗೆಡಹುತ್ತದೆ. ಪ್ರವಾದಿವರ್ಯರು(ಸ) ಒಂದೆಡೆ ಒಂಟಿಯಾಗಿ ಬಿಡುತ್ತಾರೆ. ಆದರೂ ಆ ಸಂದರ್ಭದಲ್ಲಿ ಪ್ರವಾದಿವರ್ಯರು(ಸ) ತಮ್ಮ ಅಸಾಮಾನ್ಯ ಶೌರ್ಯ, ಧೈರ್ಯ ಮತ್ತು ಸ್ಥೈರ್ಯವನ್ನು ಪ್ರದರ್ಶಿಸುತ್ತಾರೆ. ಅವರು ತಮ್ಮ ಸವಾರಿಯಿಂದ ಇಳಿದು ತಮ್ಮ ಸಂಗಾತಿಗಳನ್ನು ಅತ್ಯಂತ ಘನ ಗಾಂಭೀರ್ಯದೊಂದಿಗೆ ಕರೆಯುತ್ತಾರೆ.

"ನಾನು ನಿಸ್ಸಂಶಯ ಅಲ್ಲಾಹನ ಪ್ರವಾದಿಯಾಗಿರುವೆನು. ನಾನು ಅಬ್ದುಲ್ ಮುತ್ತಲಿಬರ ಸಂತತಿಯಾಗಿರುವೆನು."

ಮುಗೀರಾ(ರ) ಪ್ರವಾದಿವರ್ಯರ(ಸ) ಹೇಸರಕತ್ತೆಯ ಜೀನು ಹಿಡಿದಿದ್ದರು. ಅದರ ಲಗಾಮು ಅಬ್ಬಾಸ್‌ರ(ರ) ಕೈಯಲ್ಲಿತ್ತು. ಹ. ಅನಸ್‌ರ(ರ) ತಾಯಿ ಉಮ್ಮು ಸುಲೈಮ್

ತಮ್ಮ ಸೊಂಟಪಟ್ಟಿಯಲ್ಲಿ ಒಂದು ಕತ್ತಿಯನ್ನು ಸಿಕ್ಕಿಸಿದ್ದರು. ತಮ್ಮ ಪತಿ ಅಬೂ ತಲ್‌ಹಾರಂತೆ(ರ) ಅವರೂ ಸ್ಥಿರಚಿತ್ತರಾಗಿದ್ದರು.

ಶತ್ರು ಸೇನೆಯು ಇನ್ನಷ್ಟು ನಿಕಟ ಬರುತ್ತದೆ. ಬಾಣದ ಮಳೆಯು ಇನ್ನಷ್ಟು ಹೆಚ್ಚುತ್ತದೆ. ಅತ್ಯಂತ ಗೊಂದಲಮಯ ವಾತಾವರಣ ಆವರಿಸಿತ್ತು. ಆದರೆ ಪ್ರವಾದಿ ವರ್ಯರು(ಸ) ತಮ್ಮ ಕೆಲವು ಮಂದಿ ಆಪ್ತ ಸಂಗಾತಿಗಳ ಜತೆ ಬಂಡೆಯಂತೆ ದೃಢವಾಗಿ ನಿಂತಿದ್ದರು. ಪ್ರವಾದಿ ವರ್ಯರು(ಸ) ತಮ್ಮ ಚಿಕ್ಕಪ್ಪ ಅಬ್ಬಾಸ್‌ರನ್ನುದ್ದೇಶಿಸಿ(ರ) ಹೀಗೆ ಹೇಳುತ್ತಾರೆ: "ಅಬ್ಬಾಸರೇ! ಜೋರಾಗಿ ಕರೆಯಿರಿ. ಓ ಅನ್ಸಾರ್‌ಗಳೇ! ಓ ಸಮ್ರಾದ ಸಂಗಾತಿಗಳೇ! ಓ ಮುಹಾಜಿರ್‌ಗಳೇ! ಓ ಹುದೈಬಿಯಾದಲ್ಲಿ ವೃಕ್ಷದ ಕೆಳಗೆ ಪ್ರತಿಜ್ಞೆ ಮಾಡಿದವರೇ!"

ಹ. ಅಬ್ಬಾಸ್(ರ) ಈ ರೀತಿ ಕರೆದುದೇ ತಡ. ಹಿಂಜರಿಯುತ್ತಿದ್ದ ಸೇನೆಯು ಇಸ್ರಾಫೀಲರ* ಕಹಳೆಯನ್ನು ಕೇಳಿದವರಂತೆ ಲಬ್ಬೈಕ್(ನಾವು ಹಾಜರಿದ್ದೇವೆ) ಲಬ್ಬೈಕ್ ಎನ್ನುತ್ತಾ ಹಿಂದಿರುಗಿ ಬರುತ್ತಿದ್ದಾರೆ. ಯಾರ ಒಂಟೆಯು ಕೂಡಲೇ ಹಿಂತಿರುಗಲಿಲ್ಲವೋ ಅವರು ಕೂಡಾ ಒಂಟೆಯಿಂದ ಕೆಳಗೆ ಜಿಗಿದು ಆಯುಧ ಹಿಡಿದು ಪ್ರವಾದಿವರ್ಯರಿದ್ದಲ್ಲಿಗೆ ಶರವೇಗದಿಂದ ಧಾವಿಸಿ ಬಂದರು. ಕ್ಷಣ ಮಾತ್ರದಲ್ಲಿ ಅನುಯಾಯಿಗಳ ಒಂದು ದೊಡ್ಡ ಸಮೂಹವು ಪ್ರವಾದಿವರ್ಯರ(ಸ) ಸುತ್ತ ಒಟ್ಟುಗೂಡಿತು. ಅವರು ಶತ್ರುಗಳ ಮೇಲೆ ಬಲವಾಗಿ ಮುಗಿಬಿದ್ದರು. ಈ ಆಕಸ್ಮಿಕ ಪ್ರತ್ಯಾಕ್ರಮಣವನ್ನು ಕಂಡ ಶತ್ರು ಸೇನೆಯು ಛಿದ್ರಗೊಂಡು ಓಡ ತೊಡಗಿತು. ಕೆಲವೇ ಕ್ಷಣಗಳ ಹಿಂದೆ ಬಾಣಗಳ ಸುರಿಮಳೆಗೈಯುತ್ತಿದ್ದವರು ಈಗ ದಿಕ್ಕಾಪಾಲಾಗಿ ಓಡುತ್ತಿದ್ದಾರೆ. ಕೆಲವೇ ಕ್ಷಣಗಳಲ್ಲಿ ಶತ್ರು ಸೇನೆಯು ಪಲಾಯನಗೈದು ರಣರಂಗದಲ್ಲಿ ಮಹಿಳೆಯರು, ಮಕ್ಕಳು, ಆಡುಗಳು, ಒಂಟೆ-ಕುದುರೆ ಮತ್ತು ಮನೆಯ ಸಾಮಾನು ಸರಂಜಾಮುಗಳು ಮಾತ್ರ ಉಳಿದಿದ್ದುವು.

ಶತ್ರುಗಳ ಎಪ್ಪತ್ತು ಶವಗಳು ಅಂತ್ಯಕ್ರಿಯೆಯಿಲ್ಲದೆ ಬಿದ್ದಿದ್ದುವು. ಅವರ ಧ್ವಜವಾಹಕರು ಕೂಡಾ ಧ್ವಜ ಸಮೇತ ಸತ್ತು ಬಿದ್ದಿದ್ದರು. ಮುಸ್ಲಿಮ್ ಸೇನೆಯಲ್ಲಿ ನಾಲ್ಕು ಮಂದಿ ಹುತಾತ್ಮರಾಗಿದ್ದರು.

## ಮುಕ್ತ ಔದಾರ್ಯ

ಹುನೈನ್ ಕಣಿವೆಯಲ್ಲಿ ಎಲ್ಲೆಲ್ಲೂ ಸಮರಾರ್ಜಿತ ಸೊತ್ತಿನ ರಾಶಿ ಬಿದ್ದಿತ್ತು. ಸವಾರಿಯ ಪ್ರಾಣಿಗಳು ಮತ್ತು ಆಹಾರದ ಜಾನುವಾರುಗಳಲ್ಲದೆ ಅನೇಕ ಮಂದಿ ಮಹಿಳೆಯರು ತಮ್ಮ ಹಸುಗೂಸುಗಳನ್ನು ಎದೆಗವಚಿ ತಮ್ಮ ಪತಿಯಂದಿರ ಮತ್ತು ಸಂರಕ್ಷಕರ ವಂಚನೆಯ ಬಗ್ಗೆ ಮನನೊಂದು ಮರುಗುತ್ತಿದ್ದಾರೆ. ಅಷ್ಟರಲ್ಲಿ ಆ ಪೈಕಿ ಓರ್ವ ಮಹಿಳೆ ಅತ್ಯಂತ ಗಂಭೀರವಾಗಿ ನಡೆಯುತ್ತಾ ಪ್ರವಾದಿವರ್ಯರ(ಸ) ಬಳಿಗೆ ಬಂದು ಹೀಗೆ ವಿಜ್ಞಾಪಿಸಿಕೊಳ್ಳುತ್ತಾರೆ: "ಓ ಪ್ರವಾದಿವರ್ಯರೇ! ನಾನು ನಿಮ್ಮ ಸ್ತನಪಾನ ಸಂಬಂಧದ ಸೋದರಿ

* ಲೋಕಾಂತ್ಯದ ಮಹಾ ಪ್ರಳಯದಂದು ಕಹಳೆಯೂದಲು ನಿಯುಕ್ತರಾದ ದೇವಚರರ ಹೆಸರು.

ಯಾಗಿರುವೆನು. ನಾನು ಹಾರಿಸ್‌ರ ಪುತ್ರಿ ಶೀಮಾ."

ಪ್ರವಾದಿವರ್ಯರು(ಸ) ಅವರೆಡೆಗೆ ವಾತ್ಸಲ್ಯದ ದೃಷ್ಟಿ ಬೀರುತ್ತಾರೆ. ಅವರ ಕಣ್ಣುಗಳಿಂದ ಆನಂದ ಬಾಷ್ಪಗಳು ಉದುರುತ್ತವೆ. ಅವರಿಗೆ ಕುಳಿತುಕೊಳ್ಳಲು ತಮ್ಮ ಶಾಲನ್ನು ಹಾಸುತ್ತಾರೆ. ಅವರನ್ನು ಪ್ರೀತಿಯಿಂದ ಮಾತಾಡಿಸುತ್ತಾರೆ. ಕೆಲವು ಒಂಟೆ ಮತ್ತು ಆಡುಗಳನ್ನು ಅವರಿಗೆ ನೀಡುತ್ತಾರೆ. "ನೀವು ಬಯಸಿದರೆ ನನ್ನ ಮನೆಯಲ್ಲಿ ಬಂದು ವಾಸಿಸಿ. ನಿಮ್ಮ ಮನೆಗೆ ಮರಳಬೇಕೆಂದಿದ್ದರೆ ಅಲ್ಲಿಗೆ ತಲುಪಿಸುವ ವ್ಯವಸ್ಥೆಯನ್ನೂ ಮಾಡುತ್ತೇನೆ" ಎನ್ನುತ್ತಾರೆ.

ಅವರು ತಮ್ಮ ಮನೆತನದ ಪ್ರೀತಿಯಿಂದಾಗಿ ಊರಿಗೇ ಮರಳಿ ಹೋಗಬಯಸಿದರು. ಅವರನ್ನು ಅತ್ಯಂತ ಗೌರವಾದರಗಳೊಂದಿಗೆ ಅಲ್ಲಿಗೆ ತಲುಪಿಸಲಾಯಿತು.

ಯುದ್ಧ ಕೈದಿಯಾದ ಮಹಿಳೆಯರ ಪೈಕಿ ಒಬ್ಬಳು ತನ್ನ ಮಗು ಕಾಣೆಯಾದ ಬಗ್ಗೆ ಚಿಂತಾಕ್ರಾಂತಳಾಗಿದ್ದಳು. ಆಕೆಗೆ ಕೈದಿಗಳ ಗುಂಪಿನ ಮಧ್ಯೆ ತನ್ನ ಮಗು ಕಾಣಸಿಕ್ಕಿದಾಗ ಆಕೆ ಜಿಗಿದು ಹೋಗಿ ಅದನ್ನೆತ್ತಿಕೊಂಡು ಎದೆಗವಚಿ ಮುದ್ದಿಸುತ್ತಾಳೆ. ತಾಯಿ ಮಗುವಿಗೆ ಮೊಲೆಯುಡಿಸುತ್ತಾಳೆ. ಮಗು ಸಿಕ್ಕಿದ ಸಂತೋಷ ಮತ್ತು ಹಾಲುಣಿಸುವ ಆನಂದದಿಂದ ಆಕೆ ಮೈಮರೆತಿದ್ದಾಳೆ.

ಆಕೆಯ ಈ ಸ್ಥಿತಿಯನ್ನು ಕಂಡು ಪ್ರವಾದಿವರ್ಯರು(ಸ) ತಮ್ಮ ಅನುಯಾಯಿಗಳನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ಈ ಮಹಿಳೆ ತನ್ನ ಮಗುವನ್ನು ಬೆಂಕಿಯಲ್ಲಿ ಹಾಕಿ ಬಿಡಲು ಸಿದ್ಧಳಾಗುವಳೇ?"

ಅನುಯಾಯಿಗಳು: "ಖಂಡಿತ ಇಲ್ಲ, ಆಕೆ ಎಷ್ಟು ಮಾತ್ರಕ್ಕೂ ಹಾಗೆ ಮಾಡಲಾರಳು."

ಮುಹಮ್ಮದ್(ಸ): "ಈ ಮಹಿಳೆ ತನ್ನ ಮಗುವನ್ನು ಪ್ರೀತಿಸುವುದಕ್ಕಿಂತ ಎಷ್ಟೋ ಪಟ್ಟು ಅಧಿಕ ಅಲ್ಲಾಹನು ತನ್ನ ದಾಸರನ್ನು ಪ್ರೀತಿಸುತ್ತಾನೆ."

ಮುಹಮ್ಮದ್(ಸ) ಹುನೈನ್‌ನಿಂದ ತಾಯಿಫ್‌ಗೆ ಹೋಗಿ ಕೆಲವು ದಿನಗಳ ತನಕ ತಾಯಿಫ್ ನಗರಕ್ಕೆ ಮುತ್ತಿಗೆ ಹಾಕುತ್ತಾರೆ. ತರುವಾಯ ಅಲ್ಲಿಂದ ಮರಳುತ್ತಾರೆ. ಆಗ ಹವಾಝಿನ್ ಗೋತ್ರದ ಒಂದು ಪ್ರತಿನಿಧಿ ತಂಡವು ಬಂದು ಅವರನ್ನು ಭೇಟಿಯಾಗುತ್ತದೆ. ಯುದ್ಧ ಕೈದಿಗಳಾಗಿರುವ ಮಹಿಳೆಯರ ಬಿಡುಗಡೆಯ ಕುರಿತು ಅವರಲ್ಲಿ ಮಾತುಕತೆ ನಡೆಸುತ್ತಾರೆ. ಮುಹಮ್ಮದ್(ಸ) ಝುಹರ್ ನಮಾಝ್‌ನ ಬಳಿಕ ತಮ್ಮ ಅನುಯಾಯಿಗಳೊಂದಿಗೆ ಈ ಬಗ್ಗೆ ಸಮಾಲೋಚನೆ ನಡೆಸುತ್ತಾರೆ. ಅವರ ಒಪ್ಪಿಗೆ ಪಡೆದು ಎಲ್ಲ ಮಹಿಳೆಯರನ್ನೂ ಬಂಧಮುಕ್ತಗೊಳಿಸಲಾಗುತ್ತದೆ.

ಸಮರಾರ್ಜಿತ ಸೊತ್ತಿನಲ್ಲಿ 6 ಸಾವಿರ ಮಹಿಳೆಯರು ಮತ್ತು ಮಕ್ಕಳಿದ್ದರು. ಅವರೆಲ್ಲರೂ ಬಿಡುಗಡೆಗೊಂಡು ಸಂತೋಷದಿಂದ ತಂತಮ್ಮ ಮನೆಗಳಿಗೆ ತೆರಳುತ್ತಾರೆ. ಇತರ ಸೊತ್ತುಗಳಾದ 1,60,000 ದಿರ್ಹಮ್ (ಬೆಳ್ಳಿ ನಾಣ್ಯ), 40 ಸಾವಿರ ಆಡು-ಕುರಿಗಳು

ಮತ್ತು 20 ಸಾವಿರ ಒಂಟೆಗಳು ಸೈನಿಕರಲ್ಲಿ ವಿತರಿಸಲ್ಪಡುತ್ತವೆ.

ಈ ವಿತರಣೆಯಲ್ಲಿ ಪ್ರವಾದಿವರ್ಯರು(ಸ) ಆಗ ತಾನೇ ಮಕ್ಕಾ ವಿಜಯದ ವೇಳೆ ಇಸ್ಲಾಮ್ ಸ್ವೀಕರಿಸಿದವರಿಗೂ ಧಾರಾಳ ಸೊತ್ತು ನೀಡುತ್ತಾರೆ. ಅಬೂ ಸುಫ್‌ಯಾನ್, ಹಕೀಮ್ ಬಿನ್ ಹಿಝಾಮ್, ನದ್ರ್ ಬಿನ್ ಹಾರಿಸ್, ಸಫ್ವಾನ್ ಬಿನ್ ಉಮಯ್ಯ, ಅಕ್ರಅ್ ಬಿನ್ ಹಾಬೀಸ್ ಮತ್ತಿತರ ಕುರೈಶ್ ಗಣ್ಯರೂ ಪ್ರವಾದಿವರ್ಯರಿಂದ(ಸ) ಸಮರಾರ್ಜಿತ ಸೊತ್ತಿನಲ್ಲಿ ಗಣನೀಯ ಪಾಲನ್ನು ಗಳಿಸುತ್ತಾರೆ. ಎರಡು ದಶಕಗಳ ತನಕ ಪ್ರವಾದಿವರ್ಯರನ್ನು(ಸ) ಬೈಯುತ್ತಿದ್ದ, ಸುಳ್ಳನೆಂದು ಹೇಳಿದ್ದ, ಲೇವಡಿ ಮಾಡುತ್ತಿದ್ದ, ಶಾರೀರಿಕ ಹಿಂಸೆ ನೀಡಿದ್ದ, ಅಬೂತಾಲಿಬ್ ಕಣಿವೆಯಲ್ಲಿ ಅವರಿಗೆ ಸಾಮಾಜಿಕ ಬಹಿಷ್ಕಾರ ಹಾಕಿದ್ದ, ಕೊಲೆಯ ಸಂಚು ಹೂಡಿದ್ದ, ಮನೆಯಿಂದ ಹೊರ ಹಾಕಿದ್ದ, ದೇಶಭ್ರಷ್ಟಗೊಳಿಸಿದ್ದ ಹಾಗೂ ನೂರಾರು ಮೈಲಿ ದೂರಕ್ಕೆ ಹೋಗಿ ಅನೇಕ ಸಲ ಅವರ ವಿರುದ್ಧ ಯುದ್ಧ ಮಾಡಿದ ವೈರಿಗಳ ಪಾಲಿಗೂ ಪ್ರವಾದಿವರ್ಯರ(ಸ) ಔದಾರ್ಯದ ಬಾಗಿಲು ಮುಕ್ತವಾಗಿತ್ತು.

## ತಬೂಕ್ ಯಾತ್ರೆ

ಮದೀನಾದಿಂದ ಸುಮಾರು 500 ಮೈಲಿ ಉತ್ತರಕ್ಕೆ ತಬೂಕ್ ನಗರವಿದೆ. ರೋಮನ್ ಸಾಮ್ರಾಜ್ಯಕ್ಕೆ ಒಳಪಟ್ಟ ಈ ನಗರದ ಪರಿಸರದಲ್ಲಿ ಮುಸ್ಲಿಮರಿಂದ ಮೂತಾ ಯುದ್ಧದ ಪ್ರತೀಕಾರ ಪಡೆಯಲಿಕ್ಕಾಗಿ ಗಸ್ಸಾನಿಗಳ ಸೇನಾ ತುಕಡಿಗಳು ಮತ್ತು ಕೈಸರನ ಸೇನೆಗಳು ಒಟ್ಟುಗೂಡುತ್ತಿವೆ. ಮೂತಾ ಯುದ್ಧದಲ್ಲಿ ಕೇವಲ ಮೂರು ಸಾವಿರ ಮುಸ್ಲಿಮ್ ಯೋಧರು ಕೈಸರ್‌ನ ಬೃಹತ್ ಶಿಸ್ತುಬದ್ಧ ಸೇನೆ ಮತ್ತು ಗೋತ್ರಗಳ ಅಸಂಖ್ಯ ಯೋಧರನ್ನು ರಣರಂಗದಿಂದ ಓಡಿಸುವಲ್ಲಿ ಸಫಲರಾಗಿದ್ದರು. ಅದಕ್ಕೆ ಪ್ರತೀಕಾರವಾಗಿ ರೋಮನ್ ದೊರೆ ಈಗ ಅರೇಬಿಯಾದ ಮೇಲೆ ಆಕ್ರಮಣ ಮಾಡಿ ಅದನ್ನು ನುಚ್ಚುನೂರುಗೊಳಿಸಲು ನಿರ್ಧರಿಸಿದ್ದರು. ಈ ವಿಷಯ ಯಾರಿಗೂ ಅಜ್ಞಾತ ವಾಗಿರಲಿಲ್ಲ. ಮದೀನಾಕ್ಕೆ ವ್ಯಾಪಾರಕ್ಕಾಗಿ ಬರುವ ಸಿರಿಯಾದ ವರ್ತಕರು ರೋಮನ್ ಸಾಮ್ರಾಜ್ಯದ ಬೃಹತ್ ಸೇನೆಯು ಸಿರಿಯಾದಲ್ಲಿ ಸೇರಿದೆ ಎಂದೂ ಅರಬರೊಂದಿಗೆ ಯುದ್ಧವಿರುವುದರಿಂದ ಸೈನಿಕರಿಗೆ ಒಂದು ವರ್ಷದ ಸಂಬಳವನ್ನು ಮುಂಗಡವಾಗಿ ಪಾವತಿಸಲಾಗಿದೆಯೆಂದೂ ತಿಳಿಸುತ್ತಾರೆ. ಈ ಸೇನೆಯಲ್ಲಿ ಲಹಮ್ ಮತ್ತು ಗಸ್ಸಾನ್‌ನ ಎಲ್ಲ ಅರಬ್ ಗೋತ್ರಗಳೂ ಶಾಮೀಲಾಗಿದ್ದು ಅವರ ಮುಂಚೂಣಿಯ ಪಡೆಯು 'ಬಲ್ಕಾ'ದ ವರೆಗೆ ತಲುಪಿದೆಯೆಂದೂ ಅವರು ತಿಳಿಸುತ್ತಾರೆ. ಕಠಿಣ ಬರಗಾಲದಿಂದಾಗಿ ಅರೇಬಿಯಾದಲ್ಲಿ ಹಸಿವೆ ತಾಂಡವವಾಡುತ್ತಿದೆ. ಆದ್ದರಿಂದ ಅವರನ್ನು ಸದೆಬಡಿಯಲು ಇದು ಸೂಕ್ತ ಸಂದರ್ಭವೆಂದು ಬಗೆದು ಹಿರ್ಕಲ್ ತನ್ನ 40 ಸಾವಿರ ಸೈನಿಕರನ್ನು ರವಾನಿಸಿದ್ದಾನೆ. ಇಂತಹುದೇ ಸುದ್ದಿಗಳು ದಿನನಿತ್ಯ ಮದೀನಾದಲ್ಲಿ ಹರಡುತ್ತಿವೆ. ರೋಮನರ ಆಕ್ರಮಣದ ಭೀತಿಯು ದಿನದಿಂದ ದಿನಕ್ಕೆ ಭೀಕರವಾಗುತ್ತದೆ.

ಮುಹಮ್ಮದ್(ಸ) ತಮ್ಮ ಗುಪ್ತಚರರ ಮೂಲಕ ಈ ಸುದ್ದಿಯನ್ನು ದೃಢೀಕರಿಸಿ

ಕೊಂಡಿದ್ದಾರೆ. ಯುದ್ಧದ ಸಿದ್ಧತೆಗಳಿಗಾಗಿ ನೆರವಾಗಲು ಸಾರ್ವತ್ರಿಕ ವಿಜ್ಞಾಪನೆ ಹೊರಡಿಸಲಾಗಿದೆ. ಎಲ್ಲರೂ ತಂತಮ್ಮ ಶಕ್ಯಾನುಸಾರ ಯುದ್ಧನಿಧಿಗೆ ನೆರವು ನೀಡಿದ್ದಾರೆ. ಈಗ ಶತ್ರು ಸೇನೆಯನ್ನು ಅರೇಬಿಯಾದ ಗಡಿಯೊಳಗೆ ಪ್ರವೇಶಿಸುವ ಮೊದಲೇ ಎದುರಿಸಿ ಸೋಲಿಸಬೇಕೆಂಬ ನಿರ್ಧಾರದೊಂದಿಗೆ ಪ್ರವಾದಿವರ್ಯರು(ಸ) ಯುದ್ಧಕ್ಕಾಗಿ ಹೊರಡಲು ಆದೇಶಿಸುತ್ತಾರೆ. ಶತ್ರುವಿನ ಮೇಲೆ ಹಠಾತ್ ಧಾಳಿ ಮಾಡಿ ಅವರಿಗೆ ಚೇತರಿಸುವ ಅವಕಾಶವನ್ನೂ ಒದಗಿಸದಿರುವುದು ಪ್ರವಾದಿವರ್ಯರ(ಸ) ಯುದ್ಧ ತಂತ್ರಗಳ ಪೈಕಿ ಒಂದಾಗಿತ್ತು.

30 ಸಾವಿರ ಯೋಧರು, 10 ಸಾವಿರ ಕುದುರೆ ಮತ್ತು ಒಂಟೆಗಳೊಂದಿಗೆ ತಂತಮ್ಮ ಆಯುಧ ಮತ್ತು ಆಹಾರ ಸಾಮಗ್ರಿಗಳೊಂದಿಗೆ ಹಾಜರಾಗುತ್ತಾರೆ. ಅರೇಬಿಯಾದ ಇತಿಹಾಸದಲ್ಲಿ ಇಂದಿನ ತನಕ ಅಷ್ಟು ದೊಡ್ಡ ಸೈನ್ಯವು ಸಜ್ಜಾಗಿರಲಿಲ್ಲ. ಸೇನೆಯ ದಂಡ ನಾಯಕತ್ವವನ್ನು ಸ್ವತಃ ಪ್ರವಾದಿ(ಸ) ವಹಿಸಿದ್ದರು. ಸೇನೆಯು 500 ಮೈಲಿಗಳ ದೀರ್ಘ ಯಾತ್ರೆಗೆ ಸಿದ್ಧವಾಗಿ ಹೊರಡುತ್ತದೆ. ಉರಿ ಬಿಸಿಲು, ಬರದ ಬೇಗೆ ಮತ್ತು ಖರ್ಜೂರದ ಫಲ ಹಣ್ಣಾಗುವ ಋತು-ಇವೆಲ್ಲವೂ ಒಟ್ಟು ಸೇರಿ ಮದೀನಾದಿಂದ ಹೊರಡುವುದನ್ನೇ ಅರೋಚಕಗೊಳಿಸಿದ್ದುವು. ಆದರೂ ಮುನ್ನೂರು ಮೈಲಿಗಳ ಯಾತ್ರೆಯ ಬಳಿಕ 'ಜರ್ಫ್' ಎಂಬಲ್ಲಿ ಇಸ್ಲಾಮಿ ಸೇನೆಯು ಬಿಡಾರ ಹೂಡುತ್ತದೆ. ಅಲ್ಲಿಂದ ಹೊರಟು ತಬೂಕ್ ತಲುಪಿ 20 ದಿನಗಳ ಕಾಲ ಅಲ್ಲಿ ತಂಗುತ್ತದೆ. ಆದರೆ ಗಸ್ಸಾನೀಗಳಿಗೆ ಆಕ್ರಮಣ ಮಾಡುವ ಧೈರ್ಯ ಬರುವುದಿಲ್ಲ. ಕೈಸರ್‌ನ ಸೇನೆಯು ಎಲ್ಲೂ ಕಾಣಸಿಗುವುದಿಲ್ಲ. ಅವರೆಲ್ಲರಿಗೂ ಭಯಭೀತಿ ಆವರಿಸಿದೆ.

"ಮುಸ್ಲಿಮರು ನಿರ್ಭೀತಿಯಿಂದ ನೂರಾರು ಮೈಲಿ ದೂರದ ನಮ್ಮ ಗಡಿಗಳಿಗೆ ಬಂದು ಎಷ್ಟು ಧೈರ್ಯದಿಂದ ತಂಗಿರುವರು. ಜೀವನ ಮರಣಗಳು ಅವರ ಮಟ್ಟಿಗೆ ಒಂದು ಆಟ-ವಿನೋದದಂತಿದೆ" ಎಂದು ಯೋಚಿಸಿ ಶತ್ರು ಸೇನೆಯು ಭಯಭೀತ ವಾಗುತ್ತಿದೆ. ಅದಕ್ಕೆ ಆ ಸೇನೆಯನ್ನೆದುರಿಸುವ ಧೈರ್ಯವೇ ಬರುವುದಿಲ್ಲ.

ಈ ಮಧ್ಯೆ ಈಲಾ, ಜರ್ಮಾ ಮತ್ತು ಅದ್ರುಹ್‌ನ ನಿವಾಸಿಗಳು ಬಂದು ಪ್ರವಾದಿ ವರ್ಯರಿಂದ(ಸ) ಅಭಯ ಪತ್ರಗಳನ್ನು ಪಡೆದುಕೊಳ್ಳುತ್ತಾರೆ.

ಒಂದು ದಿನ ಪ್ರವಾದಿವರ್ಯರು(ಸ) ತಮ್ಮ ಅನುಯಾಯಿಗಳನ್ನುದ್ದೇಶಿಸಿ ಒಂದು ಪ್ರವಚನ ನೀಡುತ್ತಾರೆ. ಅದರ ಪ್ರತಿಯೊಂದು ಪದವೂ ಸನ್ಮಾರ್ಗದರ್ಶನ, ಒಳಿತು ಮತ್ತು ಸಮೃದ್ಧಿಯ ಅಕ್ಷಯ ನಿಧಿಯಾಗಿದೆ:

ಅಲ್ಲಾಹನ ಸ್ತುತಿ-ಸ್ತೋತ್ರಗಳ ಬಳಿಕ ಪ್ರವಾದಿವರ್ಯರು(ಸ) ಈ ರೀತಿ ಹೇಳಿದರು:

1. ಅತ್ಯಂತ ಸತ್ಯಪೂರ್ಣ ವಚನವು ಅಲ್ಲಾಹನ ಗ್ರಂಥವಾಗಿದೆ.

2. ತಕ್ವಾದ ವಚನವೇ ನೈಜ ಭರವಸೆಯ ವಸ್ತುವಾಗಿದೆ.

3. ಎಲ್ಲ ಸಮುದಾಯಗಳಿಗಿಂತ ಉತ್ತಮ ಸಮುದಾಯ ಇಬ್ರಾಹೀಮ್‌ರ(ಅ) ಸಮುದಾಯವಾಗಿದೆ.

4. ಎಲ್ಲ ಕ್ರಮಗಳಲ್ಲಿ ಉತ್ತಮ ಕ್ರಮ ಮುಹಮ್ಮದ್‌ರ(ಸ) ಕ್ರಮವಾಗಿದೆ.

5. ಎಲ್ಲ ಮಾತುಗಳಿಗಿಂತಲೂ ಮಿಗಿಲಾದ ಮಾತು ಅಲ್ಲಾಹನ ಸ್ಮರಣೆಯಾಗಿದೆ.

6. ಎಲ್ಲ ಪ್ರವಚನಗಳಲ್ಲಿ ಪರಿಶುದ್ಧವೂ ಅತ್ಯುತ್ತಮವೂ ಆದ ಪ್ರವಚನ ಪವಿತ್ರ ಕುರ್‌ಆನ್ ಆಗಿದೆ.

7. ಅತ್ಯುತ್ತಮ ಕೆಲಸ ಸಾಹಸದ ಕೆಲಸವಾಗಿದೆ.

8. ಅತ್ಯಂತ ಕೆಟ್ಟ ಕಾರ್ಯ ಧರ್ಮದಲ್ಲಿಲ್ಲದ ನವೀನ ಆಚಾರಗಳಾಗಿವೆ.

9. ಅತ್ಯುತ್ತಮ ಮಾರ್ಗದರ್ಶನ ಪ್ರವಾದಿಗಳ ಮಾರ್ಗದರ್ಶನವಾಗಿದೆ.

10. ಅತ್ಯುತ್ತಮ ಮರಣವು ಅಲ್ಲಾಹನ ಮಾರ್ಗದಲ್ಲಿ ಹುತಾತ್ಮರಾದವರ ಮರಣವಾಗಿದೆ.

11. ಮನುಷ್ಯನು ಸನ್ಮಾರ್ಗದರ್ಶನ ಪಡೆದ ಬಳಿಕ ಹಿಡಿಯುವ ಪಥಭ್ರಷ್ಟತೆಯು ಅತ್ಯಂತ ನಿಕೃಷ್ಟವಾಗಿದೆ.

12. ಮನುಷ್ಯನಿಗೆ ಧಾರ್ಮಿಕ, ನೈತಿಕ ಮತ್ತು ಆಧ್ಯಾತ್ಮಿಕ ಲಾಭ ಸಿಗುವಕಾರ್ಯಗಳೇ ಅತ್ಯುತ್ತಮ ಕಾರ್ಯಗಳಾಗಿವೆ.

13. ಅನುಸರಿಸಲ್ಪಡುವಂತಹ ಮಾರ್ಗದರ್ಶನವೇ ಅತ್ಯುತ್ತಮ ಮಾರ್ಗದರ್ಶನ ವಾಗಿದೆ.

14. ಅತ್ಯಂತ ಕೆಟ್ಟ ಕುರುಡು ಹೃದಯದ ಕುರುಡಾಗಿದೆ. ಹೃದಯದ ಶ್ರೀಮಂತಿಕೆಯೇ ನಿಜವಾದ ಶ್ರೀಮಂತಿಕೆ.

15. ಕೊಡುವ ಕೈ ಪಡೆಯುವ ಕೈಗಿಂತ ಉತ್ತಮವಾಗಿದೆ.

16. ನೈಜ ಬೇಡಿಕೆಗಳನ್ನು ಪೂರೈಸಬಲ್ಲ ಅಲ್ಪ ಸಂಪತ್ತು ಮನುಷ್ಯನನ್ನು ಅಶ್ರದ್ಧನಾಗಿ ಮಾಡುವಂತಹ ಅಧಿಕ ಸಂಪತ್ತಿಗಿಂತ ಉತ್ತಮವಾಗಿದೆ.

17. ಅತ್ಯಂತ ಕೆಟ್ಟ ಪಶ್ಚಾತ್ತಾಪ ಮರಣ ಸಂಕಟದ ವೇಳೆ ಪಡುವ ಪಶ್ಚಾತ್ತಾಪವಾಗಿದೆ.

18. ಅತ್ಯಂತ ಕೆಟ್ಟ ನಾಚಿಕೆ ಮತ್ತು ಪರಿತಾಪ ನಿರ್ಣಾಯಕ ದಿನದ ನಾಚಿಕೆ ಮತ್ತು ಪರಿತಾಪವಾಗಿದೆ.

19. ಕೆಲವರು ಜುಮಾ ನಮಾಝ್‌ಗೆ ಬರುತ್ತಾರೆ. ಆದರೆ ಅವರ ಹೃದಯಗಳು ಹಿಂದೆ ಉಳಿದಿರುತ್ತವೆ.

20. ಕೆಲವರು ಅಲ್ಲಾಹನನ್ನು ವಿರಳವಾಗಿ ಸ್ಮರಿಸುತ್ತಾರೆ.

21. ಪಾಪ ಕಾರ್ಯಗಳ ಪೈಕಿ ಅತ್ಯಂತ ಘೋರವಾದುದು ಸುಳ್ಳು (ಹೇಳುವ ನಾಲಗೆಯಾಗಿದೆ).

22. ಮನುಷ್ಯನ ಅತ್ಯುತ್ತಮ ಬುತ್ತಿ ದೇವಭಕ್ತಿಯಾಗಿದೆ.

23. ಧೀಮಂತಿಕೆಯ ಕಿರೀಟ ಅಲ್ಲಾಹನ ಭಯವಾಗಿದೆ.

24. ಮನಮುಟ್ಟುವ ಅತ್ಯುತ್ತಮ ವಸ್ತು ದೃಢ ನಂಬಿಕೆಯಾಗಿದೆ.

25. ಸಂದೇಹ-ಸಂಶಯಗಳು ಸತ್ಯನಿಷೇಧದ ಒಂದು ಶಾಖೆಯಾಗಿದೆ.

26. ಮೃತ ದೇಹದ ಬಳಿ ವಿಲಾಪಿಸುವುದು ಅಜ್ಞಾನಜನ್ಯ ಕೆಲಸವಾಗಿದೆ.

27. ಅಪ್ರಾಮಾಣಿಕತೆಯು ನರಕದ ಅಗ್ನಿಯಾಗಿದೆ.

28. ಕೆಲವು ಗದ್ಯ ಬೆಂಕಿಯ ಕಲೆಯಾಗಿದೆ.

29. ಕೆಲವು ಕಾವ್ಯವಾಚನ ಶೈತಾನನ ಕೃತ್ಯವಾಗಿದೆ.

30. ಮದ್ಯಪಾನವು ಕೆಡುಕುಗಳ ಜನನಿಯಾಗಿದೆ.

31. ಅನಾಥನ ಸೊತ್ತು ತಿನ್ನುವುದು ಅತ್ಯಂತ ಕೆಟ್ಟ ಉಪಜೀವನವಾಗಿದೆ.

32. ಇತರರಿಂದ ಪಾಠ ಕಲಿಯುವವನು ಭಾಗ್ಯವಂತನು.

33. ತಾಯಿಯ ಉದರದಲ್ಲೇ ನತದೃಷ್ಟನಾಗಿದ್ದವನು ನೈಜ ನತದೃಷ್ಟ.

34. ಮನುಷ್ಯನ ಕರ್ಮಗಳ ಭಂಡಾರ ಅವನ ಅತ್ಯುತ್ತಮ ಪರಿಣಾಮವಾಗಿದೆ.

35. ಅತ್ಯಂತ ಕೆಟ್ಟ ಕನಸು ಮಿಥ್ಯ ಕನಸಾಗಿದೆ.

36. ಯಾವುದು ಸಂಭವಿಸಲಿಕ್ಕಿದೆಯೋ ಅದರ ಸಮಯ ಸನ್ನಿಹಿತವಾಗಿದೆ.

37. ಸತ್ಯವಿಶ್ವಾಸಿಗೆ ಬೈಯುವುದು ದುರಾಚಾರ ಮತ್ತು ಅವನನ್ನು ಕೊಲ್ಲುವುದು ಸತ್ಯನಿಷೇಧವಾಗಿದೆ.

38. ಸತ್ಯವಿಶ್ವಾಸಿಯ ಮಾಂಸ ತಿನ್ನುವುದು ಅಂದರೆ ಅವನ ಬೆನ್ನ ಹಿಂದೆ ಅವನ ದೂಷಣೆ ಮಾಡುವುದಾಗಿದೆ. ಇದು ಪಾಪಗಳ ಪೈಕಿ ದೊಡ್ಡ ಪಾಪವಾಗಿದೆ.

39. ಸತ್ಯವಿಶ್ವಾಸಿಯ ರಕ್ತವು ಇನ್ನೊಬ್ಬನಿಗೆ ನಿಷಿದ್ಧವಾಗಿರುವಂತೆ ಅವನ ಸೊತ್ತೂ ನಿಷಿದ್ಧವಾಗಿದೆ.

40. ಯಾರು ಅಲ್ಲಾಹನ ಬಗ್ಗೆ ನಿರಪೇಕ್ಷನಾಗುತ್ತನೋ ಅಲ್ಲಾಹನು ಅವನನ್ನೂ ತಿರಸ್ಕರಿಸುತ್ತಾನೆ.

41. ಯಾರು ಇತರರ ಕುಂದು ಕೊರತೆಗಳನ್ನು ಅಡಗಿಸುತ್ತಾನೋ ಅವನ ಕುಂದು ಕೊರತೆಗಳೂ ಅಡಗಿಸಲ್ಪಡುವುವು.

42. ಯಾರು ಇತರರ ಜೊತೆ ಕ್ಷಮೆಯ ವರ್ತನೆ ಮಾಡುತ್ತಾನೋ ಅವನೊಂದಿಗೆ ಅಲ್ಲಾಹನೂ ಕ್ಷಮೆಯ ವರ್ತನೆ ಮಾಡುವನು.

43. ಯಾರು ಕೋಪವನ್ನು ನುಂಗಿ ಬಿಡುತ್ತಾನೋ ಅಲ್ಲಾಹನು ಅವನಿಗೆ ಅದರ ಪ್ರತಿಫಲವನ್ನು ದಯಪಾಲಿಸುತ್ತಾನೆ.

44. ನಷ್ಟ ಉಂಟಾದಾಗ ಯಾರು ಸಹನೆ ಕೈಗೊಳ್ಳುತ್ತಾನೋ ಅಲ್ಲಾಹನು ಅವನಿಗೆ

ಉತ್ತಮ ಪ್ರತಿಫಲವನ್ನು ನೀಡುವನು.

45. ಯಾರು ಚಾಡಿಯನ್ನು ಹರಡುತ್ತಾನೋ ಅಲ್ಲಾಹನು ಅವನನ್ನು ಬಹಿರಂಗವಾಗಿ ನಿಂದಿಸುತ್ತಾನೆ.

46. ಯಾರು ತಾಳ್ಮೆ ವಹಿಸುತ್ತಾನೋ ಅಲ್ಲಾಹನು ಅವನನ್ನು ಅಭಿವೃದ್ಧಿ ಗೊಳಿಸುತ್ತಾನೆ.

47. ಯಾರು ಅಲ್ಲಾಹನಿಗೆ ಅವಿಧೇಯನಾಗುತ್ತಾನೋ ಅಲ್ಲಾಹನು ಅವನಿಗೆ ಶಿಕ್ಷೆ ನೀಡುವನು.

ಕೊನೆಯಲ್ಲಿ ಪ್ರವಾದಿವರ್ಯರು(ಸ) ಮೂರು ಸಲ ಅಲ್ಲಾಹನ ಕ್ಷಮೆ ಯಾಚಿಸುತ್ತಾರೆ.

## ವಿದಾಯ ಹಜ್ಜ್

ಅಂದು ಹಿ. ಶ. 10ರ ದುಲ್‌ಕಅದ್ ತಿಂಗಳ 25ನೆಯ ದಿನ. ಮುಹಮ್ಮದ್(ಸ) ಹಜ್ಜ್ ಗಾಗಿ ಮದೀನಾದಿಂದ ಹೊರಟು ನಿಂತಿದ್ದಾರೆ. ಜನರು ಅತ್ಯಧಿಕ ಸಂಖ್ಯೆಯಲ್ಲಿ ಸೇರುವಂತೆ ಎಲ್ಲ ಕಡೆಯೂ ಇದರ ಸುದ್ದಿ ಮುಟ್ಟಿಸಲಾಗಿದೆ. ಪ್ರವಾದಿವರ್ಯರು(ಸ) ತಮ್ಮ ಸಂಗಾತಿಗಳ ಒಂದು ದೊಡ್ಡ ತಂಡದೊಂದಿಗೆ ಯಾತ್ರೆ ಹೊರಟಾಗ ಹಾದಿಯಲ್ಲಿ ವಿಭಿನ್ನ ಗೋತ್ರಗಳ ಅನೇಕ ತಂಡಗಳು ಅವರ ಜೊತೆ ಸೇರುತ್ತಲೇ ಹೋಗುತ್ತಿತ್ತು. ಪ್ರವಾದಿ ವರ್ಯರ(ಸ) ಎಲ್ಲ ಪತ್ನಿಯರೂ ಈ ಪವಿತ್ರ ಯಾತ್ರೆಯಲ್ಲಿ ಅವರ ಜೊತೆಗಿದ್ದಾರೆ. 'ದುಲ್ ಹಲೀಫಾ' ಎಂಬಲ್ಲಿಗೆ ತಲುಪಿ ಪ್ರವಾದಿವರ್ಯರು(ಸ) ಮತ್ತು ಸಂಗಾತಿಗಳು ಇಹ್ರಾಮ್ ಧರಿಸುತ್ತಾರೆ. ಅಲ್ಲಿಂದ ಅಲ್ಲಾಹನ ಭವನಕ್ಕೆ ಹೋಗುವವನ ಆಧ್ಯಾತ್ಮಿಕ ಘೋಷಣೆ ಆರಂಭವಾಗುತ್ತದೆ:

"ಲಬ್ಬೈಕ್ ಅಲ್ಲಾಹುಮ್ಮ ಲಬ್ಬೈಕ್" (ನಾವು ಹಾಜರಿದ್ದೇವೆ, ಓ ಅಲ್ಲಾಹ್ ನಾವು ಹಾಜರಿದ್ದೇವೆ.)

"ಲಬ್ಬೈಕ್ ಲಾ ಶರೀಕ ಲಕ ಲಬ್ಬೈಕ್" (ನಾವು ಹಾಜರಿದ್ದೇವೆ, ನಿನಗಾರೂ ಸಹಭಾಗಿಗಳಿಲ್ಲ, ನಾವು ಹಾಜರಿದ್ದೇವೆ.)

"ಇನ್ನಲ್ ಹಮ್ದ ವನ್ನಿಅ್‌ಮತ ಲಕ ವಲ್ ಮುಲ್ಕ ಲಾ ಶರೀಕ ಲಕ್" (ಖಂಡಿತವಾಗಿಯೂ ಸ್ತುತಿ ನಿನಗೇ ಇದೆ ಮತ್ತು ಅನುಗ್ರಹವು ನಿನ್ನ ವಶದಲ್ಲೇ ಇದೆ. ನಿನಗೆ ಯಾರೂ ಸಹಭಾಗಿಗಳಿಲ್ಲ.)

ಮಾರ್ಗದಲ್ಲಿ ಸಿಗುವ ಪ್ರತಿಯೊಂದು ಏರಿಳಿತದ ವೇಳೆಯೂ ಈ ಪವಿತ್ರ ಘೋಷಣೆಯು ಮೊಳಗಿ ಮುಗಿಲು ಮುಟ್ಟುತ್ತಿದೆ.

ಪ್ರವಾದಿವರ್ಯರು(ಸ) ಮಕ್ಕಾದ ಸಮೀಪ 'ದೀತುವಾ' ಎಂಬಲ್ಲಿ ಸ್ವಲ್ಪ ಕಾಲ ತಂಗುತ್ತಾರೆ. ತರುವಾಯ ಪ್ರವಾದಿವರ್ಯರು(ಸ) ಮತ್ತವರ ಅನುಯಾಯಿ ವೃಂದ ಮಕ್ಕಾದ ಮೇಲ್ಭಾಗದಿಂದ ನಗರವನ್ನು ಪ್ರವೇಶಿಸುತ್ತದೆ. ಮುಹಮ್ಮದ್(ಸ) ತವಾಫ್(ಕಅಬಾ ಭವನದ

ಪ್ರದಕ್ಷಿಣೆ) ಮತ್ತು ಸಈ(ಸಫಾ ಮತ್ತು ಮರ್ವಾ ಬೆಟ್ಟಗಳ ನಡುವೆ ನಡೆದಾಟ) ಮಾಡಿ ಮುಗಿಸುತ್ತಾರೆ. ಎರಡೂ ಬೆಟ್ಟಗಳನ್ನೇರಿ ಕಅಬಾದ ಕಡೆಗೆ ಮುಖ ಮಾಡಿ ಏಕದೇವತ್ವದ ಘೋಷಣೆಯನ್ನು ಮೊಳಗಿಸುತ್ತಾರೆ. ತರುವಾಯ ತಮ್ಮ ಒಂಟೆಯಾದ ಕಸ್ವಾದ ಮೇಲೆ ಕುಳಿತು ತಮ್ಮ ಅನುಯಾಯಿಗಳ ಕಡೆ ನೋಡುತ್ತಾರೆ. ಸಂತೋಷಾತಿರೇಕ ದಿಂದ ಕೃತಜ್ಞಾಭಾವದೊಂದಿಗೆ ಅಲ್ಲಾಹನ ಮುಂದೆ ಶಿರ ಬಾಗುತ್ತಾರೆ.

ಅರಫಾ ಮೈದಾನದಲ್ಲಿ ನೆರೆದಿರುವ ಒಂದು ಲಕ್ಷ ಇಪ್ಪತ್ತನಾಲ್ಕು ಸಾವಿರ ಸಂಗಾತಿಗಳ ದೃಷ್ಟಿಯು ಮುಹಮ್ಮದ್‌ರ(ಸ) ಮುಖಾರವಿಂದದ ಕಡೆಗೇ ನೆಟ್ಟಿದೆ. ಪ್ರವಾದಿವರ್ಯರು(ಸ) ಅರಫಾ ಬೆಟ್ಟದ ಮೇಲಿರುವರು, ಜನರ ಹೃದಯ ಬಡಿತ ಜೋರಾಗುತ್ತದೆ. ಸಂತೋಷದಿಂದ ಎಲ್ಲ ಮುಖಗಳೂ ಅರಳಿವೆ. ತಮ್ಮ ಒಂಟೆಯ ಮೇಲೆ ಕುಳಿತು ಪ್ರವಾದಿವರ್ಯರು(ಸ) ನೆರೆದ ಸಭಿಕರನ್ನುದ್ದೇಶಿಸಿ ಭಾಷಣ ಮಾಡುತ್ತಾರೆ:

ಸರ್ವ ಸ್ತುತಿಯೂ ಅಲ್ಲಾಹನಿಗೆ ಮೀಸಲು. ನಾವು ಅವನನ್ನೇ ಸ್ತುತಿಸುತ್ತೇವೆ. ಅವನಲ್ಲೇ ಸಹಾಯ ಯಾಚಿಸುತ್ತೇವೆ. ಅವನಲ್ಲಿ ಪಶ್ಚಾತ್ತಾಪ ಪಡುತ್ತೇವೆ. ಅವನತ್ತ ಮರಳುತ್ತೇವೆ. ನಾವು ನಮ್ಮ ಚಿತ್ತಗಳ ದುಷ್ಪ್ರೇರಣೆ ಹಾಗೂ ನಮ್ಮ ಕರ್ಮಗಳ ದುಷ್ಪರಿಣಾಮಗಳಿಂದ ಅಲ್ಲಾಹನ ಅಭಯ ಯಾಚಿಸುತ್ತೇವೆ. ಯಾರಿಗೆ ಅಲ್ಲಾಹನು ಸನ್ಮಾರ್ಗದರ್ಶನ ಮಾಡಿದನೋ ಅವನನ್ನು ಯಾರೂ ಪಥಭ್ರಷ್ಟ ಗೊಳಿಸಲಾರ. ಅಲ್ಲಾಹನು ಪಥಭ್ರಷ್ಟಗೊಳಿಸಿದವನಿಗೆ ಯಾರೂ ಸನ್ಮಾರ್ಗದರ್ಶನ ಮಾಡಲಾರ. ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲವೆಂದೂ ಅವನು ಏಕೈಕನೆಂದೂ ಅವನಿಗಾರೂ ಭಾಗೀದಾರರಿಲ್ಲವೆಂದೂ ನಾನು ಸಾಕ್ಷ್ಯವಹಿಸುತ್ತೇನೆ. ಮುಹಮ್ಮದ್(ಸ) ಅವನ ದಾಸನೆಂದೂ ಪ್ರವಾದಿಯೆಂದೂ ನಾನು ಸಾಕ್ಷ್ಯವಹಿಸುತ್ತೇನೆ. ಅಲ್ಲಾಹನದೇ ಪರಮಾಧಿಕಾರ. ಸ್ತುತಿಸ್ತೋತ್ರಗಳೆಲ್ಲವೂ ಅವನಿಗೇ ಮೀಸಲು. ಅವನೇ ಜೀವದಾನ ಮಾಡುತ್ತಾನೆ. ಅವನೇ ಸಾಯಿಸುತ್ತಾನೆ. ಅವನು ಸಕಲ ವಸ್ತುಗಳ ಮೇಲೆ ಸರ್ವಶಕ್ತಿ ಯುಳ್ಳವನಾಗಿದ್ದಾನೆ. ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ. ಅವನು ಏಕೈಕನು. ಅವನು ತನ್ನ ವಾಗ್ದಾನವನ್ನು ಪೂರೈಸಿದನು. ತನ್ನ ದಾಸನಿಗೆ ವಿಜಯ ದಯಪಾಲಿಸಿದನು. ಅವನೊಬ್ಬನೆ ಶತ್ರು ಸೈನ್ಯಗಳನ್ನು ಪರಾಜಿತಗೊಳಿಸಿದನು.

ಅಲ್ಲಾಹನ ದಾಸರೇ! ಅವನ ದಾಸ್ಯ ಮತ್ತು ಆರಾಧನೆ ಮಾಡಬೇಕೆಂದು ನಾನು ನಿಮಗೆ ಉಪದೇಶಿಸುತ್ತೇನೆ ಮತ್ತು ಅದಕ್ಕೆ ನಿಮ್ಮನ್ನು ಪ್ರೇರೇಪಿಸುತ್ತೇನೆ.

ಜನರೇ! ನನ್ನ ಮಾತುಗಳನ್ನು ಗಮನವಿಟ್ಟು ಆಲಿಸಿರಿ. ಈ ವರ್ಷದ ಬಳಿಕ ನಾವು ಇಲ್ಲಿ ಪರಸ್ಪರ ಭೇಟಿಯಾಗುತ್ತೇವೋ ಇಲ್ಲವೋ ಎಂಬುದು ನನಗೆ ತಿಳಿಯದು. ಮುಂದಿನ ವರ್ಷದ ಹಜ್ಜ್ ನಿರ್ವಹಿಸಲು ನಾನು ಇರುತ್ತೇನೋ ಇಲ್ಲವೋ ಎಂಬುದೂ ನನಗೆ ತಿಳಿಯದು.

ಜನರೇ! ಖಂಡಿತವಾಗಿಯೂ ಅಲ್ಲಾಹನು ಹೀಗೆ ಹೇಳಿರುವನು: "ಮನುಷ್ಯರೇ!

ನಿಮ್ಮನ್ನು ನಾನು ಒಂದು ಗಂಡು ಮತ್ತು ಒಂದು ಹೆಣ್ಣಿನಿಂದ ಸೃಷ್ಟಿಸಿರುವೆನು. ನಾನು ನಿಮ್ಮನ್ನು ವಿವಿಧ ಕುಲ-ಗೋತ್ರಗಳಾಗಿ ಮಾಡಿರುವುದು ನೀವು ಪರಸ್ಪರ ಪರಿಚಯ ಪಡಲಿಕ್ಕಾಗಿದೆ. ಖಂಡಿತವಾಗಿಯೂ ಅಲ್ಲಾಹನ ಬಳಿ ನಿಮ್ಮ ಪೈಕಿ ಅತ್ಯಧಿಕ ಭಯಭಕ್ತಿಯುಳ್ಳವನೇ ಅತ್ಯಂತ ಗೌರವಾರ್ಹನಾಗಿರುವನು."

ಅರಬನಿಗೆ ಅರಬೇತರನ ಮೇಲೆ ಯಾವುದೇ ಶ್ರೇಷ್ಠತೆ ಇಲ್ಲ. ಅರಬೇತರನಿಗೆ ಅರಬನ ಮೇಲೆ ಯಾವುದೇ ಶ್ರೇಷ್ಠತೆಯಿಲ್ಲ. ಕರಿಯನಿಗೆ ಬಿಳಿಯನ ಮೇಲೆ ಯಾವುದೇ ಮೇಲ್ಮೆ ಇಲ್ಲ. ಬಿಳಿಯನಿಗೆ ಕರಿಯನ ಮೇಲೆ ಯಾವುದೇ ಮೇಲ್ಮೆ ಇಲ್ಲ. ಧರ್ಮನಿಷ್ಠೆ ಮತ್ತು ದೇವಭಕ್ತಿಯ ಹೊರತು. ಮನುಷ್ಯರೆಲ್ಲರೂ ಆದಮರ ಮಕ್ಕಳು. ಆದಮ ರಾದರೋ ಮಣ್ಣಿನಿಂದ ಸೃಷ್ಟಿಸಲ್ಪಟ್ಟವರು. ರಕ್ತ ಅಥವಾ ಸಂಪತ್ತಿನ ಆಧಾರದಲ್ಲಿರುವ ಎಲ್ಲ ಶ್ರೇಷ್ಠತೆ ಗಳನ್ನು ನಾನು ನನ್ನ ಪಾದದಡಿ ಹಾಕಿ ತುಳಿದಿರುವೆನು. ಕಅಬಾ ಭವನದ ಮೇಲ್ನೋಟ ಮತ್ತು ಹಜ್ಜ್ ಯಾತ್ರಿಕರಿಗೆ ನೀರು ಕುಡಿಸುವ ಕಾರ್ಯವು ಇದಕ್ಕೆ ಹೊರತಾಗಿದೆ.

ಕುರೈಶ್ ಗೋತ್ರದವರೇ! (ನಿರ್ಣಾಯಕ ದಿನದಂದು ನಿಮ್ಮ ಪ್ರಭುವಿನ ಮುಂದೆ) ನಿಮ್ಮ ಹೆಗಲ ಮೇಲೆ ಈ ಲೋಕದ ಭಾರವನ್ನು ಹೊತ್ತು ಹಾಜರಾಗದಿರಿ. ಇತರ ಜನರಾದರೋ ಅಂದು ಪರಲೋಕದ ಪುಣ್ಯಗಳನ್ನು ಹೊತ್ತು ಹಾಜರಾಗುವರು. ಅಂತಹ ಪರಿಸ್ಥಿತಿಯಲ್ಲಿ ಖಂಡಿತ ನಾನು ಅಲ್ಲಾಹನ ಮುಂದೆ ನಿಮಗೆ ನೆರ ವಾಗಲಾರೆ.

ತಿಳಿಯಿರಿ! ಅಜ್ಞಾನ ಕಾಲದ ಎಲ್ಲ ಸಂಪ್ರದಾಯಗಳು ನನ್ನ ಪಾದದಡಿಯಲ್ಲಿವೆ. ಅಜ್ಞಾನ ಕಾಲದ ಎಲ್ಲ ಕೊಲೆಯ ಪ್ರತೀಕಾರಗಳನ್ನು ಅನೂರ್ಜಿತಗೊಳಿಸಲಾಗಿದೆ. ಆ ಪೈಕಿ ಮೊದಲ ಕೊಲೆಯ ಪ್ರತೀಕಾರವನ್ನು ಅನೂರ್ಜಿತಗೊಳಿಸಿರುವುದಾಗಿ ನಾನು ಘೋಷಿಸುತ್ತೇನೆ. ಅದು ಸಅದ್ ಗೋತ್ರಕ್ಕೆ ಸೇರಿದ ರಬೀಅಃ ಬಿನ್ ಹಾರಿಸ್‌ರ ಕೊಲೆಯ ಪ್ರತೀಕಾರವಾಗಿದೆ. ಅವರನ್ನು ಹುದೈಲರು ಕೊಂದಿದ್ದರು. ಅಜ್ಞಾನ ಕಾಲದ ಎಲ್ಲ ಬಡ್ಡಿಗಳನ್ನು ಮನ್ನಾ ಮಾಡಲಾಗಿದೆ. ಆ ಪೈಕಿ ಪ್ರಥಮವಾಗಿ ನಾನು (ನನ್ನ ಚಿಕ್ಕಪ್ಪ) ಅಬ್ಬಾಸ್ ಬಿನ್ ಅಬ್ದುಲ್ ಮುತ್ತಲಿಬ್‌ರಿಗೆ ಸಲ್ಲಬೇಕಾದ ಎಲ್ಲ ಬಡ್ಡಿಯನ್ನು ಮನ್ನಾ ಮಾಡಿರುವುದಾಗಿ ಘೋಷಿಸುತ್ತೇನೆ. ಖಂಡಿತವಾಗಿಯೂ ಅದು ಸಂಪೂರ್ಣವಾಗಿ ಮನ್ನಾ ಆಯಿತು.

ಜನರೇ! ನಿಮ್ಮ ಈ ದಿನ, ನಿಮ್ಮ ಈ ತಿಂಗಳು ಮತ್ತು ನಿಮ್ಮ ಈ ನಗರವು ಪವಿತ್ರವೂ ನಿಷಿದ್ಧವೂ ಆಗಿರುವಂತೆ ಖಂಡಿತವಾಗಿಯೂ ನಿಮ್ಮ ರಕ್ತ, ನಿಮ್ಮ ಸೊತ್ತು ಮತ್ತು ನಿಮ್ಮ ಮಾನವು ನೀವು ನಿಮ್ಮ ಪ್ರಭುವಿನ ಮುಂದೆ ಹಾಜರಾಗುವ ತನಕ ಪವಿತ್ರವೂ ನಿಷಿದ್ಧವೂ ಆಗಿದೆ. ಖಂಡಿತವಾಗಿಯೂ ನೀವು ಸದ್ಯವೇ ನಿಮ್ಮ ಪ್ರಭುವನ್ನು ಭೇಟಿ ಯಾಗಲಿರುವಿರಿ. ಹೌದು. ನೀವು ನಿಮ್ಮ ಕರ್ಮಗಳಿಗಾಗಿ ಅಲ್ಲಿ ವಿಚಾರಣೆಗೆ ಒಳಗಾಗಲಿರುವಿರಿ.

ತಿಳಿಯಿರಿ! ನಾನು ನಿಮಗೆ ವಿಷಯ ಮುಟ್ಟಿಸಿದ್ದೇನೆ. ಓ ಅಲ್ಲಾಹ್! ನೀನು ಕೂಡಾ ಸಾಕ್ಷಿಯಾಗಿರು. ಆದ್ದರಿಂದ ಯಾರದೇ ವಶದಲ್ಲಿ ಯಾವುದೇ ಅಮಾನತ್(ವಿಶ್ವಸ್ಥ ನಿಧಿ)

ಇದ್ದರೆ ಅದನ್ನು ಅದರ ಒಡೆಯನಿಗೆ ತಲುಪಿಸಲಿ.

ಮನುಷ್ಯರೇ! ನಿಮಗೆ ನಿಮ್ಮ ಪತ್ನಿಯರ ಮೇಲೆ ಕೆಲವು ಹಕ್ಕುಗಳಿವೆ ಮತ್ತು ನಿಮ್ಮ ಪತ್ನಿಯರಿಗೆ ನಿಮ್ಮ ಮೇಲೂ ಕೆಲವು ಹಕ್ಕುಗಳಿವೆ. ನಿಮ್ಮ ದಾಂಪತ್ಯ ಸಂಬಂಧದ ಪಾವಿತ್ರ್ಯವನ್ನು ಕಾಪಾಡಬೇಕಾದುದು, ನಿಮ್ಮ ಹೊರತು ಯಾರನ್ನೂ ನಿಮ್ಮ ಹಾಸಿಗೆಗೆ ಬರಗೊಡದಿರುವುದು ಹಾಗೂ ನೀವು ಮೆಚ್ಚದ ಯಾವನೇ ವ್ಯಕ್ತಿಯನ್ನು ನಿಮ್ಮ ಅನುಮತಿಯಿಲ್ಲದೆ (ಮನೆಗೆ) ಪ್ರವೇಶಿಸಲು ಅನುಮತಿಸದಿರುವುದು, ಯಾವುದೇ ಅಶ್ಲೀಲ ಕಾರ್ಯ ಎಸಗದಿರುವುದು ಅವರ ಮೇಲೆ ನಿಮ್ಮ ಹಕ್ಕಾಗಿದೆ. ಅದಕ್ಕೆ ಅವರು ಚ್ಯುತಿ ಮಾಡಿದರೆ ಅವರನ್ನು ನಿಮ್ಮ ಹಾಸಿಗೆಯಿಂದ ಬೇರ್ಪಡಿಸಬಹುದು ಅಥವಾ ಗಾಯ ಅಥವಾ ಕಲೆಯಾಗದಂತೆ ಹೊಡೆಯಬಹುದು ಮತ್ತು ಅದರಿಂದ ಅವರು ತಮ್ಮನ್ನು ತಿದ್ದಿಕೊಂಡು ನಿಮಗೆ ವಿಧೇಯರಾದರೆ ಅವರಿಗೆ ನಿಮ್ಮ ಸಾಮರ್ಥ್ಯಾನುಸಾರ ಉಣಿಸಿರಿ ಹಾಗೂ ತೊಡಿಸಿರಿ.

ತಿಳಿಯಿರಿ! ಪತಿಯ ಸಂಪತ್ತಿನಿಂದ ಆತನ ಅನುಮತಿಯಿಲ್ಲದೆ ದಾನ ಮಾಡುವುದು ಪತ್ನಿಗೆ ಧರ್ಮಸಮ್ಮತವಲ್ಲ. ನಿಮ್ಮ ಮಹಿಳೆಯರೊಂದಿಗೆ ಕರುಣೆಯಿಂದ ವರ್ತಿಸಿರಿ. ಅವರು ನಿಮ್ಮ ಸಹಾಯಕಿಯರಾಗಿದ್ದಾರೆ. ಅವರು ತಮ್ಮ ವ್ಯವಹಾರಗಳನ್ನು ತಾವೇ ನೋಡಿಕೊಳ್ಳಲು ಸಮರ್ಥರಲ್ಲ. ನಿಮ್ಮ ಪತ್ನಿಯರ ಬಗ್ಗೆ ಅಲ್ಲಾಹನನ್ನು ಭಯಪಡಿರಿ. ನೀವು ಅಲ್ಲಾಹನ ಜಾಮೀನಿ(Security)ನೊಂದಿಗೆ ಅವರನ್ನು ವರಿಸಿರುವಿರಿ. ಅಲ್ಲಾಹನ ವಚನದಂತೆ ಅವರನ್ನು ನಿಮ್ಮ ಪಾಲಿಗೆ ಧರ್ಮಸಮ್ಮತವಾಗಿ ಮಾಡಿಕೊಂಡಿರುವಿರಿ. ಆದ್ದರಿಂದ ಮಹಿಳೆಯರ ವಿಷಯದಲ್ಲಿ ಅಲ್ಲಾಹನನ್ನು ಭಯಪಡಿರಿ. ಉತ್ತಮ ರೀತಿಯಲ್ಲಿ ಅವರನ್ನು ತರಬೇತುಗೊಳಿಸಿರಿ. ನಾನು ಮಾತು ಮುಟ್ಟಿಸಿರುವೆನೆಂಬ ಬಗ್ಗೆ ಸಾಕ್ಷಿಯಾಗಿರಿ. ಓ ಅಲ್ಲಾಹ್! ನೀನೂ ಸಾಕ್ಷಿಯಾಗಿರು.

ಮನುಷ್ಯರೇ! ಸರ್ವಶಕ್ತನೂ ಮಹಾನನೂ ಆದ ಅಲ್ಲಾಹನು ಪ್ರತಿಯೊಬ್ಬನಿಗೂ (ವಾರೀಸು ಸೊತ್ತಿನಲ್ಲಿ) ಅವನ ಪಾಲನ್ನು ನಿಶ್ಚಯಿಸಿರುವನು. ಆದ್ದರಿಂದ ಒಬ್ಬ ವಾರೀಸು ದಾರನಿಗೆ (ಶರೀಅತ್ ನಿಯಮಗಳನ್ನು ಮೀರಿ) ವಿಶೇಷ ಉಯಿಲು ಮಾಡುವ ಹಕ್ಕಿಲ್ಲ. ಮಗುವು ದಂಪತಿಗಳಿಗೆ ಸೇರಿದ್ದು. ದಾಂಪತ್ಯದ ಪಾವಿತ್ರ್ಯವನ್ನು ಮುರಿಯುವ ವ್ಯಕ್ತಿಯನ್ನು ಕಲ್ಲು ಹೊಡೆದು ಸಾಯಿಸಲಾಗುವುದು. ಅವರ ವಿಚಾರಣೆಯು ಅಲ್ಲಾಹನ ಹೊಣೆಯಾಗಿದೆ. ತನ್ನ ವಂಶ ಪರಂಪರೆಯನ್ನು ತನ್ನ ತಂದೆಯ ಹೊರತು ಇತರರೊಂದಿಗೆ ಜೋಡಿಸುವವನ ಅಥವಾ ತನ್ನ ಯಜಮಾನನ ಹೊರತು ಇತರರನ್ನು ತನ್ನ ಒಡೆಯನೆಂದು ಸಾರುವವನ ಮೇಲೆ ಅಲ್ಲಾಹನ ಶಾಪವಿದೆ. ಎಲ್ಲ ಸಾಲಗಳನ್ನು ಮರುಪಾವತಿಸಬೇಕು. ಸಾಲ ರೂಪದಲ್ಲಿ ಪಡೆದ ಎಲ್ಲ ಸೊತ್ತುಗಳನ್ನು ಹಿಂದಿರುಗಿಸಬೇಕು. ಉಡುಗೊರೆಗಳಿಗೆ ಪ್ರತಿ ಉಡುಗೊರೆಗಳನ್ನು ನೀಡಬೇಕು. ಜಾಮೀನುದಾರನು ಜಾಮೀನು ನೀಡಿದಾತನಿಗೆ ಆದ ನಷ್ಟವನ್ನು ಭರಿಸಬೇಕು.

ಎಚ್ಚರಿಕೆ! ಅಪರಾಧಕ್ಕೆ ಅಪರಾಧವೆಸಗಿದವನ ಹೊರತು ಬೇರೆ ಯಾರೂ ಹೊಣೆಯಲ್ಲ.

ಮಗು ತನ್ನ ತಂದೆಯ ಅಪರಾಧಕ್ಕೆ ಹೊಣೆಯಲ್ಲ. ತಂದೆಯು ತನ್ನ ಮಗುವಿನ ಅಪರಾಧಕ್ಕೂ ಹೊಣೆಯಲ್ಲ. ತನ್ನ ಸೋದರನು ಸ್ವಇಚ್ಛೆಯಿಂದ ನೀಡಿದುದರ ಹೊರತು ಆತನ ಸಂಪತ್ತಿನಲ್ಲಿ ಯಾವುದೂ ಒಬ್ಬ ಮುಸ್ಲಿಮನಿಗೆ ಧರ್ಮಸಮ್ಮತವಲ್ಲ. ಆದ್ದರಿಂದ ನಿಮ್ಮ ಮೇಲೆ ನೀವೇ ಅನ್ಯಾಯವೆಸಗಿಕೊಳ್ಳಬೇಡಿರಿ.

ಮನುಷ್ಯರೇ! ಪ್ರತಿಯೊಬ್ಬ ಮುಸ್ಲಿಮನು ಮುಸ್ಲಿಮನ ಸೋದರನಾಗಿರುವನು. ಎಲ್ಲ ಮುಸ್ಲಿಮರೂ ಒಂದು ಸಾಹೋದರ್ಯ ಬಂಧನದಲ್ಲಿರುವವರಾಗಿದ್ದಾರೆ.

ನಿಮ್ಮ ಗುಲಾಮರ ವಿಷಯ! ನೀವು ಉಣ್ಣುವುದನ್ನೇ ಅವರಿಗೂ ಉಣಿಸಿರಿ. ನೀವು ಉಡುವುದನ್ನೇ ಅವರಿಗೂ ಉಡಿಸಿರಿ. ನೀವು ನನ್ನ ಕಾಲಾನಂತರ ಪಥಭ್ರಷ್ಟರಾಗಿ ಹೋಗದಂತೆ ಹಾಗೂ ಒಬ್ಬರು ಇನ್ನೊಬ್ಬರ ಕತ್ತು ಕೊಯ್ಯುವವರಾಗಿ ಹೋಗದಂತೆ ಜಾಗರೂಕತೆ ವಹಿಸಿರಿ.

ನಿಮ್ಮ ಪೈಕಿ ಯಾರ ಬಳಿಯಾದರೂ ಒಂದು ಅಮಾನತ್(ವಿಶ್ವಸ್ಥ ನಿಧಿ) ಇದ್ದರೆ ಅವನು ಅದನ್ನು ಅದರ ಮಾಲಿಕನಿಗೆ ಹಿಂದಿರುಗಿಸಬೇಕು.

ಜನರೇ! ಇಥಿಯೋಪಿಯಾದ ಒಬ್ಬ ಕರಿಯ ಗುಲಾಮನನ್ನು ನಿಮ್ಮ ನಾಯಕನಾಗಿ ಮಾಡಿದರೆ ಆತನು ನಿಮ್ಮ ಮಧ್ಯೆ ಅಲ್ಲಾಹನ ಗ್ರಂಥಕ್ಕೆ ಅನುಗುಣವಾಗಿ ಆಜ್ಞಾಪಿಸುವ ತನಕ ಅವನನ್ನು ಆಲಿಸಿರಿ ಮತ್ತು ಅನುಸರಿಸಿರಿ.

ಜನರೇ, ನನ್ನ ನಂತರ ಯಾವ ಪ್ರವಾದಿಯೂ ನಿಯುಕ್ತನಾಗಲಿಕ್ಕಿಲ್ಲ. ನಿಮ್ಮ ನಂತರ ಯಾವ ಸಮುದಾಯವೂ ರಚಿಸಲ್ಪಡಲಿಕ್ಕಿಲ್ಲ. ನಾನು ನಿಮ್ಮ ಬಳಿ ನಿಮ್ಮನ್ನೆಂದೂ ದಾರಿಗೆಡಿಸದಂತಹ ವಸ್ತುವನ್ನು ಬಿಟ್ಟಗಲುತ್ತೇನೆ. ಅಲ್ಲಾಹನ ಗ್ರಂಥ ಮತ್ತು ಆತನ ಪ್ರವಾದಿಯ ಸುನ್ನತ್! ಅವುಗಳನ್ನು ನೀವು ಬಿಗಿ ಹಿಡಿದರೆ ನೀವೆಂದೂ ದಾರಿ ತಪ್ಪಲಾರಿರಿ.

ಜಾಗ್ರತೆ! ಧರ್ಮದ ವಿಷಯದಲ್ಲಿ ಅತಿರೇಕ ಎಸಗಬೇಡಿರಿ. ಧಾರ್ಮಿಕ ವಿಷಯದಲ್ಲಿ ಅತಿರೇಕವೆಸಗಿಯೇ ನಿಮ್ಮ ಪೂರ್ವಜರಲ್ಲಿ ಅನೇಕರು ನಾಶ ಹೊಂದಿದರು. ಖಂಡಿತ ವಾಗಿಯೂ ನಿಮ್ಮ ಈ ಭೂಮಿಯಲ್ಲಿ ಶೈತಾನನು ತನ್ನನ್ನು ಜನರು ಆರಾಧಿಸುವ ಬಗ್ಗೆ ಶಾಶ್ವತವಾಗಿ ನಿರಾಶನಾಗಿರುವನು. ಆತನನ್ನು ನೀವು ಅನುಸರಿಸುವಿರೆಂಬ ಭಯವಿದ್ದರೆ ಅದು ನೀವು ಕ್ಷುಲ್ಲಕವೆಂದು ಪರಿಗಣಿಸುವ ವಿಷಯಗಳಲ್ಲಿ ಮಾತ್ರ. ಆದ್ದರಿಂದ ನಿಮ್ಮ ಧರ್ಮದ ವಿಷಯದಲ್ಲಿ ಆತನಿಂದ ಜಾಗರೂಕರಾಗಿರಿ.

ಜನರೇ! (ನಿಷಿದ್ಧ) ಮಾಸಗಳನ್ನು ಅದಲು ಬದಲು ಮಾಡುವುದು ಸತ್ಯನಿಷೇಧದ ಕಾರ್ಯವಾಗಿದೆ. ತನ್ಮೂಲಕ ಸತ್ಯನಿಷೇಧಿಗಳು ಇನ್ನಷ್ಟು ಪಥಭ್ರಷ್ಟತೆಯಲ್ಲಿ ಬೀಳುತ್ತಾರೆ. ಒಂದು ವರ್ಷ ಯಾವುದಾದರೂ ಒಂದು ತಿಂಗಳನ್ನು ಹಲಾಲ್‌ಗೊಳಿಸುತ್ತಾರೆ. ಇನ್ನೊಂದು ವರ್ಷ ಅದನ್ನು ಹರಾಮ್‌ಗೊಳಿಸುತ್ತಾರೆ. ಈ ರೀತಿ (ಹಿಂದೆ ಮುಂದೆ ಮಾಡಿ) ಅಲ್ಲಾಹನು ನಿಷಿದ್ಧಗೊಳಿಸಿದ ತಿಂಗಳುಗಳ ಸಂಖ್ಯೆಯನ್ನು ಪೂರ್ತಿಗೊಳಿಸುತ್ತಾರೆ.

ನಿಶ್ಚಯವಾಗಿಯೂ ಕಾಲಚಕ್ರವು ಉರುಳುತ್ತಾ ಇಂದು ಮತ್ತೆ ಅಲ್ಲಾಹನು ಭೂಮಿಯನ್ನು ಸೃಷ್ಟಿಸಿದಂದು ಇದ್ದ ಅದೇ ಸ್ಥಿತಿಗೆ ತಲುಪಿದೆ. ಅರ್ಥಾತ್ ಅಲ್ಲಾಹನ ಬಳಿ ತಿಂಗಳುಗಳ ಸಂಖ್ಯೆ ಹನ್ನೆರಡಾಗಿದೆ. ಅಲ್ಲಾಹನು ಆಕಾಶ ಭೂಮಿಗಳನ್ನು ಸೃಷ್ಟಿಸಿದಂದೇ ಈ ಸಂಖ್ಯೆಯು (ವಿಧಿಲಿಖಿತದಲ್ಲಿ) ಉಲ್ಲೇಖಿಸಲ್ಪಟ್ಟಿದೆ. ಅವುಗಳ ಪೈಕಿ ನಾಲ್ಕು ತಿಂಗಳು ನಿಷಿದ್ಧ ವಾಗಿವೆ. ಮೂರು ನಿರಂತರ ಬರುವ ತಿಂಗಳುಗಳು. ಅರ್ಥಾತ್ ದುಲ್‌ಕಅದ್, ದುಲ್‌ಹಜ್ಜ್ ಮತ್ತು ಮುಹರ್ರಮ್. ಒಂದು ಒಂಟಿ ತಿಂಗಳು ಅರ್ಥಾತ್ ಜುಮಾದಿಲ್ ಆಖಿರ್ ಮತ್ತು ಶಅಬಾನ್‌ಗಳ ಮಧ್ಯೆ ಬರುವ ರಜಬ್ ತಿಂಗಳು.

ಕೇಳಿರಿ! ನಿಮ್ಮ ಪ್ರಭುವನ್ನು ಆರಾಧಿಸಿರಿ. ದಿನಕ್ಕೆ ಐದು ಬಾರಿ ನಮಾಝ್ ನಿರ್ವಹಿಸಿರಿ. ರಮಝಾನ್ ತಿಂಗಳಲ್ಲಿ ಉಪವಾಸ ಆಚರಿಸಿರಿ. ನಿಮ್ಮ ಸಂಪತ್ತಿನ ಮೇಲಿನ ಝಕಾತನ್ನು ಸಂತೋಷದಿಂದ ಪಾವತಿ ಮಾಡಿರಿ. ಅಲ್ಲಾಹನ ಭವನದ ಹಜ್ಜ್‌ಯಾತ್ರೆ ಕೈಗೊಳ್ಳಿರಿ. ನಿಮ್ಮ ಆಜ್ಞಾಧಿಕಾರಿಗಳನ್ನು ಅನುಸರಿಸಿರಿ. ನಿಮ್ಮ ಪ್ರಭು ವಿನ ಸ್ವರ್ಗದಲ್ಲಿ ನಿಮಗೆ ಪ್ರವೇಶ ದೊರಕುತ್ತದೆ. ಕೇಳಿರಿ! ಇಲ್ಲಿ ಹಾಜರಿರುವರು ಹಾಜರಿಲ್ಲದವರಿಗೆ ಇದನ್ನು ತಲುಪಿಸಬೇಕು. ನೀವು ಸಂದೇಶ ತಲುಪಿಸುವ ಅನೇಕ ಜನರು ಅದರ ಬಗ್ಗೆ ನಿಮಗಿಂತ ಹೆಚ್ಚು ಕಾಳಜಿಯುಳ್ಳವರಾಗಿರಬಹುದು."

ಅನಂತರ ಪ್ರವಾದಿವರ್ಯರು(ಸ) ಸಭಿಕರನ್ನುದ್ದೇಶಿಸಿ ಹೀಗೆ ಪ್ರಶ್ನಿಸುತ್ತಾರೆ: "ನನ್ನ ಬಗ್ಗೆ ನಿಮ್ಮನ್ನು ವಿಚಾರಿಸಿದಾಗ ನೀವು ಏನೆಂದು ಹೇಳುವಿರಿ?"

ಆಗ ಪ್ರವಾದಿವರ್ಯರ(ಸ) ಅನುಯಾಯಿಗಳು ಕೂಗಿ ಹೇಳಿದರು: "ತಾವು ಸಂದೇಶ ತಲುಪಿಸಿರುವಿರೆಂದು ನಾವು ಸಾಕ್ಷ್ಯವಹಿಸುತ್ತೇವೆ. ಸಮುದಾಯಕ್ಕೆ ಉಪದೇಶಿ ಸುವ ಕರ್ತವ್ಯವನ್ನು ಪೂರ್ತಿಗೊಳಿಸಿರುವಿರೆಂದೂ ನಿಮ್ಮ ಪ್ರವಾದಿತ್ವ ರಾಯಭಾರವನ್ನು ಸಂಪೂರ್ಣ ನಿರ್ವಹಿಸಿರುವಿರೆಂದೂ ನಮ್ಮ ಕಲ್ಯಾಣದ ಬಗ್ಗೆ ಕಾಳಜಿ ವಹಿಸಿರುವಿರೆಂದೂ ನಾವು ಸಾಕ್ಷ್ಯವಹಿಸುತ್ತೇವೆ."

ಆಗ ಅಲ್ಲಾಹನ ಸಂದೇಶವಾಹಕರು ತಮ್ಮ ತೋರ್ಬೆರಳನ್ನು ಆಕಾಶದತ್ತ ತೋರಿಸುತ್ತಾ ಜನರೆಡೆಗೆ ಸೂಚಿಸಿ ಹೇಳಿದರು: "ಓ ಅಲ್ಲಾಹ್ ನೀನು ಸಾಕ್ಷಿಯಾಗಿರು."

ಈ ರೀತಿ ಅವರು ಮೂರು ಸಲ ಹೇಳಿದರು.

ಹಜ್ಜ್ ಪೂರ್ಣಗೊಳಿಸಿ ಪ್ರವಾದಿ(ಸ) ತಮ್ಮ ಅನುಯಾಯಿಗಳೊಂದಿಗೆ ಮದೀನಾ ನಗರಕ್ಕೆ ಮರಳಿದರು.

## ಅಂತಿಮ ಯಾತ್ರೆ

ಹಿ. ಶ. 11ರ ಸಫರ್ ತಿಂಗಳ ಆರಂಭದಲ್ಲೇ ಪ್ರವಾದಿ ಮುಹಮ್ಮದ್(ಸ) ಅವರ ಪಾವನ ಆತ್ಮವು ಪರಲೋಕ ಯಾತ್ರೆಯ ಸಿದ್ಧತೆಗಳಲ್ಲಿ ತೊಡಗಿತ್ತು. ಒಂದು ದಿನ ಅವರು

ಉಹುದ್‌ಗೆ ಹೋಗುತ್ತಾರೆ. ಅಲ್ಲಿ ಅವರ ಹಲವು ಆಪ್ತ ಸಂಗಾತಿಗಳು ಅಂತಿಮ ವಿಶ್ರಾಮ ಪಡೆಯುತ್ತಿದ್ದರು. ಅವರ ಪೈಕಿ ಪ್ರವಾದಿವರ್ಯರ(ಸ) ಪ್ರೀತಿಯ ಚಿಕ್ಕಪ್ಪ ಹ. ಹಮ್‌ಝಾ(ರ) ಕೂಡಾ ಸೇರಿರುವರು. ಅವರೆಲ್ಲರಿಗಾಗಿ ಪ್ರವಾದಿ ವರ್ಯರು(ಸ) ಅಲ್ಲಾಹನಲ್ಲಿ ಪ್ರಾರ್ಥಿಸುತ್ತಾರೆ. ಹಿಂತಿರುಗಿ ಮಸ್ಜಿದುನ್ನಬವಿಗೆ ಬಂದು ಸಹಾಬಿಗಳ ಒಂದು ಸಮೂಹವನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: ಜನರೇ! ನಾನು ನಿಮಗಿಂತ ಮೊದಲು ಇಹಲೋಕಕ್ಕೆ ವಿದಾಯ ಹೇಳಲಿರುವೆನು. ಅಲ್ಲಾಹನ ಮುಂದೆ ನಿಮ್ಮ ಬಗ್ಗೆ ಸಾಕ್ಷ್ಯ ವಹಿಸಲಿರುವೆನು. ಅಲ್ಲಾಹನಾಣೆ! ಕೌಸರ್ ಕೊಳವನ್ನು ನಾನು ಇಲ್ಲಿಂದಲೇ ದರ್ಶಿಸುತ್ತಿದ್ದೇನೆ. ಸಾಮ್ರಾಜ್ಯಗಳ ಭಂಡಾರದ ಕೀಲಿಕೈಗಳನ್ನು ನನ್ನ ವಶ ಒಪ್ಪಿಸಲಾಗಿದೆ (ಅರ್ಥಾತ್ ಸಂದೇಶ ಪ್ರಚಾರದ ಫಲವಾಗಿ ಅನೇಕ ಸಾಮ್ರಾಜ್ಯಗಳು ನಿಮ್ಮ ವಶವಾಗಲಿವೆ) ನೀವು ನನ್ನ ನಂತರ ಮುಶ್ರಿಕ್ (ಬಹುದೇವ ವಿಶ್ವಾಸಿ)ಗಳಾಗಿ ಬಿಡುವಿರೆಂದು ನನಗೆ ಭಯವಿಲ್ಲ. ನೀವು ಲೌಕಿಕ ಮೋಹಕ್ಕೆ ಸಿಲುಕಿ ಬಿಡುವಿರೆಂದು ಮಾತ್ರ ನಾನು ಭಯಪಡುತ್ತೇನೆ."

ಅಂದೇ ಅರ್ಧರಾತ್ರಿಯ ವೇಳೆ ಜನ್ನತುಲ್ ಬಕೀಅ್(ಮದೀನದಲ್ಲಿರುವ ಮುಸ್ಲಿಮರ ಸಾರ್ವಜನಿಕ ದಫನ ಭೂಮಿ)ಗೆ ಹೋಗಿ ಸಮಾಧಿಸ್ಥರಿಗಾಗಿ ಪ್ರಾರ್ಥಿಸುತ್ತಾರೆ. ಅವರಿಗೆ ಸಲಾಮ್ ಹೇಳಿ, "ನಾವೂ ಸದ್ಯವೇ ನಿಮ್ಮನ್ನು ಬಂದು ಸೇರಲಿರುವೆವು" ಎನ್ನುತ್ತಾರೆ.

ಒಂದು ದಿನ ಪ್ರವಾದಿವರ್ಯರು(ಸ) ತಮ್ಮ ಆಪ್ತ ಸಂಗಾತಿಗಳನ್ನು ಕರೆಸಿ ಅವರನ್ನುದ್ದೇಶಿಸಿ ಹೀಗೆ ಹೇಳುತ್ತಾರೆ: "ಮುಸ್ಲಿಮರೇ! ನಿಮಗೆ ಶುಭವಾಗಲಿ. ಅಲ್ಲಾಹನು ನಿಮ್ಮ ಮೇಲೆ ತನ್ನ ಕರುಣೆಯನ್ನು ವರ್ಷಿಸಲಿ. ನಿಮ್ಮ ನಿರಾಶೆಯನ್ನು ದೂರೀಕರಿಸಲಿ. ನಿಮಗೆ ಉತ್ತಮ ಜೀವನೋಪಾಯವನ್ನು ನೀಡಲಿ. ನಿಮಗೆ ನೆರವಾಗಲಿ. ನಿಮಗೆ ಔನ್ನತ್ಯ ನೀಡಲಿ. ನಿಮ್ಮನ್ನು ಶಾಂತಿ-ಸುರಕ್ಷೆಯೊಂದಿಗೆ ಇರಿಸಲಿ. ನಾನು ನಿಮಗೆ ಅಲ್ಲಾಹನ ಭಯ-ಭಕ್ತಿಯ ಉಪದೇಶ ಮಾಡುತ್ತೇನೆ. ನಿಮ್ಮನ್ನು ಅಲ್ಲಾಹನ ವಶಕ್ಕೆ ಒಪ್ಪಿಸುತ್ತೇನೆ. ಅಲ್ಲಾಹನ ಬಗ್ಗೆ ನಿಮ್ಮನ್ನು ಹೆದರಿಸುತ್ತೇನೆ. ಏಕೆಂದರೆ ನಾನಂತೂ ಸ್ಪಷ್ಟ ಎಚ್ಚರಿಕೆ ನೀಡುವವನು ಮಾತ್ರ. ನೋಡಿರಿ ಅಲ್ಲಾಹನ ನಾಡುಗಳಲ್ಲಿ ಅವನ ದಾಸರ ಮಧ್ಯೆ ಅಹಂಕಾರ ಮತ್ತು ವಿದ್ರೋಹದ ನೀತಿಯನ್ನು ಅನುಸರಿಸದಿರಿ. ಅಲ್ಲಾಹನು ನನಗೂ ನಿಮಗೂ ಈ ರೀತಿ ಉಪದೇಶಿಸಿದ್ದಾನೆ: ಪರಲೋಕದ ಭವನವನ್ನು ನಾವು ಭೂಮಿಯ ಮೇಲೆ ಅಹಂಭಾವ ಪ್ರದರ್ಶಿಸದ ಮತ್ತು ಕೇಡು ಹರಡದ ಜನರಿಗಾಗಿ ಕಾದಿರಿಸಿದ್ದೇವೆ. ಅಂತಿಮ ವಿಜಯವಂತೂ ದೇವಭಯ ಉಳ್ಳವ ರಿಗೇ ಇದೆ. ನಿಮ್ಮ ಮೇಲೆ ಮತ್ತು ಇಸ್ಲಾಮ್ ಸ್ವೀಕರಿಸಿ ನನ್ನ ಜೊತೆ ಸೇರಿಕೊಂಡ ಎಲ್ಲ ಜನರ ಮೇಲೆ ಶಾಂತಿಯಿರಲಿ."

'ಜನ್ನತುಲ್ ಬಕೀಅ್'ನಿಂದ ಮರಳುವಾಗಲೇ ಪ್ರವಾದಿವರ್ಯರಿಗೆ(ಸ) ತಲೆಶೂಲೆ ಆರಂಭವಾಗಿತ್ತು. ಸಫರ್ ತಿಂಗಳ 19ನೇ ದಿನಾಂಕದಂದು ಪ್ರವಾದಿವರ್ಯರು(ಸ) ಒಂದು ಮರಣದಲ್ಲಿ ಭಾಗವಹಿಸಿದಾಗ ಅದು ಇನ್ನಷ್ಟು ಉಲ್ಬಣಿಸಿತು. ಇದೇ ಸ್ಥಿತಿಯಲ್ಲಿ

ಪ್ರವಾದಿವರ್ಯರು(ಸ) 26ರಂದು 'ರೋಮ್ ಯುದ್ಧ'ಕ್ಕೆ ಸಿದ್ಧತೆ ನಡೆಸಲು ಆಜ್ಞಾಪಿಸಿದರು. ಮರುದಿನ ಹ. ಉಸಾಮಾ ಬಿನ್ ಝ್ಯೆದ್‌ರನ್ನು(ರ) ಆ ಸೇನೆಯ ದಂಡನಾಯಕರಾಗಿ ನೇಮಿಸಿದರು.

ಈಗ ಪ್ರವಾದಿವರ್ಯರು(ಸ) ತಮ್ಮ ಉಳಿದ ಪತ್ನಿಯರ ಅನುಮತಿ ಪಡೆದು ಹ. ಆಯಿಶಾರ(ರ) ಕೋಣೆಯಲ್ಲೇ ವಾಸಿಸುತ್ತಿದ್ದಾರೆ. ಅನ್ಯಥಾ ಪ್ರತಿಯೊಂದು ದಿನ ಒಬ್ಬೊಬ್ಬ ಪತ್ನಿಯ ಬಳಿ ವಾಸಿಸುವುದು ಪ್ರವಾದಿವರ್ಯರ(ಸ) ರೂಢಿಯಾಗಿತ್ತು. ತೀವ್ರ ಅನಾರೋಗ್ಯದ ಹೊರತಾಗಿಯೂ ಪ್ರವಾದಿವರ್ಯರು(ಸ) ಒಂದು ದಿನ ಸ್ನಾನ ಮಾಡುತ್ತಾರೆ. ಇದರಿಂದ ಸ್ವಲ್ಪ ಲವಲವಿಕೆ ಉಂಟಾದಾಗ ಆಸರೆಯೊಂದಿಗೆ ಮಸೀದಿಗೆ ಬಂದು ತಮ್ಮ ಸಂಗಾತಿಗಳಿಗೆ ಪ್ರವಚನ ನೀಡುತ್ತಾರೆ:

"ನಿಮಗಿಂತ ಮುಂಚೆ ಗತಿಸಿ ಹೋದ ಜನರು ತಮ್ಮ ಪ್ರವಾದಿಗಳ ಮತ್ತು ಮಹಾಪುರುಷರ ಗೋರಿಗಳನ್ನು ಸಾಷ್ಟಾಂಗದ ಸ್ಥಳವಾಗಿ ಮಾರ್ಪಡಿಸಿದರು. ಅವರ ಮೇಲೆ ಅಲ್ಲಾಹನ ಶಾಪ ಎರಗಿತು. ನಾನು ನಿಮ್ಮನ್ನು ಅದರಿಂದ ತಡೆಯುತ್ತೇನೆ. ನೋಡಿರಿ. ನಾನಂತೂ ವಿಷಯ ನಿಮಗೆ ಮುಟ್ಟಿಸಿರುತ್ತೇನೆ. ಓ ಅಲ್ಲಾಹ್! ನೀನೇ ಇದಕ್ಕೆ ಸಾಕ್ಷಿಯಾಗಿರು."

ತರುವಾಯ ನಮಾಝ್ ಮಾಡಿಸಿದರು. ಮತ್ತೆ ಪ್ರವಚನವನ್ನು ಮುಂದುವರಿಸಿದರು: "ಅನ್ಸಾರ್‌ಗಳ ಬಗ್ಗೆ ನಾನು ನಿಮಗೆ ವಿಶೇಷ ತಾಕೀತು ಮಾಡಿ ಹೇಳುತ್ತೇನೆ. ಇವರು ನನ್ನ ಶರೀರದ ಉಡುಪು ಮತ್ತು ನನ್ನ ಮಟ್ಟಿಗೆ ದಾರಿ ವೆಚ್ಚವಾಗಿದ್ದಾರೆ. ಅವರು ತಮ್ಮ ಪಾಲಿನ ಕರ್ತವ್ಯವನ್ನು ಪೂರ್ಣಗೊಳಿಸಿದ್ದಾರೆ. ಈಗ ನಿಮ್ಮ ಮೇಲೆ ಅವರ ಬಾಧ್ಯತೆಗಳು ಉಳಿದುಕೊಂಡಿವೆ. ಇತರರು ಹರಡುವರು, ಆದರೆ ಇವರು ಮಾತ್ರ ಇದ್ದಲ್ಲೇ ಉಳಿಯುವರು. ಅವರ ಪೈಕಿ ಸತ್ಕಾರ್ಯ ಮಾಡುವವರನ್ನು ಗೌರವಿಸಿರಿ ಮತ್ತು ತಪ್ಪು ಮಾಡುವವರನ್ನು ಕ್ಷಮಿಸಿರಿ. ಅಲ್ಲಾಹನು ತನ್ನ ದಾಸರಿಗೆ ಎರಡು ಆಯ್ಕೆಗಳನ್ನು ನೀಡಿರುವನು. ಇಹಲೋಕ ಮತ್ತು ಅದರ ಸರ್ವಸ್ವ ಅಥವಾ ಅಲ್ಲಾಹನ ಬಳಿ ಇರುವಂತಹದು. ದಾಸನು ಅಲ್ಲಾಹನ ಬಳಿ ಇರುವುದನ್ನೇ ಆರಿಸಿರುವನು."

ಈ ಕೊನೆಯ ವಾಕ್ಯವನ್ನು ಕೇಳಿ ಪ್ರವಾದಿವರ್ಯರ(ಸ) ಅತ್ಯಂತ ಆಪ್ತರಾಗಿದ್ದ ಹ. ಅಬೂಬಕರ್(ರ) ಬಿಕ್ಕಿ ಬಿಕ್ಕಿ ಅಳತೊಡಗಿದರು. ಇದು ಅವರ ಸಂಗಾತಿಯ ವಿದಾಯದ ಸ್ಪಷ್ಟ ಘೋಷಣೆಯಾಗಿತ್ತು. ಅವರ ಯಜಮಾನರು ಅವರನ್ನು ಬಿಟ್ಟಗಲು ವುದು ಅವರಿಗೆ ಅತ್ಯಂತ ಅಸಹನೀಯವಾಗಿತ್ತು. ಅವರ ಸವಿಮಾತು ಇನ್ನು ಕಿವಿಗೆ ಇಂಪು ನೀಡಲಾರದು. ಅವರ ಮುಗುಳ್ನಗು ಇನ್ನು ಕಣ್ಣಿಗೆ ತಂಪು ನೀಡದು. ಅವರ ಉಪಸ್ಥಿತಿ ಇನ್ನು ಮನಸ್ಸಿಗೆ ಕಂಪು ಬೀರದು. ಅವರ ಅಗಲಿಕೆಯ ಅಗ್ನಿಯು ಹೃದಯ ದಲ್ಲಿ ಸದಾ ಉರಿಯುತ್ತಿರುವುದು.

ಪ್ರವಾದಿವರ್ಯರ(ಸ) ಕಾಯಿಲೆಯು ಉಲ್ಬಣಿಸಿದೆ. ಈಗ ಮಸೀದಿಯ ತನಕ ಹೋಗುವುದು ಮತ್ತು ಸಾಮೂಹಿಕ ನಮಾಝ್‌ನಲ್ಲಿ ಪಾಲ್ಗೊಳ್ಳುವುದು ಕೂಡಾ ಕಷ್ಟ

ವಾಗಿದೆ. ಆದ್ದರಿಂದ ತಮ್ಮ ಸ್ಥಾನದಲ್ಲಿ ನಮಾಝ್‌ನ ನೇತೃತ್ವ ವಹಿಸಲು ಅಬೂಬಕರ್‌ರನ್ನು(ರ) ನೇಮಿಸುತ್ತಾರೆ. ಜನರ ಚಿಂತೆಯು ಹೆಚ್ಚಾಗುತ್ತಿದೆ. ಪ್ರವಾದಿವರ್ಯರ(ಸ) ದರ್ಶನಕ್ಕಾಗಿ ಪ್ರತಿಯೊಬ್ಬರೂ ಹಾತೊರೆಯುತ್ತಿದ್ದಾರೆ. ಅದಕ್ಕಾಗಿ ಮಸೀದಿಯ ಕಡೆ ಬಂದಾಗಲೆಲ್ಲಾ ಜನರಿಗೆ ನಿರಾಶೆಯಾಗುತ್ತದೆ. ನಮಾಝ್‌ನ ನೇತೃತ್ವಕ್ಕಾಗಿ ಅಬೂಬಕರ್(ರ) ಇರುವಾಗ ಇನ್ನು ಪ್ರವಾದಿವರ್ಯರ(ಸ) ದರ್ಶನದ ಹೇತುವೇನು ಎಂಬುದು ಜನರಿಗೆ ತಿಳಿಯುತ್ತಿರಲಿಲ್ಲ. ಪ್ರವಾದಿವರ್ಯರ(ಸ) ನಿಧನದ ಕೆಲಕಾಲ ನಂತರ ಅನ್ಸಾರ್‌ಗಳು ಅಳುತ್ತಿರುವುದನ್ನು ಕಂಡು ಹ. ಅಬ್ಬಾಸ್(ರ) ಅವರು ಅಳುವುದಕ್ಕೆ ಕಾರಣವೇನೆಂದು ವಿಚಾರಿಸುತ್ತಾರೆ. ಆಗ ಅವರು: "ಪ್ರವಾದಿವರ್ಯರ(ಸ) ಚಿಕ್ಕಪ್ಪನವರೇ! ಪ್ರವಾದಿವರ್ಯರ(ಸ) ಸಹವಾಸದ ನೆನಪಾದಾಗ ಕರುಳು ಕಿತ್ತು ಬಂದಂತಾಗುತ್ತದೆ. ನಮಗರಿವಿಲ್ಲದೆ ಕಣ್ಣಿನಿಂದ ನೀರು ಹರಿಯ ಲಾರಂಭಿಸುತ್ತದೆ" ಎನ್ನುತ್ತಾರೆ.

ಮುಹಮ್ಮದ್(ಸ) ಅವರಂತೂ ಲೋಕಾನುಗ್ರಹಿಯಾಗಿದ್ದಾರೆ. ತಮ್ಮ ಸಂಗಾತಿಗಳ ಕಳವಳದ ಕುರಿತು ತಿಳಿದಾಗ ಪ್ರೀತಿ ವಾತ್ಸಲ್ಯದಿಂದ ಅವರೂ ಕಳವಳಗೊಳ್ಳುತ್ತಾರೆ. ತಮ್ಮ ಸಂಗಾತಿಗಳ ನೆನಪು ಅವರನ್ನು ಅಸ್ವಸ್ಥಗೊಳಿಸುತ್ತದೆ. ಅವರು ಮಂಗಳವಾರ ದಿನ ತಮ್ಮ ಪ್ರೀತಿ ವಾತ್ಸಲ್ಯವನ್ನು ತೋರ್ಪಡಿಸಲು ಮತ್ತು ಸ್ವತಃ ಆತ್ಮಶಾಂತಿ ಪಡೆಯಲು ಹ. ಅಲೀ ಮತ್ತು ಹ. ಫಝ್ಲ್ ಬಿನ್ ಅಬ್ಬಾಸ್‌ರ(ರ) ಹೆಗಲುಗಳ ಮೇಲೆ ಕೈಯಿಟ್ಟು ಮಸೀದಿಗೆ ಬರುತ್ತಾರೆ. ಹೆಜ್ಜೆಯನ್ನು ಎತ್ತಿ ಇಡುವ ತ್ರಾಣವೂ ಇಲ್ಲದೆ ಹೋದುದರಿಂದ ಕಾಲುಗಳನ್ನು ಎಳೆಯುತ್ತಾ ತಲುಪುತ್ತಾರೆ. ಸಹಾಬಿಗಳ ಸಂಘವು ಕಾತರದಿಂದ ಅವರಿಗಾಗಿ ಅಲ್ಲಿ ಕಾಯುತ್ತಿರುತ್ತದೆ. ಪ್ರವಾದಿವರ್ಯರ(ಸ) ದರ್ಶನವಾದ ಕೂಡಲೇ ಎಲ್ಲರ ಕಣ್ಣುಗಳಿಂದಲೂ ಬಾಷ್ಪ ಉಕ್ಕಿ ಬರುತ್ತದೆ. ಪ್ರವಾದಿ ವರ್ಯರು(ಸ) ವೇದಿಕೆಯ ಕೆಳಗಿನ ಮೆಟ್ಟಿಲಲ್ಲಿ ಕುಳಿತುಕೊಂಡು ತಮ್ಮ ಅಂತಿಮ ಪ್ರವಚನ ನೀಡುತ್ತಾರೆ:

"ನೀವು ನನ್ನ ಮರಣದ ಬಗ್ಗೆ ಹೆದರಿಕೊಂಡಿದ್ದೀರಿ ಎಂದು ನನಗೆ ತಿಳಿದು ಬಂದಿದೆ. ಈ ಹಿಂದೆ ಎಷ್ಟು ಮಂದಿ ಪ್ರವಾದಿಗಳು ಬಂದಿದ್ದರೋ ಅವರ ಪೈಕಿ ಯಾರಾದರೂ ಶಾಶ್ವತವಾಗಿ ಜೀವಿಸಿದ್ದರೇ? ಈಗ ನಾನು ಅಲ್ಲಾಹನನ್ನು ಭೇಟಿ ಯಾಗಲಿರುವೆನು. ನೀವೂ ಅವನನ್ನು ಭೇಟಿಯಾಗಲಿರುವಿರಿ... ನಾನು ಮೊದಲು ಹೋಗುತ್ತೇನೆ. ನೀವೂ ಬಂದು ನನ್ನ ಜತೆ ಸೇರಲಿರುವಿರಿ. ನಾವೆಲ್ಲರೂ (ಕೌಸರ್) ಕೊಳದ ಬಳಿ ಭೇಟಿಯಾಗೋಣ."

ಆದಿತ್ಯವಾರ ದಿನವೇ ಪ್ರವಾದಿವರ್ಯರು(ಸ) ತಮ್ಮ ಎಲ್ಲ ಗುಲಾಮರನ್ನೂ (ಅವರ ಸಂಖ್ಯೆಯು ಸುಮಾರು 40 ಆಗಿತ್ತು) ಬಿಡುಗಡೆಗೊಳಿಸಿದ್ದರು. ಮನೆಯಲ್ಲಿ ಅಕಸ್ಮಾತ್ ಉಳಿದು ಹೋಗಿದ್ದ 6-7 ದಿರ್ಹಮ್‌ಗಳನ್ನು ತರಿಸಿ ದಾನ ಮಾಡುತ್ತಾರೆ. ತಮ್ಮ ಎಲ್ಲ ಆಯುಧಗಳನ್ನೂ ಮುಸ್ಲಿಮರಿಗೆ ವಕ್ಫ್ (ದೇಣಿಗೆ) ಮಾಡುತ್ತಾರೆ.

ಇಂದು ರಬೀಉಲ್ ಅವ್ವಲ್ 12ನೇ ದಿನಾಂಕ ಸೋಮವಾರ. ಪ್ರವಾದಿವರ್ಯರು(ಸ)

ಇಂದು ಸ್ವಲ್ಪ ಲವಲವಿಕೆಯಿಂದಿದ್ದಾರೆ. ಅವರ ಬಾಯಿಯಿಂದ ಆಗಾಗ ಈ ಕೆಳಗಿನ ಉಪದೇಶದ ಮಾತುಗಳು ಹೊರಡುತ್ತವೆ:

1. ಯಹೂದಿ ಮತ್ತು ನಸಾರಾಗಳ ಮೇಲೆ ಅಲ್ಲಾಹನ ಶಾಪವಿರಲಿ. ಅವರು ತಮ್ಮ ಪ್ರವಾದಿಗಳ ಸಮಾಧಿಗಳನ್ನು ಆರಾಧನಾಲಯಗಳಾಗಿ ಮಾರ್ಪಡಿಸಿಕೊಂಡರು.

2. ನಿಮ್ಮ ದಾಸ, ದಾಸಿಯರ ಕುರಿತು ಅಲ್ಲಾಹನನ್ನು ಭಯಪಡಿರಿ. ಅವರಿಗೆ ಬಟ್ಟೆ ತೊಡಿಸಿರಿ. ಹೊಟ್ಟೆ ತುಂಬ ಉಣಿಸಿರಿ. ಅವರೊಂದಿಗೆ ನಯವಾಗಿ ಮಾತಾಡಿರಿ.

3. ಎಚ್ಚರಿಕೆ! ಅಲ್ಲಾಹನ ಮೇಲೆ ಉತ್ತಮ ಗುಮಾನಿಯನ್ನು ಇರಿಸದೆ ನಿಮ್ಮ ಪೈಕಿ ಯಾರೂ ಸಾಯದಿರಲಿ.

ಅಂದು ಸೂರ್ಯನು ಮೇಲೇರಿದಂತೆಲ್ಲ ಅವರ ದೇಹಸ್ಥಿತಿಯು ಕೆಡುತ್ತಾ ಹೋಗುತ್ತದೆ. ಅನೇಕ ಸಲ ಅವರಿಗೆ ಪ್ರಜ್ಞಾಹೀನತೆ ಉಂಟಾಗುತ್ತದೆ.

ಈಗ ಪ್ರತಿಕ್ಷಣಕ್ಕೂ ಅವರ ಅನಾರೋಗ್ಯವು ಉಲ್ಬಣಗೊಳ್ಳುತ್ತಲೇ ಇದೆ. ಒಂದು ಲೋಟ ನೀರನ್ನು ತರಿಸಿ ತಮ್ಮ ಬಳಿ ಇರಿಸುತ್ತಾರೆ. ಅದಕ್ಕೆ ಕೈ ಹಾಕಿ ತಮ್ಮ ಮುಖದ ಮೇಲೆ ಸವರುತ್ತಿದ್ದರು. ಅದರಿಂದ ತುಸು ಸಾಂತ್ವನವಾಗುತ್ತಿತ್ತು. ತರುವಾಯ ಅತ್ಯಂತ ಕ್ಷೀಣ ಸ್ವರದಲ್ಲಿ ಹೀಗೆ ಹೇಳುತ್ತಾರೆ: "ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ ಮತ್ತು ಮರಣವು ಸಂಕಷ್ಟದಿಂದ ಕೂಡಿದೆ."

ಮುಖ ಒದ್ದೆ ಮಾಡಿಕೊಳ್ಳುವುದರ ಜತೆಗೆ ಒಮ್ಮೆ ಒಂದು ಕಾಲನ್ನು ಚಾಚಿಟ್ಟು ಇನ್ನೊಂದನ್ನು ಮಡಚಿಕೊಳ್ಳುತ್ತಾರೆ. ಒಮ್ಮೆ ಮುಖದ ಮೇಲೆ ಚದ್ದರವನ್ನೆಳೆದುಕೊಂಡರೆ ಇನ್ನೊಮ್ಮೆ ಅದನ್ನು ಸರಿಸಿಕೊಳ್ಳುತ್ತಾರೆ. ಇದು ಅತ್ಯಧಿಕ ತೊಂದರೆಯ ಸಂಕೇತಗಳಾಗಿವೆ. ಇದನ್ನು ಕಂಡು ಸಹಿಸಲಾಗದೆ ಫಾತಿಮಾ(ರ) "ಅಯ್ಯೋ! ನನ್ನ ತಂದೆಯವರ ಸಂಕಷ್ಟವೇ!" ಎನ್ನುತ್ತಾರೆ.

ಆಗ ಪ್ರವಾದಿವರ್ಯರು: "ಮಗಳೇ! ಇನ್ನೆಂದೂ ನಿನ್ನ ತಂದೆಗೆ ಕಷ್ಟವಾಗಲಾರದು" ಎನ್ನುತ್ತಾರೆ.

ಮಧ್ಯಾಹ್ನದ ನಂತರ ಪ್ರವಾದಿವರ್ಯರ(ಸ) ಎದೆಯಲ್ಲಿ ಗುಡುಗುಡು ಶಬ್ದವಾಗತೊಡಗುತ್ತದೆ. ಆಗ ಪ್ರವಾದಿವರ್ಯರು(ಸ) ಅತ್ಯಂತ ಕ್ಷೀಣ ಧ್ವನಿಯಲ್ಲಿ "ನಮಾಝ್.... ನಮಾಝ್.... ಮತ್ತು ನಿಮ್ಮ ದಾಸ ದಾಸಿಯರು" ಎನ್ನುತ್ತಾರೆ.

ತರುವಾಯ ಬೆರಳಿನಿಂದ ಆಕಾಶದತ್ತ ಸೂಚಿಸುತ್ತಾ ಮೂರು ಸಲ ಈ ರೀತಿ ಹೇಳುತ್ತಾರೆ: "ಇನ್ನು ಅತ್ಯುನ್ನತ ರಫೀಕ್ (ಸಂಗಾತಿ) ಸಾಕು"

ಅಷ್ಟರಲ್ಲಿ ಅವರ ಪಾವನ ಆತ್ಮವು ಆ ಪವಿತ್ರ ದೇಹವನ್ನು ಬಿಟ್ಟಗಲುತ್ತದೆ. ಆಗ ಪ್ರವಾದಿವರ್ಯರಿಗೆ(ಸ) 63 ವರ್ಷ ವಯಸ್ಸಾಗಿತ್ತು.

## ಆಪ್ತರ ಸಂತಾಪ

ಸತ್ಯವಿಶ್ವಾಸಿಗಳ ಮಾತೆಯಾದ ಹ. ಆಯಿಶಾ(ರ) ತಮಗಾದ ಈ ಮಹಾ ವಿಯೋಗದಿಂದ ದುಃಖಿತರಾಗಿ ಹೀಗೆ ಹೇಳುತ್ತಾರೆ: "ಅಯ್ಯೋ! ಸಂಪತ್ತಿಗಿಂತ ಬಡತನವನ್ನು ನೆಚ್ಚಿಕೊಂಡ ಪ್ರವಾದಿ, ಸಿರಿವಂತಿಕೆಯನ್ನು ತಿರಸ್ಕರಿಸಿ ಬಡತನವನ್ನು ಆಯ್ಕೆ ಮಾಡಿದ ಪ್ರವಾದಿ! ಅಯ್ಯೋ! ಧರ್ಮಾಸಕ್ತ ಪ್ರವಾದಿ. ತಮ್ಮ ಸಮುದಾಯದ ದುಃಖದಿಂದ ಒಂದು ರಾತ್ರಿಯೂ ಪೂರ್ಣ ಆರಾಮದಿಂದ ಮಲಗಿರದ ಪ್ರವಾದಿ! ಅಯ್ಯೋ! ಅತ್ಯುತ್ಕೃಷ್ಟ ಚಾರಿತ್ರ್ಯದ ಪ್ರವಾದಿ. ನಿರಂತರ ಚಿತ್ತದೊಂದಿಗೆ ಹೋರಾಡಿದ ಪ್ರವಾದಿ. ಅಯ್ಯೋ! ಆ ಲೋಕಾನುಗ್ರಹಿ. ಅವರ ಬಾಗಿಲು ಸದಾ ದೀನದಲಿತರಿಗೆ ತೆರೆದಿರುತ್ತಿತ್ತು. ಅವರ ಕೋಮಲ ಹೃದಯವು ಎಂದೂ ಶತ್ರುಗಳ ಕಿರುಕುಳದಿಂದ ಮಲಿನವಾಗಿರಲಿಲ್ಲ. ಅಯ್ಯೋ! ಅವರ ಮುತ್ತಿನಂತಹ ದಂತವನ್ನು ಕಿತ್ತಾಗಲೂ ಅವರು ಸಹನೆ ವಹಿಸಿದ್ದರು. ಅವರ ಜ್ಯೋತಿರ್ಮಯ ನೆತ್ತಿಗೆ ಪೆಟ್ಟಾದಾಗಲೂ ಅವರು ಕ್ಷಮಾಶೀಲತೆಯನ್ನು ಕೈಬಿಟ್ಟಿರಲಿಲ್ಲ."

ಪ್ರವಾದಿ ಪುತ್ರಿ ಹ. ಫಾತಿಮಾರ(ರ) ಸ್ಥಿತಿಯು ದುಃಖದಿಂದ ವರ್ಣನಾತೀತವಾಗಿತ್ತು. ಅವರು ದುಃಖಾತಿರೇಕದಿಂದ ಹೀಗೆ ಹೇಳುತ್ತಿದ್ದರು: "ಅಯ್ಯೋ! ನನ್ನ ಪ್ರೀತಿಯ ತಂದೆಯವರು ಅಲ್ಲಾಹನ ಆಹ್ವಾನವನ್ನು ಸ್ವೀಕರಿಸಿದರು. ನನ್ನ ಪ್ರೀತಿಯ ತಂದೆಯವರು 'ಜನ್ನತುಲ್ ಫಿರ್‌ದೌಸ'ನ್ನು (ಫಿರ್‌ದೌಸ್‌ನ ತೋಟವನ್ನು) ತಮ್ಮ ನಿವಾಸವಾಗಿ ಮಾಡಿಕೊಂಡರು. ಅಯ್ಯೋ! ನನ್ನ ಪ್ರೀತಿಯ ತಂದೆಯವರೇ! ನಾವು ನಿಮ್ಮ ಮರಣದ ವಾರ್ತೆಯನ್ನು ಜಿಬ್ರೀಲರಿಗೆ ತಿಳಿಸುವೆವು. ಅಯ್ಯೋ! ಪ್ರೀತಿಯ ತಂದೆಯವರೇ! ತಾವು ಅಲ್ಲಾಹನಿಗೆ ಎಷ್ಟು ನಿಕಟರಾದಿರಿ!"

"ನನ್ನ ದೇಹವನ್ನು ನನ್ನ ಆಪ್ತ ಬಂಧುಗಳೇ ಸ್ನಾನ ಮಾಡಿಸಬೇಕು ಮತ್ತು ಅವರೇ ಅದನ್ನು ಸಮಾಧಿಯೊಳಗೆ ಇಳಿಸಬೇಕು" ಎಂದು ಪ್ರವಾದಿ(ಸ) ಆದೇಶಿಸಿದ್ದರು. ಆದ್ದರಿಂದ ಮಂಗಳವಾರ ಹ. ಅಲೀ(ರ) ಮತ್ತು ಹ. ಫಝ್ಲ್ ಬಿನ್ ಅಬ್ಬಾಸ್(ರ) ಪ್ರವಾದಿವರ್ಯರ(ಸ) ದೇಹಕ್ಕೆ ಸ್ನಾನ ಮಾಡಿಸಿದರು.

ಸ್ನಾನ ಮಾಡಿಸುತ್ತಿರುವಾಗ ಹ. ಅಲೀ(ರ) ಈ ರೀತಿ ಹೇಳುತ್ತಾರೆ: "ನನ್ನ ತಂದೆ ತಾಯಿಗಳು ತಮಗೆ ಅರ್ಪಿತ. ಯಾರ ಮರಣದಿಂದಲೂ ಹೊರಟು ಹೋಗದ ಒಂದು ವಸ್ತು ತಮ್ಮ ಮರಣದಿಂದ ಹೊರಟು ಹೋಯಿತು. ಅಂದರೆ ಪ್ರವಾದಿತ್ವ, ಅದೃಶ್ಯ ಜ್ಞಾನ ಮತ್ತು ಅಲ್ಲಾಹನ ವಾಣಿ ಇನ್ನು ಸಮಾಪ್ತಿಯಾಯಿತು.

ತಮ್ಮ ಮರಣದಿಂದ ಆದ ಆಘಾತದಿಂದಾಗಿ ಮನದ ಎಲ್ಲ ಸಂಕಷ್ಟಗಳೂ ಸಪ್ಪೆಯಾದುವು. ಇದು ಎಲ್ಲರನ್ನೂ ಬಾಧಿಸುವ ಸಾರ್ವತ್ರಿಕ ಆಘಾತವಾಗಿದೆ. ತಾವು ಸಹನೆಯ ಆಜ್ಞೆ ನೀಡಿ ಪ್ರಲಾಪವನ್ನು ನಿಷೇಧಿಸದಿರುತ್ತಿದ್ದರೆ ನಾವು ಎಲ್ಲ ಕಣ್ಣೀರನ್ನು ತಮಗಾಗಿ ಹರಿಸಿಬಿಡುತ್ತಿದ್ದೆವು. ಆದರೂ ಈ ನೋವು ನಿವಾರಿಸಲಸಾಧ್ಯವಾದುದು. ಈ ಗಾಯ ತುಂಬಲಸಾಧ್ಯವಾದುದು. ಈ ದುಃಖವು ಮಾಯಲಾರದುದು.

ನನ್ನ ತಂದೆ ತಾಯಿಗಳು ತಮಗೆ ಅರ್ಪಿತ. ಅಲ್ಲಾಹನ ಬಳಿ ನಮ್ಮನ್ನು ಪ್ರಸ್ತಾಪಿಸಿರಿ. ನಮ್ಮನ್ನೆಂದೂ ಮರೆಯದಿರಿ!"

ಉಸಾಮಾ(ರ) ಸ್ನಾನ ಮಾಡುವ ಸ್ಥಳಕ್ಕೆ ಪರದೆ ಹಾಕಿದ್ದರು. ಅಬ್ಬಾಸ್(ರ) ಹತ್ತಿರವೇ ಇದ್ದರು. ಪ್ರವಾದಿವರ್ಯರಿಂದ(ಸ) ದಾಸ್ಯ ಮುಕ್ತರಾದ ಶಕ್ರಾನ್(ರ) ನೀರು ತರುತ್ತಿದ್ದರು. ಸ್ನಾನದ ಬಳಿಕ ಮೂರು ಹತ್ತಿ ಬಟ್ಟೆಯಲ್ಲಿ ಪ್ರವಾದಿವರ್ಯರ(ಸ) ದೇಹವನ್ನು ಸುತ್ತಲಾಗುತ್ತದೆ. "ಪ್ರವಾದಿಗಳು ಎಲ್ಲಿ ನಿಧನರಾಗುತ್ತಾರೋ ಅವರನ್ನು ಅಲ್ಲೇ ದಫನ ಮಾಡಲಾಗುತ್ತದೆ" ಎಂಬ ಹ. ಅಬೂಬಕರ್‌ರ(ರ) ಹೇಳಿಕೆಯಂತೆ ಹ. ಆಯಿಶಾರ(ರ) ಕೋಣೆಯಲ್ಲೇ ಪ್ರವಾದಿವರ್ಯರಿಗೆ(ಸ) ಹ. ಅಬೂ ತಲ್ಹಾ ಸಮಾಧಿಯನ್ನು ಅಗೆಯುತ್ತಾರೆ. ಮಣ್ಣಿನಲ್ಲಿ ತೇವ ಇದ್ದುದರಿಂದ ಶಕ್ರಾನ್(ರ) ಅವರು ಗೋರಿಯೊಳಗೆ ಪ್ರವಾದಿವರ್ಯರ(ಸ) ಚಾದರವನ್ನು ಹರಡುತ್ತಾರೆ.

ಮೊದಲು ಪುರುಷರು ಒಬ್ಬೊಬ್ಬರಾಗಿ ಬಂದು ಜನಾಝಾ ನಮಾಝ್ ನಿರ್ವಹಿಸಿ ಹೋಗುತ್ತಾರೆ. ಹ. ಆಯಿಶಾ(ರ) ಅವರ ಕೋಣೆಯಲ್ಲಿ ಏಕಕಾಲದಲ್ಲಿ ಹೆಚ್ಚು ಮಂದಿಗೆ ಅವಕಾಶವಿರಲಿಲ್ಲ. ಪುರುಷರ ಸರದಿಯ ಸಾಲು ಮುಗಿದ ಬಳಿಕ ಮಹಿಳೆಯರು ಬಂದು ಜನಾಝಾ ನಮಾಝ್ ನಿರ್ವಹಿಸುತ್ತಾರೆ. ಜನಾಝಾ ನಮಾಝ್‌ನ ಈ ಸರಣಿಯು ಮಂಗಳವಾರ ಮತ್ತು ಬುಧವಾರಗಳ ನಡುವಿನ ರಾತ್ರಿಯ ತನಕ ಜಾರಿಯಲ್ಲಿರುತ್ತದೆ. ಈ ಜನಾಝಾ ನಮಾಝ್‌ಗೆ ಯಾರೂ ನೇತೃತ್ವ ವಹಿಸುವುದಿಲ್ಲ. ಎಲ್ಲರೂ ತಂತಮ್ಮ ಜನಾಝಾ ನಮಾಝನ್ನು ವೈಯಕ್ತಿಕವಾಗಿಯೇ ನಿರ್ವಹಿಸುತ್ತಾರೆ.

ಹ. ಅಲೀ, ಫಝ್ಲ್ ಬಿನ್ ಅಬ್ಬಾಸ್, ಉಸಾಮಾ ಬಿನ್ ಝೈದ್ ಮತ್ತು ಔಸ್ ಬಿನ್ ಖೌಲಿ ಅನ್ಸಾರೀ(ರ) ಗೋರಿಗೆ ಇಳಿದು ಪ್ರವಾದಿವರ್ಯರ(ಸ) ಪವಿತ್ರ ದೇಹವನ್ನು 'ಲಹದ್' (ತಾಯಿಗೋರಿ)ನಲ್ಲಿ ಇರಿಸಿದ ಬಳಿಕ ಸಂಸ್ಕಾರದ ಕಾರ್ಯ ಮುಗಿಸುತ್ತಾರೆ.

ಪ್ರವಾದಿವರ್ಯರ(ಸ) ದಫನ ಕಾರ್ಯಗಳನ್ನು ಮುಗಿಸಿ ಅನಸ್ ಬಿನ್ ಮಾಲಿಕ್(ರ) ಮರಳಿ ಬಂದಾಗ ಪ್ರವಾದಿ ಪುತ್ರಿ ಹ. ಫಾತಿಮಾ(ರ) ಹೀಗೆ ಕೇಳುತ್ತಾರೆ: "ಪ್ರವಾದಿವರ್ಯರ(ಸ) ಮೇಲೆ ಮಣ್ಣು ಹಾಕಲು ನಿಮ್ಮ ಮನಸ್ಸು ಒಪ್ಪಿತೇ?"

೩೦•೦೫